# ೧

ಶಾಂತ ಅಂಗಳದಲ್ಲಿ ಕುಳಿತು ಮುಗಿಲಾಟವನ್ನು ನೋಡುತ್ತಿದ್ದಾಳೆ. ಆ ರಾತ್ರಿಯ ಸೊಬಗು ನೋಡಿದವರ ಮನ ಸೆಳೆಯುವಂತಿದೆ. ಶುಕ್ಲಪಕ್ಷದ ದಿನವಾದ್ದರಿಂದ ರಾತ್ರಿ ಕುಲುಕುಲು ನಗುತ್ತಲಿದೆ. ಬೆಡಗು–ವೈಯಾರಗಳಿಂದ ಮೈ ನುಲುಗಿಕೊಂಡು ತೇಲಿ ಹೋಗುತ್ತಿರುವ ಬಿಳಿ ಮುಗಿಲಿನ ತುಂಡುಗಳು ಗಳಿಗೆಗೊಂದು ಮುದ್ದುರೂಪ ತಾಳಿ ಬೆರಗು ಮಾಡುತ್ತಿವೆ. ಬೆಳ್ಳಿಯ ಹಣತೆಯಲ್ಲಿ ಹಚ್ಚಿಟ್ಟ ವಜ್ರದ ಜ್ಯೋತಿಯಂತೆ ಸಹಸ್ರಾರು ನಕ್ಷತ್ರಗಳು ಕಾಲು ತುಂಬಿದ ಮುಗಿಲಿನಲ್ಲಿ ಬಣ್ಣದ ಬೆಳಕನ್ನು ಚೆಲ್ಲುತ್ತಿವೆ. ವಸಂತಕಾಲವಾದ್ದರಿಂದ ಗಾಳಿಯೂ ಹಿತವಾಗಿ ಬೀಸುತ್ತಿದೆ.

ಪ್ರಕೃತಿಯ ಆ ಸೊಬಗಿನ ನೋಟ, ತಂಗಾಳಿಯ ಸ್ಪರ್ಶದ ಮಾಟದಲ್ಲಿ ಯಾರಾದರೂ ತನುವನ್ನು ತೇಲ ಬಿಟ್ಟು ಮೈಮರೆಯಲೇ ಬೇಕು; ಹಾಗಿದೆ ಆ ಸುಂದರ ವಾತಾವರಣ. ಶಾಂತ ಮಾತ್ರ ಅದರ ಆಕರ್ಷಣೆಯಿಂದ ದೂರವಾಗಿದ್ದಾಳೆ. ದೃಷ್ಟಿ ಮುಗಿಲಿನಲ್ಲಿ ನೆಟ್ಟಿದ್ದರೂ, ಮನಸ್ಸು ತಾಯಿ ಬಳಿ ಓಡಾಡುತ್ತಿದೆ.

ಗರ್ಭಿಣಿಯಾದ ಸುಶೀಲಳು ಪ್ರಸವ ವೇದನೆಯಿಂದ ನರಳುತ್ತಿದ್ದಾಳೆ. ಸೂಲಗಿತ್ತಿಯನ್ನು ಕರೆಯಲು ಹೋದ ತಂದೆ–ನಾರಪ್ಪ–ಮನೆಗೆ ಇನ್ನೂ ಬರಲಿಲ್ಲ. ತಂದೆಯ ನಿರೀಕ್ಷಣೆ, ತಾಯಿಯ ರಕ್ಷಣೆಯಲ್ಲಿ ಒಳಕೊಠಡಿಗೂ ಹೊರಬಾಗಿಲಿಗೂ ಓಡಾಡಿ ಶಾಂತ ಸುಸ್ತಾಗಿ ಹೋಗಿದ್ದಾಳೆ. ಮೈ ಹಾಸಿಗೆಯನ್ನು ಬೇಡುತ್ತಿದೆ. ತಾಯಿಯನ್ನೊಮ್ಮೆ ಹೋಗಿ ನೋಡಿ ಹಾಸಿಗೆಯ ಮೇಲೆ ಕೊಂಚ ಒರಗಿದಳು. ನಿದ್ದೆ ಹತ್ತುವ ಸಮಯವಾದರೂ ನಿದ್ದೆ ಹತ್ತಲಿಲ್ಲ. ಮನಸ್ಸಿಗೆ ಏನೋ ಭೀತಿ; ಯಾವುದೋ ದೂರದ ಯೋಚನೆ.

ಪ್ರಕೃತಿಯ [illegible] ಯೋಚನೆಗೆ ಹೆಚ್ಚು ಹೆಚ್ಚು [illegible] ಗಾಳಿ

ಯಲ್ಲಿ ತೇಲಿಬರುತ್ತಿದ್ದ ತಾಯಿಯ ನರಳಾಟ ಅದಕ್ಕೆ ಮತ್ತಿಷ್ಟು ಪುಟವಿಡುತ್ತಿದೆ. ಎದೆಯನ್ನು ಸೀಳಿಕೊಂಡು ಬಂದ ನರಳಾಟವೊಂದು ಶಾಂತಳನ್ನು ಹಿಡಿದು ಅಲುಗಿಸಿತು. ಬೆಚ್ಚಿ ಬಿದ್ದಳು. ಮುಂದೆ ತನಗೂ ಒದಗಬಹುದಾದ ಅವ್ಯಕ್ತ ನೋವಿನ ಯಾವುದೋ ಒಂದು ಚಿತ್ರವನ್ನು ಮಸುಕು-ಮಸುಕಾಗಿ ಚಿತ್ರಿಸಿ ಕೊಂಡು ನಡುಗಿದಳು. ಅವಳ ಮುಗ್ಧ ಹೃದಯದಲ್ಲಿ ಸೃಷ್ಟಿವೈಚಿತ್ರ್ಯದ ಬಗ್ಗೆ ಅನೇಕ ಪ್ರಶ್ನೆಗಳೆದ್ದುವು. ಉತ್ತರ ಮಾತ್ರ ಸಿಗಲಿಲ್ಲ. ಹೊರಗೆ ಬಾಗಿಲು ತಟ್ಟಿದ ಶಬ್ದವಾಗಲು ಹೋಗಿ ಕದ ತೆರೆದಳು.

ಸೂರಪ್ಪನವರ ಹಿಂದೆ ನಡುಪ್ರಾಯದ ಒಬ್ಬ ಹೆಂಗಸು ಕೈಯಲ್ಲಿ ಚರ್ಮದ ಚೀಲ ಹಿಡಿದು ಆತುರವಾಗಿ ಹೆಜ್ಜೆಯಿರಿಸುತ್ತ ಒಳಗೆ ಬಂದಳು. ಸೂರಪ್ಪ ಕುತೂಹಲದಿಂದ ಮಗಳನ್ನು ದಿಟ್ಟಿಸಿ ನೋಡಿದರು. ಅವಳ ಮೌನ ಸುಶೀಲಮ್ಮನ ದೇಹಸ್ಥಿತಿಯನ್ನು ಸೂಚಿಸಿ ಸಮಾಧಾನ ತಂದಿತು. ಅಷ್ಟು ರಾತ್ರಿಯಾದರೂ ಮಲಗದೆ, ಎಚ್ಚರಿಕೆಯಿಂದ ತಾಯಿಯನ್ನು ಕಾಯುತ್ತಿರುವ ಶಾಂತಳನ್ನು ಕಂಡು ಉಬ್ಬಿಹೋದರು. ಅವಳ ಕರ್ತವ್ಯನಿಷ್ಠೆ ಅವರನ್ನು ಚಕಿತರನ್ನಾಗಿ ಮಾಡಿತು. ಉಂಟಾದ ಮೆಚ್ಚಿಗೆಯನ್ನು ಮನಸ್ಸಿನಲ್ಲೆ ಮುಚ್ಚಿ ಮೆದುವಾಗಿ ಹೇಳಿದರು—

"ಮಗೂ, ಈಕೆಯನ್ನು ಅಮ್ಮನ ಕೊಠಡಿಗೆ ಕರೆದುಕೊಂಡು ಹೋಗಿ ಬಿಡಮ್ಮ."

"ಬನ್ನಿ" ಎಂದು ಶಾಂತ ತಾಯಿಯ ಕೊಠಡಿಯ ಕಡೆ ನಡೆದಳು. ಸೂಲಗಿತ್ತಿ ಅವಳನ್ನು ಹಿಂಬಾಲಿಸಿದರು. ಕೊಠಡಿಗೆ ಕಾಲಿಡುತ್ತಲೆ, ಅಲ್ಲಿ ತಮಗೆ ಬೇಕಾದ ಪದಾರ್ಥವೆಲ್ಲ ಅಣಿಯಾಗಿರುವುದನ್ನು ಕಂಡು ಆಶ್ಚರ್ಯಗೊಂಡರು. ಕುತೂಹಲ ತಡೆಯಲಾರದೆ ಕೇಳಿದರು—

"ಇದನ್ನೆಲ್ಲ ತಂದಿರಿಸಿದವರು ಯಾರು ?"

"ಅಮ್ಮ ಹೇಳಿದಳು-ನಾನು ತಂದಿರಿಸಿದೆ." ಕೊಠಡಿಯ ಹೊರಗಿದ್ದ ಶಾಂತ, ಸುಸ್ತಾಗಿದ್ದ ತಾಯಿಗೆ ಉತ್ತರಕೊಡುವ ತೊಂದರೆಗೆ ಅವಕಾಶ ಕೊಡದೆ ತಾನೆ ಹೇಳಿದಳು.

"ಪರವಾಗಿಲ್ಲ, ಹುಡುಗಿ ಚೂಟಿಯಾಗಿದ್ದಾಳ" ಎಂದು ಸೂಲಗಿತ್ತಿ ತಮ್ಮ

ಕೆಲಸದ ಕಡೆ ಗಮನ ಹರಿಸಿದರು. ನಿತ್ರಾಣರಾದ ಸುಶೀಲಮ್ಮನನ್ನು ಕಂಡು ಸ್ವಲ್ಪ ಗಾಬರಿಯಾಯಿತು. ಮನಸ್ಸು ವೈದ್ಯರ ಕಡೆ ಹರಿಯಿತು. ಅನುಭವ ಅವರ ಕ್ರಿಯಾಶಕ್ತಿಯ ಮಟ್ಟವನ್ನು ಎತ್ತಿಹಿಡಿಯಿತು. ತಮ್ಮ ದೌರ್ಬಲ್ಯಕ್ಕೆ ನಾಚಿ, ಪ್ರಯತ್ನದಲ್ಲಿ ನಂಬಿಕೆಯಿರಿಸಿ ಕೆಲಸಕ್ಕಾರಂಭಿಸಿದರು. ಸ್ವಲ್ಪ ಹೊತ್ತು ಸಾವು–ಬದುಕುಗಳ ಸೆಣಸಾಟವಾಗಿ ಬದುಕು ಗೆದ್ದಿತು.

ನೆಲಕ್ಕೆ ಬಿದ್ದ ಮಗು ಚಿಟ್ಟೆಂದು ಚೀರಿದ ಕೂಡಲೆ ಸೂರಪ್ಪ ಗಳಿಗೆ–ನಕ್ಷತ್ರಗಳನ್ನು ಗುರುತಿಸಿ ಯಾವ ಮಗುವೆಂದು ಕೇಳಿದರು. ಕುತೂಹಲ ಅವರನ್ನು ಒಂದು ಗಳಿಗೆಯೂ ತಡಮಾಡಗೊಡಲಿಲ್ಲ.

"ಹೆಣ್ಣು."

ಹೊಲೆಮನೆಯಿಂದ ಅವರ ಪ್ರಶ್ನೆಗೆ ಬಂದ ಉತ್ತರ ಅದು.

ಸೂರಪ್ಪ ನಡುಗಿದರು. ಆ ಉತ್ತರವನ್ನವರು ನಿರೀಕ್ಷಿಸಿರಲಿಲ್ಲ. ಹೆಣ್ಣೆಂದರ ಹೆದರುತ್ತಿದ್ದರು. ಅವರ ಬಾಳಿನ ಘಟನೆಯೊಂದು ಹಾಗೆ ಹೆದರುವಂತೆ ಮಾಡಿತ್ತು. ಒಂದು ಕ್ಷಣ ಹಿರಿಯ ಮಗಳು ರತ್ನ ಪರದೆಯ ಮುಂದೆ ಹಾದು ಹೋದಳು. ದುರಾಚಾರಿಯಾದ ಗಂಡ ನಿರಪರಾಧಿಯಾದ ಅವಳ ಬಾಳನ್ನು ಬಲಿ ತೆಗೆದುಕೊಂಡಿದ್ದ. ಅವಳು ಪಟ್ಟ ನರಕಯಾತನೆಯೆಲ್ಲ ನೆನಪಾಗಿ, ಆಗ ತಾನೆ ಭೂಮಿಗೆ ಬಿದ್ದ ಮಗುವಿನ ಭವಿಷ್ಯದ ಬಗ್ಗೆ ಕಣ್ಣೀರಿಡುವಂತೆ ಮಾಡಿತು.

ನೀರಾಡುತ್ತಿದ್ದ ಅವರ ಕಣ್ಣು ಇದ್ದಕ್ಕಿದ್ದಂತೆ ಕೆಂಡವಾಯಿತು. ಹಲ್ಲುಗಳು ತುಟಿಯನ್ನು ಕಚ್ಚಿದುವು. ಕೈ ಮುಷ್ಟಿ ಹಿಡಿಯಿತು. ಮನಸ್ಸು ಏನೋ ಗಟ್ಟಿಮಾಡಿ ಮುಂದೆ ನುಗ್ಗಿತು. ಆಶ್ಚರ್ಯ ! ಸೂರಪ್ಪನ ನಿರ್ಧಾರ ಕೈಗೂಡಲಿಲ್ಲ. ಪ್ರಕೃತಿ ಬೀಸಿದ ಮಾಯಾಬಲೆಗೆ ಮನಸೋತು, ಬಂದ ಭಾವನೆಯನ್ನು ಹೊಸಕಿ ಹಿಮ್ಮೆಟ್ಟಿದರು. ಮಗುವಿನ ಚೀರಾಟ ನಿಲ್ಲುವವರೆಗೆ ಮನಸ್ಸು ಮಿಲಿಮಿಲಿ ಒದ್ದಾಡುತ್ತಲೆ ಇತ್ತು. 'ಈಶ್ವರನು ಕೊಟ್ಟ ಫಲವನ್ನು ಅನುಭವಿಸಲೇಬೇಕು.' ಎಂದು ಸಮಾಧಾನ ತಂದುಕೊಂಡು ಕ್ಷಣಮಾತ್ರವೂ ಅಲ್ಲಿ ನಿಲ್ಲದೆ ಹೊರಟರು.

ಇತ್ತ ಸುಶೀಲಮ್ಮನ ಮನಸ್ಸಿನಲ್ಲೂ ಅದೇ ಬಗೆಯ ವೇದನೆ ಕರುಳು ಕಿಂಡುತ್ತಿತ್ತು. ಗಂಡನ ಮನೆಯಲ್ಲಿ ರತ್ನ ಅನುಭವಿಸಿದ ನರಕಯಾತನೆ ಅವರ

ನೆಮ್ಮದಿಯನ್ನು ಕದಡಿತ್ತು. ಹೆಣ್ಣುಮಕ್ಕಳೆಂದರೆ ಜುಗುಪ್ಸೆಪಡುತ್ತಿದ್ದರು. ಮಗಳ ಭೀಕರ ಸಾವಿನ ನೆನಪು ಅವರಲ್ಲೂ ಸೂರಪ್ಪನ ನಿರ್ಧಾರವನ್ನೇ ಮೂಡಿಸುತ್ತಿತ್ತು. ಯೋಚಿಸಿ—ಅದೇ ಸರಿಯೆಂದು ನಿರ್ಧರಿಸಿ—ಸೂಲಗಿತ್ತಿಯನ್ನು ಹತ್ತಿರ ಕರೆದು ಕಿವಿಯಲ್ಲಿ ಏನೋ ಪಿಸುಗುಟ್ಟಿದರು. ಸೂಲಗಿತ್ತಿ ಅಂಜಿಕೆಯಿಂದ ನಡುಗಿ ಹೇಳಿದರು—

"ಕೂಡದು–ಕೂಡದು. ನೀವು ತಾಯಾಗಿ ಹಾಗೆ ಹೇಳೋಣ ಅಂದರೇನು ! ನಾನಂತೂ ಆ ಕೆಲಸ ಮಾಡಲಾರೆ." ಬಿಗಿದ ಮುಖದ ಗಂಟು–ಸಡಿಲವಾಗುವುವರಲ್ಲೆ ತಮ್ಮ ಸಲಕರಣೆಗಳನ್ನು ಚರ್ಮದ ಚೀಲಕ್ಕೆ ತುಂಬಿ ಹೊರಡಲನುವಾದರು.

"ಸ್ವಲ್ಪ ನಿಲ್ಲಿ" ಎಂದು ಸುಶೀಲಮ್ಮ ಮತ್ತೆ ಮಾತು ಮುಂದುವರಿಸಿದರು. "ಈ ಮಾತು ನಿಮ್ಮಲ್ಲೆ ಇರಲಿ. ನಾನು ತಾಯಾಗಿ ಹಾಗೆ ಹೇಳಬೇಕಾದರೆ, ಹೆಣ್ಣುಮಗಳ ವಿಷಯದಲ್ಲಿ ನನ್ನ ಹೃದಯ ಎಷ್ಟು ನೊಂದಿರಬಹುದೆನ್ನುವುದನ್ನು ಊಹಿಸಿ ತಿಳಿದುಕೊಳ್ಳಬಹುದು. ಕೇಳುವ ಮನಸ್ಸಿದ್ದರೆ, ಎಂದಾದರೊಂದು ದಿನ, ಮನಸ್ಸನ್ನು ಕಲ್ಲು ಮಾಡಿದ ಆ ಕರ್ಣಕಠೋರ ಕಥೆಯನ್ನು ಹೇಳುತ್ತೇನೆ; ಬನ್ನಿ."

"ಆಗಲಮ್ಮ, ಎಂದಾದರೊಂದು ದಿನ ಬಿಡುವು ಮಾಡಿಕೊಂಡು ಬಂದೇ ಬರುತ್ತೇನೆ. ನನಗೂ ಕೇಳಬೇಕೆನ್ನುವ ಆಸೆ ಇದೆಯಷ್ಟೆ. ನಾನೂ ಹೆಣ್ಣು ಹೆತ್ತವಳೆ. ಈ ಮಾತನ್ನು ಯಾರಿಗೂ ಹೇಳುವುದಿಲ್ಲ; ನೆಮ್ಮದಿಯಿಂದಿರಿ. ಆದರೆ ನೀವು ಮಾತ್ರ ಇನ್ನು ಮುಂದೆ ಮನಸಿನಲ್ಲೂ ಈ ಕೆಟ್ಟ ಯೋಚನೆ ಮಾಡಬಾರದು. ಎಲ್ಲ ದೇವರು ಕೊಟ್ಟ ಬಾಳು. ನಮ್ಮದೇನೂ ನಡೆಯುವುದಿಲ್ಲ. ಬದುಕಿನಲ್ಲಿ ಬಂದ ಕಷ್ಟವನ್ನು ಧೈರ್ಯದಿಂದ ಎದುರಿಸಿ ಬಾಳನ್ನು ಸಾರ್ಥಕಪಡಿಸಿಕೊಳ್ಳಬೇಕು. ನಾನಿನ್ನು ಹೋಗಲೆ ?"

"ಆಗಲಿ, ಹೋಗಿಬನ್ನಿ" ಎಂದು ಕಣ್ಣೀರನ್ನು ಮಿಡಿದು ಸುಶೀಲಮ್ಮ ಮಗ್ಗುಲಾದರು. ಸೂಲಗಿತ್ತಿ ನಿಟ್ಟುಸಿರೊಂದನ್ನು ಬಿಟ್ಟು ಭಾರವಾದ ಹೆಜ್ಜೆಯೊಡನೆ ನಿಧಾನವಾಗಿ ಕೋಣೆಯಿಂದ ಹೊರಬಿದ್ದು ಕತ್ತಲೆಯಲ್ಲಿ ಕರಗಿ ಹೋದರು. ಸೂರಪ್ಪನವರು ಅವರನ್ನು [illegible] ಹಿಡಿದು ನಿಲ್ಲಿಸಿ ಬಿಡುವುದನ್ನು ಮರೆಯಲಿಲ್ಲ.

## ೨

ಈ ದಿನ ಎಲ್ಲರಿಗಿಂತ ಶಾಂತಳಿಗೆ ತುಂಬಾ ಸಡಗರ. ಪುಟ್ಟ ತಂಗಿ ಹುಟ್ಟಿರುವುದು ಅವಳ ಭಾಗಕ್ಕೆ ಒಂದು ದೊಡ್ಡ ನಿಧಿಯಂತಿತ್ತು. ಆ ಮಗು ಅವಳೊಡನೆ ಪ್ರೀತಿ ಬೆಳೆಸಿ ಬಂದು ಇಂದಿಗೆ ಹನ್ನೊಂದು ದಿನವಾಯಿತು. ಇಂದು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವ ದಿನ; ತೂಗುವುದರಲ್ಲಿ ಆತುರ. ಸಂಜೆಯಾಗುವುದನ್ನೇ ಕಾಯುತ್ತಿದ್ದಾಳೆ. ತಾಯನ್ನು ಕೇಳಿ, ಹೋಗಿ ನಾಲ್ಕಾರು ಮನೆಗಳ ಮುತ್ತೈದೆಯರನ್ನು ಕರೆದು ಬಂದುದೂ ಆಯಿತು. ಸಂಜೆಯಾಗುತ್ತಿದ್ದಂತೆ ಒಬ್ಬೊಬ್ಬರಾಗಿ ಸುಮಂಗಲೆಯರು ಬಂದು ಸೇರಿದರು. ತೊಟ್ಟಿಲ ಮುಹೂರ್ತ ಹತ್ತಿರವಾದಂತೆ ಊರಿನ ಹಿರಿಯಮುತ್ತೈದೆ ಸುಬ್ಬಮ್ಮ, ತಮಗೆ ವಹಿಸಿದ್ದ ಅಂದಿನ ಕೆಲಸದ ಜವಾಬ್ದಾರಿಯರಿತು, ಹೋಗಿ ತೊಟ್ಟಿಲ ಮುಂದೆ ಕುಳಿತರು. ಗಣಪತಿ ಪೂಜೆ, ತೊಟ್ಟಿಲ ಪೂಜೆ, ಎರಡೂ ಆಯಿತು. ಗುಂಡಪ್ಪನ ತಾಯಿಗಾಗಿ ಸುತ್ತಲೂ ಕಣ್ಣಾಡಿಸಿದರು. ಎಲ್ಲೂ ಶಾಂತ ಕಂಡುಬರಲಿಲ್ಲ. ಎದ್ದು ಹುಡುಕಲು ಹೊರಟರು.

ಕಲ್ಲುಗುಂಡಿನ ತಾಯಾಗಲು ನಾಚಿ ಶಾಂತ ಹಿತ್ತಿಲಲ್ಲಿರುವ ನಿಂಬೇ ಗಿಡದ ಹಿಂಬದಿಯಲ್ಲಿ ಅವಿತು ಕುಳಿತಿದ್ದಳು. ಸುಬ್ಬಮ್ಮ ಮನೆಯೆಲ್ಲ ಹುಡುಕಿ ಎಲ್ಲೂ ಕಾಣದೆ ಹಿತ್ತಿಲ ಕಡೆ ಹೋದರು. ಸೀರೆಯ ಸೆರಗು ಸರಿಪಡಿಸಿ ಕೊಳ್ಳುವ ಅವಾಂತರದಲ್ಲಿ ಶಾಂತ ಅವರ ಕಣ್ಣಿಗೆ ನಿರಾಯಾಸವಾಗಿ ಸಿಕ್ಕಿ ಬಿದ್ದಳು. ಒಳ್ಳೆಯ ಮಾತಾಡಿ ಕರೆತಂದು ಹಸೆಗೆ ಮೇಲೆ ಕೂರಿಸಿದರು.

ಮೊದಲು ಗುಂಡಪ್ಪನಿಗೆ ಬಜೆ–ಬೆಣ್ಣೆಯಿರಿಸಿ, ಹಾಲು ಕುಡಿಸಿ, ತೊಟ್ಟಿಲಲ್ಲಿ ಮಲಗಿಸಿ ಐದು ಜನ ಸುಮಂಗಲೆಯರು ರಕ್ಷೆಯಿರಿಸಿದರು. ಮಗುವಿಗೂ ಅದರಂತೆ ಮಾಡಿ ಹಗ್ಗ ಹಿಡಿದು ತೂಗುವ ಶಾಸ್ತ್ರ ಮುಗಿಸಿದರು. ಕಡೆಯಲ್ಲಿ ತಾಯಿ–ಮಕ್ಕಳಿಬ್ಬರಿಗೂ ಮಡಿಲಕ್ಕಿ ತುಂಬಿ ಆರತಿಯೆತ್ತಿದರು. ಶಾಂತ ನಾಚಿಕೆಯಿಂದ ಕುಗ್ಗಿ ಹೋದಳು. ಎಲ್ಲರೂ ಅವಳನ್ನು ಮಗು ತೋರಿಸೆಂದು ಹಾಸ್ಯ ಮಾಡುವವರೆ. ಆರತಿಯಾದದ್ದೇ ತಡ, ಬಲೆಯಿಂದ ಬಿಡುಗಡೆಯಾದ ಹಕ್ಕಿಯಂತೆ ನಡುಮನೆಗೆ ಹಾರಿಹೋಗಿ, ತನ್ನ ಸಂಗಾತಿ ಸುಂದರಿಯ ಕೈಲಿ

ಬಂದವರಿಗೆ ಫಲತಾಂಬೂಲ ಕೊಡಿಸಿ ರವಾನಿಸಿದಳು. ಒಬ್ಬೊಬ್ಬರಾಗಿ ಎಲ್ಲರೂ ಹೊರಟ ಮೇಲೆ ನೆಮ್ಮದಿಯ ಉಸಿರು ಬಿಟ್ಟು ಅಡಿಗೆಮನೆಗೆ ನಡೆದಳು.

ಬೀದಿ ಬಾಗಿಲ ವರೆಗೆ ಹೊರಟಿದ್ದ ಸುಂದರಿ ಏನೋ ನೆನಪಾಗಿ ಮತ್ತೆ ಹಿಂದಕ್ಕೆ ಬಂದಳು. ಅಂದಿನ ಸಂತೋಷ ರಸದಲ್ಲಿ ಮಿಂದು ಅರಳಿದ ಶಾಂತಳ ಮಧುರಕಂಠ ಸುಂದರಿಯ ನೆನಪನ್ನು ತೂರಿಬಿಟ್ಟಿತು. ತನಗಾಗಿದ್ದ ನೋವನ್ನು ಕ್ಷಣಕಾಲ ಮರೆತು ಶಾಂತ ಹರಿಬಿಟ್ಟ ಸುಮಧುರ ಗಾನ ವಾಹಿನಿಯಲ್ಲಿ ತನ್ನನ್ನು ತೇಲಿಬಿಟ್ಟಳು. ತುಟಿಯ ಮೇಲೆ ಮಂದಹಾಸ ನಲಿಯಿತು. ಮೆಲ್ಲನೆ ಹೋಗಿ ಹಿಂದಿನಿಂದ ಶಾಂತಳ ಕಣ್ಣು ಮುಚ್ಚಿದಳು. ಹಾಡಿನಲ್ಲಿ ತಲ್ಲೀನಳಾಗಿದ್ದ ಶಾಂತ ಬೆಚ್ಚಿ ಬಿದ್ದಳು. ಕೈಬಿಡಿಸಿ ಹಿಂದಿರುಗಿ ಸುಂದರಿಯನ್ನು ಕಂಡು ಹುಸಿ ನಗುತ್ತಾ ಹೇಳಿದಳು,

"ಇದೇನು ಸುಂದರು, ಹೊರಟುಹೋಗಿದ್ದವಳು ಮತ್ತೆ ಬಂದೆ ?"

"ಒಬ್ಬಳೇ ಕಷ್ಟಪಡುತ್ತಾ ಇದ್ದೀ—ಕೈಕೆಲಸವನ್ನಾದರೂ ಮಾಡಿ ಕೊಡೋಣವೆಂದು ಬಂದೆ."

"ಮಹಾ — ನಾವಿರುವ ಜನಕ್ಕೆ ಕೈಕೆಲಸ ಬೇರೆ ಮಾಡಿ ಕೊಡಬೇಕೇನು ?"

"ಜನ ಹೆಚ್ಚಿಲ್ಲದಿದ್ದರೂ ಈ ಸಮಯದಲ್ಲಿ ಕೆಲಸ ಹೆಚ್ಚಿಲ್ಲವೆ ? ಹತ್ತು ಜನವಿರುವ ಮನೆಯನ್ನಾದರೂ ನಿಭಾಯಿಸಿಕೊಂಡು ಹೋಗಬಹುದು; ಬಾಣಂತಿಯಿರುವ ಮನೆಯನ್ನು—ಇಬ್ಬರೇ ಇದ್ದರೂ—ಸಂಭಾಳಿಸಿಕೊಂಡು ಹೋಗುವುದು ಕಷ್ಟ."

"ಇರಬಹುದು ಸುಂದರಿ, ತಮ್ಮ ಕಷ್ಟದ ಹೊರೆಯನ್ನು ಮತ್ತೊಬ್ಬರ ಮೇಲೆ ಹೊರಿಸಲು ಯಾರು ತಾನೆ ಇಷ್ಟಪಡುವರು ಹೇಳು."

"ನಿನಗೆ ನನ್ನ ಮೇಲಿರುವ ಅಭಿಮಾನ ಇಷ್ಟೆ ಹಾಗಾದರೆ ?"

"ಯಾಕೆ ಹಾಗನ್ನುತ್ತೀ ?"

"ಇನ್ನೇನು ? ಚಿಕ್ಕ ವಯಸ್ಸಿನಿಂದಲೂ ಅಕ್ಕತಂಗಿಯರಂತೆ ಬೆಳೆದು ಇವತ್ತು ನಿನಗೆ ನಾನು ಬೇರೆಯವಳಾದೆ."

"ಹಾಗಲ್ಲ ಸುಂದರು, ಅಕ್ಕನಾಗಲಿ ತಂಗಿಯಾಗಲಿ, ಅವರವರ ತಾಪತ್ರಯ ಅವರವರಿಗೆ ಹೆಚ್ಚು. ನಿನಗೇನು ಮನೆಯಲ್ಲಿ ಸ್ವಲ್ಪ ಕೆಲಸವಿದೆಯೆ ?

ನನಗಾದರೂ ಸ್ವಲ್ಪ ಹೊತ್ತು ಬಿಡುವು ಸಿಗುತ್ತದೆ; ನಿನಗೆ ಅದೂ ಇಲ್ಲ. ಇನ್ನೂ ನ್ಯಾಯವಾಗಿ ನಿನಗೆ ಸಹಾನುಭೂತಿ ತೋರಿಸಬೇಕು; ತಾಯಿಯಿಲ್ಲದ ಹುಡುಗಿ ನೀನು."

"ನಿನ್ನದು ಎಷ್ಟು ತುಂಬಿದ ಮನಸ್ಸು, ಶಾಂತ! ವಯಸ್ಸಿನಲ್ಲಿ ಚಿಕ್ಕವ ಳಾದರೂ ಅನುಭವದಲ್ಲಿ ದೊಡ್ಡವಳಾಗಿದ್ದಿ. ನೀನು ಒಳ್ಳೆಯ ಮನೆ ಸೇರ ಬೇಕೆಂದು ನನ್ನಾಶೆ."

"ಥೂ, ಹೋಗು ಸುಂದರು; ನೀನು ಏನೇನೋ ಮಾತನಾಡುವೆ."

"ಇರುವುದನ್ನೆ ಹೇಳುತ್ತಿದ್ದೀನಿ ಶಾಂತ. ಹೆಣ್ಣಿಂದ ಮೇಲೆ ಮದುವೆ ತಪ್ಪಿದ್ದಲ್ಲ; ಆದರೆ ಆ ವಿಷಯದಲ್ಲಿ ವಿವೇಕಶೂನ್ಯರಾಗಬಾರದು. ಅದಕ್ಕೆ ತಿಳಿ ಸಲು ನಾನು ಬಂದದ್ದು."

"ಈಗೇಕೆ ಆ ಮಾತು ?"

"ನಿನ್ನ ತಂದೆ ನಿನಗೆ ಗಂಡು ಹುಡುಕುತ್ತಿದ್ದಾರೆಂದು ತಿಳಿಯಿತು. ಹುಡು ಗನನ್ನು ನೋಡದೆ ಮದುವೆಗೆ ಖಂಡಿತ ಒಪ್ಪಿಕೊಳ್ಳಬೇಡ. ಹುಡುಗ ನಿನಗೆ ಎಲ್ಲದರಲ್ಲೂ ತಕ್ಕವನಾಗಿರಬೇಕು. ವಿಧುರನಿಗೆ ಮಾತ್ರ ಮಾಲೆ ಹಾಕಬೇಡ. ಹಾಗೆ ಮಾಡುವುದಕ್ಕಿಂತ ಸಾಯುವುದು ವಾಸಿ. ಇದು ನನ್ನ ಅನುಭವದ ಮಾತು."

ತಾನು ಹಿಂದಿರುಗಿ ಬಂದ ಉದ್ದೇಶ ಸಂದರ್ಭಕ್ಕೆ ಹೊಂದಿಕೊಂಡು ಹೊರ ಬಿದ್ದುದು ಅವಳಿಗೇ ಆಶ್ಚರ್ಯವನ್ನುಂಟುಮಾಡಿತು.

"ಲಗ್ನದ ವಿಷಯದಲ್ಲಿ ನಮಗೆ ಅಷ್ಟು ಸ್ವಾತಂತ್ರ್ಯವೆಲ್ಲಿದೆ ಸುಂದರು ? ನಮಗಿಷ್ಟವಿರಲಿ, ಇಲ್ಲದಿರಲಿ. ತಂದೆ-ತಾಯಿ ಒಪ್ಪಿದ ವರನನ್ನು ಲಗ್ನಮಾಡಿ ಕೊಳ್ಳಲೇ ಬೇಕು. ಇದು ಮೊದಲಿನಿಂದಲೂ ನಡೆದು ಬಂದ ಸಂಪ್ರದಾಯ."

"ಆ ಕಾಲ ಹೋಗುತ್ತಾ ಬಂದಿದೆ ಶಾಂತ. ನಾಗರಿಕತೆಯ ಸುಳಿಗೆ ಸಿಕ್ಕಿದ ಜನಾಂಗ, ಬುದ್ಧಿವಿಕಾಸವಾದಂತೆ ಹೆಣ್ಣಿನ ಆತ್ಮದ ಬೆಲೆಯನ್ನು ಕಂಡು ಕೊಳ್ಳುತ್ತಿದೆ. ಎಷ್ಟೋ ಕಡೆ ಹೆಣ್ಣುಮಕ್ಕಳು ಬೇಡವೆಂದರೂ, ಬಲವಂತವಾಗಿ ಸ್ವಾತಂತ್ರ್ಯ ಕೊಟ್ಟು ಮರ್ಯಾದೆಯಿಂದ ಕಂಡ ತಂದೆಯರೂ ಉಂಟು. ಅದಕ್ಕೆ ಸಾಕ್ಷಿ, ನಮ್ಮ ಎದುರುಮನೆಯ ರಂಗರಾಯರು."

"ಅದೇ ಆ ನರಸೂ ತಂದೆ ?"

"ಹೌದು ಅವರೆ. ಸರಸ್ವತಿಯ ಆತ್ಮದಲ್ಲಿ, ಜೀವನದಲ್ಲಿ ವಿಕಾಸವುಂಟು ಮಾಡಿದವರು ಅವರೆ. ಅವರಿಗೆ ಮಗಳು ಬೆಳಗಿ ಬಂದಷ್ಟೂ ತೃಪ್ತಿ ಸಾಲದು. ಸರಸ್ವತಿಯೂ ಅಷ್ಟೇ, ತಂದೆಯಲ್ಲಿ ತುಂಬ ಗೌರವವಿರಿಸಿದ್ದಳು. ಅವರ ಯಾವ ಮಾತಿಗೂ ಬದಲು ಹೇಳುತ್ತಿರಲಿಲ್ಲ. ಎಷ್ಟೋ ಬಾರಿ ರಾಯರಿಗೆ, ಅವಳ ಬಸವಣ್ಣನ ಹೂಗುಟ್ಟುವಿಕೆ ಬೇಸರ ತಂದಿಸ್ತು. ಆ ಮೂಢ ಭಕ್ತಿಯನ್ನು ಹೋಗಲಾಡಿಸುವುದು ಅವರ ನಿತ್ಯ ಕಸುಬಾಯಿತು. ಹೆಜ್ಜೆಹೆಜ್ಜೆಗೂ ಅದನ್ನು ತಪ್ಪದೆ ಮಾಡುತ್ತ ಬಂದರು. ಆ ಸಂದರ್ಭದಲ್ಲಿ ಬಂದ ಎಷ್ಟೋ ಒಳ್ಳೆಯ ವರ ಗಳನ್ನು ಬಿಟ್ಟುಬಿಟ್ಟರು. ಅದಕ್ಕೆ ಸರಸ್ವತಿ 'ನೀನು ನೋಡಿದ ಗಂಡು ನನಗೆ ಒಪ್ಪಿಗೆ' ಅನ್ನುತ್ತಿದ್ದುದೇ ಕಾರಣ. ಕಡೆಗೂ ಅವಳ ಬಾಯಿಂದ ವರನ ಬಗ್ಗೆ ಶೋಕದಿಂದ ಮಾತಾಡಿಸಿಯೆ, ಅವಳಿಗೆ ಒಪ್ಪಿದ ಗಂಡಿಗೆ ಲಗ್ನ ಮಾಡಿಕೊಟ್ಟರು. ಇಂಥವರು ನಮ್ಮ ಸಮಾಜದಲ್ಲಿ ವಿರಳ; ಆದರೂ ಇದ್ದಾರೆ. ಪರಿಸ್ಥಿತಿಯನ್ನು ತೂಗಿ ನೋಡಿದರೆ ಇನ್ನು ಮುಂದೆ ಪ್ರತಿಯೊಬ್ಬ ತಂದೆಯೂ ಹೀಗಾಗಬಲ್ಲ ನೆಂದು ನನಗನ್ನಿಸುತ್ತದೆ."

"ಆ ಕಾಲ ಆದಷ್ಟು ಬೇಗ ಬರಲಿ. ಅವಕಾಶ ಸಿಕ್ಕಿದರೆ ನಾನೂ ನಿನ್ನ ಮಾತಿನಂತೆ ನಡೆದುಕೊಳ್ಳಲು ಪ್ರಯತ್ನಿಸುವೆನು. ಸ್ವಲ್ಪ ಕೂತುಕೊ, ಕಾಫಿ ಹಾಕಿ ಕೊಡುತ್ತೇನೆ" ಎಂದು ಶಾಂತ ಎರಡು ಹೆಜ್ಜೆ ಮುಂದಿಡುವುದರಲ್ಲೆ ಸುಂದರಿ ತಡೆದು ಹೇಳಿದಳು "ಬೇಡ, ಇಷ್ಟು ಹೊತ್ತಿನಲ್ಲಿ ಎಂಥ ಕಾಫಿ! ನಾಳೆ ಕೊಡುವೆಯಂತೆ—ನಾನು ಬರಲಾ?"

ಶಾಂತ ಉತ್ತರ ಕೊಡುವುದರಲ್ಲಿ ಹೊರಗೆ ಹೋಗಿದ್ದ ಸೂರಪ್ಪ ಕೆಮ್ಮುತ್ತ ಬಂದರು.

"ನಾನು ಬರುತ್ತೇನೆ—ಸೂರಪ್ಪನವರೂ ಮನೆಗೆ ಬಂದಾಯಿತು" ಎಂದು ಉತ್ತರಕ್ಕೆ ದಾರಿ ಕಾಯದೆ ಸುಂದರಿ ಹೊರಟುಹೋದಳು.

ಸೂರಪ್ಪನವರ ಕೆಮ್ಮು ಎಷ್ಟು ಹೊತ್ತಾದರೂ ನಿಲ್ಲಲಿಲ್ಲ. ಸುಮಾರು ಐದಾರು ನಿಮಿಷಗಳ ವರೆಗೆ ಗಂಟಲಿಗೆ ಕಸರತ್ತು ಮಾಡಿಸಿತು. ಸುಸ್ತಾಗಿ ಹೋದರು. ದವಡೆಯಲ್ಲಿ ಒತ್ತರಿಸಿಕೊಂಡಿದ್ದ ಪೆಪ್ಸ್ ಮಾತ್ರೆಯೂ ಕೆಲಸ ಮಾಡಲಿಲ್ಲ; ಕಡೆಗೆ ಶಾಂತ ತಂದುಕೊಟ್ಟ ಮೆಣಸು–ಉಪ್ಪಿನಿಂದಲೆ ಶಾಂತ

ವಾಯಿತು. ಕಣ್ಣನ್ನು ಅಂಗವಸ್ತ್ರದಿಂದ ಒರೆಸಿಕೊಳ್ಳುತ್ತ ಹೆಂಡತಿಯ ಬಳಿ ಹೋಗಿ, ಅವರ ಕೈಗೊಂದು ಅಂಚೆಯ ಕಾಗದವಿತ್ತು ಮಗುವನ್ನು ನೋಡುತ್ತ ನಿಂತರು.

ಹಿಂದೆ ಎರಡು ಮಕ್ಕಳ ತೊಟ್ಟಿಲಿಡುವಾಗಲೂ ಮನೆಯಲ್ಲಿದ್ದು, ಆ ಉತ್ಸವದಲ್ಲಿ ಭಾಗಿಯಾಗಿ ಸಂತೋಷದ ಹೊಳೆ ಹರಿಸಿದ್ದ ಸೂರಪ್ಪ ಇಂದು ಶಾಸ್ತ್ರವೆಲ್ಲಾ ಮುಗಿದ ಮೇಲೆ ಮನೆಗೆ ಬಂದಿದ್ದರು. ಮನಸ್ಸು ದುಃಖದಿಂದ ಭಾರವಾಗಿತ್ತು. ರತ್ನ ಹೋದಲಾಗಾಯಿತು ನೆಮ್ಮದಿಯೆ ಇಲ್ಲ. ನಾಲ್ಕಾರು ಬಗೆಯ ಬೆದರಿಕೆ ತಲೆ ಹಾಕಿ ಬುದ್ಧಿಯನ್ನು ಮಂದ ಮಾಡಿತ್ತು.

ಈಗವರು ಮೊದಲಿನ ಸೂರಪ್ಪನಾಗಿರಲಿಲ್ಲ. ಮೊದಲು ಹೆಜ್ಜೆಯಿರಿಸಿ ದಲ್ಲಿ ಹರುಷದ ಹೊಳೆ ಹರಿಸುತ್ತಿದ್ದರು. ಮಾತಿನಲ್ಲಿ, ನೋಟದಲ್ಲಿ, ಸ್ಪರ್ಶದಲ್ಲಿ ಪ್ರೇಮದ ಪವಿತ್ರ ಮಧು ಹನಿಯುತಿತ್ತು. ರತ್ನಳ ಸಾವು ಅವರ ಬದುಕಿನ ಉತ್ಸಾಹವನ್ನು ಅರ್ಧ ಹೀರಿತ್ತು. ಆದರೂ ತಮ್ಮ ಹುಟ್ಟುಗುಣವನ್ನು ಪರಿ ಸ್ಥಿತಿಯ ಆಘಾತಕ್ಕೆ ಸಂಪೂರ್ಣ ಬಲಿಗೊಡದೆ ಎಚ್ಚರಿಕೆಯಿಂದ ಕಾದಿಟ್ಟು ಕೊಂಡು ಬಂದಿದ್ದರು. ಈಗ ಹೆಣ್ಣು ಹುಟ್ಟಿ ಮನಸ್ಸನ್ನು ಮತ್ತೆ ಕಲಕಿದೆ. ಹತ್ತು-ಹನ್ನೆರಡು ದಿನಗಳಿಂದಲೂ ಮನದೊಳಗೆ ಅವಿಚ್ಛಿನ್ನವಾದ ಹೋರಾಟ ನಡೆದಿದೆ. ಕೊನೆಮೊದಲಿಲ್ಲದ ಹುಚ್ಚು ಕಲ್ಪನೆಗಳು ಭೂತಾಕಾರವಾಗಿ ಬೆಳೆದು ಬರುತ್ತಲಿವೆ. ಕಡೆಗೆ ಅಸಹ್ಯಪಟ್ಟು ತುದಿ-ಬುಡವಿಲ್ಲದ ಯೋಚನೆಗೆ ತಡೆಹಾಕಿ ಬಂದದ್ದನ್ನು ಎದುರಿಸಿ ಬಿಡುವುದೆಂಬ ನಿರ್ಧಾರಕ್ಕೆ ಬಂದು, ಒಂದು ಬಗೆಯ ಸಮಾಧಾನ ಕಂಡುಕೊಂಡರು.

ಇನ್ನೂ ಒಂದು ಸ್ತಿಮಿತಕ್ಕೆ ಬಂದಿರಲಿಲ್ಲ—ಮನಸ್ಸು ಹೊಯ್ದಾಡುತ್ತಲೇ ಇತ್ತು. ಮುಖದ ಮೇಲೆ ಹೋರಾಟದ ಚಿಹ್ನೆಗಳು ಮಸುಕು ಮಸುಕಾಗಿ ಕಾಣುತ್ತಲೆ ಇದ್ದುವು. ಪ್ರಯತ್ನಪೂರ್ವಕವಾಗಿ ಒಳತೋಟದ ಹೊಯ್ದಾಟ ವನ್ನು ಮುಚ್ಚಿರಿಸಿ, ಬಗ್ಗಿ ಮಗುವನ್ನು ಮುದ್ದಿಸಿದರು. ಮುಖ ಮಗುವಿನ ಕಡೆಗಿದ್ದರೂ ಕಣ್ಣು ಹೆಂಡತಿಯ ಕಡೆಗಿತ್ತು. ತಮ್ಮಂತೆ ಅಲ್ಲೂ ಹೊಯ್ದಾಟ ನಡೆದಿರಬಹುದೆಂದು ಅವರ ಊಹೆ. ತಿಳಿಯುವ ಕುತೂಹಲದಿಂದ ಅವರ ಮುಖದ ತುಂಬಾ ಕಣ್ಣಾಡಿಸುತ್ತಿದ್ದರು.

ಸುಶೀಲಮ್ಮ ಕಾಗದವನ್ನು ಒಡೆದು ಒಂದೆರಡು ಸಾಲು ಓದಿ ಬೇಸರ

ವಾಗಿ ಗಂಡನ ಕೈಗಿಡುತ್ತಾ, ಅವರ ಹುಡುಕಾಟವನ್ನು ತಡೆದು ಕೇಳಿದರು, "ಅದೇನು, ನೀವೇ ಹೇಳಿಬಿಡಿ, ಯಾರು ಓದುತ್ತಾರೆ; ಬೇಜಾರು !"

"ಮೈಸೂರಿನಿಂದ ರಾಮಭಟ್ಟರು ಬರೆದಿದ್ದಾರೆ. ಅವರ ಪೈಕಿ ಒಬ್ಬ ಹುಡುಗನಿದ್ದಾನಂತೆ. ವಿದ್ಯೆ–ಗುಣ–ರೂಪಿನಲ್ಲಿ ಬಿಟ್ಟುಕೊಡುವಂತಿಲ್ಲವೆಂದೂ, ತಕ್ಕಮಟ್ಟಿಗೆ ಆಸ್ತಿಯಿದೆಯೆಂದೂ ಬರೆದಿದ್ದಾರೆ. ತಂದೆಯಿಲ್ಲ–ತಾಯಿ, ಒಬ್ಬ ತಮ್ಮ, ಇಬ್ಬರು ಅಕ್ಕತಂಗಿಯರಿದ್ದಾರಂತೆ. ಯಾವುದಕ್ಕೂ ನನ್ನನ್ನು ಬರಹೇಳಿ ಬರೆದಿದ್ದಾರೆ.

ಸುಶೀಲಮ್ಮನ ಹುಬ್ಬು ಗಂಟಿಕ್ಕಿತು. ಮನಸ್ಸು ಗೊಂದಲಕ್ಕೆ ಬಿತ್ತು. ಸೂರಪ್ಪನ ಬಾಯಿಂದ–ಅದೂ ಇಷ್ಟು ಬೇಗ–ಶಾಂತಳ ಮದುವೆಯ ಪ್ರಸ್ತಾಪ ಬರುವುದೆಂದು ಕನಸು-ಮನಸ್ಸಿನಲ್ಲೂ ಎಣಿಸಿರಲಿಲ್ಲ. ಇದ್ದಕ್ಕಿದ್ದಂತೆ ಅವರಿಗೆ ಬೆಟ್ಟ ಕಳಚಿ ತಲೆಯ ಮೇಲೆ ಬಿದ್ದಂತಾಯಿತು. ಏನುತ್ತರ ಕೊಡಲೂ ಹೊಳೆಯಲಿಲ್ಲ. ಮಾತಾಡದೆ ಸುಮ್ಮನೆ ಕುಳಿತರು.

ಸೂರಪ್ಪನೂ ಶಾಂತಳ ಲಗ್ನ ಮಾಡಬಾರದೆಂದೆ ಇದ್ದರು. ಆದರೆ ವಯಸ್ಸಿಗೆ ಬಂದ ಮಗಳ ತುಂಬು ಯೌವ್ವನ ಅವರ ನಿರ್ಧಾರವನ್ನು ಹಿಡಿದು ಅಲುಗಿಸಿತ್ತು. ಮುಂದೆ ಉಂಟಾಗಬಹುದಾದ ಅಪವಾದಕ್ಕೆ ಹೆದರಿ ಅಭಿಪ್ರಾಯ ಬದಲಿಸಿದ್ದರು; ಆ ಭಾವನೆ ಹೊಳೆದಂತೆ ವರ ಹುಡುಕಲು ಪತ್ರ ಬರೆದಿದ್ದರು. ಅದರ ಉತ್ತರವೆ ಇಂದು ಬಂದದ್ದು. ತಮ್ಮಂತೆ ಸುಶೀಲಮ್ಮನೂ ಅಭಿಪ್ರಾಯ ಬದಲಿಸಿರಬಹುದೆಂದೂಹಿಸಿದ್ದರು. ಅವರ ಮೌನ ಗಾಬರಿಯುಂಟುಮಾಡಿತು. ಧೈರ್ಯ ಮಾಡಿ ಮೌನ ಒಡೆಯಲು ಪ್ರಯತ್ನಿಸಿದರು. ಆ ಮೌನ ಗಹ್ವರದಲ್ಲಿ ಅಡಗಿರುದ ಭಾವಮೃಗ ಯಾವ ಜಾತಿಯದೆಂದು ತಿಳಿಯುವ ಕುತೂಹಲದಿಂದ ಥಟ್ಟನೆ ಕೇಳಿದರು,

"ಭಟ್ಟರಿಗೆ ಏನುತ್ತರ ಬರೆಯಲಿ ?"

ಸುಶೀಲಮ್ಮನಿಗೆ ಶಾಂತಳ ಲಗ್ನ ಮಾಡುವ ಮನಸ್ಸು ಎಳ್ಳಷ್ಟೂ ಇರಲಿಲ್ಲ. ಆದರೆ ಆ ಮಾತನ್ನು ನೇರವಾಗಿ ತಿಳಿಸಲು ಹೆದರಿದರು. ಅದುವರೆಗೆ ಯಜಮಾನರ ಅಭಿಪ್ರಾಯವೂ ಹಾಗೇ ಇದ್ದು, ಈಗ ಇದ್ದಕ್ಕಿದ್ದಂತೆ ಪರಿವರ್ತನೆ ಹೊಂದಿರುವುದರಿಂದ ಕಾರಣವೂ ಹೊಳೆಯದೆ ಹೀಗೆ ಹೇಳಿದರು

"ಈಗ ತಾನೆ ಹದಿನಾರು ತುಂಬುವುದರಲ್ಲಿದೆ; ಮದುವೆಗೆ ಏನವಸರ ಹೇಳಿ."

"ಹುಡುಗಿ ಓದು ಕೂಡ ಬಿಟ್ಟಾಯಿತು; ಮದುವೆ ಮಾಡದೆ ಮನೆಯಲ್ಲಿರಿಸಿ ಏನು ಮಾಡುವುದು ?"

"ಗಂಡುಮಕ್ಕಳಂತೆ ಸಾಕುವುದು."

"ಎಲ್ಲಿಯ ವರೆಗೆ ಸಾಧ್ಯ ಅದು ?"

"ನಾವಿಬ್ಬರೂ ಬದುಕಿರುವರೆಗೆ--ರತ್ನ ಸತ್ತಾಗ ನೀವೇ ಹೇಳಿದ್ದಿರಲ್ಲ—' ನನ್ನ ಜೀವವಿರುವರೆಗೆ ಶಾಂತಳಿಗೆ ಲಗ್ನ ಮಾಡುವುದಿಲ್ಲ. ವಿದ್ಯೆ ಓದಿ, ಹಾಕಿದ್ದನ್ನು ತಿಂದು ಮನೆಯಲ್ಲೇ ಬಿದ್ದಿರಲಿ '—ಎಂದು. ಆ ಮಾತನ್ನು ಮರೆತಿರೇನು ?"

"ಅವಳು ಒಬ್ಬಳೇ ಆಗಿದ್ದರೆ ಸರಿ—ಈಗ ಹುಟ್ಟಿರುವುದೂ ಅದೇ ಅಲ್ಲ ಅದಕ್ಕೇನು ಮಾಡಲಿ ?"

ಅದುವರೆಗೆ ಒಳಗೊಳಗೆ ಹೊತ್ತಿ ಉರಿಯುತ್ತಿದ್ದ ತಿರಸ್ಕಾರದ ಬೆಂಕಿ ಆ ಮಾತಿನೊಡನೆ ವ್ಯಕ್ತವಾಗಿ ಸುಶೀಲಮ್ಮನ ಮರ್ಮವನ್ನು ಚುರುಕ್ಕೆನ್ನಿಸಿತು.

"ಅದನ್ನೂ ಗಂಡುಮಗುವಿನಂತೆ ಸಾಕಲು ಸಾಧ್ಯವಿದೆ."

ಯಜಮಾನರು ಎಸೆದ ತಿರಸ್ಕಾರದ ಬಾಣದಿಂದ ಚೇತರಿಸಿ ನುಡಿದರು,

"ನನ್ನಿಂದ ಸಾಧ್ಯವಿಲ್ಲ. ನಾನು ಬಡವ—ಈ ಬಗೆಯ ಧೈರ್ಯದಿಂದ, ಮುಂದೆ ನಮ್ಮೆಲ್ಲರ ಜೀವನದಲ್ಲಿ ಉಂಟಾಗುವ ತೊಡಕನ್ನು ಎದುರಿಸಿ, ಸಮಾಜದ ಮುಂದೆ ತಲೆಯೆತ್ತಿ ಬಾಳುವ ಚೈತನ್ಯ ನನ್ನಲ್ಲಿಲ್ಲ."

"ಅಂದರೆ........? ನಿಮ್ಮ ಮಾತು ನನಗರ್ಥವಾಗಲಿಲ್ಲ."

"ಗಂಡು-ಹೆಣ್ಣು ಒಟ್ಟಾಗಿ ಸೇರಿ ಬಾಳು ಬೆಳೆಸುವುದು ಮನುಷ್ಯರಿಂದ ಬಂದ ಪದ್ಧತಿಯಲ್ಲ; ನಿಸರ್ಗದಿಂದ ಬಂದದ್ದು. ಒಂದು ವಯಸ್ಸಿಗೆ ಬಂದ ಮೇಲೆ ಹೆಣ್ಣಾಗಲೀ ಗಂಡಾಗಲೀ, ಪರಸ್ಪರ ಸ್ನೇಹ, ಪ್ರೇಮ, ಸಮ್ಮಿಳನಕ್ಕೆ ಹಾತೊರೆಯುತ್ತದೆ. ಅಂಥಾ ಸಂದರ್ಭದಲ್ಲಿ ಲಗ್ನದ ಕಟ್ಟಿಲ್ಲದಿದ್ದರೆ ಅವರನ್ನು ಹಿಡಿಯುವುದು ಕಷ್ಟವಾಗುತ್ತದೆ."

"ಅದನ್ನು ನಾನು ಒಪ್ಪುವುದಿಲ್ಲ."

"ಅದು ಹೇಗೆ ? ನಿನ್ನ ದೃಷ್ಟಾಂತದಿಂದಲೆ ನೀನು ಒಪ್ಪಬೇಕಾಗುತ್ತದೆ."

"ಅಂದರೆ........?"

"ಇಷ್ಟು ವಯಸ್ಸಾದ ನೀನೆ ನನ್ನನ್ನು ಬಿಟ್ಟಿರಲಾರೆ........"

ಸೂರಪ್ಪನ ತುಟಿಯಲ್ಲಿ ತುಂಟುನಗೆಯಾಡುತ್ತಿತ್ತು.

"ನನ್ನ ಮಾತು ಬಿಡಿ—ನನಗೆ ಲಗ್ನವಾಗಿದೆ. ಆ ಜೀವನವೆ ಒಗ್ಗಿ ಹೋಗಿದೆ. ನಿರ್ಬಂಧಕ್ಕೆ ಸಿಕ್ಕಿ ನಡೆಯುವವಳು ನಾನು. ಶಾಂತಳಿಗೆ ಹಾಗಾಗ ದಿರಲೆಂದೇ ಮದುವೆ ಬೇಡವೆನ್ನುವುದು."

"ನಿನಗೆ ಹುಚ್ಚು ಸುಶೀಲ, ಅದು ಸಾಧ್ಯವಿಲ್ಲ. ಈ ಮಾತನ್ನು ನನ್ನ ದೃಷ್ಟಿಯಿಂದ ಕೇಳುತ್ತಿಲ್ಲ; ವಿಶ್ವದ ಸಮಗ್ರ ದೃಷ್ಟಿಯಿಂದ ಹೇಳುತ್ತಿದ್ದೇನೆ. ಒಂದು ಸಮಯ ನಮ್ಮ ಒತ್ತಾಯಕ್ಕೆ ಸಿಕ್ಕಿ ಶಾಂತ ಕಷ್ಟದಿಂದ ಬ್ರಹ್ಮಚರ್ಯ ವನ್ನು ಪಾಲನೆ ಮಾಡಲು ಒಪ್ಪಿದರೂ ಸುತ್ತುಮುತ್ತಲಿನ ವಾತಾವರಣ ಅದಕ್ಕೆ ವಿರುದ್ಧವಾಗಿದೆ."

"ಆ ವಿರುದ್ಧ ಸನ್ನಿವೇಶವನ್ನು ಎದುರಿಸಿದರೆ ?"

"ಆ ಎದೆಗಾರಿಕೆ ಎಲ್ಲರಿಗೂ ಬರುವುದಿಲ್ಲ—ಅದಕ್ಕಾಗೇ ಹುಟ್ಟಿದವರು ಕೆಲವರಿರುತ್ತಾರೆ; ಅಂಥವರಿಂದ ಮಾತ್ರ ಸಾಧ್ಯ."

"ನನ್ನ ಮನಸ್ಸು—ಪ್ರಯತ್ನ ಪಟ್ಟರೆ ಶಾಂತಳಿಗೂ ಆ ಬಗೆಯ ಎದೆಗಾ ರಿಕೆ ಸಾಧ್ಯವಾಗಬಹುದು ಎನ್ನುತ್ತಿದೆ!"

"ನೀನು ತಪ್ಪು ತಿಳಿದಿದ್ದೀಯೆ; ಶಾಂತ ಸಂಸಾರಕ್ಕೆ ಯೋಗ್ಯಳಾದ ಹುಡುಗಿ. ಬ್ರಹ್ಮಚರ್ಯವನ್ನು ಕಾದಿಡುವ ಯಾವ ಆದರ್ಶವೂ ಅವಳಲ್ಲಿ ಕಂಡುಬರುವುದಿಲ್ಲ. ನಿನಗುಂಟಾದ ನೋವಿನಿಂದ, ಆ ಕಠಿಣ ಬದುಕಿಗೆ ಗುರಿಮಾಡಿ ಅವಳನ್ನು ದುಃಖಕ್ಕೀಡು ಮಾಡಬೇಡ."

ಧ್ವನಿಯಲ್ಲಿ ಗಡುಸಿತ್ತು. ಕೋಪದಿಂದ ಕಣ್ಣು ಕೆಂಚಾಗಿ ಮೈ ನಡುಗು ತ್ತಿತ್ತು. ಉತ್ತರಕ್ಕೆ ಕಾಯದೆ ಹೊಸಲು ದಾಟಿದರು.

"ಬನ್ನಿ ಇಲ್ಲಿ."

ಸುಶೀಲಮ್ಮನ ಧ್ವನಿಯಲ್ಲೂ ಗಡುಸಿತ್ತು. ಗಂಡನ ಕೋಪವನ್ನು ಎದುರಿಸುವ ದಿಟ್ಟತನವೂ ಅಡಗಿತ್ತು.

"ಏನು ?"

ಸೂರಪ್ಪನ ಕೋಪದ ಕಾವು ಆರಿರಲಿಲ್ಲ—ಗಡುಸಾಗಿಯೇ ಕೇಳಿದರು.

"ನೀವೇನೆ ಹೇಳಿ, ಶಾಂತಳ ಲಗ್ನವನ್ನು ನನ್ನ ಜೀವವಿರುವವರೆಗೆ ಮಾಡಗೊಡಿಸುವುದಿಲ್ಲ."

"ಇದು ಖಂಡಿತವೊ ?"

"ಹೌದು, ಖಂಡಿತ."

"ಇದೇ ಕೊನೆಯ ನಿರ್ಧಾರವೊ ನಿನ್ನದು ?"

"ಹೌದು, ನನ್ನದು ಇದೇ ಕಡೆಯ ನಿರ್ಧಾರ—" ಎಂದು ಸುಶೀಲಮ್ಮ ಮಗ್ನಲಾದರು.

"ಸರಿ. ಹಾಗಿದ್ದ ಮೇಲೆ ನನ್ನ ಆಶೆಯನ್ನು ಬಿಟ್ಟು ಬಿಡು. ಈ ಮನೆಯಲ್ಲಿ ನನಗಿನ್ನು ಸ್ಥಾನವಿಲ್ಲ. ಇಲ್ಲಿಗೆ ನನ್ನ–ನಿನ್ನ ಋಣ ಹರಿಯಿತು. ನಾನು ಹೋಗುತ್ತೇನೆ. ಬೀಗದ ಕೈಗೊಂಚಲು ಡ್ರಾಯರಿನಲ್ಲಿದೆ. ಆಸ್ತಿಗೆ ಸಂಬಂಧಪಟ್ಟ ಕಾಗದ ಪತ್ರಗಳು ಕಬ್ಬಿಣದ ಪೆಟ್ಟಿಗೆಯಲ್ಲಿವೆ. ಯಾವ ಕೆಲಸ ಮಾಡಬೇಕಿದ್ದರೂ ಕೃಷ್ಣಮೂರ್ತಿಯನ್ನು ಮುಂದಿಟ್ಟು ಮಾಡು. ಇದ್ದುದರಲ್ಲಿ ನಂಬಿಗಸ್ತ ಅವನು—" ಎಂದು ಉತ್ತರ ಕಾಯದೆ, ನಿತ್ಯ ಬಳಕೆಗೆ ಬೇಕಾದ ಬಟ್ಟೆಗಳನ್ನು ಕೈಚೀಲಕ್ಕೆ ತುಂಬಿ, ಮಗುವಿನ ಕಡೆಗೂ ಸುಶೀಲಮ್ಮನ ಕಡೆಗೂ ಕಣ್ಣಾಡಿಸಿ ಪಸಿತುಂಬಿ ಅಲ್ಲಿಂದ ಅಡಿಗೆ ಮನೆಯ ಕಡ ಹೊರಟರು.

ಚಟ್ನಿ ರುಬ್ಬುತ್ತಿದ್ದ ಶಾಂತ ತಂದೆ ಬಂದದ್ದನ್ನು ಗಮನಿಸಲಿಲ್ಲ. ಸೂರಪ್ಪ ಸದ್ದು ಮಾಡದೆ ಹೋಗಿ ಬಾಗಿಲ ಬಳಿ ನಿಂತು ಕೆಲಸದಲ್ಲಿ ಮಗ್ನಳಾಗಿದ್ದ ಮಗಳ ಮುದ್ದು ರೂಪವನ್ನು ಕಣ್ಣಲ್ಲಿ ತುಂಬಿ, ಕಣ್ಣೀರಿನ ಅಭಿಷೇಕ ಮಾಡಿದರು. ಹೆಚ್ಚು ಹೊತ್ತು ನಿಂತರೆ ಮಮತೆ ಬಾಧಿಸಬಹುದೆಂಬ ಹೆದರಿಕೆಯಿಂದ ಬಲವಂತವಾಗಿ ಮನಸ್ಸನ್ನು ಕಲ್ಲುಮಾಡಿ ಭಾರವಾದ ಹೆಜ್ಜೆಯನ್ನಿರಿಸುತ್ತಾ ಕೊಠಡಿಯಿಂದ ಹೊರಬಿದ್ದರು.

ಗೇಟು ತೆರೆದ ಶಬ್ದವಾಗಲು ಸುಶೀಲಮ್ಮ ಗಾಬರಿಯಾದರು. ಅವರು ತನ್ನನ್ನು ಆ ಸ್ಥಿತಿಯಲ್ಲಿ ಬಿಟ್ಟು ಹೋಗುವರೆಂದು ನಂಬಿರಲಿಲ್ಲ. ಆ ನಂಬಿಕೆ ಅವರನ್ನು ಅಷ್ಟು ಮೊಂಡು ಹಿಡಿಸಿತ್ತು; ತಮ್ಮ ಮನೋಭಾವನೆಯನ್ನು ಬಿಚ್ಚು ಮಾತಿನಿಂದ ಬದರದ ಗಂಡನ [illegible] ತಿಳಿದಿತ್ತು. ಈಗ ಅದು ತಲೆಬುಡವಾಗಿದೆ. ಏನು ಮಾಡಲೂ ತೋಚದೆ [illegible] ಕುಳಿ

ತರು. ಸ್ವಾಭಾವಿಕವಾಗಿ ಅವರಲ್ಲಿದ್ದ ಧೈರ್ಯ-ಸ್ಥೈರ್ಯವೆಲ್ಲ ಉಡುಗಿ ಹೋಯಿತು. ಶರೀರಾದ್ಯಂತ ಮಿಡಿಯುತ್ತಿದ್ದುದು ಸೂರಪ್ಪನ ಧ್ಯಾನವೊಂದೆ–ಮಿಕ್ಕುದೆಲ್ಲ ಮರೆತರು. ಅವರಿಲ್ಲದ ಬಾಳು ಅಸಹನೀಯವೆಂದು ಮನಸ್ಸು ಚೀರಾಡುತ್ತಿತ್ತು. ಅದುವರೆಗೆ ಅವರನ್ನು ಬಿಟ್ಟು ಬದುಕಿಲ್ಲ, ಮುಂದೆ ಬದುಕಲು ಸಾಧ್ಯವೂ ಇಲ್ಲ. ತನ್ನ ನಿರ್ಧಾರ ಕುಸಿದು ಬಿದ್ದರೂ ಸರಿ. ಅವರನ್ನು ಮಾತ್ರ ಬಿಟ್ಟುಕೊಡಕೂಡದೆಂದು ದಡಬಡನೆದ್ದು ಗೇಟಿನ ಬಳಿ ಹೋಗಿ, "ಇಲ್ಲಿ ಬನ್ನಿ" ಎಂದು ಕೂಗಿದರು.

"...................!"

"ಇಲ್ಲಿ ಬನ್ನೀ ಅಂದ್ರೆ............!" ಧ್ವನಿಯಲ್ಲಿ ದೈನ್ಯವಿತ್ತು.

"...................!"

ಸುಶೀಲಮ್ಮ ಗೇಟು ತೆರೆದು ಬೀದಿಯಲ್ಲಿ ನಾಲ್ಕು ಹೆಜ್ಜೆಯಿರಿಸಿದರು. ಸೂರಪ್ಪ–ಆ ಸುಳಿವನ್ನು ತಿಳಿದು ತಮ್ಮ ನಡಿಗೆಯ ವೇಗವನ್ನು ಹೆಚ್ಚಿಸಿದರು. ಹಿಂಬಾಲಿಸಿ ಹೋಗಲಾರದೆ ಸುಶೀಲಮ್ಮ ಅಲ್ಲೆ ನಿಂತು ಹೇಳಿದರು,

"ನನ್ನ ನಿರ್ಧಾರವನ್ನು ಬದಲಾಯಿಸಿದ್ದೇನೆ, ಬನ್ನಿ."

ಸೂರಪ್ಪನ ನಡಿಗೆಯ ವೇಗ ಮತ್ತೂ ಹೆಚ್ಚಾಯಿತು. ಸುಶೀಲಮ್ಮ ಗಾಬರಿಯಾದರು. ತೂರಾಡುತ್ತಾ ಮತ್ತೆರಡು ಹೆಜ್ಜೆ ಮುಂದಿರಿಸಿ ಬಲಹಾಕಿ ಗಟ್ಟಿಯಾಗಿ ಕೂಗಿದರು.

"ನನ್ನ ನಿರ್ಧಾರವನ್ನು ಬದಲಾಯಿಸಿದ್ದೇನೆ, ಬನ್ನೀ....ೕ....ೕ....ಅಂದೆ!"

ಧ್ವನಿಯಲ್ಲಿ ದುಃಖ ತುಂಬಿತ್ತು, ನಡುಕವೂ ತಲೆಹಾಕಿತ್ತು; ತಾರಸ್ಥಾಯಿಯ ನಿರಿಕೆಯೂ ವ್ಯಕ್ತಿಯ ವ್ಯೆದೋರಿತ್ತು. ಅವರ ಜನ್ಮದಲ್ಲಿ ಅಷ್ಟು ಗಟ್ಟಿಯಾಗಿ ಎಂದೂ ಮಾತನಾಡಿರಲಿಲ್ಲ. ಅವರ ಕಿರಿಚಾಟ ಕಂಡು ಅವರಿಗೇ ಅಸಹ್ಯವೆನಿಸಿತು. ನೆರೆ-ಹೊರೆಯವರ ನೆನಪಾಗಿ ಕಣ್ಣನ್ನು ಅತ್ತಿತ್ತ ಹೊರಳಿಸಿದರು. ಎಲ್ಲೂ ಯಾರ ಸುಳಿವೂ ಇರಲಿಲ್ಲ. ರಾತ್ರಿಯಾಗಿದ್ದುದರಿಂದ ಅಕ್ಕಪಕ್ಕದವರ ನಗೆಗೀಡಾಗುವುದು ತಪ್ಪಿತು. ಅದು ತಮ್ಮ ಪುಣ್ಯವೆಂದು ತಿಳಿದು ಸಮಾಧಾನದ ಉಸಿರು ಬಿಟ್ಟು, ಗಂಡನ ಕಡೆ ಹೊರಳಿದರು.

ಸೂರಪ್ಪ ಆಗಲೆ ಹಿಂದಿರುಗಿದ್ದರು. ಹೀಗಾಗುವುದೆಂದು ಅವರಿಗೆ ಮೊದಲೇ ಗೊತ್ತು. ಸುಶೀಲಮ್ಮನನ್ನು ದಾರಿಗೆ ತರಲು ಅದೊಂದೇ ಅಸ್ತ್ರ

ವೆಂದು ತಿಳಿದು ಉಪಯೋಗಿಸಿದ್ದರು. ಅವರೆಣಿಕೆಯಂತೆ ಜಯವೂ ಲಭಿಸಿತು. ತುಂಬಿದ ಹಿಗ್ಗಿನಿಂದ ಹಜ್ಜೆಯಿರಿಸುತ್ತಾ ಬರುತ್ತಿದ್ದರು. ಹುಸಿ ನಗು ಮುಖದ ಮೇಲೆ ಲಾಸ್ಯವಾಡುತ್ತಿತ್ತು.

ಅವರ ನಡಿಗೆ-ನಗು ಎರಡೂ ಸುಶೀಲಮ್ಮನ ಅಭಿಮಾನವನ್ನು ಹಂಗಿಸುವಂತಿದ್ದುವು; ಬದುಕಿನಲ್ಲಿ ತಮಗುಂಟಾದ ಸೋಲಿಗೆ ಕೋಪದ ಕಿಡಿಯಾದರು. ಅದರ ಕಾವಿನಿಂದ ಮೈನಡುಗಿತು. ಮಿಂಚಿನ ವೇಗದಲ್ಲಿ ಹಿಂದುರಿಗಿ ಮನೆಯ ಕಡೆ ಸರಸರ ಹೊರಟರು. ಅವರ ಕೋಪದ ರಭಸಕ್ಕೆ ಆವರಣದ ಬಾಗಿಲು ಈಡಾಗಿ ಜೋರಿನಿಂದ ಹಿಂದೆ ಹೋಗಿ ಗೋಡೆಗೆ ತಲೆಹೊಡೆದು 'ಅಯ್ಯೋ' ಎಂದು ಚೀರಿತು. ಒಳಗೆ ಬಂದವರೆ ಹಾಸಿಗೆಯ ಮೇಲೆ ಹೋಗಿ ಧೊಪ್ಪನೆ ಉರುಳಿದರು. ಮರುಕ್ಷಣವೆ ಕೋಪ ದುಃಖವಾಯಿತು. ಮುಸುಕು ಹಾಕಿ ಮುಳು-ಮುಳು ಅಳತೊಡಗಿದರು.

ಒಳಗೆ ಬಂದ ಸೂರಪ್ಪ ಚೀಲವನ್ನು ಒಂದು ಬದಿಗಿರಿಸಿ ಸುಶೀಲಮ್ಮನ ಬಳಿ ಹೋಗಿ ಕುಳಿತರು. ಕರುಳು ಚುರುಕೆನ್ನಿಸಿತು. ಹಾಗೆ ಮಾಡಬಾರದಿತ್ತೆಂದು ತಮ್ಮನ್ನು ತಾವೇ ನಿಂದಿಸಿಕೊಂಡರು. ಮನಸ್ಸು ಮಡದನ್ನೆಯನ್ನು ಸಮಾಧಾನ ಪಡಿಸಲು ತವಕಿಸುತ್ತಿತ್ತು. ಮಡದಿಯ ಸ್ವಭಾವದ ಪರಿಚಯ ಚೆನ್ನಾಗಿದ್ದುದರಿಂದ, ಥಟ್ಟನೆ ಮುಸುಕೆಳೆದು ಸಂತೈಸಲು ಹಿಂಜರಿದರು. ಮನಸ್ಸು ಕೇಳಲಿಲ್ಲ. ಮುಸುಕು ತೆರೆದು ತಲೆ ಸವರಿದರು. ಅವರ ಅಳು ಮತ್ತಷ್ಟು ಹೆಚ್ಚಾಯಿತು.

"ಹಸಿ ಮೈಯಲ್ಲಿ ಇಷ್ಟೊಂದು ಅತ್ತರೆ ಯಾಕಾಗುತ್ತದೆ ಸುಶೀಲಾ ! ಬದುಕಿನಲ್ಲಿ ಸುಖ–ದುಃಖ, ಗೆಲುವು–ಸೋಲು ಸಮನಾಗಿರುತ್ತವೆ. ಬಂದದ್ದನ್ನು ಅನುಭವಿಸಲು ಹಿಂಜರಿಯಬಾರದು."

"ಅದು ಸುಳ್ಳು. ನನಗೆ ಜೀವನದಲ್ಲಿ ಸುಖ–ಗೆಲುವು ಎನ್ನುವುದಿಲ್ಲವೇ ಇಲ್ಲ."

ಅಳುವನ್ನು ಸಮಾಧಾನಕ್ಕೆ ತಂದು ಹೇಳಿದರು.

"ಹೋಗಲಿ, ಇನ್ನು ಆ ಮಾತು ಬೇಡ. ನಾಳೆ ಬೆಳಗಿನ ಟ್ರೈನಿನಲ್ಲಿ, ನಾನು ಮೈಸೂರಿಗೆ ಹೋಗಿ ಹುಡುಗನ ಕುಲ-ಗೋತ್ರಗಳನ್ನು ವಿಚಾರಿಸಿ

ಕೊಂಡು ಬರುತ್ತೇನೆ. ಎಲ್ಲವೂ ಸಮರ್ಪಕವಾಗಿ ಕಂಡರೆ ಮಾತ್ರ ಈ ಮದುವೆಗೆ ಒಪ್ಪುತ್ತೇನೆ. ನನ್ನ ಮಾತಿನಲ್ಲಿ ವಿಶ್ವಾಸವಿಡು. ನಿನ್ನಂತೆ ನನಗೂ ಶಾಂತ ಮಗಳು. ಅವಳಿಗೆಂದಿಗೂ ನಾನು ದ್ರೋಹ ಬಗೆಯುವುದಿಲ್ಲ"

"ನಿಮ್ಮಿಷ್ಟ ಬಂದಂತೆ ಮಾಡಿ" ಎಂದು ಸುಶೀಲಮ್ಮ ಮಗ್ನಲಾದರು. ಧ್ವನಿಯಲ್ಲಿ ಸಮಾಧಾನವಿತ್ತು.

ಸೂರಪ್ಪ ಕನಿಕರದಿಂದ ಕರಗಿದರು. ಮಗ್ನಲಾದ ಸುಶೀಲಮ್ಮನ ಮುಖವನ್ನು ಮೃದುವಾಗಿ ತಮ್ಮ ಕಡೆ ತಿರುಗಿಸಿ, ತಮ್ಮ ಮುಖವನ್ನು ಮೆಲ್ಲಗೆ ಹತ್ತಿರ ತೆಗೆದುಕೊಂಡು ಹೋದರು. ಅಷ್ಟರಲ್ಲಿ ಶಾಂತ ತಾಯಿಯನ್ನು ಊಟಕ್ಕೆ ಕರೆಯಲು ಕೋಣೆಯ ಬಳಿ ಬಂದಳು. ಸುಶೀಲಮ್ಮ ನಾಚಿ, ಗಂಡನ ಮುಖವನ್ನು ಪಕ್ಕಕ್ಕೆ ಸರಿಸಿ ಒಳಗೆದ್ದು ಹೋದರು.

೩

ರೈಲು ಶಿವಮೊಗ್ಗ ನಿಲ್ದಾಣವನ್ನು ಬಿಟ್ಟು ಮೈಸೂರಿನ ಕಡೆ ಮುಖ ಮಾಡಿ ಹೊರಟಿತು. ಸೂರಪ್ಪ ಮೈಸೂರು ಬೋಗಿಯಲ್ಲಿ—ನೂಕು ನುಗ್ಗಲಿಲ್ಲ—ಹತ್ತಿ, [illegible] ಸವರಿಸಿ ಕುಳಿತರು. [illegible] ಶಾಂತಳ [illegible] ನ್ನು ಸುಂದರವಾಗಿ ರೂಪುಗೊಳಿಸುವುದರಲ್ಲಿ. [illegible] ದಲ್ಲಿ ತಮ್ಮ ಬದುಕನ್ನು ತಿರುಗಿ ನೋಡಿದರು. ಲಗ್ನವಾದಂದಿನಿಂದ [illegible] ವರೆಗೆ ಅವರು ಸುಶೀಲಮ್ಮನೊಡನೆ ನಡೆದುಕೊಂಡ ಪ್ರತಿಯೊಂದು [illegible] ಮುಂದೆ ಹಾದು ಹೋಯಿತು. ನಡವಳಿಕೆಯಲ್ಲಿ ತಪ್ಪಿದ್ದಂತೆ ಒಳ್ಳೆಯದೂ ಇತ್ತು.

ಸೂರಪ್ಪನವರದು ಮುಂಗೋಪದ ಸ್ವಭಾವ. ಸದಾ ಕೋಪ ಮೂಗಿನ ತುದಿಯಲ್ಲಿ ಗೂಡು ಹಾಕಿರುತ್ತಿತ್ತು. ಅದರ ಬೆನ್ನ ಹಿಂಗಡೆಯಲ್ಲಿ ಪ್ರೀತಿ, ಸಮಾಧಾನ [illegible] ಹಿಡಿದು, ಮೇಲ್ಪಟ್ಟ [illegible] ಯಲ್ಲಿ ಎರಡಕ್ಕೂ ಸಮಾನಸ್ಥಾನ ಕಟ್ಟಿಟ್ಟ [illegible]

ಅವರ ಜೀವನವನ್ನು ಹದವಾಗಿ ನಡೆಸಿಕೊಂಡು ಬಂದಿದ್ದವು. ಅವುಗಳ ಪ್ರಭಾವ ಕ್ಕೊಳಗಾದ ಒಂದು ಬಾರಿಯ ಘಟನೆ ನೆನಪಾಗಿ ಮೈ 'ಜುಂ' ಎಂದಿತು. ಸಂಗಡ ಬುದ್ಧಿ ಕಲಿಸಲು ಹೂಡಿದ ಸುಶೀಲಮ್ಮನ ನಾಟಕ ನಗುವನ್ನೂ ತಂದಿತು.

ತಮ್ಮ ಲಗ್ನವಾಗಿ ಏಳೆಂಟು ವರ್ಷವಾಗಿತ್ತು. ರತ್ನ ಮೂರು ವರ್ಷದ ಕೈಗೂಸು. ಮನೆಯಲ್ಲಿ ಮೂವರ ಜತೆಗೆ ಮತ್ತೊಬ್ಬರು ಬಂದು ಸೇರಿದರು. ಕೃಷ್ಣಪ್ಪ ಸೂರಪ್ಪನ ಷಡ್ಡ. ಅವರಿಗೆ ಬೆಂಕಿಕಡ್ಡಿ ಕಾರ್ಖಾನೆಯಲ್ಲಿ ಕೆಲಸ ವಾಗಿತ್ತು. ಮನೆ ಸಿಕ್ಕುವ ವರೆಗೆ ಒಂದೆರಡು ತಿಂಗಳು ತಮ್ಮಲ್ಲಿಯೆ ಇರ ಬೇಕೆಂದು ಕೇಳಿಕೊಂಡ ಸೂರಪ್ಪನವರ ಕರೆಗೆ ಮನ್ನಣೆ ಕೊಟ್ಟು ಇರಲು ಒಪ್ಪಿದರು.

ಕೃಷ್ಣಪ್ಪನವರದು ಸರಳ ಸ್ವಭಾವ. ಮನಸ್ಸು ಮಕ್ಕಳಂತೆ ಮುಗ್ಧ ವಾಗಿತ್ತು. ನಡವಳಿಕೆ ಮತ್ತೊಬ್ಬರನ್ನು ಆಕರ್ಷಿಸುವಂತಿತ್ತು. ಯಾರಲ್ಲಾ ದರೂ ಸರಿ, ಸಂಕೋಚವಿಲ್ಲದೆ ನಡೆದುಕೊಳ್ಳುತ್ತಿದ್ದರು. ಸುಶೀಲಮ್ಮನಲ್ಲೂ ಹಾಗೆ ಬಹಳ ಸಲುಗೆಯಿಂದಿದ್ದರು. ತಮ್ಮ ಕೆಲಸ–ಬೊಗಸೆ ಮುಗಿಸಿಕೊಂಡು ಬಂದು, ಅವರೊಡನೆ ಹರಟೆ ಕೊಚ್ಚುತ್ತ ಕುಳಿತುಕೊಳ್ಳುವುದು ಪದ್ಧತಿಯಾ ಯಿತು. ಹೊಸ ಸ್ಥಳವಾದ್ದರಿಂದ ಸರಿಯಾದ ಸ್ನೇಹಿತರಿನ್ನೂ ಸಿಕ್ಕಿರಲಿಲ್ಲ; ಹೊರಗೆ ಹೋಗಿ ಸುತ್ತಾಡಿ ಬರುವ ಪದ್ಧತಿಯೂ ಸ್ವಲ್ಪ ಕಡಿಮೆ. ಹೀಗಾಗಿ ಸದ್ಯಕ್ಕೆ ಸುಶೀಲಮ್ಮನೆ ಅವರ ಸ್ನೇಹಿತರಾಗಿ ನಿಂತರು.

ಸೂರಪ್ಪ ಹೊಟೇಲಿನ ಮಾಲಿಕರು. ಮನೆಯಲ್ಲಿರಲು ಒಂದು ಗಳಿಗೆ ಬಿಡುವಾಗುತ್ತಿರಲಿಲ್ಲ. ಮಧ್ಯಾಹ್ನದ ಊಟದ ವೇಳೆಗೆ ಬಂದು ಹೋಗುವುದೆ ಬಹಳ ಕಷ್ಟವಾಗಿತ್ತು. ಸಣ್ಣ ಪ್ರಾಯದ ಹೆಂಡತಿಯೊಬ್ಬರನ್ನೇ ಬಿಟ್ಟಿರಲು ಮನಸ್ಸೊಪ್ಪುತ್ತಿರಲಿಲ್ಲ. ವಿಧಿಯಿಲ್ಲದೆ ಇದ್ದರು. ಕೃಷ್ಣಪ್ಪ ಬಂದಾಗ ಮನೆ ಯಲ್ಲಿ ಒಂದು ಜನವಾಯಿತೆಂದು ಹಿಗ್ಗಿದ್ದರು. ಕ್ರಮೇಣ ಆ ಹಿಗ್ಗು ಕೃಷ್ಣ ಪ್ಪನ ಸರಳತನಕ್ಕೆ ಹೆದರಿ ಕರಗಿ ಹೋಯಿತು. ಸುಶೀಲಮ್ಮನಲ್ಲಿ ಅವರಿಟ್ಟಿದ್ದ ಸಲುಗೆ ಕಂಡು ಗಾಬರಿಯಾದರು; ಅಪಾರ್ಥ ಮಾಡಿಕೊಂಡರು. ಅವರು ಮೂರು ಹೊತ್ತೂ ಮನೆಯಲ್ಲೇ ಇರುತ್ತಿದ್ದುದು ಸಂಶಯಾಗ್ನಿಗೆ ಸುತ್ತಪ್ಪು ತುಪ್ಪವೆರೆದಂತಾಯ್ತು. ದಿನೇ ದಿನೇ ತಮ್ಮ ಊಹೆಯನ್ನು ಬೆಳಸುತ್ತಾ

ಬಂದರು. ಅದು ಪೆಡಂಭೂತವಾಗಿ ಬೆಳೆದು ಅವರ ಸೌಜನ್ಯವನ್ನು ಮೆಟ್ಟಿ ನಿಂತಿತು. ಕ್ರಮೇಣ, ಊಟ-ತಿಂಡಿಗೆ ಮನೆಗೆ ಬರುವುದನ್ನು ಬಿಟ್ಟರು. ಹಗಲು ಮರೆತೂ ಅತ್ತ ಕಡೆ ಸುಳಿಯುತ್ತಿರಲಿಲ್ಲ. ರಾತ್ರಿ ಸುಶೀಲಮ್ಮ ಮಲಗಿದ ಮೇಲೆ ಮನೆಗೆ ಬರುತ್ತಿದ್ದರು. ಒಬ್ಬರಿಗೂ ಮಾತಿಲ್ಲ; ಕಥೆಯಿಲ್ಲ. ಹೀಗೆ ಎರಡು ತಿಂಗಳು ಕಳೆಯಿತು.

ಸುಶೀಲಮ್ಮನಿಗೆ ಮೊದಲು ಗಂಡನ ನಡವಳಿಕೆ ಅರ್ಥವಾಗಲಿಲ್ಲ. ವ್ಯಾಪಾರದಲ್ಲೇನಾದರೂ ನಷ್ಟವಾಗಿರಬಹುದೇನೊ ಎಂದು ಊಹಿಸಿದರು. ಕೇಳಿ ತಿಳಿದುಕೊಳ್ಳುವ ಮನಸ್ಸಾಯಿತು. ಒಂದೆರಡು ಬಾರಿ ಪ್ರಯತ್ನಿಸಿ ವಿಫಲರಾದರು. ಮಾತು-ಕತೆಯಿಲ್ಲದೆ ದೂರವಾದ ಅವರ ನಡವಳಿಕೆ ಮನಸ್ಸನ್ನು ಕೊರೆಯುತ್ತಿತ್ತು. ತಮ್ಮ ನೋವನ್ನು ಕೃಷ್ಣಪ್ಪನವರಲ್ಲಿ ತೋಡಿಕೊಂಡರು.

ಅಂದಿನಿಂದ ಸೂಕ್ಷ್ಮವಾಗಿ ಪರಿಶೀಲಿಸಿದ ಕೃಷ್ಣಪ್ಪನವರಿಗೆ ಸೂರಪ್ಪನ ನಡವಳಿಕೆ ಅರ್ಥವಾಯಿತು. ಅವರ ತಪ್ಪು ತಿಳುವಳಿಕೆಯ ಬಗ್ಗೆ ನೋವಾಗದೆ ಇರಲಿಲ್ಲ. ಮುಂದಿನ ದಾರಿ ಹುಡುಕಿದರು. ಒಂದು ಗಳಿಗೆ ಕೂಡ ತಡ ಮಾಡದೆ, ಗೊತ್ತು ಮಾಡಿದ ಕೊಠಡಿಗೆ ಸಾಮಾನುಗಳನ್ನು ಸಾಗಿಸಿ, ವಿಧಿಯಿಲ್ಲದೆ ತಾವು ಬೇರೆ ಹೋದುದಕ್ಕಾಗಿ ಸುಶೀಲಮ್ಮನಲ್ಲಿ ಕ್ಷಮೆ ಬೇಡಿದರು. ಸೂರಪ್ಪನವರಿಗೆ ತಮ್ಮ ಬೀಳ್ಕೊಡುಗೆಯನ್ನು ನಗುತ್ತಲೆ ತಿಳಿಸಿ ಅವರ ಮನೆಯಿಂದ ಹೊರಬಿದ್ದರು.

ಕೃಷ್ಣಪ್ಪ ಬೇರೆ ಹೋದುದು ಸೂರಪ್ಪನಿಗೆ ನೆಮ್ಮದಿ ತಂದಿತು. ಮನೆಗೆ ಬಂದು ಹೋಗಲು ಪ್ರಾರಂಭಿಸಿದರು. ಕ್ರಮೇಣ ಊಟ–ತಿಂಡಿಗೂ ಹಾಜರಾದರು. ಮನಸ್ಸು ಮಡದಿಯನ್ನು ಮಾತನಾಡಿಸಲು ಹಾತೊರೆಯುತ್ತಿತ್ತು.

ಈಗ ಸುಶೀಲಮ್ಮನ ಸರದಿ. ನಿರಪರಾಧಿಯಾದ ತನ್ನಲ್ಲಿ ದೋಷವನ್ನು ಕಂಡ ಗಂಡನ ನಡವಳಿಕೆಯ ಬಗ್ಗೆ ಬೇಸರ ಬಂದಿತ್ತು. ಬುದ್ಧಿ ಕಲಿಸಲು ಪಣ ತೊಟ್ಟರು. ಸೂರಪ್ಪ ಇದ್ದಲ್ಲಿ ಇರುತ್ತಿರಲಿಲ್ಲ. ಊಟ–ತಿಂಡಿಯನ್ನು ಕೈಯಾರೆ ಉಣಬಡಿಸುತ್ತಿರಲಿಲ್ಲ. ಅಣಿ ಮಾಡಿಟ್ಟು ಹೊರಗೆ ಬಂದು ಬಿಡುತ್ತಿದ್ದರು. ಮಧ್ಯಾಹ್ನದ ಬಿಡುವಿನ ವೇಳೆಯಲ್ಲಿ ಪಕ್ಕದ ಮನೆಯ ಸರಸ್ವತಮ್ಮನನ್ನು–– ಮನಸ್ಸಿಲ್ಲದಿದ್ದರೂ––ಕಾಡು ಹರಟೆಗೆ ಆಹ್ವಾನಿಸುತ್ತಿದ್ದರು. ರಾತ್ರಿಯ ವೇಳೆ

ರತ್ನಳ ಅಸ್ವಸ್ಥತೆಯನ್ನು ಮುಂದು ಮಾಡಿಕೊಂಡು ಕೆಲಸದವಳಾದ ಜವನಿಯನ್ನು ಮನೆಯಲ್ಲಿ ಮಲಗಿಸಿಕೊಳ್ಳುತ್ತಿದ್ದರು.

ಸೂರಪ್ಪ ಸೋತರು. ಆದರೂ ಗೆಲವಿನ ಆಶೆ ಬಿಡಲಿಲ್ಲ. ಮನಸ್ಸಿನಲ್ಲಿ ಬೇರೊಂದು ಬಗೆಯ ಪರಿಹಾರ ಮಾರ್ಗ ಹೊಳೆಯಿತು. ಅದೇ ಸರಿಯೆಂದು ಅಂಗಡಿಗೆ ನಡೆದರು.

ಅಂದು ಶುಕ್ರವಾರ. ಮಧ್ಯಾಹ್ನ ನಾಲ್ಕು ಗಂಟೆಯ ವೇಳೆಗೆ ಹೊಟೇಲಿನ ಮಾಣಿಯೊಬ್ಬ ಸಾಮಾನಿನಿಂದ ತುಂಬಿದ ಒಂದು ಕೈಚೀಲ, ಲಕ್ಕೋಟಿ ಎರಡನ್ನೂ ತಂದು ಸುಶೀಲಮ್ಮನಿಗೆ ತಲಪಿಸಿ, ಉತ್ತರ ಕಾಯದೆ ಹೊರಟು ಹೋದನು. ಸುಶೀಲಮ್ಮನಿಗೆ ಆಶ್ಚರ್ಯವಾಯಿತು. ಕಾಗದ ಒಡೆದು ನೋಡಿದರು. ಎಲ್ಲ ತಮ್ಮ ಎಣಿಕೆಯಂತೆ ನಡೆದಿತ್ತು. ಸೂರಪ್ಪ ತಪ್ಪನ್ನು ಒಪ್ಪಿ—ಕ್ಷಮೆ ಬೇಡಿ ಶರಣು ಹೊಡೆದಿದ್ದರು. ನಗುವಿನ ಸಂಗಡ ಮರುಕವೂ ಉಂಟಾಯಿತು ಸುಶೀಲಮ್ಮನಿಗೆ. ಪೊಟ್ಟಣವನ್ನು ಬಿಚ್ಚಿ ನೋಡಿದರು. ಚೆಟ್ಟಂಚಗಲ ಜರತಾರಿಯಿದ್ದ ಒಂದು ಮೈನೂರು ಶಿಲ್ಕು ಸೀರೆ, ರವಿಕೆಗಾಗಿ ಅದೇ ಜಾತಿಯ ಒಂದು ಗಜ ಬಟ್ಟೆ, ಝಗಝಗ ಹೊಳೆಯುತ್ತಿರುವ ಬಿಳಿ ಹರಳಿನ ಒಂದು ಪದಕ-ಇವು ಅದರಲ್ಲಿ ಅಡಗಿದ್ದ ಸಾಮಾನುಗಳು. ಇಷ್ಟಕ್ಕೆ ಸುಮಾರು ಐನೂರು ರೂಪಾಯಿಗಳ ವರೆಗೆ ವೆಚ್ಚ ಮಾಡಿದ್ದರು.

ಸುಶೀಲಮ್ಮನ ಕಣ್ಣಲ್ಲಿ ಹನಿ ಇಣುಕಿತು. ತಮ್ಮ ನಡವಳಿಕೆಯ ಬಗ್ಗೆ ಪಶ್ಚಾತ್ತಾಪಪಟ್ಟರು. ಮನಸ್ಸು ಯಜಮಾನರ ಬಳಿ ಸಾರಿತು. ಸಂಜೆ ಮನೆಗೆ ಬಂದಾಗ ಸ್ವಾಗತಿಸಬೇಕಾದ ಬಗೆಯನ್ನು ಚಿತ್ರಿಸಿಕೊಂಡರು. ತಮ್ಮಿಬ್ಬರ ನಡುವೆ ಬೇಕೆಂತಲೇ ಅಡ್ಡಿಯನ್ನುಂಟು ಮಾಡುವಂತೆ ರಚಿಸಿದ್ದ ಅಡಚಣೆಯನ್ನೆಲ್ಲಾ ಒಂದು ಕ್ಷಣದಲ್ಲಿ ದೂರ ಮಾಡಿದರು.

ಸಂಜೆಯಾಯಿತು. ಸುಶೀಲಮ್ಮ ಗಂಡ ಬರುವುದನ್ನೆ ಕಾಯುತ್ತಿದ್ದರು. ಅಂದು ನಿರೀಕ್ಷಣೆಗಿಂತ ಒಂದು ಗಳಿಗೆ ಮುಂಚೆಯೆ ಮನೆಗೆ ಬಂದರು. ಅವರ ಮುಖದಲ್ಲಿ ಗೆಲವಿನ ನಗೆ ಮಿಂಚುತಿತ್ತು. ಸುಶೀಲಮ್ಮನ ನಗುವಿನಲ್ಲಿ ತುಂಟತನ ತೇಲುತಿತ್ತು. ಸೂರಪ್ಪ ಕೊಠಡಿಗೆ ಹೋದ ಕೂಡಲೆ, ತಾವೇ ಕದಸಿಕ್ಕಿ ಹೋಗಿ ಅವರ ಕೈ ಹಿಡಿದರು. ನಾಲ್ಕು ದೃಷ್ಟಿಗಳೂ ಕೂಡಿದುವು. ಇಬ್ಬರ ದೃಷ್ಟಿಯಲ್ಲೂ ಕ್ಷಮಾಯಾಚನೆಯಂತ ಪ್ರೇಮದ ಹಸಿವೂ ತುಂಬಿತ್ತು. ಮಲ

ಗಿದ್ದ ರತ್ನ ಅವರ ಸುಖಕ್ಕೆ ಮತ್ತಷ್ಟು ಅನುವು ಮಾಡಿಕೊಟ್ಟಳು.

ಇದೇ ಬಗೆಯ ತಮ್ಮ ಜೀವನದ ಹಲವಾರು ಘಟನೆಗಳು ನಾಟಕದಂತೆ ಸೂರಪ್ಪನವರ ಮನಃಪಟಲದ ಮೇಲೆ ಮೂಡಿ ಮಾಯವಾದವು. ಸೂರಪ್ಪ ಯಾವುದರಲ್ಲೂ ಸುಶೀಲಮ್ಮನನ್ನು ಬಿಟ್ಟುಕೊಟ್ಟಿರಲಿಲ್ಲ. ತಪ್ಪಿ ನಡೆದಾಗ–– ನೋವನ್ನುಂಟು ಮಾಡಿದ್ದರೂ, ಪ್ರೀತಿಯ ಮಧುರ ದಾನದಿಂದ ಹರುಷದ ಹೊಳೆಯಲ್ಲಿ ತೇಲಿಬಿಡುತ್ತಿದ್ದರು. ತಮ್ಮಂತಿದ್ದರೆ ಬಾಳು ಯಾರಿಗೂ ಕಹಿಯಾಗಲಾರದೆಂದು ಅನುಭವದಿಂದ ಅವರಿಗೆನಿಸಿತು. ಅಷ್ಟು ಹೊತ್ತಿಗೆ ಅರಸಿಕೆರೆ ಬಂದಿತು. ಕಾಫಿಯ ಚಟ, ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದ ಅವರನ್ನು ವಾಸ್ತವಿಕ ಜಗತ್ತಿಗೆ ಎಳೆತಂದು ಹೋಟಲು ಕಡೆಗೆಳೆಯಿತು. ಇಳಿದು, ಹೊಟೇಲಿಗೆ ಹೋಗಿ ಬಿಸಿಬಿಸಿ ಕಾಫಿಯನ್ನು ಹೊಟ್ಟೆಗೆ ಹುಯ್ದು ಅತ್ತಿಂದಿತ್ತ ತಿರುಗಾಡತೊಡಗಿದರು.

ರೈಲು ಹೊರಡಲು ಇನ್ನೂ ಅರ್ಧ ಗಂಟೆ ಕಾಲವಿತ್ತು. ಇದ್ದಕ್ಕಿದ್ದಂತೆ ಒಬ್ಬ ಹೆಂಗಸು ಚಿಟ್ಟನೆ ಚೀರುತ್ತಾ ರೈಲ್ವೇ ಸಿಲ್ದಾಣದ ಕಡೆ ಓಡಿಬಂದಳು. ಸುಮಾರು ನಾಲ್ವತ್ತು ವರ್ಷದ ಪ್ರಾಯದವಳಿರಬಹುದು. ಜಾತಿಯಲ್ಲಿ ಒಕ್ಕಲಿಗರಂತೆ ಕಾಣುತ್ತಿದ್ದಳು. ಉಟ್ಟ ಬಟ್ಟೆ ಎಳೆದಾಟದಿಂದ ಜೂಲು ಜೂಲಾಗಿ ನೇತಾಡುತ್ತಿತ್ತು. ತಲೆಗೂದಲು ಗುಂಜಾಟದಿಂದ ಅಸ್ತವ್ಯಸ್ತವಾಗಿತ್ತು. ಹಣೆಯಿಂದ ಧಾರಾಕಾರವಾಗಿ ಸುರಿಯುತ್ತಿದ್ದ ರಕ್ತದ ಹನಿ, ನಾಲ್ಕಾರು ದಿನದಿಂದ ನೀರು ಕಾಣದೆ ಇದ್ದ ಮೈಗೆ ಸ್ನಾನ ಮಾಡಿಸುವಂತಿತ್ತು. ಕಣ್ಣು ಕೆಂಚಾಗಿತ್ತು. ಕೋಪ–ತಾಪಗಳಿಂದ ತುಟಿ ನಡುಗುತಿತ್ತು. ಅಳುವಿನ ನಡುವೆ ಮನಸ್ಸಿಗೆ ಬಂದ ಮಾತನ್ನಾಡುತ್ತಾ ಟಿಕೆಟ್ ಆಫೀಸಿನ ಬಳಿ ಹೋಗಿ ನಿಂತಳು. ಅಷ್ಟರಲ್ಲಿ ಹಿಂದಿನಿಂದ ಯಾವನೊ ಒಬ್ಬ ಗಂಡಸು–ಅವಳ ಗಂಡನಿರಬಹುದು– ಓಡಿ ಬಂದು ಬಲಾತ್ಕಾರವಾಗಿ ಅವಳನ್ನು ಅಲ್ಲಿಂದ ಎಳೆದೊಯ್ದನು. ಆ ಸಮಯದಲ್ಲಿ ಭೀತಳಾಗಿ ಚೀರಿದ ಅವಳ ಚೀರಾಟ, ಎಲ್ಲರಿಗಿಂತ ಸೂರಪ್ಪನ ಮೇಲೆ ಹೆಚ್ಚು ಪರಿಣಾಮವನ್ನುಂಟು ಮಾಡಿತು. ತಮ್ಮ ಮಗಳು ರತ್ನ, ದುಷ್ಟ ಗಂಡನಿಂದ ಚೂರಿಯಿಂದ ತಿವಿಸಿಕೊಂಡು, ಇದಕ್ಕಿಂತ ಹತ್ತುಪಟ್ಟು-ನೂರುಪಟ್ಟು ಯಾತನೆ ಪಟ್ಟಿರಬಹುದೆಂಬ ಕಲ್ಪನೆ ಬಂದು ನಡುಗಿದರು. ತಲೆ ತಿರುಗಿ ದೇಹ ಅವರ ಸ್ವಾಧೀನ ತಪ್ಪಿ ಬೀಳುವಂತಾಯಿತು. ಬೇಗ ಹೋಗಿ

ತಮ್ಮ ಸ್ಥಳದಲ್ಲಿ ಕುಳಿತರು. ಸುಧಾರಿಸಿಕೊಳ್ಳುವುದರಲ್ಲಿ ಉಗಿಬಂಡಿಯೂ ಕೂಗುತ್ತಾ ಹೊರಟಿತು.

ಸೂರಪ್ಪನ ಮನಸ್ಸು ರತ್ನಳಿಂದ ದೂರವಾಗಿ ಶಾಂತಳ ಭವಿಷ್ಯದ ಕಡೆ ಹರಿಯಿತು. ಸುಂದರ ಕಲ್ಪನೆಗಿಂತ ನೋವಿನ ಭಾವನೆಗಳೇ ಹೆಚ್ಚಾಗಿ ಮೂಡಿ ಬಂದವು. ಅವನ್ನು ಒಂದು ಬದಿಗೆ ತಳ್ಳಿ, ತಮ್ಮಂತೆ ಒಬ್ಬ ಸುಸಂಸ್ಕೃತ ವ್ಯಕ್ತಿಯನ್ನು ಶಾಂತಳ ಪತಿಯ ಸ್ಥಾನದಲ್ಲಿ ಸೃಷ್ಟಿಸಿ ಸಮಾಧಾನಹೊಂದಿದರು. ಅಲ್ಲಿಗೆ ಅವರ ಪ್ರಯಾಣವೂ ಮುಗಿಯಿತು.

ಮೈಸೂರು ನಿಲ್ದಾಣದಲ್ಲಿ ರೈಲು ನಿಂತಿತು. ತಮ್ಮ ಕೈಚೀಲ ಹಿಡಿದು ಇಳಿದು, ನಿಲ್ದಾಣ ದಾಟಿ ಊರಕಡೆ ಹೊರಳಿದರು. ಮರುದಿನವೇ ಹಿಂದಿರುಗುವ ಅಭಿಪ್ರಾಯವಿದ್ದುದರಿಂದ ಹೆಚ್ಚಿಗೆ ಸಾಮಾನನ್ನೂ ತಂದಿರಲಿಲ್ಲ. ಕೈಬೀಸಿ ನಡೆದರು. ರಾಮುಭಟ್ಟರ ಮನೆ ಪರಿಚಯವಿದ್ದುದರಿಂದ ಕಾಲುಗಳು ತಡವರಿಸದೆ ಹೆಜ್ಜೆಯಿಡುತ್ತಿದ್ದವು. ನಿಲ್ದಾಣದಿಂದ ಶಿವರಾಂ ಪೇಟೆ ಹೆಚ್ಚು ದೂರವಿರಲಿಲ್ಲ. ಹತ್ತು ನಿಮಿಷದಲ್ಲಿ ಭಟ್ಟರ ಮನೆ ತಲುಪಿದರು.

ಜಗುಲಿಯ ಮೇಲೆ ಹರಟೆ ಹೊಡೆಯುತ್ತ ಕುಳಿತಿದ್ದ ಭಟ್ಟರು ಸೂರಪ್ಪನನ್ನು ಗುರುತಿಸಿ, ದಢಬಡನೆದ್ದು,

"ಓಹೋ ಹೋ ಹೊ! ದಯ ಮಾಡಿಸಬೇಕು—ನಿಮ್ಮನ್ನೆ ಎದುರು ನೋಡುತ್ತಿದ್ದೆ" ಎಂದು ಸಂತೋಷದ ಉದ್ಗಾರದೊಡನೆ ಅವರನ್ನು ಒಳಗೆ ಕರೆದೊಯ್ದರು. ಹೊರಬಾಗಿಲಲ್ಲೆ ಚಪ್ಪಲಿ ಕಳಚಿಟ್ಟು ಒಳಗೆ ಹೋಗುವ ಪದ್ಧತಿಯನ್ನು ಸೂರಪ್ಪ ಮರೆಯದೆ ಆಚರಿಸಿದ್ದರು.

"ಕೈಚೀಲ ಇಲ್ಲಿ ತನ್ನಿ—ನೀವು ಅಲ್ಲಿ ಕುಳಿತುಕೊಳ್ಳಿ" ಎಂದು ಭಟ್ಟರು ಅವರ ಕೈಯಿಂದ ಕೈಚೀಲ ತೆಗೆದುಕೊಂಡು, ನಡುಮನೆಯಲ್ಲಿ ಹಾಸಿದ ಚಾಪೆಯ ಮೇಲೆ ಅವರನ್ನು ಕೂರಿಸಿ, ಹಜಾರದ ಬಲಬದಿಯಲ್ಲಿದ್ದ ಕೊಠಡಿಯಲ್ಲಿ ಆ ಚೀಲವನ್ನಿರಿಸಿ ತಾವೂ ಬಂದು ಅವರ ಜತೆ ಕುಳಿತರು. ಸೂರಪ್ಪ ಕರವಸ್ತ್ರದಿಂದ ಬೆವರಿದ್ದ ಮುಖವನ್ನು ಒರೆಸಿ ಮುಗಿಸುವುದರಲ್ಲೆ ಅವರು ಮಾತಿನ ಮಳೆಗರೆದರು.

"ಊರಲ್ಲಿ ಎಲ್ಲ ಕ್ಷೇಮ ತಾನೆ?"

"ಎಲ್ಲ ಚೆನ್ನಾಗಿದ್ದಾರೆ. ನಿಮ್ಮಲ್ಲಿಯೂ ಎಲ್ಲ... ....!"

ಅರ್ಧದಲ್ಲಿಯೆ ತಡೆದು ಭಟ್ಟರು ಹೇಳಿದರು,

"ಹೌದು ಹೌದು, ಎಲ್ಲ ಹುಷಾರಾಗಿದ್ದಾರೆ. ನನ್ನ ಕಾಗದದ ವಿಷಯ ನಿಮ್ಮ ಮನಸ್ಸಿಗೆ ಒಪ್ಪಿಗೆಯಾಯಿತೆ ?"

"ಈಗಲೆ ಒಪ್ಪಿಗೆ ಎಲ್ಲಿ ಬಂತು ? ಹುಡುಗನನ್ನು ನೋಡಿದ ಮೇಲೆ ತಾನೆ ಎಲ್ಲ ?"

"ಅದು ಸರಿಯಪ್ಪ" ಎಂದು ಅಡಿಗೆ ಮನೆ ಕಡೆ ಮುಖ ಮಾಡಿ "ಕಾಫಿಯಾಗಿದ್ದರೆ ಕೊಟ್ಟು ಕಳಿಸು" ಎಂದು ಕುಳಿತಲ್ಲಿಂದಲೆ ಪತ್ನಿಯನ್ನು ಎಚ್ಚರಿಸಿದರು.

ಭಟ್ಟರ ಮಗ ಚಂದ್ರು ಬಿಸಿ ಬಿಸಿ ಕಾಫಿ ತಂದಿಟ್ಟನು.

"ತೆಗೆದುಕೊಳ್ಳಿ—ಆರಿಹೋಗುತ್ತೆ" ಎಂದು ಭಟ್ಟರು ಬಟ್ಟಲನ್ನು ತಮ್ಮ ಬಾಯಿಗಿಟ್ಟರು. ಸೂರಪ್ಪನವರೂ ಕಾಫಿಯನ್ನು ಸ್ವಲ್ಪಸ್ವಲ್ಪವೇ ಚಪ್ಪರಿಸಿ ಮುಗಿಸಿದರು. ಅಷ್ಟರಲ್ಲಿ ಒಳಗಿನಿಂದ ಕರೆಬಂದಿತು.

"ಏಳಿ—ಮೊದಲು ಊಟ ಮಾಡೋಣ; ಮಧ್ಯಾಹ್ನ ಸಹ ಊಟವಿಲ್ಲ ನಿಮಗೆ. ಆಮೇಲೆ ಮಾತಾಡಿದರಾಯಿತು—" ಎಂದು ಅವರನ್ನು ಬಚ್ಚಲ ಮನೆಗೆ ಕರೆದೊಯ್ದರು.

ಕೈಕಾಲು ತೊಳೆದು ಇಬ್ಬರೂ ಊಟಕ್ಕೆ ಕುಳಿತರು. ಊಟ ಮೌನದಿಂದ ಸಾಗಿತು. ಪೆಚ್ಚಿನ ಅಡಿಗೆಯ ಆಡಂಬರ ಇರಲಿಲ್ಲ. ಹೊಸದಾಗಿ ತೆಂಗಿನಕಾಯಿ ಚಟ್ನಿಯೊಂದನ್ನು ಅರೆದಿದ್ದರು. ಊಟ ಮುಗಿಯಿತು. ಕೈ ತೊಳೆದು ಹಜಾರದಲ್ಲಿ ಬಂದು ಕುಳಿತರು.

ಜೀವನದಲ್ಲಿ ಬಹಳ ದಿನ ಇಬ್ಬರೂ ಒಟ್ಟಾಗಿದ್ದುದರಿಂದ ವಿಷಯಕ್ಕೆ ಕಡಿಮೆಯಿರಲಿಲ್ಲ. ಒಂದೊಂದಾಗಿ ತಮ್ಮ ಬದುಕಿನಲ್ಲಿ ನಡೆದ ಘಟನೆಗಳನ್ನು ನೆನೆಸಿಕೊಂಡು ನಗುವುದಕ್ಕೆ ನಕ್ಕು—ಮರುಗುವುದಕ್ಕೆ ಮರುಗಿದರು. ವಿಷಯ ಸೂರಪ್ಪ ನೋಡಲು ಬಂದ ವರನ ಕಡೆಗೂ ಹೊರಳಿತು. ಭಟ್ಟರು ಮನೆತನದ ಬಗ್ಗೆ ತೂಕದ ಮಾತನ್ನೆ ಆಡಿದರು. ಗಂಟೆ ಹನ್ನೊಂದಾಯಿತು. ಆಕಳಿಕೆ ಇಬ್ಬರ ಬಾಯಿಗೂ ಕಸರತ್ತು ಮಾಡಿಸಿತು. ಮಾತಿಗೆ ಮುಕ್ತಾಯ ಮಾಡಿ ಮಲಗಲು ಎದ್ದರು.

## ೪

ಬೆಳಗಾಯಿತು. ನಿತ್ಯವಿಧಿಗಳನ್ನು ಮುಗಿಸಿ ಇಬ್ಬರೂ ಹೊರಗೆ ಹೊರಟರು. ಮೌನವಾಗಿಯೇ ದಾರಿ ಸಾಗುತ್ತಿತ್ತು. ಸೂರಪ್ಪ ತಾನು ನೋಡಲು ಬಂದ ಹುಡುಗ, ಅವನ ಮನೆತನದ ಬಗ್ಗೆ ಭಟ್ಟರ ಹೇಳಿಕೆಯಂತೆ ಒಳ್ಳೆಯದನ್ನೆ ಕಲ್ಪಿಸಿಕೊಂಡು ಹೆಜ್ಜೆ ಹಾಕುತ್ತಿದ್ದರು. ಹುಡುಗನ ಮನೆಯ ಕುಲಪುರೋಹಿತರೂ, ಹಿತೈಷಿಗಳೂ ಆದ ಭಟ್ಟರು ಅವರಿಬ್ಬರಿಗೂ ಬಾಂಧವ್ಯವನ್ನು ಕಲ್ಪಿಸಿ ಮದುವೆಯ ಕನಸನ್ನು ಕಾಣುತ್ತಾ ಹೋಗುತ್ತಿದ್ದರು. ಇಬ್ಬರ ತಲೆಯಲ್ಲೂ ಒಂದೊಂದು ಬಗೆಯ ಯೋಚನೆ ಮುತ್ತಿಗೆ ಹಾಕಿ ಬಾಯಿ ಕಟ್ಟಿಸಿತ್ತು. ಹೀಗೆ ಸುಮಾರು ನಾಲ್ಕೈದು ಫರ್ಲಾಂಗು ದೂರ ನಡೆದಿರಬಹುದು. ಇನ್ನೇನು ದೊಡ್ಡಪೇಟೆ ದಾಟುವುದರಲ್ಲಿದ್ದರು; ಅಷ್ಟರಲ್ಲಿ ಭಟ್ಟರು ಇದ್ದಕ್ಕಿದ್ದಂತೆ ಒಂದು ಅಂಗಡಿಯ ಮುಂದೆ ನಿಂತು ಬಗ್ಗಿ ನೋಡಿದರು. ಒಳಗೆ ಕೆಲಸದವನ ಹೊರತು ಮತ್ತೆ ಯಾರೂ ಕಾಣಲಿಲ್ಲ.

"ಇಲ್ಲಿ ನೋಡಿ ಸೂರಪ್ಪ, ಇದೇ ಅವರ ಅಂಗಡಿ. ಇನ್ನೂ ಅಂಗಡಿಗೆ ಯಾರೂ ಬಂದಿಲ್ಲ. ಬೇಗ ಮನೆಗೆ ಹೋದರೆ ಸಿಗಬಹುದು."

ಸೂರಪ್ಪ ಅಂಗಡಿಯ ಸುತ್ತ ಕಣ್ಣಾಡಿಸಿ ಹೇಳಿದರು,

"ಊಟಕ್ಕೇನೂ ಕೊರತೆ ಕಾಣಲಿಲ್ಲ; ನಡವಳಿಕೆ ಸರಿಬೀಳಬೇಕಲ್ಲ! ನಡೀರಿ ನೋಡೋಣ. ದೈವೇಚ್ಛೆ ಇದ್ದ ಹಾಗಾಗುತ್ತೆ—ಮನೆಯಿನ್ನೂ ತುಂಬಾ ದೂರವಿದೆಯೋ?"

"ಹೆಚ್ಚು-ಕಡಿಮೆ ಈಗ ಬಂದಷ್ಟಾಗಬಹುದು" ಎಂದು ನಡಿಗೆಯಲ್ಲಿ ವೇಗ ತುಂಬಿದರು.

ಅಂಗಡಿ ನೋಡಿದಾಗಿನಿಂದ ಸೂರಪ್ಪನ ಕುತೂಹಲ ಕೆರಳಿತ್ತು. ಭಟ್ಟರ ಮೌನ ಮುರಿದರು. ಹುಡುಗನ ಆಸ್ತಿ ವಿವರದ ಬಗ್ಗೆ ವಿಚಾರ ಮಾಡುತ್ತಾ ನಡೆದರು. ಮಾತು ಮುಗಿಯುವುದರಲ್ಲಿ ಮನೆಯೂ ಬಂದಿತ್ತು. ಒಳಗೆ ಕಾಲಿರಿಸುವುದರಲ್ಲೆ ಹುಡುಗನ ತಮ್ಮ ನಾಣಿ ಬಂದು, ನಗುತ್ತಾ ಸ್ವಾಗತಿಸಿ ಮರ್ಯಾದೆಯಿಂದ ಅವರನ್ನು ಹಜಾರಕ್ಕೆ ಕರೆದುಕೊಂಡು ಹೋಗಿ ಕುರ್ಚಿಯಲ್ಲಿ

ಕೂರಿಸಿ, ಸುದ್ದಿ ಮುಟ್ಟಿಸಲು ಒಳಗೆ ಹೋದನು. ಸಂಗಡ ಭಟ್ಟರೂ ಹೋದರು. ಹುಡುಗನ ತಾಯಿ ರಂಗಮ್ಮನಿಗೆ ಸೂರಪ್ಪನ ಪರಿಚಯವನ್ನು ಸೂಕ್ಷ್ಮವಾಗಿ ತಿಳಿಸಿ, ಫಲಾಹಾರಕ್ಕೆ ಏರ್ಪಾಡು ಮಾಡಿ ಬಂದರು. ಮನೆಗೆ ರಂಗಮ್ಮನೆ ಯಜಮಾನಿಯಾದ್ದರಿಂದ ವಿಚಾರಿಸಿಕೊಳ್ಳಲು ಅವರೇ ಬರಬೇಕಾಯಿತು.

"ಬನ್ನಿ ರಂಗಮ್ಮನವರೆ! ನಿಮ್ಮ ಹುಡುಗನನ್ನು ನೋಡಲು ಶಿವಮೊಗ್ಗೆಯಿಂದ ನನ್ನ ಮಿತ್ರರೊಬ್ಬರು ಬರುತ್ತಾರೆಂದು ತಿಳಿಸಿರಲಿಲ್ಲವೆ? ಅವರೇ ಇವರು. ಯೋಗ್ಯವಾದ ಕುಳ. ತುಂಬಾ ಮರ್ಯಾದಸ್ಥರು. ನಿಮ್ಮಂತೆ ಅವರೂ ವ್ಯಾಪಾರಿಗಳು. ಜಾತಕ ಕೂಡಿ ಬಂದರೆ ಸಂಬಂಧ ಬೆಳೆಸಲು ಅಡ್ಡಿಯಿಲ್ಲ." ಎಂದು ಪರಿಚಯದೊಡನೆ ವಿಷಯ ಮುಂದಿಟ್ಟರು.

"ಆಗಲಿ, ತಂದೆಯಿಲ್ಲದ ಮಕ್ಕಳು. ಅವರಿಗೂ ಒಳ್ಳೇ ಸಂಬಂಧದ ನೆರವು ಬೇಕು. ದೈವೇಚ್ಛೆಯಿದ್ದರೆ ಬಂಧುತ್ವ ಬೆಳೆಯಲಿ."

ರಂಗಮ್ಮನ ನಯ-ವಿನಯ, ಗಾಂಭೀರ್ಯ, ತೂಕ ತುಂಬಿದ ಮಾತು ಸೂರಪ್ಪನಿಗೆ ಸಮಾಧಾನ ತಂದಿತು. ನಯವಾಗಿ ಹೇಳಿದರು,

"ಕಂಕಣಬಲ ಕೂಡಿ ಬಂದರೆ ನನ್ನ ಮಗಳನ್ನು ನಿಮ್ಮ ಸೊಸೆಯಾಗಿ ಸ್ವೀಕರಿಸಬೇಕು. ನಾನು ಬಡವ. ಹೆಚ್ಚಿಗೆ ಆಡಂಬರ ಮಾಡುವ ಯೋಗ್ಯತೆ ನನ್ನಲ್ಲಿಲ್ಲ. ನೀವು ತುಂಬಾ ಒಳ್ಳೆಯವರೆಂದು ಭಟ್ಟರು ಹೇಳಿದ್ದಾರೆ. ನಿಮ್ಮನ್ನು ಎಷ್ಟು ಹೊಗಳಿದರೂ ಅವರಿಗೆ ತೃಪ್ತಿಯಿಲ್ಲ."

"ಅದು ಅವರ ವಿಶ್ವಾಸ. ನನ್ನಲ್ಲಿ ಅಂಥಾ ದೊಡ್ಡ ಯೋಗ್ಯತೆ ಏನೂ ಇಲ್ಲ. ಆಗಲಿ – ಜಾತಕ ಕೂಡಿ ಬಂದರೆ, ಹುಡುಗ-ಹುಡುಗಿ ಇಬ್ಬರೂ ಒಪ್ಪಿದರೆ ನಿಮ್ಮ ಅನುಕೂಲಕ್ಕೆ ತಕ್ಕಂತೆ ಲಗ್ನ ಮಾಡಬಹುದು. ನಮಗೆ ದೇವರು ತಿನ್ನುಣ್ಣುವುದಕ್ಕೇನೂ ಕಡಿಮೆ ಮಾಡಿಲ್ಲ. ಅದೂ ಅಲ್ಲದೆ, ಹೆಣ್ಣಿನ ಸ್ವತ್ತಿಗೆ ನಾವು ಆಸೆಪಡುವವರೂ ಅಲ್ಲ."

"ಅದು ನ್ಯಾಯವೆ, ನಾಗರಿಕರ ನಡವಳಿಕೆ ಹಾಗೇ ಇರಬೇಕು...." ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು, ಭಟ್ಟರು ಕೇಳಿದರು "ನಿಮ್ಮ ದೊಡ್ಡಮಗನೆಲ್ಲಿ, ಕಾಣುವುದಿಲ್ಲ ?"

"ಬರುತ್ತಾನೆ–ಸ್ನಾನ ಮಾಡುತ್ತಿದ್ದಾನೆ" ಎಂದು ರಂಗಮ್ಮ ಒಳಗೆಹೋಗಿ ನಾಣಿಯ ಸಂಗಡ ಫಲಾಹಾರವನ್ನು ಕೊಟ್ಟು ಕಳುಹಿಸಿದರು.

ಬಿಸಿ ಬಿಸಿ ರವೆ, ಕೇಸರಿ ಭಾತು, ಉಪ್ಪಿಟ್ಟು, ಕಾಫಿ ಎಲ್ಲರ ಮುಂದೆ ಬಲಿಯಾಗಲು ಹಾಜರಾದುವು. ಅಷ್ಟರಲ್ಲಿ ರಂಗಮ್ಮನ ದೊಡ್ಡ ಮಗ ಗೋಪಿ ಬಂದು ಇಬ್ಬರಿಗೂ ನಮಸ್ಕರಿಸಿ ಲೋಕರೂಢಿಯಂತೆ ಉಪಚರಿಸಿ ಫಲಾಹಾರಕ್ಕೆ ಕೈಯಿಕ್ಕಿದರು. ಭಟ್ಟರು ಸೂರಪ್ಪನಿಗೆ ಅವನ ಪರಿಚಯ ಮಾಡಿಕೊಟ್ಟರು. ಫಲಾಹಾರ ಮೌನದಲ್ಲಿ ಸಾಗಿತು. ಅಷ್ಟರಲ್ಲಿ ರಂಗಮ್ಮನ ಕೂಗು ಕೇಳಿ ತಿನ್ನುತ್ತಿದ್ದ ತಿಂಡಿಯನ್ನು ಅರ್ಧದಲ್ಲೆ ಬಿಟ್ಟು, ನಾಣಿ ಒಳಗೆದ್ದು ಹೋದನು. ಬಂದವನು ಗೋಪಿಯ ಜಾತಕವನ್ನು ಭಟ್ಟರ ಕೈಯಲ್ಲಿಟ್ಟು ಕಿವಿಯಲ್ಲಿ ಏನೋ ಪಿಸುಗುಟ್ಟಿದನು. ಭಟ್ಟರು ನಸುನಗುತ್ತಾ ಹೇಳಿದರು,

"ಜಾತಕ ತಂದಿದ್ದೀರಾ ? ಈಗಲೇ ನೋಡಬೇಕೆಂದು ಅವರ ಹಂಬಲ."

"ತಂದಿದ್ದೇನೆ. ನಿಜವಾಗೂ ನೀವೇ ಇದ್ದೀರಲ್ಲಾ; ನಿಮಗಿಂತ ಇನ್ನಾರು ಬೇಕು! ನೋಡಿಯೆ ಬಿಡಿ, ನಿರ್ಧಾರವಾಗಿ ಹೋಗಲಿ" ಎಂದು ಅಂಗಿಯ ಕಿಸೆಯಿಂದ ಜಾತಕವನ್ನು ತೆಗೆದು ಕೊಟ್ಟರು. ಭಟ್ಟರು ಶಾಸ್ತ್ರ ಪ್ರಕಾರ ಎರಡು ಜಾತಕಗಳನ್ನೂ ತೂಗಿ ನೋಡಿ ತಲೆದೂಗಿದರು. ಮುಖದಲ್ಲಿ ಮೆಲುನಗೆಯಿತ್ತು.

"ಇಬ್ಬರ ಜಾತಕವೂ ಬಹಳ ಚೆನ್ನಾಗಿ ಕೂಡಿ ಬಂದಿದೆ. ಹುಡುಗ ನಿಮಗೊಪ್ಪಿಗೆಯಾದರೆ—ಹುಡುಗಿ ಅವರಿಗೊಪ್ಪಿಗೆಯಾದರೆ ಸಂಬಂಧ ಬೆಳೆಸುವುದರಲ್ಲಿ ಯಾವ ಅಡ್ಡಿಯೂ ಇಲ್ಲ" ಎಂದು ಅವರ ಉತ್ತರ ಕಾಯದೆ ರಂಗಮ್ಮನವರನ್ನು ಕೂಗಿ, ಸೂರಪ್ಪನವರಿಗಂದ ಮಾತನ್ನು ಅವರಿಗೂ ಹೇಳಿದರು.

"ಆಗಲಿ ಭಟ್ಟರೆ, ನಮ್ಮ ಗೋಪಿ ಹುಡುಗಿಯನ್ನು ನೋಡಲಿ. ಒಪ್ಪಿದರೆ ಲಗ್ನ ಮಾಡುವುದರಲ್ಲಿ ನನ್ನ ಅಡ್ಡಿಯೇನೂ ಇಲ್ಲ" ಎಂದು ರಂಗಮ್ಮ ತಮ್ಮ ಸಮ್ಮತಿ ತಿಳಿಸಿದರು.

"ಇನ್ನು ನಿಮ್ಮದೇ ಇರುವುದು, ಹುಡುಗಿಯನ್ನು ಎಷ್ಟು ಬೇಗ ಕರೆ ತಂದರೆ ಅಷ್ಟು ಬೇಗ ಕೆಲಸವಾಗುತ್ತದೆ" ಎಂದು ಭಟ್ಟರೆಂದರು.

"ಆಗಲಿ, ಸದ್ಯದಲ್ಲೆ ಆದಕ್ಕೆ ಏರ್ಪಾಡು ಮಾಡುತ್ತೇನೆ." ಎಂದು ಎದ್ದು ರಂಗಮ್ಮನ ಕಡೆ ತಿರುಗಿ ಸೂರಪ್ಪ ಹೇಳಿದರು "ನಾನಿನ್ನು ಬರಲೆ ಅಮ್ಮ ?"

"ಒಳ್ಳೇದಪ್ಪ."

ಸೂರಪ್ಪ ಗೋಪಿಯೊಡನೆ ಹೇಳಿದರು, "ಹುಡುಗಿ ಕರತರುತ್ತೇನೆ. ಒಪ್ಪಿಗೆಯಾದರೆ ದೊಡ್ಡ ಮನಸ್ಸು ಮಾಡಿ ಸಂಬಂಧ ಬೆಳೆಸಬೇಕು."

"ಆಗಲಿ ನೋಡೋಣ, ಬನ್ನಿ" ಎಂದು ಹುಸಿನಗುತ್ತಾ ನುಡಿದ ಗೋಪಿ.

ಬೀಳ್ಕೊಡುಗೆಯಾದ ನಂತರ ಸೂರಪ್ಪ ಭಟ್ಟರನ್ನು ಹಿಂಬಾಲಿಸಿದರು. ನಾಲ್ಕು ಹೆಜ್ಜೆಯಿಡುವುದರಲ್ಲೇ ಭಟ್ಟರಿಗೆ ಸೂರಪ್ಪನ ಅಭಿಪ್ರಾಯವನ್ನು ತಿಳಿಯುವ ಕುತೂಹಲವುಂಟಾಯಿತು. ಸೂರಪ್ಪನಿಗೂ ಹಾಗೇ ಹುಡುಗನ ಬಗ್ಗೆ ಉಂಟಾದ ಸಂಶಯವನ್ನು ನಿವಾರಿಸಿಕೊಳ್ಳುವ ಕಾತರತೆಯಿತ್ತು. ವಿಧಿಯಿಲ್ಲದೆ ಇಬ್ಬರೂ ತಮ್ಮ ಆತುರವನ್ನು ಬಿಗಿ ಹಿಡಿದುಕೊಂಡರು. ಅವರನ್ನು ಬೀಳ್ಕೊಡುವುದಕ್ಕಾಗಿ ಸಂಗಡ ಬಂದಿದ್ದ ಗೋಪಿ ಅದಕ್ಕೆ ಅಡಚಣೆಯಾಗಿದ್ದನು. ಅವರ ಆತುರ ಅವರನ್ನು ಹೆಚ್ಚು ದೂರ ಬರಗೊಡಲಿಲ್ಲ. ಒಳ್ಳೆ ಮಾತಿನಿಂದ ಅವನನ್ನು ಸಾಗ ಹಾಕಿ ಇಬ್ಬರೂ ಕಟ್ಟಿದ್ದ ಉಸಿರನ್ನು ಬಿಟ್ಟರು. ಭಟ್ಟರೇ ಮೊದಲು ಮೌನವನ್ನೊಡೆದರು.

"ಹುಡುಗ ಹೇಗೆ? ನಿಮಗೊಪ್ಪಿಗೆಯಾದನೊ ?"

"ಅದೇ ಯೋಚನೆ ಮಾಡುತ್ತಿದ್ದೇನೆ—ಒಪ್ಪಿಕೊಳ್ಳಲೊ, ಬೇಡವೊ ಎಂದು."

"ಯಾಕೆ ಹಾಗೆ ? ಹುಡುಗನಲ್ಲಿ ಏನು ತಪ್ಪು ಕಂಡಿರಿ ?"

"ಅವನ ದೃಷ್ಟಿಯಲ್ಲಿ ನನ್ನ ಮಗಳನ್ನು ಬಲಿ ತೆಗೆದುಕೊಳ್ಳುವ ಚಿನ್ಹೆ ಕಂಡುಬರುತ್ತಿದೆ."

ಭಟ್ಟರು ದೊಡ್ಡದಾಗಿ ನಕ್ಕು ಹೇಳಿದರು,

"ನೀವು ತಪ್ಪು ತಿಳಿದುಕೊಂಡಿದ್ದೀರಿ. ಎಲ್ಲೋ ದೊಡ್ಡ ಅಳಿಯನನ್ನು ಕಣ್ಣೆದುರಿಗಿಟ್ಟು ನೋಡಿದ ಹಾಗಿದೆ. ಹುಡುಗ ದೇವರಂಥ ಮನುಷ್ಯ; ನಾಲ್ಕು ಜನಕ್ಕೆ ಬೇಕಾದವನು. ತುಂಬಾ ಉದಾರಿ. ಏನೆಂದರೆ ಸ್ವಲ್ಪ ಕೋಪ ಹೆಚ್ಚು. ಅದು ಯಾರಿಗಿರುವುದಿಲ್ಲ ಹೇಳಿ! ಉಪ್ಪು-ಹುಳಿ ತಿನ್ನುವ ದೇಹ ಅಂದ ಮೇಲೆ ಕೋಪ ಇದ್ದೇ ಇರುತ್ತದೆ. ಲಗ್ನವಾಗಿ ಒಂದೆರಡು ಮಕ್ಕಳಾದರೆ ಎಲ್ಲ ತಾನೆ ಸರಿಹೋಗುತ್ತೆ."

"ಹುಡುಗ ಯೋಗ್ಯನೆನ್ನುವಿರಾ ಹಾಗಾದರೆ ?"

"ಹೌದು, ನನ್ನ ಮಾತಿನಲ್ಲಿ ಭರವಸೆಯಿಡಿ, ಹುಡುಗ ಯೋಗ್ಯ."

"ಇದ್ದರೂ ಇರಬಹುದು; ತಂದೆ-ತಾಯಿಯ ಒಳ್ಳೆತನದಲ್ಲಿ ಸ್ವಲ್ಪವಾದರೂ ಅವನಲ್ಲಿಲ್ಲದೆ ಹೋಗುತ್ತದೆಯೇ? ಹ್ಞೂ—ದೇವರು ಮಾಡಿಸಿದಂತಾಗಲಿ, ನಡೀರಿ."

ಮತ್ತೆ ಇಬ್ಬರನ್ನೂ ಮೌನ ಆವರಿಸಿತು. ಭಟ್ಟರು ಯೋಚನಾಮಗ್ನರಾದರು. ಸೂರಪ್ಪನ ಮನಸ್ಸನ್ನು ಹೊಕ್ಕ ಆ ಭೂತವನ್ನು ಗೋಪಿಯ ಸದ್ಗುಣದ ದೃಷ್ಟಾಂತದಿಂದ ಓಡಿಸುವ ಹಂಚಿಕೆ ಹುಡುಕುತ್ತಾ ನಡೆದರು. ಥಟ್ಟನೆ ಅವರ ಮನಸ್ಸಿಗೊಂದು ಪರಿಹಾರ ಮಾರ್ಗ ಹೊಳೆಯಿತು. ಅಷ್ಟರಲ್ಲಿ ಗೋಪಿಯ ಅಂಗಡಿಯೂ ಬಂದಿತ್ತು.

"ಬನ್ನಿ, ಸ್ವಲ್ಪ ಹೊತ್ತು ನಮ್ಮ ಅಂಗಡಿಯಲ್ಲಿ ಕೂತು ಹೋಗೋಣ. ಹನ್ನೊಂದು ಗಂಟೆಗೆ ನನ್ನನ್ನು ನೋಡಲು ಯಾರೋ ಅಲ್ಲಿಗೆ ಬರುವವರಿದ್ದಾರೆ" ಎಂದು ಒಳಗೆ ಹೋಗಿ ಹಾಕಿದ್ದ ಸುಖಾಸನದಲ್ಲಿ ದೇಹವೂರಿದರು. ಸೂರಪ್ಪನವರೂ ಅವರನ್ನನುಸರಿಸಿದರು.

ಸ್ವಲ್ಪ ಹೊತ್ತಿನ ನಂತರ ಗೋಪಿಯೂ ಬಂದನು. ಅಂಗಡಿಯಲ್ಲಿ ತನ್ನ ಭಾವೀ ಮಾವ-ಭಟ್ಟರನ್ನು ಕಂಡು ಆಶ್ಚರ್ಯವಾಯಿತು. ಅದನ್ನು ಮುಚ್ಚಿ ಮೆದುವಾಗಿ ನಕ್ಕು ತನ್ನ ಸ್ಥಳದಲ್ಲಿ ಹೋಗಿ ಕುಳಿತನು. ಭಟ್ಟರೂ ಅವನ ಅನುಮಾನ ಪರಿಹಾರಕ್ಕೆ ಯತ್ನಿಸಲಿಲ್ಲ. ಅವರ ದೃಷ್ಟಿಯೆಲ್ಲ ಬೀದಿಯ ಕಡೆಗಿತ್ತು. ಆ ದಿನ ಗೋಪಿಗಿಂತ ಅವರೇ ಹೆಚ್ಚು ಕಾತರತೆಯಿಂದ ಗಿರಾಕಿಗಳನ್ನು ನಿರೀಕ್ಷಿಸುತ್ತಿದ್ದರು. ಅವರ ನಿರೀಕ್ಷೆಯಂತೆ ಗಿರಾಕಿಗಳು ಒಬ್ಬೊಬ್ಬರಾಗಿ ಬರತೊಡಗಿದರು.

ಅವರದು ಜವಳಿಯ ಅಂಗಡಿ. ಒಳ್ಳೆಯ ನೂಲಿಗೆ ಹೆಸರಾಗಿತ್ತು. ಗಿರಾಕಿಗಳೂ ಮೇಲಿಂದ ಮೇಲೆ ಬರುತ್ತಿದ್ದರು. ಅದರಂತೆ ಇಂದೂ ಬಂದರು. ಬಂದವರಲ್ಲಿ ಒಬ್ಬನು ಭಟ್ಟರ ಎಣಿಕೆಯನ್ನು ಸತ್ಯಮಾಡಿ ತೋರಿಸುವಂತಿದ್ದನು.

ಹಳ್ಳಿಯವರು ಚೌಕಶಿ ಮಾಡುವುದರಲ್ಲಿ ಎತ್ತಿದ ಕೈ. ಕಾಸು-ಕಾಸಿಗೆ ಕೊಸರಾಡಿದರೂ ಕಡೆಗೆ ಹಾಕಿಕೊಳ್ಳುವುದು ಮಕಮಲ್ ಟೋಪಿಯನ್ನೇ. ಇಲ್ಲಿ ಹಾಗಾಗಲಿಲ್ಲ. ಆ ದಿನ ಬಂದ ಗಿರಾಕಿ ಅಂಗಡಿಯವರಿಗೇ ಚಳ್ಳೇಹಣ್ಣು

ತಿನ್ನಿಸಿದ. ಆವನಲ್ಲಿ ಕೊಸರಾಡುವ ಗುಣವೂ ಇತ್ತು. ಅದಕ್ಕೆ ತಕ್ಕಂತೆ ಆ ಕೊಸರಾಟವನ್ನು ಉಳಿಸಿಕೊಳ್ಳುವ ಛಲವೂ ಇತ್ತು.

ಚೌಕಾಶಿಮಾಡಿ ಕೆಲವು ಬಟ್ಟೆಗಳನ್ನು ಆರಿಸಿಟ್ಟನು. ಆರಿಸಿಟ್ಟ ಜವಳಿಯನ್ನು ಕಟ್ಟಿಯೂ ಆಯಿತು. ಕಡೆಯಲ್ಲಿ ಆವರು ಹಾಕಿದ ಬೆಲೆಗೂ ಇವನು ತಂದ ಹಣಕ್ಕೂ ಸ್ವಲ್ಪ ಹೆಚ್ಚು ಕಡಿಮೆಯಿತ್ತು.

"ನೋಡಿ ಸೋಮಿ, ಇಷ್ಟೆಯೇ ನನ್ತಾವಿರೋದು. ತಾವೊಸಿ ದ್ವೊಡ್ಮನ್ಸ್ರಾಗ್ಬೇಕು; ಇಲ್ದೇವಾದ್ರೆ ಬಂದಾರಿಗ್ಸುಂಕಯಿಲ್ಲಾಂತೋಯ್ತೀನಿ" ಎಂದು ತನ್ನ ಹತ್ತಿರವಿದ್ದ ಎಪ್ಪತ್ತೈದು ರೂಪಾಯಿಗಳನ್ನು ಕಾರಕೂನರ ಮುಂದಿಟ್ಟನು.

ಹಣವನ್ನು ಎಣಿಸಿ ನೋಡಿ "ಒಳ್ಳೇ ಚೆನ್ನಾಗಿದೆ ಕಣಯ್ಯಾ! ನಿನ್ನಂಥ ಹತ್ತು ಗಿರಾಕಿಗಳು ಬಂದರೆ ಅಂಗಡಿ ಮುಚ್ಚಿ ಆಕಾಶ ನೋಡುತ್ತಾ ಕೂತುಕೊಳ್ಳುವುದೇ ಸರಿ. ಲಾಭವಿಲ್ಲದೆ ಅಸಲಿಗೆ ಮಾರಲು ನಾವೇನು ಕಸುಬಿಲ್ಲದವರೆಂದು ತಿಳಿದೆಯಾ?" ಎಂದು ಕಾರಕೂನರು ಸ್ವಲ್ಪ ಗಡುಸಾಗಿಯೆ ನುಡಿದರು.

"ತವೂಸ್ಬುಡಿ, ತಮುಗ್ಯಾಕ್ತೊಂದ್ರೆ ಕ್ವಡಾಂವ!" ಎಂದು ದುಡ್ಡನ್ನು ಜೇಬಿಗೆ ತುಂಬಿ ಹೊರಡಲನುವಾದನು.

ಬಂದ ಗಿರಾಕಿಯನ್ನು ಬಿಟ್ಟುಕೊಡಲಾರದೆ ಕಾರಕೂನರು ಹೇಳಿದರು,

"ಹೋಗಲಿ, ನಿನ್ನ ಹತ್ತಿರವೆಷ್ಟು ದುಡ್ಡಿದೆಯೊ ಅಷ್ಟಕ್ಕೆ ಜವಳಿ ಕಟ್ಟಿಸಿಕೊಳ್ಳಯ್ಯಾ!"

"ನಾನ್ಬಡವಾ ಸೋಮಿ, ನಾನ್ತಾವಿರೋ ದುಡ್ಡಷ್ಟೇಯೆ. ಅಷ್ಟಕ್ಕೀವ್ ಕ್ವಡಾ ಜವ್ಳಿ ತಕ್ಕೊಂಡು ಉಳಿಕೆ ಬಟ್ಟೆಗೇನ್ಮಾಡಾಂವಾ? ಏನೊ, ಇಲ್ಲೈತ ನೋರು ಬಾಳ ದರ್ಮಿಷ್ಟ್ರು ಆಂತ ನಾಕ್ಜನ ಯಾಳೋವತ್ಗೆ, ನಂಗೂ ಏನಾರ ನಾಕ್ಕಾಸ್ಬುಟ್ಟಾರು ಅನ್ಕೊ ಆಸೆಯಿಂದ ಇಲ್ಲಿಗ್ಬಂದ್ನಿ. ಒಸಿ ತಿಳಿಸ್ನೋಡಿ ಸಾವ್ಕಾರ್ಗೆ; ಅವರ್ಯಾನೇಳ್ತಾರ್ನ್ನೋಡಾಂವ!" ಎಂದು ಗೋಪಿಯ ಕಡೆಗೂ, ಕಾರಕೂನರ ಕಡೆಗೂ ಕುತೂಹಲದಿಂದ ದೃಷ್ಟಿ ಹೊರಳಿಸುತ್ತಾ ನಿಂತನು.

ಅವರಿಬ್ಬರ ಮಾತನ್ನು ಕೇಳುತ್ತಿದ್ದ ಗೋಪಿ ರಾಮರಾಯರ ಪ್ರಶ್ನೆಗೆ ಅವಕಾಶ ಕೊಡದೆ ಹೇಳಿದನು,

"ರಾಮರಾವ್, ಕಟ್ಟಕೊಡಿರಿ ಜವಳೀನ."

"ಸುಮಾರು ಏಳೆಂಟು ರೂಪಾಯಿ ಕೈಬಿಟ್ಟು ಹೋಗುತ್ತೆ ಸ್ವಾಮಿ !"

"ನಮ್ಮ ಅಸಲು ಬರುತ್ತೊ ಇಲ್ಲವೊ ?"

"ಅಸಲಿಗೇನೂ ಮೋಸವಿಲ್ಲ; ಆದರೆ ಲಾಭ...........!"

ಗೋಪಿ ಮಾತನ್ನು ಅರ್ಧದಲ್ಲೆ ತಡೆದು, ಲೊಚ್ಚೆ ಹೊಡೆದು ಹೇಳಿದನು,

"ಇಂಥಾವರು ಒಬ್ಬಿಬ್ಬರಿಂದ ಲಾಭ ಬರದೇ ಹೋದರೆ ನಾವು ಮುಳುಗಿ ಹೋಗುವುದು ಅಷ್ಟರಲ್ಲೆ ಇದೆ."

ರಾಮರಾಯರು ಉಸಿರೆತ್ತದೆ ಜವಳಿಯನ್ನು ಕಟ್ಟಿಕೊಟ್ಟರು. ಗಿರಾಕಿ ಹಣಸಂದಾಯ ಮಾಡಿ ಗೋಪಿಯ ಕಡೆ ತಿರುಗಿ,

"ಬಡವರ ಮ್ಯಾಗೆ ಕರುಣೆ ತೋರಿದ್ರಿ. ನಿಮ್ಮಟ್ಟೆ ತಣ್ಣಗಿರ್ಲಿ. ಬರ್‍ತೀನಿ ನಮಸ್ಕಾರ" ಎಂದು ಕೈಮುಗಿದು ಹೆಜ್ಜೆ ಮುಂದಿಟ್ಟನು.

"ಮನುಷ್ಯ ಅಂದ ಮೇಲೆ ಅಷ್ಟೂ ಉಪಕಾರ ಬೇಡವೇನಯ್ಯ ! ಒಳ್ಳೇದು ಹೋಗು" ಎಂದು ಮೊದಲಿನಂತೆ ಗೋಪಿ ಲೆಕ್ಕ ನೋಡುವುದರಲ್ಲಿ ಮಗ್ನನಾದನು. ಹಳ್ಳಿಯವನು ಮತ್ತೊಮ್ಮೆ ಕೃತಜ್ಞತೆ ಸೂಚಿಸಿ ಹೊರಬಿದ್ದನು.

ಅವನಂಗಡಿಗೆ ಇಂಥಾ ಗಿರಾಕಿಗಳು ಆಗೀಗ ಬರುತ್ತಿದ್ದುದುಂಟು. ಆದರೆ ಇಂದಿನಷ್ಟು ಉದಾರತೆ ಎಂದೂ ತೋರಿಸಿದ್ದಿಲ್ಲ. ಈದಿನ ಗೋಪಿ ಸೂರಪ್ಪನ ಮುಂದೆ ತನ್ನ ಪ್ರತಿಷ್ಠೆಯನ್ನು ಕಾದುಕೊಳ್ಳಲು ಅಷ್ಟು ದೊಡ್ಡ ದಯೆಯನ್ನು ತೋರಿದ್ದರು. ಭಟ್ಟರ ಎಣಿಕೆಯಂತೆ ಸಕಾಲದಲ್ಲಿ ಆ ಘಟನೆ ನಡೆದುದು ಒಳ್ಳೆಯದೆ ಆಯಿತು.

ಸೂರಪ್ಪನವರೂ ಗೋಪಿಯ ಗುಣವನ್ನು ಮನಸ್ಸಿನಲ್ಲೆ ಮೆಚ್ಚಿದರು. ಓರೆಗಣ್ಣಿನಲ್ಲಿ ಅವರ ಚಲನ–ವಲನಗಳನ್ನೇ ನೋಡುತ್ತಿದ್ದ ಭಟ್ಟರಿಗೆ, ಮುಖಭಾವದ ಪರಿಚಯವಾಗದೆ ಇರಲಿಲ್ಲ. ತಾವು ಬಂದ ಕೆಲಸವಾಯಿತೆಂದು ಹಿಗ್ಗಿದರು. ಸ್ವಲ್ಪ ಹೊತ್ತು ಹಾಗೂ ಹೀಗೂ ಕಳೆದು ಗಡಿಯಾರದ ಕಡೆ ನೋಡಿದರು. ಗಂಟೆ ಹನ್ನೊಂದೂವರೆ ಆಗಿತ್ತು. ಭಟ್ಟರು ಎದ್ದು ಗೋಪಿಯೊಡನೆ 'ನಂಜುಂಡ ಶಾಸ್ತ್ರಿಗಳಿಗಾಗಿ ತಾವು ಕಾದಿದ್ದರೆಂದೂ, ಬಂದರೆ ತಿಳಿಸಿಬಿಡಬೇಕೆಂ' ದೂ ಹೇಳಿ ಉತ್ತರಕ್ಕೆ ಕಾಯುವ ಹೊರಬಿದ್ದರು. ಸೂರಪ್ಪನವರೂ ಮೌನವಾಗಿ ಅವರನ್ನು ಹಿಂಬಾಲಿಸಿದರು.

ಮನೆಯ ವರೆಗೆ ಯಾರೂ ಮಾತಾಡಲಿಲ್ಲ. ಹನ್ನೆರಡು ಗಂಟೆಯಾಗಿದ್ದರಿಂದ ಊಟಕ್ಕೆ ಸಿದ್ಧವಾಗಿತ್ತು. ಮನೆಗೆ ಹೋದವರೆ ಕೈಕಾಲು ತೊಳೆದು ಊಟಕ್ಕೆ ಕುಳಿತರು. ಅಡಿಗೆಯಲ್ಲಿ ಹೆಚ್ಚಳವೂ ಇತ್ತು. ಪುಷ್ಕಳವಾಗಿ ಉಂಡು ಮೈ ಭಾರವಾಗಲು ಹಾಗೇ ಸ್ವಲ್ಪ ಒರಗಿದರು. ಎದ್ದಾಗ ಗಂಟೆ ಐದಾಗಿತ್ತು. ಕಾಫಿ-ತಿಂಡಿ ತೆಗೆದುಕೊಂಡು ಹೊರಡುವ ಸಿದ್ಧತೆ ಮಾಡಿಕೊಂಡರು. ರೈಲು ಹೊರಡಲು ಇನ್ನೂ ಒಂದೂವರೆ ಗಂಟೆ ಕಾಲವಿತ್ತು. ಭಟ್ಟರು ಬಂದು ಮಾತಿಗೆ ಕುಳಿತರು. ಆ ಮಾತು ಈ ಮಾತಾಡಿ ಕಡೆಗೆ ಲಗ್ನದ ಮಾತಿಗೆ ಬಂದರು.

"ಏನು, ಹುಡುಗಿಯನ್ನು ಕರೆದುಕೊಂಡು ಬರುವ ವಿಷಯದಲ್ಲಿ ಏನು ಯೋಚನೆ ಮಾಡಿದಿರಿ ?"

"ನಾಡಿದ್ದೆ ಕರೆದುಕೊಂಡು ಬರುತ್ತೇನೆ. ಸೋಮವಾರ ಪಂಚಮೀತಿಥಿ, ಅನುರಾಧ ನಕ್ಷತ್ರ ಎರಡೂ ಕೂಡಿದೆ. ಪ್ರಯಾಣಕ್ಕೆ ಪ್ರಶಸ್ತವಾದ ದಿನ."

"ಹುಡುಗನ ನಡವಳಿಕೆ ಮನಸ್ಸಿಗೆ ಬಂತೆ ?"

"ಅಂತೂ ಪರವಾಯಿಲ್ಲ—ತೀರ ಮನುಷ್ಯನೆ ಸಿಕ್ಕಬೇಕೆಂದರೆ ಎಲ್ಲಿ ಸಾಧ್ಯ !"

"ಅಂದರೆ........?"

"ಪುರುಷರಲ್ಲಿ ಸ್ವಾಭಾವಿಕವಾಗಿ ಪಶುತ್ವವೆ ಹೆಚ್ಚಿರುತ್ತದೆ. ಅದನ್ನು ಕಳೆದು ಶುದ್ಧ ಮಾನವರಾಗಿ ಬದುಕುತ್ತಿರುವವರು ಬಹಳ ಕಡಿಮೆ ಅಲ್ಲವೆ ? ಅದಕ್ಕೆ ಹಾಗಂದೆ !"

"ಪರವಾಯಿಲ್ಲ, ವಿಚಾರದಲ್ಲಿ ನಿಷ್ಪಕ್ಷಪಾತವಿದೆ. ನೀವು ಮೊದಲಿನ ಸೂರಪ್ಪನಲ್ಲ; ಬದಲಾಯಿಸಿದ್ದೀರಿ. "

"ನನ್ನ ಜೀವನದ ಅನುಭವವೆ ನನಗೆ ಆ ಜ್ಞಾನ ತಂದುಕೊಟ್ಟಿದೆ; ನನ್ನನ್ನು ತಿದ್ದಿದೆ."

"ಅದು ಸರಿಯೆ. ಈ ಹುಡುಗನ ಬಗ್ಗೆ ಮಾತ್ರ ಯಾವ ಚಿಂತೆಯನ್ನೂ ಇಟ್ಟುಕೊಳ್ಳಬೇಡಿ—ಆ ಜವಾಬ್ದಾರಿಯನ್ನು ನನ್ನ ಮೇಲೆ ಹಾಕಿ. ಹತ್ತು ವರ್ಷದಿಂದ ಅವರೊಡನೆ ಒಡನಾಡುತ್ತಿರುವ ನನಗೆ ಅವರು ಎಂಥ ಜನವೆಂದು

ಚೆನ್ನಾಗಿ ಗೊತ್ತು. ನಿಮ್ಮ ಹುಡುಗಿಯ ತಲೆಗೂದಲು ಚುಳ್ಳೆನಿಸದಿದ್ದಂತೆ ನೋಡಿಕೊಳ್ಳುವ ಭಾರ ನನ್ನದು. ನೀವು ಆದಷ್ಟು ಬೇಗ ಈ ಸಂಬಂಧ ಕೈ–ಗೂಡಿಸಿಕೊಳ್ಳಿ."

"ಆಗಲಿ, ಹಾಗೇ ಮಾಡುತ್ತೇನೆ."

ಗಡಿಯಾರದ ಮುಳ್ಳು ಆರೂವರೆ ಗಂಟೆಯನ್ನು ತೋರಿಸುತಿತ್ತು. ಇಬ್ಬರೂ ದಡ-ಬಡನೆದ್ದರು. ಸಂಪ್ರದಾಯದಂತೆ ಸೂರಪ್ಪ, ಭಟ್ಟರ ಹೆಂಡತಿ ವಿಶಾಲಾಕ್ಷಮ್ಮನಿಗೆ ತಿಳಿಸಿ, ಕೈಚೀಲ ಹಿಡಿದು ಹೊರಟರು. ನಿಲ್ದಾಣವನ್ನು ತಲುಪಿದಾಗ ಆರೂ ಮುಕ್ಕಾಲು ಗಂಟೆಯಾಗಿತ್ತು. ಸರಿಯಾದ ಸ್ಥಳ ಮಾಡಿ ಹೋಗಿ ಕುಳಿತರು. ರೈಲು ಹೊರಡಲು ಇನ್ನೂ ಐದು ನಿಮಿಷಗಳಿದ್ದವು. ಬೀಳ್ಕೊಡುಗೆಯ ಮಾತಿಗಾರಂಭಿಸಿದರು.

"ನಾನು ನಿಮಗೆ ತೊಂದರೆ ಕೊಡುತ್ತಿದ್ದೇನೆ ಭಟ್ಟರೆ. ನಿಮ್ಮ ಉಪಕಾರ-ಆದರಾತಿಥ್ಯವನ್ನು ಎಂದೂ ಮರೆಯುವುದಿಲ್ಲ."

ಸೂರಪ್ಪನ ಮಾತಿನಲ್ಲಿ ಕೃತಜ್ಞತೆಯ ಮಧುರಸ ತೊಟ್ಟಿಕ್ಕುತ್ತಿತ್ತು.

"ಇದೆಲ್ಲಾ ತೊಂದರೆ ಅಂದರೇನು! ಒಬ್ಬರಿಗೊಬ್ಬರು ಮಾಡಬೇಕಾದ ವ್ಯವಹಾರ ಧರ್ಮ. ನಾನು ಮಾಡಿರುವ ಆತಿಥ್ಯವೂ ಅಷ್ಟರಲ್ಲೆ ಇದೆ. ಆಗಲಿ, ನಾಡಿದ್ದು ಸೋಮವಾರ ರಾತ್ರೆ ರೈಲಿನಲ್ಲಿ ನಿಮ್ಮನ್ನು ನಿರೀಕ್ಷಿಸಲೆ?"

"ಓಹೋ, ಅಗತ್ಯವಾಗಿ, ಆ ದಿನ ತಪ್ಪದೆ ಬರುವೆನು."

ರೈಲು ಕೂಗು ಹಾಕಿ ಕಂಬಿಯ ಮೇಲೆ ಉರುಳು ಸೇವೆ ಮಾಡುತ್ತಾ ಹೊರಟಿತು. ನಮಸ್ಕಾರ–ಪ್ರತಿನಮಸ್ಕಾರದೊಡನೆ ಸ್ನೇಹಿತರಿಬ್ಬರೂ ಬೇರೆ ಯಾದರು.

೫

ಶಾಂತಳ ಲಗ್ನವಾಗಿ ಹದಿನೈದು ದಿನಗಳಾದುವು. ಅವಳ ಗಂಭೀರ ಭಾವ, ಸದಾ ತುಟಿಯ ಮೇಲಾಡುತ್ತಿರುವ ಮೆಲುನಗೆ, ಮುಖದ ಮುದ್ದು

ಮಾಟ—ಇವು ರಂಗಮ್ಮನ ಮತ್ತು ಗೋಪಿಯ ಮನಸ್ಸನ್ನು ಹೆಚ್ಚು ಆಕರ್ಷಿಸಿದ್ದುವು. ಅದರ ಪರಿಣಾಮವಾಗಿಯೆ ಶಾಂತ ಇಂದು ಅವರ ಮನೆಯ ಬೆಳಕಾಗಿ ಮನೆ ತುಂಬಿಕೊಡಲು ಬಂದಿದ್ದಾಳೆ. ಆ ಸಂತಸದ ನೋಟವನ್ನು ಕಣ್ತುಂಬ ನೋಡಿ ದಣಿಯಲು, ಅವಳ ಸಂಗಡ ತಂದೆ-ತಾಯಿ—ಪುಟ್ಟ ತಂಗಿ ಎಲ್ಲರೂ ಬಂದಿದ್ದಾರೆ. ರಂಗಮ್ಮ ತಮ್ಮ ಮನೆತನಕ್ಕೆ ತಕ್ಕಂತೆ ವಿಜೃಂಭಣೆಯಿಂದ ಸೊಸೆಯನ್ನು ಮನೆತುಂಬಿಸಿಕೊಂಡಿದ್ದಾರೆ.

ಈ ದಿನವನ್ನು ಅವರು ಬಹಳ ದಿನದಿಂದ ಕಾಯುತ್ತಿದ್ದರು. ಅವರಿಗಿದ್ದ ಇಬ್ಬರು ಹೆಣ್ಣುಮಕ್ಕಳು ಗಂಡನ ಮನೆಯಲ್ಲಿ ಬಾಳುತ್ತಿದ್ದರು. ಹೆಣ್ಣುಮಕ್ಕಳಿಲ್ಲದೆ ಮನೆ ಭಣಗುಡುತ್ತಿತ್ತು. ರಂಗಮ್ಮನಿಗೆ ವಯಸ್ಸೂ ಆಗಿತ್ತು. ವಿಶ್ರಾಂತಿಗಾಗಿ ಜೀವ ಹಾತೊರೆಯುತಿತ್ತು. ತಮ್ಮ ಜೀವಕ್ಕೂ ಗೋಪಿಯ ಬಾಳಿಗೂ ಆಸರೆಯಾಗಿ ಬಂದ ಶಾಂತಳನ್ನು ತುಂಬು ಪ್ರೇಮದಿಂದ ಕಾಣತೊಡಗಿದರು. ಲಗ್ನದ ಆಗಚಾಟಲಿಂದ ಹೆಚ್ಚು ಶ್ರಮವಾಗಿದ್ದರೂ ಕೆಲಸವನ್ನು ಒಬ್ಬರಿಗೂ ಬಿಟ್ಟುಕೊಡದೆ ತಾವೇ ಮಾಡುತ್ತಿದ್ದರು. ಹೊಸದಾಗಿ ಬಂದ ಹೆಣ್ಣಿನ ಲಜ್ಜೆ ಕೂಡ ಮಾಸಗೊಡುತ್ತಿರಲಿಲ್ಲ.

ರಂಗಮ್ಮನವರ ತುಂಬುಗುಣ ಸುಶೀಲಮ್ಮನಿಗೆ ಹಿಡಿಸಿತು. ಶಾಂತ ಸುಖದ ಬಾಳನ್ನು ಬಾಳಿ, ತಮ್ಮ ಮನಸ್ಸಿಗೆ ನೆಮ್ಮದಿಯನ್ನು ತಂದುಕೊಡಬಹುದೆಂಬ ಭರವಸೆ ಬಂದು ಹಿಗ್ಗಿದರು. ಆ ಹಿಗ್ಗಿನಲ್ಲಿ ರಂಗಮ್ಮನ ಹೇಳಿಕೆಯಂತೆ ಮಗಳನ್ನಲ್ಲೇ ಬಿಟ್ಟು ಪತಿಯೊಡನೆ ಊರಿಗೆ ಮರಳಿದರು.

ತಂದೆ—ತಾಯಿ ಊರಿಗೆ ಮರಳಿದಮೇಲೆ ಶಾಂತ ಸಪ್ಪಗಾದಳು. ಎಂದೂ ಮನೆಯವರನ್ನು ಬಿಟ್ಟು ಆಗಲದಿದ್ದ ಹುಡುಗಿ ಅವಳು. ಹೊಸ ಬಾಳನ್ನು ಒಗ್ಗಿಸಿಕೊಳ್ಳುವುದು ಕಷ್ಟವಾಗಿತ್ತು. ರಂಗಮ್ಮ ತಾಯಿಯ ತುಂಬು ಪ್ರೇಮವನ್ನೆ ಹರಿಸಿದ್ದರು. ಮೈದುನನಾದ ನಾಣಿ, ಅತ್ತಿಗೆ-ನಾದಿನಿಯರಾದ ರಾಧೆ—ಶಕುಂತಳೆ ಇವರೆಲ್ಲರೂ ಅಕ್ಕರೆಯ ತುಂಬು ಹೊಳೆಯಲ್ಲಿ ಅವಳನ್ನು ತೆಪ್ಪವಾಡಿಸುತಿದ್ದರು. ಗೋಪಿಯಂತೂ ಸರಿಯೇ ಸರಿ—ತನ್ನ ಸ್ಥಾನ, ವಯೋಧರ್ಮಕ್ಕೆ ತಕ್ಕಂತೆ ಪ್ರೀತಿಯಿಂದ ಕಾಣುತ್ತಿದ್ದ. ಇಷ್ಟಾದರೂ ಶಾಂತಳಿಗೆ ತಂದೆ ತಾಯನ್ನು ಮರೆಯುವುದು ಸಾಧ್ಯವಾಗಲಿಲ್ಲ. ಅವರು ತನ್ನ ರಕ್ಷಣೆಗಾಗಿ ವ್ಯಯಮಾಡುತ್ತಿದ್ದ ಹಣ, ಪಡುತ್ತಿದ್ದ ದೇಹಶ್ರಮ, ಹರಿಸುತಿದ್ದ ತುಂಬು ಪ್ರೇಮ—ಇವುಗಳ

ಮಧುರ ನೆನಪು ಅವಳನ್ನು ತೌರಿನ ಕಡೆಗೇ ಸೆಳೆಯುತ್ತಿದ್ದಿತು.

ಹುಡುಗಿ ಜಾಣೆ; ವ್ಯವಹಾರದಲ್ಲಿ ಚತುರೆ. ಎಲ್ಲಕ್ಕಿಂತ ಮರ್ಯಾದೆಯ ಕಡೆ ಹೆಚ್ಚು ಗಮನವಿರಿಸಿದ್ದಳು. ಅದಕ್ಕಂಜಿ ತನ್ನ ಮನಸ್ಸಿನಲ್ಲುಂಟಾದ ಆಂದೋಲನವನ್ನು ಹೊರಗೆ ತೋರಗೊಡದೆ, ಹೊಸ ಜೀವನವನ್ನು ಒಗ್ಗಿಸಿಕೊಳ್ಳತೊಡಗಿದಳು.

ಶಾಂತ ಅಂಥಾ ಬೆಳವಣಿಗೆ ಹೆಂಗಸಲ್ಲ; ಸುಮಾರು ನಾಲ್ಕಡಿ ಎತ್ತರವಿರಬಹುದು, ಅಷ್ಟೆ. ನೋಡುವುದಕ್ಕೆ ಸುಂದರವಾಗಿದ್ದಳು. ಬಟ್ಟೆ ಮುಖ, ತುಂಬಿದ ಹಾಲುಗೆನ್ನೆ, ಮಾಟವಾದ ಮೂಗು, ಮೆಲುನಗೆ ಹೊತ್ತ ರಂಗಿನ ತುಟಿ, ನಸುಹಳದಿ ಮಿಶ್ರವಾದ ಬಿಳಿ ಬಣ್ಣದ ತುಂಬು ಮೈ—ಇವು ಅವಳ ಸೌಂದರ್ಯಕ್ಕೆ ಸಾಕಷ್ಟು ಮೆರುಗನ್ನು ಕೊಟ್ಟಿದ್ದುವು. ಎಲ್ಲಕ್ಕಿಂತ ಹೆಚ್ಚಾಗಿ ಅವಳು ನಕ್ಕಾಗ ಬೀಳುತ್ತಿದ್ದ ಕೆನ್ನೆಗಳ ಗುಳಿಗಳು ನೋಡಿದವರನ್ನು ಆಕರ್ಷಿಸುತ್ತಿದ್ದುವು.

ಅವಳ ಗುಣವೂ ರೂಪಿಗೆ ತಕ್ಕಂತಿತ್ತು. ಸೌಮ್ಯ ಪ್ರಕೃತಿ, ದೊಡ್ಡ ಮನಸ್ಸು, ಶುದ್ಧವಾದ ನಡವಳಿಕೆ—ಇವು ರೂಪಿಗೆ ರಂಗನ್ನೊಯಿರಿಸಿದ್ದುವು.

ಶಾಂತ ಬಂದು ತಿಂಗಳ ಮೇಲಾಯಿತು. ಸುಮ್ಮನೆ ಕೂತು ಉಂಡು ಬೇಸರ ಬಂತು. ಅತ್ತೆ-ನಾದಿನಿ ಬೇಡವೆಂದರೂ ಕೇಳದೆ ಒಂದೊಂದೇ ಕೆಲಸಕ್ಕೆ ಕೈ ಹಚ್ಚಿದಳು. ಕೆಲಸವನ್ನು ಹುಡುಕಿ ಮಾಡುವ ಅವಳ ಚಾತುರ್ಯ, ಅಚ್ಚುಕಟ್ಟುತನ ಎಲ್ಲರನ್ನೂ ಬೆರಗುಗೊಳಿಸಿತು.

ಉಗ್ರಾಣ ಸಾಮಾನಿನಿಂದ ತುಂಬಿ ಹೋಗಿತ್ತು. ಸಾಮಾನುಗಳು ಅಡ್ಡಾತಿಡ್ಡಿಯಾಗಿ ಹೇರಿದ್ದುದರಿಂದ ಅವಶ್ಯಕತೆಗಿಂತ ಹೆಚ್ಚು ಜಾಗವನ್ನು ಆಕ್ರಮಿಸಿದ್ದುವು. ಕಾಲಿರಿಸಿ ಬೇಕಾದ ಸಾಮಾನುಗಳನ್ನು ತೆಗೆದುಕೊಳ್ಳಲು ತುಂಬಾ ಹಿಂಸೆಯಾಗುತ್ತಿತ್ತು. ರಂಗನ್ನು ಅದನ್ನು ಸರಿಪಡಿಸಬೇಕೆಂದು ಹಲವು ಬಾರಿ ಮನಸ್ಸು ಮಾಡಿದ್ದರು. ಕೆಲಸ ಮಾಡಿ ಸೋತ ಅವರ ದೇಹ, 'ನಾಳೆ ಮಾಡಿದರಾಯಿತೆ'ಂದು ಮುಂದೂಡುತ್ತಲೇ ಬಂದಿತ್ತು. ನಾಳೆ-ಗೋಳಿಗೆ ಹೇಳಿ ನೋಡಿದ್ದರು. ಹೆಣ್ಣುಮಕ್ಕಳು ಅಪರೂಪಕ್ಕೊಮ್ಮೆ ಬರುವುದರಿಂದಲೂ ಅತ್ತೆ-ಮನೆಯಲ್ಲಿ ಕೆಲಸ ಮಾಡಿ ದಣಿದಿರುವುದರಿಂದಲೂ ಅವರಿಗೆ ಆ ಕಷ್ಟದ ಕೆಲಸ ಹಚ್ಚಲು ಇಷ್ಟವಾಗದೆ ಹಾಗೇ ತಳ್ಳಿಕೊಂಡು ಬಂದಿದ್ದರು.

ಈ ದಿನ ಅಕ್ಕಿ ಅಳೆದು ತರುವ ಕೆಲಸ ಶಾಂತಳಿಗೆ ಬಿತ್ತು. ಹಾಗೊಂದು ಹೀಗೊಂದು ಹೆಜ್ಜೆಯಿರಿಸಿ, ಕೊಠಡಿಯ ಬಲಭಾಗದ ಗೋಡೆಯಂಚಿನ ಬಳಿ ಇರಿಸಿರುವ ಮೂಟೆಯಿಂದ ಅಕ್ಕಿ ಅಳೆದುಕೊಂಡು ಬರಬೇಕಾದರೆ ಸಾಕುಸಾಕಾಯಿತು. ಅತ್ತೆ ಅಡಿಗೆಗೆ ಮಡಿ ಉಟ್ಟಿದ್ದರು. ಅದೇ ತಕ್ಕ ಸಮಯವೆಂದೂಹಿಸಿ, ಉಗ್ರಾಣದ ಬಾಗಿಲು ಹಾಕಿ, ಅದರ ಅಚ್ಚುಕಟ್ಟಿಗೆ ನಡುಕಟ್ಟಿ ನಿಂತಳು. ಮೊದಲು ಮೇಲ್ಛಾವಣಿ–ಗೋಡೆಯನ್ನೆಲ್ಲಾ ಗುಡಿಸಿ, ಹರಡಿದ್ದ ಸಾಮಾನುಗಳನ್ನು ಧೂಳು ಹೊಡೆದು, ಇಡುವ ಸ್ಥಳವನ್ನು ಶುಚಿ ಮಾಡಿ, ವಿತರಣೆಯಿಂದ ಜೋಡಿಸತೊಡಗಿದಳು.

ಕೊಠಡಿಯಲ್ಲಿ ಒಂದು ಕಡೆ ಮರದ ಹಲಿಗೆಗಳನ್ನು ಹೇರಿದ್ದರು. ಕವಾಟು ಕುರ್ಚಿಗಳನ್ನು ಮಾಡಿಸಲೆಂದು ತಂದ ಹಲಗೆಯವು. ಲಗ್ನದ ಸಂಭ್ರಮದಲ್ಲಿ ಒಂದು ಆಕಾರವನ್ನು ಕಾಣದೆ ಮೂಲೆಗೆ ಸೇರಿದ್ದುವು. ಅವುಗಳನ್ನು ಅತ್ತಿಂದಿತ್ತ ಎತ್ತಿಡುವಾಗ ಶಬ್ದವಾಯಿತು.

ಅಂದು ಭಾನುವಾರ. ಗೋಪಿ–ನಾಣಿ ಮನೆಯಲ್ಲೇ ಇದ್ದರು. ಲಗ್ನಕ್ಕೆ ಬಂದಿದ್ದ ಶಕುಂತಳಾ ಗರ್ಭಿಣಿಯಾಗಿದ್ದುದರಿಂದ ತೌರಿನಲ್ಲಿ ಉಳಿದುಕೊಂಡಿದ್ದಳು. ಕೊಠಡಿಯಲ್ಲಿ ಆಗುತ್ತಿರುವ ಶಬ್ದ ಮೊದಲು ಬಂದು ಮುಟ್ಟಿದುದು ಹಜಾರದಲ್ಲಿ ಅಕ್ಕಿ ಆರಿಸುತ್ತ ಕುಳಿತಿದ್ದ ಶಕುಂತಳೆಯ ಕಿವಿಯನ್ನು. ಶಾಂತ ಶಬ್ದವಾಗಬಾರದೆಂದು ಬಹಳ ಎಚ್ಚರಿಕೆ ವಹಿಸಿ ಎತ್ತಿಡುತ್ತಿದ್ದಳು. ಹಲಗೆಗಳು ತುಂಬಾ ಭಾರವಾಗಿದ್ದುದರಿಂದ ಅವಳ ಹತೋಟಿ ಮೀರಿ ಶಬ್ದ ಮಾಡುತ್ತಿದ್ದವು.

ಶಕುಂತಳೆ ಎದ್ದುಹೋಗಿ ಕೊಠಡಿಯ ಕದವನ್ನು ಮೆಲ್ಲನೆ ತಟ್ಟಿದಳು. ಕದ ತೆರೆಯಿತು. ಶಾಂತ ಅತ್ತೆಯೆಂದು ಹೆದರಿದ್ದಳು. ಶಕುಂತಳೆಯ ಮುಖ ಕಂಡು ಸಮಾಧಾನವಾಯಿತು. ಶಕುಂತಳ ವಾವೆಯಲ್ಲಿ ನಾದಿನಿಯಾಗಿದ್ದರೂ ವಯಸ್ಸಿನಲ್ಲಿ ತನಗಿಂತ ದೊಡ್ಡವಳಾದ ಅವಳನ್ನು, ಶಾಂತ ಅತ್ತಿಗೆಯೆಂದೇ ಕರೆಯುತ್ತಿದ್ದಳು.

"ನೀವಾ ಅತ್ತಿಗೆ ? ನಾನು ಅಮ್ಮನೆಂದು ತುಂಬಾ ಗಾಬರಿಯಾದೆ—" ಎಂದು ಶಾಂತ ನಸುನಕ್ಕಳು.

"ಅಕ್ಕಪಕ್ಕದಲ್ಲೆ ನೆಮ್ಮದಿ ತಂದುಕೊಳ್ಳಬೇಡ, ಅಮ್ಮನೂ ಬಂದಿದ್ದಾಳೆ ಇಲ್ಲಿ" ಎಂದು ಪಕ್ಕಕ್ಕೆ ನೋಡಿ ತಾನೂ ಹುಸಿನಗೆ ನಕ್ಕಳು.

ತಿಂಡಿ ಮಾಡುತ್ತಿದ್ದ ರಂಗಮ್ಮ ಶಬ್ದ ಕೇಳಿ ಗಾಬರಿಗೊಂಡು, ಏನೆಂದು ತಿಳಿಯಲು ಶಕುಂತಳೆಯ ಬೆನ್ನ ಹಿಂದೆಯೆ ಬಂದಿದ್ದರು. ಕೊಠಡಿಯ ಸುತ್ತ ಕಣ್ಣಾಡಿಸಿ ಹೇಳಿದರು,

"ಏನಿದು ಶಾಂತ, ನೀನು ಮಾಡುತ್ತಿರುವುದು! ನಿನ್ನೊಬ್ಬಳ ಕೈಯಲ್ಲಿ ಆಗುವ ಕೆಲಸವಾಮ್ಮ ಅದು? ಈಗ್ಯಾಕೆ ಹಚ್ಚಿಕೊಂಡೆ ಹೇಳು. ನಾನೂ ಬರುವಂತಿಲ್ಲ, ಮಡಿಯುಟ್ಟಿದ್ದೇನೆ. ಶಕುಂತಳೆಯ ಕೈಯಲ್ಲೂ ಆಗುವುದಿಲ್ಲ. ಹೀಗೆ ಮಾಡಿಬಿಟ್ಟೆಯಲ್ಲಾ ನೀನು!"

ಗಾಬರಿ ಮತ್ತು ಕೆಲಸದ ಕಾವಿನಿಂದುಂಟಾದ ಬೆವರನ್ನು ಒರೆಸಿಕೊಳ್ಳುತ್ತ ಶಾಂತ ಹೇಳಿದಳು,

"ನನಗೇನೂ ಕಷ್ಟವಾಗುತ್ತಿಲ್ಲ; ಕೆಲಸ ಮಾಡಿ ಅಭ್ಯಾಸವಿದೆ."

"ಅಭ್ಯಾಸವಿದೆಯೆಂದು ಶಕ್ತಿಗೆ ಮೀರಿ ಕೆಲಸ ಮಾಡುವುದೆ? ತಾಳು, ಸಹಾಯಕ್ಕೆ ನಾಣಿಯನ್ನಾಗಲಿ, ಗೋಪಿಯನ್ನಾಗಲೀ ಕಳುಹಿಸುವೆನು" ಎಂದು ಉತ್ತರಕ್ಕೆ ಕಾಯದೆ ಅಡಿಗೆಮನೆ ಕಡೆ ಹೆಜ್ಜೆಯಿರಿಸಿದರು.

"ನಿನಗೆ ಹಾಗೇ ಆಗಬೇಕು—ಅಣ್ಣ ಬಂದರೆ ಒಂದು ಮೈಲಿ ದೂರ ಹಾರುತ್ತಿದ್ದೆಯಲ್ಲಾ, ಈಗ! ಅಮ್ಮ ಸರಿಯಾಗಿ ಹೇಳಿದಳು" ಎಂದು ತುಂಟು ನಗೆ ಬೀರಿ ಶಕುಂತಳ ತನ್ನ ದಾರಿ ಹಿಡಿದಳು.

ಶಾಂತ ನಾಚಿಕೆಯಿಂದ ಕೆಂಪಾದಳು. ಸಂಗಡ, ಎಲ್ಲಿ ಗೋಪಿ ಬಂದು ಬಿಡುವನೊ ಸಹಾಯಕ್ಕೆ, ಎಂಬ ಹೆದರಿಕೆಯೂ ಉಂಟಾಯಿತು. ಸವರಿಸಿ ಕೊಂಡು ಬೇಗ ಹೇಳಿದಳು "ಯಾರೂ ಬೇಡಿ, ನಾನೇ ನೋಡಿಕೊಳ್ಳುವೆನು." ಗಂಟಲಿನಲ್ಲೆ ಹೇಳಿದ ಆ ಮಾತು ಯಾರ ಕಿವಿಗೂ ಹೋಗಿ ಮುಟ್ಟಲಿಲ್ಲ.

ಒಳಗೆ ತಿಂಡಿ ತಿನ್ನುವ ಗಲಾಟೆ. ದೋಸೆಯ ಸಮಾರಂಭ. ಹಿಂದಿನ ದಿನ ಮಾಡಿ ಸ್ವಲ್ಪ ಹಿಟ್ಟು ಉಳಿದಿತ್ತು. ರಂಗಮ್ಮ ಅಷ್ಟರಲ್ಲಿ ಆ ದಿನದ ಬೆಳಗಿನ ಉಪಹಾರ ಮುಗಿಸಲು ಹವಣಿಸಿದರು. ತಲಾ ಎರಡೆರಡು ದೋಸೆ ಬರುವಂತಿತ್ತು ಹಿಟ್ಟು. ಹಿಟ್ಟು ಸ್ವಲ್ಪವಿದ್ದುದಕ್ಕೂ ಮಸಾಲೆ ದೋಸೆ ಮಾಡಿದ್ದಕ್ಕೂ ತಾಳೆಯಾಯಿತು.

ಗೋಪಿ ತುಂಬಾ ಸ್ವಾರ್ಥಿ; ಹಠಮಾರಿ. ರುಚಿಕರ ಭಕ್ಷ್ಯ-ಭೋಜ್ಯ ಗಳನ್ನು ಮತ್ತೊಬ್ಬರಿಗೆ ಬಿಡದೆ, ಬಕಾಸುರನಂತೆ ತಾನೊಬ್ಬನೆ

ಹೊಡೆದು ಹಾಕುತ್ತಿದ್ದ. ಅವನು ತಿಂದು ತೃಪ್ತಿಯಾಗಿ ಉಳಿದರೆ ಮಾತ್ರ ಮಿಕ್ಕವರು ನಾಲಿಗೆ ಚಪ್ಪರಿಸಬಹುದಿತ್ತು. ನಾಣಿ ಚಿಕ್ಕವನಾಗಿದ್ದಾಗ ಯಾವ ಅಡ್ಡಿ ಆತಂಕವಿಲ್ಲದೆ ಅವನ ಆ ಸ್ವಾರ್ಥ–ಹಠಮಾರಿತನ ಸಾಂಗವಾಗಿ ನೆರವೇರುತ್ತಿತ್ತು. ಈಗ ಹಾಗಾಗುತ್ತಿಲ್ಲ. ನಾಣಿ ಈಗ ಒಂದು ವಯಸ್ಸಿಗೆ ಬಂದಿದ್ದಾನೆ. ಗೋಪಿಯೂ ಆ ವಯಸ್ಸಿಗೆ ಪ್ರೀತಿಯಿಂದಲೊ, ಭೀತಿಯಿಂದಲೊ ಬೆಲೆ ಕೊಟ್ಟಿದ್ದಾನೆ. ಅವನು ಎದುರಿಗಿದ್ದಾಗ ತಾಯಿ ಕೊಟ್ಟಷ್ಟನ್ನೇ ತಿಂದು ಹೋಗುತ್ತಿದ್ದ. ಆ ಗುಟ್ಟು ತಿಳಿದ ರಂಗಮ್ಮನೂ, ಗೋಪಿಯನ್ನು ನಾಣಿಯ ಜತೆಗೇ ಊಟ–ತಿಂಡಿಗೆ ಕರೆಯುತ್ತಿದ್ದರು. ಇಂದೂ ಹಾಗೇ ಮಾಡಿದರು. ಅವರಿಬ್ಬರೂ ತಿಂಡಿ ತಿನ್ನುತ್ತಿದ್ದಾಗಲೆ ರಂಗಮ್ಮ ಉಗ್ರಾಣದ ಬಳಿ ಹೋಗಿ, ಶಾಂತಳ ಕೆಲಸ ಕಂಡು ಪೇಚಾಡಿ, ನಾಣಿ–ಗೋಪಿಯರಲ್ಲಿ ಯಾರನ್ನಾದರೂ ಕಳುಹಿಸುವೆನೆಂದು ಹೇಳಿ ಬಂದದ್ದು. ಅದರಂತೆ ಗೋಪಿಗೆ ಸಹಾಯಕ್ಕೆ ಹೋಗೆಂದು ಹೇಳಿದರು.

"ಹೋಗಮ್ಮ, ಕೈಲಾಗದ ಕೆಲಸಕ್ಕೆ ಅವಳನ್ನು ಹೋಗೆಂದು ಹೇಳಿದವರ್‍ಯಾರು? ನನ್ನಿಂದ ಸಾಧ್ಯವಿಲ್ಲ!" ಎಂದು ಸಿಡಿಮಿಡಿಗುಟ್ಟಿದನು.

"ಅಣ್ಣನಿಗೆ ನಾಚಿಕೆಯೆಂದು ತೋರುತ್ತದೆ; ನಾನೇ ಹೋಗುವೆನಮ್ಮ" ಎಂದು ನಾಣಿ ಇಬ್ಬರ ಮುಖದ ಕಡೆಗೂ ಕಣ್ಣಾಡಿಸಿದನು.

ಆ ಮಾತಿಗೆ ಯಾರೂ ವಿರೋಧಿಸಲಿಲ್ಲ. ಬೇಗ ಬೇಗ ತಿಂದು ನಾಣಿ ಉಗ್ರಾಣದ ಕಡೆ ನಡೆದನು. ಅದೇ ಸಮಯವನ್ನು ಕಾಯುತ್ತಿದ್ದ ಗೋಪಿ, ಕಣ್ಣಲ್ಲಿ ಆಸೆ ತುಂಬಿ ತಾಯ ಕಡೆ ನೋಡಿದ. ರಂಗಮ್ಮ ದೋಸೆ ಹುಯ್ಯುವುದರಲ್ಲಿ ಮಗ್ನರಾಗಿದ್ದರು.

"ಇಷ್ಟೇ ಏನಮ್ಮ ತಿಂಡಿ!"

ಆಸೆ ಮೌನದ ಕಟ್ಟೆಯನ್ನೊಡೆದು ಮಾತಿನ ಹೊನಲನ್ನು ಹುಚ್ಚುಚ್ಚಾಗಿ ಹರಿಸಿತು.

"ಹೌದಪ್ಪ, ಇವತ್ತು ಎಲ್ಲರಿಗೂ ಅಷ್ಟೇ ಬಂದದ್ದು."

"ಇದೆಂಥಾ ಹಾಳು ತಿಂಡಿ ಮಾಡುವ ಕ್ರಮ! ಮಾಡಿದರೆ ಸರಿಯಾಗಿ ಮಾಡಬೇಕು, ಇಲ್ಲದಿದ್ದರೆ ಆ ತಂಟೆಗೇ ಹೋಗಬಾರದು" ಎಂದು ನೆಲಕ್ಕೆ ಕಾಫಿ ಲೋಟ ಕುಕ್ಕಿದನು.

"ಒಂದು ದಿನ ಹೆಚ್ಚುಕಡಿಮೆಯಾದರೆ ಇಷ್ಟೆಲ್ಲ ರಂಪ ಮಾಡಬೇಕೇ! ನಾಣಿಗೂ ನಿನ್ನಷ್ಟೆ ಕೊಟ್ಟಿದ್ದು. ಅವನು ಸುಮ್ಮನೆದ್ದು ಹೋಗಲಿಲ್ಲವೆ ?"

"ನನಗೆ ಅವರಿವರ ಮಾತು ಬೇಡ. ನನಗಂತೂ ಸ್ವಲ್ಪ ಹೆಚ್ಚು-ಕಡಿಮೆ ಯಾದರೆ ಸೈಸುವುದಿಲ್ಲ; ಅದು ನನ್ನ ಸ್ವಭಾವ."

"ನಿನ್ನ ಸ್ವಭಾವ ಕಾಣದವಳೆ ನಾನು; ಹೊತ್ತು ಸಾಕಿದವಳು ನಾನ ಲ್ಲವೆ ! ಗೊತ್ತಿದ್ದೂ ತಪ್ಪು ಮಾಡಿ ಬಿಟ್ಟೆ. ನಾಳೆಯಿಂದ ಹೀಗೆಲ್ಲಾ ಮಾಡುವು ದಿಲ್ಲ. ನಿನಗೆ ತೃಪ್ತಿಯಾಗುವಷ್ಟು ಮಾಡಿ ಹಾಕುತ್ತೇನೆ—ಏಳು."

"ನಾಳೆ ಮಾತು ನಾರಾಯಣ ಬಲ್ಲ—ಇವತ್ತಿನದು ಹೇಳು. ಬ್ರಹ್ಮಾಂಡ ಕೆಲಸ ಬಿದ್ದಿದೆ. ಸಾಲದಿದ್ದಕ್ಕೆ ಕೃಷ್ಣಮೂರ್ತಿಪುರಮ್ಮಿಗೆ ಬೇರೆ ಹೋಗಬೇಕು. ಬರುವುದು ಎಷ್ಟು ಹೊತ್ತಾಗುತ್ತದೊ ಏನೊ !"

"ಮೊದಲೆ ಹೇಳಿದ್ದರೆ ಬೇರೆ ಏನಾದರೂ ಹವಣಿಸಿಕೊಳ್ಳುತ್ತಿದ್ದೆನೊ ! ಇಲ್ಲಿರುವ ದೋಸೆ—ಶಾಂತ, ಶಕುಂತಳೆಗೆ ಸರಿಯಾಗಿದೆ."

"ಅವರು ಮನೆಯಲ್ಲಿರುವವರು; ಅದನ್ನು ನನಗೆ ಕೊಟ್ಟು ಅವರಿಗೆ ಬೇರೆ ಏನಾದರೂ ಮಾಡಿಹಾಕು; ಅಥವಾ ಒಂದು ದಿನ ತಿಂಡಿಯಿಲ್ಲದಿದ್ದರೆ ಸೊರಗಿ ಹೋಗುವುದು ಅಷ್ಟರಲ್ಲೆ ಇದೆ."

"ಚೆನ್ನಾಗಿ ಹೇಳಿದೆ. ಅವರಿಬ್ಬರಲ್ಲಿ ಒಬ್ಬಳು ಗರ್ಭಿಣಿ ಹುಡುಗಿ, ಮತ್ತೊಬ್ಬಳು ಕೆಲಸ ಮಾಡಿ ಸೋತಿದ್ದಾಳೆ. ಮನೆಯಲ್ಲಿರುವವರಾಗಲಿ, ಹೊರಗೆ ಓಡಾಡುವರಾಗಲಿ, ಹೊತ್ತಿಗೆ ತಕ್ಕಂತೆ ಆಹಾರ ಹೋಗದಿದ್ದರೆ ಶರೀರ ಯಾಕಾಗುತ್ತದೆ ! ಈಗ ನನಗೆ ಅಡಿಗೆಗೆ ಹೊತ್ತಾಯಿತು. ಬೇರೆ ಏನು ಹವ ಣಿಸಿಕೊಳ್ಳಲೂ ಆಗುವುದಿಲ್ಲ."

"ಹಾಗಾದರೆ ಎದ್ದು ಹೋಗಲಾ ನಾನು ?"

"ಹಾಗೇ ಮಾಡಬೇಕು, ಬೇರೆ ಉಪಾಯವೇ ಇಲ್ಲ."

"ಬರಬರುತ್ತ ನಿನ್ನ ನಡುವಳಿಕೆಯೆ ಕೆಟ್ಟು ಹೋಯಿತು. ಗಂಡುಮಕ್ಕಳಿಗೆ ಸರಿಯಾದ ಮರ್ಯಾದೆಯನ್ನೆ ಕೊಡುತ್ತಿಲ್ಲ."

"ನನಗೆಲ್ಲರೂ ಒಂದೆ. ಸ್ವಾರ್ಥಿಯಾದ ನಿನ್ನ ಕಣ್ಣಿಗೆ ನನ್ನ ನಡವಳಿಕೆ ತಪ್ಪಾಗಿ ಕಂಡಿದೆ ಅಷ್ಟೆ. ನಿನ್ನ ಸ್ವಾರ್ಥವನ್ನು ಹೀಗೇ ಬೆಳೆಯ ಬಿಟ್ಟರೆ ಬಾಳಿ

ನಲ್ಲಿ ಶಾಂತಿ ಸಿಕ್ಕುವುದಿಲ್ಲ ಗೋಪಿ. ನೀನಿನ್ನು ಚಿಕ್ಕವನಲ್ಲ, ಸಂಸಾರಿಯಾಗಿದ್ದಿ. ಇನ್ನು ಮುಂದೆ ನಿನ್ನಂತೆ ಶಾಂತಳ ಸುಖದುಃಖದ ಕಡೆಗೂ ಗಮನವಿಡಬೇಕು. ಮತ್ತೊಬ್ಬರಿಂದ ಮರ್ಯಾದೆ ಬಯಸುವ ನೀನು, ಹಾಗೇ ಕೊಡುವುದನ್ನೂ ಕಲಿಯಬೇಕು. ಗಂಡಸಾದರೇನು, ಹೆಂಗಸಾದರೇನು, ಜೀವ ಎಲ್ಲರಿಗೂ ಒಂದೆ."

"ಸಾಕು ಸಾಕು ನಿನ್ನ ವೇದಾಂತ! ಇರಲಿ, ನೋಡಿಕೊಳ್ಳುವೆನು" ಎಂದು ಗೋಪಿ ಕೋಪದಿಂದ ತಾಯನ್ನು ದುರುದುರು ನೋಡುತ್ತಾ ಎದ್ದು, ಕಾಲನ್ನು ನೆಲಕ್ಕೆ ಬಡಿದು ಬಾಣದಂತೆ 'ಸುಳ್ಳ' ನೆ ಹಾರಿದನು.

ಅತ್ತ ಅತ್ತಿಗೆಗೆ ಸಹಾಯ ಮಾಡಲೆಂದು ಹೋದ ನಾಣಿ, ಶಾಂತ ಬೇಡ ವೆಂದರೂ ಕೇಳದೆ ಹಲಗೆಗಳನ್ನೆಲ್ಲಾ ಒತ್ತಟ್ಟಿಗೆ ಸೇರಿಸಿಟ್ಟು, ಪಾತ್ರೆಗಳನ್ನು ಅಚ್ಚುಕಟ್ಟಾಗಿ ಕೂಡಿಸಿದನು. ಅವನು ಅಷ್ಟು ಕೆಲಸ ಮಾಡಿದುದು ಶಾಂತಳಿ ಗೆಷ್ಟೋ ಸಹಾಯವಾಯಿತು. ಮೈದುನನ ಸಂಗಡ ಕೆಲಸ ಮಾಡಿಸಿಕೊಂಡುದು ತಪ್ಪೆನಿಸಿದ್ದರೂ ಗೋಪಿಯಿಂದ ಪಾರಾದದ್ದು ಸಮಾಧಾನ ತಂದಿತ್ತು.

ಕೆಲಸ ಮುಗಿದ ಮೇಲೆ ಶಕುಂತಳ, ಶಾಂತ ಇಬ್ಬರೂ ಉಪಾಹಾರ ಮಾಡಿದರು. ಶಾಂತ ತಿಂಡಿ ತಿನ್ನುತ್ತಿರುವಾಗ ಗೋಪಿ ಮಾಡಿದ ರಂಪ ರಂಗ ಮ್ಮನಿಗೆ ಹೊಳೆಯದೆ ಇರಲಿಲ್ಲ. ಸ್ವಾರ್ಥಿ–ಮುಂಗೋಪಿ ಗಂಡನ ಸಂಗಡ ಬಾಳಬೇಕಾಗಿದ್ದ ಆ ಎಳೆ ಹುಡುಗಿಯನ್ನು ಕಂಡು ಕರುಳು ಚುರುಕ್ಕೆನಿಸಿ ಕಣ್ಣು ಕರಗಿತು.

## ೬

ಮೊದಲ ಬಾರಿ ಹೆಚ್ಚು ದಿನ ಅತ್ತೆ ಮನೆಯಲ್ಲಿ ಬಿಡಲು ಇಷ್ಟವಾಗದೆ ಸೂರಪ್ಪ ಬಂದು ಶಾಂತಳನ್ನು ಊರಿಗೆ ಕರೆದುಕೊಂಡು ಹೋದರು. ಅವಳು ಹೋದ ಎರಡು ದಿನದಲ್ಲೆ ಶಕುಂತಳ ಗಂಡು ಮಗನ ತಾಯಾದಳು. ಸಂಪ್ರ ದಾಯದಂತೆ ಹೆರಿಗೆ ಮನೆಯಲ್ಲೆ ಆಗಿದ್ದುದರಿಂದ ರಂಗಮ್ಮನಿಗೆ ಆಸ್ಪತ್ರೆಯ

ಓಡಾಟ ತಪ್ಪಿತು. ಹಾಗೆಂದು ಕೆಲಸಕ್ಕೇನೂ ಕಡಿಮೆಯಿರಲಿಲ್ಲ; ಬೆಳಗಿನ ಝಾವ ಐದು ಗಂಟೆಗೆದ್ದರೆ ರಾತ್ರೆ ಹನ್ನೊಂದರ ವರೆಗೂ ಮೈಮುರಿಯ ದುಡಿತ ವಿತ್ತು. ಈ ಸಮಯದಲ್ಲಿ ಶಾಂತ ಇದ್ದಿದ್ದರೆ ರಂಗಮ್ಮನಿಗೆಷ್ಟೋ ಹಗುರವಾಗು ತ್ತಿತ್ತು. ಇಷ್ಟು ಬೇಗ ಶಕುಂತಳ ಪ್ರಸವಿಸುವಳೆಂದಿದ್ದರೆ, ಅವಳು ತೌರಿಗೆ ಹೋಗುವುದನ್ನು ತಡೆಯುತ್ತಿದ್ದರೋ ಏನೊ ! ಈಗಂತೂ ಕೆಲಸ ಕೈಮಿಂಚಿ ಹೋಗಿತ್ತು. ನೆನೆದರೂ ಪ್ರಯೋಜನವಿರಲಿಲ್ಲ.

ಶಾಂತ ತವರಿಗೆ ಹೋದದ್ದು ನಿಜವಾಗಿಯೂ ರಂಗಮ್ಮನಿಗೆ ಬೇಸರವ ನ್ನುಂಟು ಮಾಡಿತ್ತು. ಕೂತಲ್ಲಿ ನಿಂತಲ್ಲಿ ಅವಳ ನೆನಪೆ ಅವರಿಗೆ. ಬಂದ ಎರಡು ಮೂರು ತಿಂಗಳಲ್ಲೆ ತನ್ನ ನಯ-ವಿನಯ, ಅವಿಶ್ರಾಂತ ದುಡಿಮೆ, ಅಚ್ಚುಗಟ್ಟುತನದಿಂದ ಎಲ್ಲರ ಮನಸ್ಸನ್ನು ಸೂರೆಗೊಂಡಿದ್ದಳು. ರಂಗಮ್ಮನ ಹೃದಯವಂತೂ ಶಾಂತಳಿಗೆ ಮಾರುಹೋಗಿತ್ತು. ಅವಳನ್ನು ಅವರು ತಮ್ಮ ಮಗಳೆಂದೆ ಭಾವಿಸಿದ್ದರು.

ರಂಗಮ್ಮನಲ್ಲಿ ವಿವೇಕ ಜಾಗೃತವಾಗಿತ್ತು. ತಮ್ಮಂತೆ ಎಲ್ಲರನ್ನೂ ಕಾಣುವ ಸ್ವಭಾವ ಅವರಿಗೆ ಹುಟ್ಟಿನಲ್ಲೆ ಬಂದಿತ್ತೆಂದು ತೋರುತ್ತದೆ. ಮರೆತೂ ಮತ್ತೊಬ್ಬರ ಮನಸ್ಸನ್ನು ನೋಯಿಸುತ್ತಿರಲಿಲ್ಲ. ಸಂಸ್ಕೃತಿಯ ಅರ್ಥವನ್ನು ಸಾರ್ಥಕಪಡಿಸುತ್ತಿದ್ದ ಜೀವ ಅದು. ನಾಗರಿಕತೆಯ ಮಟ್ಟವನ್ನರಿತು, ಕಾಲಕ್ಕೆ ತಕ್ಕಂತೆ ತಮ್ಮ ನಡವಳಿಕೆಯನ್ನು ಮಾರ್ಪಡಿಸಿಕೊಂಡು ಹೋಗುವ ಜಾಣ್ಮೆ ಅವರಲ್ಲಿ ಚೆನ್ನಾಗಿತ್ತು. ತಾವು ಹಳಬರಾದರೂ ಹೊಸದಾಗಿ, ಹೊಸ ಕಾಲಕ್ಕೆ ತಕ್ಕಂತೆ ತಮ್ಮಮನೆಗೆ ಬಂದ ಶಾಂತಳನ್ನು ನಡೆಸಿಕೊಳ್ಳುತ್ತಿದ್ದ ಕ್ರಮವೆ ಅದಕ್ಕೆ ನಿದರ್ಶನವಾಗಿತ್ತು.

ಅವರು ಒಳ್ಳೆಯವರಾಗಲು, ಹುಟ್ಟಿನಲ್ಲಿ ಬಂದ ಸಂಸ್ಕಾರದ ಸಂಗಡ ಓದಿದ ಗ್ರಂಥಗಳೂ ಸಹಾಯಕವಾಗಿದ್ದವು. ಓದುವುದರಲ್ಲಿ ತುಂಬಾ ಆಸಕ್ತಿ. ಶಾಲೆಗೆ ಹೋಗಿ ಕಲಿತವರಲ್ಲ. ಅಣ್ಣ ಮತ್ತು ಯಜಮಾನರ ಪರಿಶ್ರಮದಿಂದ ಕನ್ನಡ ದಲ್ಲಿ ನಾಕಷ್ಟು ತಿಳುವಳಿಕೆಯನ್ನು ಹೊಂದಿದ್ದರು. ತಮಗಿದ್ದ ಅಲ್ಪ ಭಾಷಾ ಜ್ಞಾನದಿಂದಲೆ ತಿಳುವಳಿಕೆಯ ಮಟ್ಟವನ್ನು ದಿನೆದಿನೆ ಅಭಿವೃದ್ಧಿಪಡಿಸಿಕೊಂಡರು ಮಹಾಭಾರತ-ರಾಮಾಯಣ-ಭಾಗವತ-ಗೀತೆ ಇವು ಅವರ ಅಚ್ಚುಮೆಚ್ಚಿನ ಕೃತಿಗಳು. ಹೊಸದಾಗಿ ಕನ್ನಡಕ್ಕೆ ತರ್ಜುಮೆಯಾಗುತ್ತಿದ್ದ ಉಪನಿಷತ್ತಿನ

ಪುಸ್ತಕಗಳನ್ನೂ ಓದದೆ ಇರುತ್ತಿರಲಿಲ್ಲ. ಇವುಗಳ ಸಂಗಡ ಆಗಾಗ ಹಿರಿಯ ಸಾಹಿತಿಗಳಿಂದ ವಿರಚಿತವಾದ ಉತ್ತಮ ಕಾದಂಬರಿಗಳೂ ಅವರ ತಿಳುವಳಿಕೆ ಯನ್ನು ತಿದ್ದುತ್ತಿದ್ದವು.

ಮಧ್ಯಾಹ್ನದ ಊಟವಾಗಿ ಸ್ವಲ್ಪ ಹೊತ್ತಾಗಿತ್ತು. ಊಟವಾದ ನಂತರ ಮಲಗುವ ಪದ್ಧತಿಯಿತ್ತು. ಆ ದಿನ ಏಕೋ ಮಲಗಲು ಮನಸ್ಸಾಗಲಿಲ್ಲ. ಕೈ-ಯಲ್ಲಿ ಗೀತೆ ಹಿಡಿದು ಕುಳಿತರು. ಗಂಟೆ ಎರಡಾಯಿತು. ಅದು ರಂಗಮ್ಮನಿಗೆ ಶ್ರೀದೇವಮ್ಮನ ಕರೆಯ ನೆನಪುಂಟು ಮಾಡಿತು. ಅಂದು ಶ್ರೀದೇವಮ್ಮ ಮನೆ ಯಲ್ಲಿ ಒಬ್ಬರೇ ಆಗಿದ್ದುದರಿಂದ ಬೇಸರ ಕಳೆಯಲು ಅವರನ್ನು ಬರಹೇಳಿ ಒತ್ತಾಯ ಮಾಡಿದ್ದರು.

ಶ್ರೀದೇವಮ್ಮ ಬಲು ಬಾಯಾಳಿ; ಮೋಸದ ಮೊಟ್ಟೆ. ಊರಿನ ಸುದ್ದಿಗೆ ಬಾಯಿ ಹಚ್ಚಿ, ಹೆರವರ ಮನೆ ಮುರಿಯುವುದರ ಸಂಗಡ ಸುಳ್ಳಿನ ಸೋಗು ಹಾಕಿ ತಮ್ಮ ಮನೆಯನ್ನು ತುಂಬಿಕೊಳ್ಳುತ್ತಿದ್ದರು. ಸಮಯ—ಸಂದರ್ಭ ಸಾಧಿಸಿ ಆಯಾ ವ್ಯಕ್ತಿಗಳಿಗೆ ತಕ್ಕಂತೆ ಟೋಪಿ ಹಾಕಿ ಮನೆ—ಮನಸ್ಸು ಎರ ಡನ್ನೂ ಒಟ್ಟಿಗೆ ತುಂಬಿಕೊಳ್ಳುವುದರಲ್ಲಿ ಅವರನ್ನು ಮೀರಿಸಿದವರಿಲ್ಲ. ಸುಳ್ಳು ಹೇಳುವುದರಲ್ಲಿ ಎತ್ತಿದ ಕೈ ಅವರು. ಅದು ಅವರ ಮನೆದೇವರೆ ಆಗಿತ್ತೆಂದು ಹೇಳಬಹುದು. ಸುಳ್ಳಿನ ಸುರುಳಿಯಲ್ಲಿ ಸುತ್ತಿ ತರುತ್ತಿದ್ದ ಸುದ್ದಿ, ಸೂಜಿಗಲ್ಲಿ ನಂತೆ ಕೇಳುವವರ ಮನಸ್ಸನ್ನು ಆಕರ್ಷಿಸುತ್ತಿತ್ತು. ಆ ಆಕರ್ಷಣೆಗೆ ಸಿಕ್ಕಿ ತಿಳುವಳಿಕೆಯಿದ್ದ ರಂಗಮ್ಮನೂ ಕೂಡ ಒಂದು ಬಾರಿ ಬೆಸ್ತು ಬಿದ್ದಿದ್ದರು.

ಶ್ರೀದೇವಮ್ಮನ ತಮ್ಮ ಶ್ರೀಕಂಠು—ಶುದ್ಧ ಶುಂಠಿ. ಯಾವ ಕೆಲ ಸಕ್ಕೂ ಬಂದವನಲ್ಲ. ಅವನು ಬದುಕಿಗೆ ನಾಲಾಯಕ್ಕು ಎಂದು ತಿಳಿದಿ ದ್ದರೂ ವಯಸ್ಸಾದ ತಂದೆ ತಮ್ಮ ಹಿತದೃಷ್ಟಿಯಿಂದಲೂ, ಮನೆಗೆ ಸೊಸೆ ತರುವ ಆಸೆಯಿಂದಲೂ ಅವನ ಕುತ್ತಿಗೆಗೆ ಲಗ್ನದ ಹಗ್ಗ ಬಿಗಿದರು. ಅವರ ಪುಣ್ಯ ಚೆನ್ನಾಗಿತ್ತು. ತಮ್ಮ ಸೊಸೆ ಆ ಮಂಕು ತಿಮ್ಮ ಗಂಡನಿಂದ ಗಂಡಾಂತರಕ್ಕೆ ಸಿಕ್ಕಿ ಕಣ್ಣೀರಿಡುವುದನ್ನು ಕಾಣುವುದಕ್ಕೆ ಮುಂಚೆಯೆ ಕಣ್ಣು ಮುಚ್ಚಿದರು. ತಂದೆಯ ಕಾಲಾ ನಂತರ ಬದುಕನ್ನು ಎದುರಿಸಲು ಅಸಮರ್ಥನಾಗಿ ಶ್ರೀಕಂಠು ಪತ್ನಿಯೊಡನೆ ಅಕ್ಕನ ಮರೆ ಹೊಕ್ಕನು. ಚುರುಕು ಬುದ್ಧಿಯುಳ್ಳ ಶ್ರೀದೇವಮ್ಮ ಕೆಲಸಕ್ಕೆ ಬಾರದ ಅವನಿಂದಲೂ ಉತ್ಪತ್ತಿ ತೆಗೆದರು.

ತಮ್ಮ ಮನೆಗೆ ಬಂದ ದಿನ ಶ್ರೀದೇವಮ್ಮನ ಹೃದಯ ಝುಗ್ಗೆನಿಸದೆ ಇರಲಿಲ್ಲ. ಮೂರು ಕಾಸಿನ ಉತ್ಪತ್ತಿಯಿಲ್ಲದ ತಮ್ಮನ ಸಂಸಾರದ ಹೊರೆಯನ್ನು ಹೊರಲು ಕ್ಷಣಕಾಲ ಹೆದರಿದರು. ಬಹಳ ದಿನದಿಂದ ಎಣ್ಣೆ ಕಾಣದೆ ಜಡೆಗಟ್ಟಿದ್ದ ಅವನ ತಲೆಗೂದಲು, ಮುಖಕ್ಷೌರವಿಲ್ಲದೆ ಮಾರುದ್ದ ಬೆಳೆದ ಗಡ್ಡ ಇವು ಘಟ್ಟನೆ ಅವರ ಕುಶಾಗ್ರ ಬುದ್ಧಿಗೆ ಮುಂದಿನ ಹಾದಿ ಹೊಳೆಯುವಂತೆ ಮಾಡಿದುವು. ಕೂಡಲೆ ತಮ್ಮ ಅಭಿಪ್ರಾಯವನ್ನು ಮಗನಲ್ಲಿ ಮಂಡಿಸಿ, ಅವನ ಒಪ್ಪಿಗೆಯನ್ನು ಪಡೆದು ಶರಣು ಬಂದಿದ್ದ ತಮ್ಮನಿಗೆ ಆಶ್ರಯ ನೀಡಿ, ಅದೇ ಗಳಿಗೆಯಲ್ಲಿ ತಮ್ಮ ಹೊಸ ಪ್ರಯೋಗವನ್ನು ಅವನ ಮುಂದೆ ಮಾಡಿಯೆ ಬಿಟ್ಟರು.

ಶ್ರೀಕಂಠು ಹೆಚ್ಚು ಮಾತಿನವನಲ್ಲ. ಸದಾ ಮಂಕು ಹಿಡಿದವನಂತೆ ಸುಮ್ಮನೆ ಒಂದು ಮೂಲೆಯಲ್ಲಿ ಕುಳ್ಳಿರುತ್ತಿದ್ದ. ಶ್ರೀದೇವಮ್ಮ ಅವನಿಗೆ ಕೊಟ್ಟ ಪಾತ್ರವೂ ಅದೇ; ತಪಸ್ಸು ಮಾಡುವವನಂತೆ ಸುಮ್ಮನೆ ಕಣ್ಮುಚ್ಚಿ ಕುಳಿತಿರುವುದು. ಅದಕ್ಕೆ ಹೊಂದುವಂತೆ ನಾಲ್ಕೈದು ವಿಧ ಕೈ-ಕಣ್ಣು-ಮುಖ ತಿರುಗಿಸಲು ಹೇಳಿಕೊಟ್ಟರು. ಅದರರ್ಥ ಶ್ರೀದೇವಮ್ಮ–ಸೀತಾರಾಮುವಿಗೆ ಮಾತ್ರ ತಿಳಿಯುತ್ತಿತ್ತು. ಸಭೆಯ ಮುಂದೆ ಅದರ ಅಭಿಪ್ರಾಯವನ್ನು ತಿಳಿಸುವವರು ಅವರೆ ಆಗಿದ್ದರು.

ಭೂಪತಿರಂಗ ಶ್ರೀಕಂಠು ಹತ್ತಾರು ಬಾರಿ ಅವರು ಹೇಳಿಕೊಟ್ಟಂತೆ ಮಾಡಿ ಚೆನ್ನಾಗಿ ಅಭ್ಯಾಸ ಮಾಡಿಕೊಂಡ. ಒಂದೆರಡು ದಿನ ತಾಯಿ–ಮಗ, ಅವನ ಹಿಂದು–ಮುಂದು ಇದ್ದು ತಮ್ಮ ಪ್ರಯೋಗ ಯಶಸ್ವಿಯಾಗಿ ನಡೆಯುವುದೊ ಇಲ್ಲವೊ ಎಂದು ಪರೀಕ್ಷೆ ಮಾಡಿ ನೆಮ್ಮದಿ ತಂದುಕೊಂಡರು. ಅವರಿಗೆ ಮುಖ್ಯವಾಗಿ ಬೇಕಾಗಿದ್ದುದು ಮೌನ. ಅದನ್ನು ಚೆನ್ನಾಗಿ ಪಾಲನೆ ಮಾಡುತ್ತಿದ್ದ ಮಂಕುತಿಮ್ಮ. ಇಕ್ಕಳ ಹಾಕಿ ಬಾಯಿ ಹಿಗ್ಗಿಸಿದರೂ ಮಾತನಾಡುತ್ತಿರಲಿಲ್ಲ.

ಬಂದ ಎರಡುಮೂರು ದಿನದಲ್ಲೆ ಶ್ರೀಕಂಠು ಶಿವಾನಂದಸ್ವಾಮಿಯಾಗಿದ್ದ. ಶ್ರೀದೇವಮ್ಮನ ಮನೆ ಪೂಜೆ–ಪುರಸ್ಕಾರದ ಬೀಡಾಯಿತು. ಹವನ ಹೋಮದ ನಾಟಕ ಪ್ರದರ್ಶನಕ್ಕೆ ಕೊನೆಮೊದಲಿರಲಿಲ್ಲ. ಊರೆಲ್ಲಾ ಅದೇ ಮಾತಾಯಿತು.

ಶ್ರೀದೇವಮ್ಮನ ಮಾತಿನ ಚಾತುರ್ಯದಿಂದ ಸ್ವಾಮಿಜಿ ಕೈಲಾಸಪತಿಯ ಅಪ ರಾವತಾರವಾದರು. ಕಷ್ಟದಲ್ಲಿ ಸಿಕ್ಕಿದ ಜನ, ನೆರೆಯಂತೆ ಉಕ್ಕಿ ಬಂದು ಶಿವಾ ನಂದಸ್ವಾಮಿಯ ಮರೆಹೊಕ್ಕರು. ಅವರವರ ಕಷ್ಟ–ಸುಖಗಳಿಗೆ ತಕ್ಕಂತೆ ಯಂತ್ರ–ಮಂತ್ರಗಳ ಪ್ರಯೋಗವಾಯಿತು. ಸ್ವಾಮಿಜಿಯವರು ಹರಿದ್ವಾರದಲ್ಲಿ ಅನಾಥರಿಗೆ ಆಶ್ರಮ ಕಟ್ಟುವರೆಂಬ ಅಭಿಪ್ರಾಯ ಮುಂದಿಟ್ಟು, ನೊಂದವರಿಂದ ಹಣವನ್ನು ಯಂತ್ರ–ಮಂತ್ರದ ನೆಪದಲ್ಲಿ ಸುಲಿಗೆ ಮಾಡಿದರು. ಹೀಗೇ ಸುಮಾರು ನಾಲ್ಕಾರು ತಿಂಗಳು ಕಳೆಯಿತು. ಜನರ ಹಣ ಮಂಜಿನಂತೆ ಕರಗು ತ್ತಿತ್ತೆ ವಿನಹ ಯಾರಿಗೂ, ಯಾವ ಪ್ರಯೋಜನವೂ ಕಂಡುಬರಲಿಲ್ಲ.

ಅಪಾರ ಹಣವನ್ನು ಸುರಿದು ಯಂತ್ರ–ಮಂತ್ರದಿಂದ ಯಾವ ಪ್ರಯೋಜ ನವನ್ನೂ ಹೊಂದದಿದ್ದ ಜನ ಹುಚ್ಚೆದ್ದು, ಸ್ವಾಮಿಜಿಯ ತಲೆಯೊಡೆಯುವ ನಿರ್ಧಾರ ಮಾಡಿ ಶ್ರೀದೇವಮ್ಮನ ಮನೆಗೆ ಮುತ್ತಿಗೆ ಹಾಕಿದರು. ಕಪಟ ನಾಟಕ ದಲ್ಲಿ ನುರಿತ ಶ್ರೀದೇವಮ್ಮ, ಅವರ ಮಗ ಸೀತಾರಾಮು ಕ್ಷಣಕಾಲ ಕಂಗೆ ಟ್ಟರೂ ಧೃತಿಗೆಡಲಿಲ್ಲ. ಸ್ವಲ್ಪ ಹೊತ್ತು ಅಭಿಮಾನವನ್ನು ಬದಿಗೊತ್ತಿ, ಜನರ ಕೈಕಾಲಿಗೆ ಅಡ್ಡಬಿದ್ದು, ಅಂಗೈಯಗಲ ಮಣ್ಣನ್ನು ಬೇಕೆಂದೆ ಮುಖಕ್ಕೆ ಮೆತ್ತಿ ಕೊಂಡು, ನೋಡಿದವರಿಗೆ 'ಅಯ್ಯೋ ಪಾಪ ' ಎನಿಸುವಂತೆ ಆಟ ಹೂಡಿ, ಅವರಂತೆ ತಾವೂ ಮೋಸ ಹೋದರೆಂಬ ನಂಬಿಕೆ ಉಂಟು ಮಾಡಿ, ಕ್ಷಮೆ ಕೇಳಿ ಅತ್ತು ಕರೆದು ಆ ದಿನದ ಗಂಡಾಂತರದಿಂದ ಪಾರಾದರು. ದುಡ್ಡಿಗೆ ದುಡ್ಡು, ಮರುಕಕ್ಕೆ ಮರುಕ ಎರಡೂ ದಕ್ಕಿತ್ತು ಅವರಿಗೆ. ಬೆಳಗಾಗುವುದರಲ್ಲಿ ಶಿವಾ ನಂದ ಸ್ವಾಮಿ ಶ್ರೀಕಂಠುವಾಗಿದ್ದ. ಆ ನಾಟಕ ಅಲ್ಲಿಗೆ ಮುಕ್ತಾಯವಾಯಿತು.

ಆಗ ರಂಗಮ್ಮನ ಯಜಮಾನರು ತೀರಿಹೋದ ಸಮಯ. ನಾಣಿ– ಗೋಪಿ ಆಗ ತಾನೆ ಪ್ರವರ್ಧಮಾನಕ್ಕೆ ಬರುತ್ತಿದ್ದರು. ವ್ಯಾಪಾರದಲ್ಲಿ ಬಹಳ ಏರು–ಪೇರಿತ್ತು. ಎರಡು ದಿನ ಲಾಭವಿದ್ದರೆ ನಾಲ್ಕು ದಿನ ನಷ್ಟಕ್ಕೆ ತಲೆ ಯೊಡ್ಡಬೇಕಾಗಿತ್ತು. ಮಕ್ಕಳು ಚಿಕ್ಕವರಾದ್ದರಿಂದ ರಂಗಮ್ಮ ಹೆದರಿದರು. ಅಂಗಡಿ ಮುಚ್ಚುವುದಕ್ಕೂ ಇಲ್ಲದೆ, ನಡೆಸುವುದಕ್ಕೂ ತೋರದೆ ಉಭಯಸಂಕಟ ದಲ್ಲಿ ಸಿಕ್ಕಿದರು.

ಅದೇ ಸಮಯದ ನಿರೀಕ್ಷಣೆಯಲ್ಲಿದ್ದ ಶ್ರೀದೇವಮ್ಮ ಅವರನ್ನು ತಮ್ಮ ಮಂಕರಿಗೆ ತುಂಬಿದರು. ಕಷ್ಟ ನಿವಾರಣೆಯ ಅಭಯವಿತ್ತು, ಶಿವಾನಂದರ ಪರಿ

ಚಯ ಮಾಡಿಕೊಟ್ಟರು. ವ್ಯಾಪಾರದ ಊರ್ಜಿತಾವಸ್ಥೆಗೆ ಸ್ವಾಮಿಜಿಯವರಿಂದ ಯಂತ್ರ–ಮಂತ್ರದ ಪ್ರಯೋಗವಾಯಿತು. ಪೂಜೆಯ ವೆಚ್ಚ ಸುಮಾರು ಇನ್ನೂರು ರೂಪಾಯಿಗಳ ವರೆಗೂ ಮುಟ್ಟಿತು.

ರಂಗಮ್ಮ ಭಕ್ತಿಯಿಂದಲೆ ವೆಚ್ಚವನ್ನು ನಿರ್ವಹಿಸಿದರು. ಸ್ವಾಮಿಜಿಯವರು ಕೊಟ್ಟ ಅವಧಿಯ ವರೆಗೂ ಪೂಜಾವಿಧಿಗಳನ್ನು ಶ್ರದ್ಧೆಯಿಂದಲೆ ನಡೆಸಿಕೊಂಡು ಬಂದರು. ಅವಧಿಯ ದಿನ ಹತ್ತಿರವಾದಂತೆ ಅವರ ಆಶೆ ಗಾಳಿ ತುಂಬಿದ ಬೆಲೂನಿನಂತೆ ಉಬ್ಬಿತು. ಕಾಯುತ್ತಿದ್ದ ಆ ದಿನ ಹತ್ತಿರ ಬಂತು–-ಮುಗಿಯಿತು, ಮೇಲೆ ನಾಲ್ಕಾರು ತಿಂಗಳನ್ನೂ ನುಂಗಿತು. ಯಾವ ಪ್ರತಿಫಲವೂ ಗೋಚರಿಸಲಿಲ್ಲ. ಆಶೆಯ ಗುಳ್ಳೆ ಒಡೆದು ಚೂರಾಯಿತು. ವ್ಯಾಪಾರದಲ್ಲಿ ಉನ್ನತಿ ಕಂಡುಬರುವುದಕ್ಕೆ ಬದಲು, ಕೂಡಿಟ್ಟ ಆಸ್ತಿ ಕರಗಲು ಪ್ರಾರಂಭವಾಯಿತು.

ರಂಗಮ್ಮನ ಸಹನೆ ಎಲ್ಲೆ ಮೀರಿತು. ಯಂತ್ರವನ್ನು ಕಿತ್ತೊಗೆದು, ಸ್ವಾಮಿಜಿಗೆ ಒಡಿ ಶಾಪ ಹಾಕಿ, ಭಟ್ಟರ ಸೂಚನೆಯಂತೆ ಪ್ರಯತ್ನದಲ್ಲಿ ನಂಬಿಕೆಯಿರಿಸಿ, ಅಭಿಮಾನವನ್ನು ಬದಿಗೊತ್ತಿ ಮಕ್ಕಳೊಂದಿಗೆ ತಾವೂ ದುಡಿಯಲು ನಿಂತರು. ಅವರ ಪರಿಶ್ರಮದ ಫಲವಾಗಿ ಯಂತ್ರ–ಮಂತ್ರಕ್ಕೆ ಸಗ್ಗದ ವ್ಯಾಪಾರ ದಿನೇ ದಿನೇ ಊರ್ಜಿತಾವಸ್ಥೆಗೆ ಬಂದಿತು.

ಈ ಘಟನೆಯಿಂದ ಶ್ರೀದೇವಮ್ಮನ ಮೇಲೆ ಅತ್ಯಂತ ಬೇಸರ ಬಂದರೂ ಅವರಿಬ್ಬರ ನಡುವೆ ಬಹಳ ದಿನದಿಂದ ಬೇರು ಬಿಟ್ಟಿದ್ದ ಸ್ನೇಹದ ಮರವು ಮುರುಟಿಕೊಳ್ಳಲಿಲ್ಲ. ಶ್ರೀಕಂಠುವೆ ಮೋಸಮಾಡಿ ಅಕ್ಕನನ್ನು ಈ ಅಪಮಾನಕ್ಕೆ ಗುರಿಪಡಿಸಿದ್ದಾನೆಂದೇ ಅವರ ನಂಬಿಕೆ. ಶ್ರೀದೇವಮ್ಮನೂ ಆ ನಂಬಿಕೆಗೆ ಪುಷ್ಟಿಕೊಟ್ಟಿದ್ದರು. ಹಾಗಾಗಿ ಅವರಲ್ಲಿ ರಂಗಮ್ಮ ಇರಿಸಿದ್ದ ವಿಶ್ವಾಸವು ಕುಂದಿರಲಿಲ್ಲ.

ಆ ಘಟನೆ ನಡೆದ ಮೇಲೆ ಅನೇಕ ಬಾರಿ ಬಂದು ಹೋಗಿದ್ದರು. ರಂಗಮ್ಮನೂ ಗೌರವದಿಂದ ಕಂಡಿದ್ದರು. ಇತ್ತೀಚೆಗೆ ಯಾವ ಕಾರಣದಿಂದಲೊ ಬರುವುದನ್ನು ಥಟ್ಟನೆ ನಿಲ್ಲಿಸಿದ್ದರು. ಇಂದು ಅವರಾಗಿಯೆ ಬರಹೇಳಿ ಕಳುಹಿಸಿದ್ದಾರೆ. ರಂಗಮ್ಮನಿಗೂ ಹೋಗಬೇಕೆಂಬಾಶೆ. ಶಕುಂತಳೆಯೊಬ್ಬಳನ್ನೆ ಬಿಟ್ಟು ಹೋಗಲು ಮನಸ್ಸೊಪ್ಪಲಿಲ್ಲ. ಕಡೆಗೆ ಗೀತೆಗೇ ಮಣಿದರು. ಅಭ್ಯಾಸಬಲ

ದಿಂದ ಹದಿನೈದನೆಯ ಅಧ್ಯಾಯವನ್ನು ಕಣ್ಣುಮುಚ್ಚಿ ಬಿಡುವುದರಲ್ಲಿ ಬೆರಳುಗಳು ತೆರೆದುಕೊಟ್ಟುವು.

ಓದುತ್ತಿರುವ ಭಾಗ, ಮನಸ್ಸಿಗೆ ಬಹಳ ಹಿಡಿದಿತ್ತು. ಅದರಲ್ಲಿ ಐದನೆಯ ಶ್ಲೋಕವನ್ನು ಹತ್ತು ಬಾರಿ ಓದಿ ಆನಂದಿಸಿದರು. ಅಭಿಮಾನ-ಮೋಹವನ್ನು ತೊರೆದವರು, ಸಂಗದೋಷವನ್ನು ಗೆದ್ದವರು, ಪರಮಾತ್ಮ ಚಿಂತನೆಯಲ್ಲಿ ತನ್ಮಯರಾದವರು; ವಿಷಯ ಸುಖಗಳನ್ನು ಸುಟ್ಟು ಹೊರಟವರು, ಸುಖ-ದುಃಖಗಳ ಹೋರಾಟದಿಂದ ವಿಮುಕ್ತರಾದವರು, ಇವರೆಲ್ಲ ಅನಂತವಾದ ಪರಮ ಪದವನ್ನು ಸೇರುತ್ತಾರೆ—ಇದೇ ಆ ಶ್ಲೋಕದ ತಿರುಳು. ಈ ಅರ್ಥವನ್ನು ತಮ್ಮ ಜೀವನಕ್ಕೆ ಹೋಲಿಸಿ ನೋಡಿದರು. ಅದರಲ್ಲಿ ಹೇಳಿದ್ದ ಒಂದೆರಡು ಗುಣಗಳು ತಮ್ಮಲ್ಲಿಯೂ ತಲೆಯಿಕ್ಕಿದ್ದುವು.

ನಿಜವಾಗಿ ರಂಗಮ್ಮ ಕಷ್ಟಕ್ಕೆ ಕಣ್ಣೀರಿಡುತ್ತಿರಲಿಲ್ಲ. ಸುಖಕ್ಕೆ ಸೋಲು ಬೀಳುತ್ತಿರಲಿಲ್ಲ. ಭಗವಂತನ ಇಚ್ಛೆಯಂತೆ ಪ್ರಪಂಚ ನಡೆಯುತ್ತದೆ ಎನ್ನುವ ನಂಬಿಕೆ ಅವರನ್ನು ಕಷ್ಟಸುಖದಲ್ಲಿ ಸಮನಾಗಿ ನಡೆಸಿತ್ತು. ನನ್ನದು ತನ್ನದೆಂಬ ಮೋಹವನ್ನು ದಿನೇ ದಿನೇ ತೊರೆಯುತ್ತಾ ಬಂದಿದ್ದರು. ಪರಿಶುದ್ಧವಾದ ತುಂಬಿದ ಬಾಳಿಗೆ, ಅವರು ಆಚರಿಸಬೇಕಾದ ನಿಯಮಗಳು ಇನ್ನೂ ಹಲವಾರು—ನಾ ಮುಂದು, ನಾ ಮುಂದೆಂದು ಕೈಚಾಚಿ ಬರುತ್ತಿದ್ದುವು. ರಂಗಮ್ಮನವರು ಚೈತನ್ಯ ಸಾಲದೆ ಹಿಮ್ಮೆಟ್ಟುತ್ತಿದ್ದರು. ಆದರೂ ಆ ಬಾಳಿನಲ್ಲಿ ಬೆಳಕಿತ್ತು. ತಮ್ಮಿಂದ ಸಾಧ್ಯವಿದ್ದಷ್ಟು ಬಾಳನ್ನು ಶುದ್ಧವಾಗಿಡುತ್ತಿದ್ದರು.

ಏಕೊ ಅವರ ಮನಸ್ಸು ಇಂದು ಇಪ್ಪತ್ತೈದು ವರ್ಷದ ಹಿಂದಿನ ಬಾಳನ್ನು ಬೆದಕಿತು. ತಮ್ಮ ತಾಯಿ ವಿದ್ಯೆಯಿಲ್ಲದಿದ್ದರೂ ತಮ್ಮನ್ನು ಆದರ್ಶವಾದ ಬಾಳಿಗೆ ಯೋಗ್ಯವಾಗುವಂತೆ ತಿದ್ದಿದ್ದರು. ತಾಯಿಯ ತಿದ್ದಾಣಿಕೆಯಿಂದ ಅವರ ಹೃದಯ ಸಂಸ್ಕಾರ ಹೊಂದಿ ಬಾಳು ಬೆಳ್ಳಿಯಂತಾಗಿತ್ತು.

ಸುಂದರ ಬದುಕಿಗೆ ತಳಹದಿ ಹಾಕಿಕೊಟ್ಟ ತಾಯಿಯ ಮರಣ ವಾರ್ತೆ ರಂಗಮ್ಮನ ಚೈತನ್ಯವನ್ನು ಉಡುಗಿಸಿತು. ಬಿರುಗಾಳಿಗೆ ಸಿಕ್ಕ ಬಳ್ಳಿಯಂತೆ ದುಃಖದಿಂದ ತತ್ತರಿಸಿ ಹೋದರು. ಅತ್ತು ಅತ್ತು ಕಣ್ಣುಗಳು ಶಕ್ತಿಗುಂದಿದುವು. ನಾಲಗೆ ದಡ್ಡುಕಟ್ಟಿದ್ದರಿಂದ ಅನ್ನ-ಆಹಾರ ಕಟ್ಟ ಹೋಯಿತು. ನಿದ್ದೆ-ಕಣ್ಣಲ್ಲಿ ಹಣಿಕಿ ನೋಡಿದ ಶಾಸ್ತ್ರದಂತೆ ದೂರವಾಗುತ್ತಿತ್ತು. ದೇಹ ಕೃಶವಾಯಿತು.

ಬುದ್ಧಿ ಮಂದಗತಿಗೆ ಬಂತು. ಮನೆಯ ವಹಿವಾಟನ್ನು ಯಜಮಾನರ ಮೇಲೆ ಹಾಕಿ ಹಾಸಿಗೆ ಹಿಡಿದರು.

ರಂಗಮ್ಮನ ಯಜಮಾನರು—ಲಚ್ಚಪ್ಪ ಹೆದರಿದರು. ಅವರಲ್ಲಿ ರಂಗಮ್ಮನ ತಲೆ ಕೆಡಬಹುದೆಂಬ ಭೀತಿ ತಲೆಯಿಕ್ಕಿ ವೈದ್ಯರ ಬಳಿ ಅಟ್ಟಿತು. ವೈದ್ಯರ ಸಲಹೆಯಂತೆ ತಮ್ಮನಿಗೆ ಮನೆಯ ವಹಿವಾಟನ್ನು ವಹಿಸಿ ಅವರನ್ನು ತೀರ್ಥ ಕ್ಷೇತ್ರಗಳಿಗೆ ಕರೆದೊಯ್ದರು.

ಹವಾ ಬದಲಾವಣೆಯಿಂದಲೂ, ಉತ್ತಮ ಕ್ಷೇತ್ರಗಳ ಸಂದರ್ಶನದಿಂದಲೂ ರಂಗಮ್ಮ ಸುಧಾರಿಸಿದರು. ಮನೆಗೆ ಬಂದ ಮೇಲೆ ಲಚ್ಚಪ್ಪ ಗೀತೆಯನ್ನು ಅವರ ಕೈಗಿತ್ತು, ಮೇಲೆ ಹೇಳಿದ ಶ್ಲೋಕವನ್ನು ಹತ್ತುಬಾರಿ ಅವರಿಂದ ಓದಿಸಿ ಅರ್ಥವನ್ನು ಮನನ ಮಾಡಿಸಿದರು. ಅಂದಿನಿಂದ ಗೀತೆ ಕೈದೀವಿಗೆಯಂತೆ ಅದರ ಬಾಳಿಗೆ ಬೆಳಕನ್ನು ಹಿಡಿಯಿತು.

ಇಂದು ಅದೇ ಶ್ಲೋಕವನ್ನು ಮತ್ತೆ ಓದಿ ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಸಂಗಡ ತಮ್ಮನ್ನು ಮನುಷ್ಯರನ್ನಾಗಿ ಮಾಡಿದ ತಾಯಿ—ಗಂಡನಿಗೆ ಭಕ್ತಿಯ ಬಾಷ್ಪಾಂಜಲಿ ಸಲ್ಲಿಸಿ ಗೀತೆಯ ಅರ್ಥವನ್ನು ಸಾರ್ಥಕಪಡಿಸಿದ್ದಾರೆ.

ಅಧ್ಯಾಯ ಓದಿ ಮುಗಿಯುತ್ತಾ ಬಂದಿತು ಕಾಫಿ ಒಲೆಗೆ ಬೆಂಕಿಯಿಡಲೆಂದು ಓದಿದ ಭಾಗಕ್ಕೆ ಗುರುತಿಟ್ಟು ಎದ್ದರು. ಸಮಯಕ್ಕೆ ಸರಿಯಾಗಿ ಹೇಳಿ ಕರೆಸಿಕೊಂಡಂತೆ ರಾಮಭಟ್ಟರ ಸವಾರಿ ಹಾಜರಾಯಿತು. ಚಾಪೆ ಹಾಕಿ ಅವರನ್ನು ಕೂರಿಸಿ ಒಲೆ ಹಚ್ಚಲು ಹೋದರು.

ಭಟ್ಟರು ಈದಿನ ಒಂದು ಹೊಸ ಸುದ್ದಿಯನ್ನು ತಂದಿದ್ದರು. ಆ ಸುದ್ದಿಯಿಂದ ರಂಗಮ್ಮನಿಗೆ ಬೇಸರವಾಗಬಹುದೆಂದೆನಿಸಿದ್ದರೂ, ಕುಟುಂಬದ ಹಿತದೃಷ್ಟಿಯಿಂದ ಅದನ್ನು ಗಣನೆಗೆ ತರದೆ ತಿಳಿಸುವುದೊಳ್ಳೆಯದೆಂದು ಗಟ್ಟಿಮನಸ್ಸು ಮಾಡಿ ಬಂದಿದ್ದರು.

ಅವರ ಮನಸ್ಸು ಗೋಪಿಯ ನಡುವಳಿಕೆಯಿಂದ ಬೇಸತ್ತು ಹೋಗಿತ್ತು; ಸಂಗಡ ಸಿಟ್ಟಿನ ಹೊದಿಕೆಯನ್ನೂ ಹೊದ್ದಿತ್ತು. ಲಚ್ಚಪ್ಪನಲ್ಲಿ ಕೊಟ್ಟ ವಾಗ್ದಾನ, ಸೂರಪ್ಪನಲ್ಲಿ ಕೊಟ್ಟ ಭರವಸೆ, ಶಾಂತಳ ಬಗ್ಗೆ ತಾವು ಹೊತ್ತ ಹೊಣೆಗಾರಿಕೆ ಹೆದರಿಸುತ್ತಿ ನಿಂತವು.

ಭಟ್ಟರು ಗಂಟಲು ಸರಿಪಡಿಸಿಕೊಂಡರು. ಮೂಗಿಗೆ ನಶ್ಯ ಏರಿಸಿದರು. ಸಡಿಲವಾದ ಜುಟ್ಟನ್ನು ಗಟ್ಟಿಯಾಗಿ ಎಳೆದು ಕಟ್ಟಿದರು. ಹಿಂದಕ್ಕೂ ಮುಂದಕ್ಕೂ ಒಂದೆರಡು ಬಾರಿ ತಲೆಯಾಡಿಸಿದರು. ಕಾಲ ಮೇಲೆ ಕಾಲೆಳೆದು ಪದ್ಮಾಸನ ಹಾಕಿ ಬಲಗಾಲ ಹೆಬ್ಬೆಟ್ಟಿನ ಉಗುರಿನ ಮೇಲೆ ಜಿಗುಟಾಟ ನಡೆಸಿದರು. ಏನು ಮಾಡಿದರೂ ಮನಸ್ಸು ಸಮಾಧಾನಕ್ಕೆ ಬರಲಿಲ್ಲ. ರಂಗಮ್ಮ ಬಿಸಿ ಬಿಸಿಯಾಗಿ ಫಲಾಹಾರ ತಂದಿಟ್ಟು ಮಾತಿಗೆ ಕುಳಿತರು. ಕಾಫಿ ಸೇವನೆಯಾದ ಮೇಲೆ ಭಟ್ಟರ ಮನಸ್ಸು ಸ್ವಲ್ಪ ಸಮಾಧಾನಕ್ಕೆ ಬಂದಿತು.

ಮೌನ ಅಸಹನೀಯವಾಗಿ ರಂಗಮ್ಮನೆ ಮಾತಿಗೆ ಮೊದಲಿಟ್ಟರು.

"ಮನೆಯಲ್ಲಿ ಎಲ್ಲರೂ ಕ್ಷೇಮ ತಾನೆ ?"

"ಎಲ್ಲರೂ ಚೆನ್ನಾಗಿದ್ದಾರೆ. ಈ ದಿನ ಸೂರಪ್ಪನಿಂದಲೂ ಕಾಗದ ಬಂದಿತು. ಅವರಂತೂ ನಿಮ್ಮನ್ನು ತುಂಬಾ ಕೊಂಡಾಡಿ ಬರೆದಿದ್ದಾರೆ. ಶಾಂತ ನಿಮ್ಮಲ್ಲಿ ತಂದೆ ತಾಯಿಗಿಂತ ಹೆಚ್ಚಿನ ಪ್ರೀತ್ಯಾದರವನ್ನು ಸಂಪಾದಿಸಿಕೊಂಡಿ ದ್ದಾಳಂತೆ. ಅವಳಿಗೆ ಯಾವಾಗಲೂ ನಿಮ್ಮದೇ ಹಂಬಲವೆಂದು ಬರೆದಿದ್ದಾರೆ. ಇಷ್ಟರಲ್ಲೇ ನಿಷೇಕಕ್ಕೆ ನಿಶ್ಚಯಿಸಬಹುದೆಂದು ತೋರುತ್ತದೆ. ನಾಳೆ–ನಾಡಿದ್ದರಲ್ಲಿ ನಿಮಗೂ ಕಾಗದ ಬರಬಹುದು."

"ಮಾಡಲಿ, ಆದಷ್ಟು ಬೇಗ ಹುಡುಗಿ ಮನೆಗೆ ಬಂದರೆ ಒಳ್ಳೆಯದು. ನನಗೂ ಅವಳನ್ನು ಬಿಟ್ಟಿರುವುದೆ ಕಷ್ಟವಾಗಿದೆ. ಅದೇನು ಮಾಟ ಮಾಡಿ ಹೋಗಿ ದ್ದಾಳೊ ಮಾರಾಯಗಿತ್ತಿ, ದೇವರಿಗೇ ಗೊತ್ತು."

"ಭೇಷ್–ಪರವಾಯಿಲ್ಲ. ಬಂದ ಮೂರು ತಿಂಗಳಲ್ಲೇ ಇಷ್ಟು ಹೊಂದಾ ಣಿಕೆಯೆಂದರೆ ಆಶ್ಚರ್ಯವೇ ಸರಿ. ಭಗವಂತ ನಿಮ್ಮಿಬ್ಬರ ಪ್ರೀತಿ ವಿಶ್ವಾಸ ಗಳನ್ನು ಹೀಗೇ ಅಭಿವೃದ್ಧಿ ಪಡಿಸಲಿ ತಾಯಿ ! ಶಾಂತ ನೆಮ್ಮದಿಯಾಗಿರಲಿ."

"ಹೌದು ಭಟ್ಟರೆ, ನನ್ನ ಅಭಿಲಾಷೆಯೂ ಅದೆ. ನನ್ನಿಂದಾದಷ್ಟು ಮಟ್ಟಿಗೆ ಶಾಂತಳ ಮನಸ್ಸು ನೋಯದಂತೆ ನಡೆದುಕೊಳ್ಳುತ್ತೇನೆ. ನಮ್ಮ ಮನೆ ಯನ್ನು ಬೆಳಗಲು ಬಂದ ಆ ಹೆಣ್ಣುಮಗಳು ಉಸ್ಸೆಂದರೆ ನಮ್ಮ ಬಾಳು ನರಕ ವಾದೀತು."

"ಯೋಗ್ಯತೆಗೆ ತಕ್ಕ ಮಾತಾಡಿರಿ. ನೀವು ತುಂಬಿದ ಕೊಡ. ಸಂಪತ್ತು, ಸಂಸ್ಕೃತಿ, ತಿಳುವಳಿಕೆ ಯಾವುದರಲ್ಲೂ ಬಿಟ್ಟು ಕೊಡುವಂತಿಲ್ಲ. ನಿಜವಾಗೂ

ಶಾಂತ ಪುಣ್ಯವಂತಳು. ನಿಮ್ಮಂಥ ಅತ್ತೆಯನ್ನು ಪಡೆಯಲು ಏಳು ಜನ್ಮದ ತಪಸ್ಸಿನ ಫಲವಿರಬೇಕು."

"ಬಹಳ ದೊಡ್ಡ ಮಾತಾಯಿತು ಅದು. ನನ್ನಲ್ಲಿ ಅಷ್ಟು ಯೋಗ್ಯತೆ ಇಲ್ಲವೂ ಇಲ್ಲ."

ಅಷ್ಟರಲ್ಲಿ ಶಕುಂತಳೆ 'ಅಮ್ಮಾ' ಎಂದು ಕೂಗು ಹಾಕಿ ಅವರಿಬ್ಬರ ಮಾತನ್ನು ಮಧ್ಯದಲ್ಲೆ ಮುರಿದಳು.

"ಈಗ ಬಂದೆ" ಎಂದು ಎದ್ದು ರಂಗಮ್ಮ ಮಗಳ ಬಳಿ ಬಂದು "ಕರೆದದ್ದು ಯಾಕೆ ?" ಎಂದು ಕೇಳಿದರು.

"ಭಟ್ಟರು ಬಂದಿದ್ದಾರೆಂದು ಕಾಣುತ್ತೆ. ಅವರಿಗೆ ಹೇಳಿ ವಿಶಾಲಾಕ್ಷಮ್ಮನನ್ನು ನಾಲ್ಕು ದಿನದ ಮಟ್ಟಿಗೆ ಕರೆಸಿಟ್ಟುಕೊಳ್ಳಮ್ಮ; ನಿನಗೂ ಸ್ವಲ್ಪ ಹಗುರವಾಗುತ್ತೆ."

"ಹಾಗೆ ಮಾಡುವುದೆ ಸರಿಯೆಂದು ತೋರುತ್ತೆ. ನನಗೂ ಯಾಕೊ ಎರಡು ದಿನದಿಂದ ಬಂದ ತಲೆನೋವು ಬಿಡುತ್ತಿಲ್ಲ."

"ಇಷ್ಟು ಕೆಲಸ ಒಬ್ಬಳೆ ಮಾಡಿದರೆ ಇನ್ನೇನಾಗುತ್ತೆ ! ಅವರನ್ನು ಇಂದೆ ಬರಹೇಳಿ ಕಳುಹಿಸು; ಮೀನಮೇಷ ಮಾಡಬೇಡ."

"ಆಗಲಿ–ಹಾಗೇ ಮಾಡುವೆನು" ಎಂದು ರಂಗಮ್ಮ ಮತ್ತೆ ಬಂದು ಭಟ್ಟರೊಡನೆ ಮಾತಿಗೆ ಕೂತರು.

ಶಕುಂತಳೆಯ ಕರೆಯಿಂದ ನೆಮ್ಮದಿ ತಪ್ಪಿದ್ದ ಭಟ್ಟರು ಥಟ್ಟನೆ ಕೇಳಿದರು.

"ಯಾಕಮ್ಮ, ಶಕುಂತಳ ಹುಷಾರಾಗಿದ್ದಾಳೊ ಇಲ್ಲವೊ !"

"ಹುಷಾರಿಲ್ಲದೆ ಏನು ! ಮನೆಯಲ್ಲಿ ನಾನೊಬ್ಬಳೆ ಇರುವೆನಲ್ಲಾ–ಅದು ಅವಳಿಗೆ ಮುಚಿಗರ. ನಾಲ್ಕು ದಿನದ ಮಟ್ಟಿಗೆ ನಿಮಗೆ ತಿಳಿಸಿ ವಿಶಾಲಾಕ್ಷಮ್ಮನನ್ನು ಕರೆಸಿಟ್ಟುಕೊಳ್ಳಬೇಕೆಂದು ಹೇಳಲು ಕರೆದಿದ್ದಳು."

"ಅದಕ್ಕೇನಮ್ಮ, ಅಗತ್ಯವಾಗಿ ಕಳುಹಿಸುವೆನು. ಲಚ್ಚಪ್ಪ ಮಾಡಿದ ಉಪಕಾರಕ್ಕೆ ಜನ್ಮ ಸವೆಸಿದರೂ ಸಾಲದು."

"ಅದು ನಿಮ್ಮ ವಿಶ್ವಾಸ ಭಟ್ಟರೆ. ಯಜಮಾನರು ತೋರಿದ ಮಾನವ ಧರ್ಮಕ್ಕೆ ನೀವು ಕೊಡುತ್ತಿರುವ ಬೆಲೆ ಹೆಚ್ಚಿನದೆಂದೆ ಹೇಳಬೇಕು."

ವಿಶಾಲಾಕ್ಷಮ್ಮನನ್ನು ಕಳುಹಿಸಿ ಕೊಡುವ ವಿಚಾರವನ್ನು ತೂಗಿ ನೋಡುತ್ತಿದ್ದ ಭಟ್ಟರು ರಂಗಮ್ಮನ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಕೇಳಿದರು.

"ಶಕುಂತಳ ಹಡೆದು ಇಂದಿಗೆ ಏಳು ದಿನವಾಯಿತಲ್ಲವೆ ?"

"ಹೌದು."

"ಸರಿ; ನಾನು ಮನೆಗೆ ಹೋದವನೆ ವಿಶಾಲಾಕ್ಷಿಯನ್ನು ಕಳುಹಿಸಿಕೊಡುತ್ತೀನೆ. ಚೊಚ್ಚಿಲಮಗು ಅಂದ ಮೇಲೆ ಹಾಡು—ಹಸೆ ಇದ್ದೇ ಇದೆ."

"ಅಷ್ಟು ಮಾಡಿ ಭಟ್ಟರೆ, ನನಗೂ ಯಾಕೊ ಎರಡು ದಿನದಿಂದ ಮೈಯಲ್ಲಿ ಹುಷಾರಿಲ್ಲ."

"ಯಾಕಮ್ಮ ಹಾಗಾಯಿತು! ಕೆಲಸದ ಅಗಚಾಟಲು ಹೆಚ್ಚಾಯಿತೆಂದು ತೋರುತ್ತೆ. ಸ್ವಲ್ಪ ಹುಷಾರಾಗಿರಿ, ಅಮ್ಮ. ನಿಮ್ಮಿಂದಲೆ ಈ ಮನೆಯ ಮಾನ—ಮರ್ಯಾದೆ, ಸುಖ—ಸಂಪತ್ತು ಎಲ್ಲ ಉಳಿಯಬೇಕಾಗಿದೆ."

"ನನ್ನದು ಯಾವ ಲೆಕ್ಕ ಬಿಡಿ—ಹೆಣ್ಣು ಹೆಂಗಸು; ವಯಸ್ಸು ಆಗಿದೆ. ಗಂಡುಮಕ್ಕಳಿದ್ದಾರಲ್ಲಾ ಹೇಗೂ—ಮನೆತನದ ಮರ್ಯಾದೆ ಉಳಿಸಿಕೊಳ್ಳುತ್ತಾರೆ."

"ನೋಡಿದಿರಾ; ಅದೇ ನೀವು ತಪ್ಪು ತಿಳಿದುಕೊಂಡಿರುವುದು. ಈಗಿನ ಕಾಲದ ಗಂಡು ಮಕ್ಕಳನ್ನು ನೆಚ್ಚಿದರೆ ತಲೆಯ ಮೇಲೆ ಗುಂಡುಕಲ್ಲೆ ಸರಿ!"

"ಹಾಗೇನಿಲ್ಲ; ಯಾಕೆ, ನಮ್ಮ ನಾಣಿ—ಗೋಪಿ ಏನಾಗಿದ್ದಾರೆ? ಮನೆಯ ವಹಿವಾಟನ್ನು ಸರಿಯಾಗಿ ತೂಗಿಸಿಕೊಂಡು ಹೋಗುತ್ತಿದ್ದಾರಲ್ಲ!"

"ಹೌದು ಹೌದು, ಸರಿಯಾಗೇ ತೂಗಿಸಿಕೊಂಡು ಹೋಗುತ್ತಿದ್ದಾರೆ. ಆ ವಿಷಯವನ್ನು ತಿಳಿಸಲೆಂದೆ ನಾನಿಂದು ಬಂದದ್ದು." ಧ್ವನಿಯಲ್ಲಿ ವ್ಯಂಗವಿತ್ತು.

"ಅಂದರೆ....ನಮ್ಮ ನಾಣಿ....ಗೋಪಿ....!"

"ಹೌದು, ನಿಮ್ಮ ಗೋಪಿ ಒಂದು ಮುತ್ಠಾಳ ಕೆಲಸ ಮಾಡಿದ್ದಾನೆ. ಕೃಷ್ಣಶೆಟ್ಟರ ಹತ್ತಿರ ತನ್ನ ಸೆಕ್ಯೂರಿಟಿಯಿತ್ತು, ಸೀತಾರಾಮನಿಗೆ ಐದು ಸಾವಿರ ರೂಪಾಯಿ ಸಾಲ ಕೊಡಿಸಿದ್ದಾನೆ. ಈ ಕೆಲಸ ಮಾಡಿ ಆಗಲೆ ಎರಡು ವರ್ಷವಾಯಿತು. ಯಾರಿಗಾದರೂ ಪತ್ತೆ ಕೊಟ್ಟಿದ್ದಾನೇನು! ನಮ್ಮ ಹುಡುಗನ ಸ್ನೇಹಿತನೊಬ್ಬ ಅವನ ಅಚ್ಚುಮೆಚ್ಚಿನ ಗೆಳೆಯ. ಹಾಗಾಗಿ ನನಗೆ ವಿಷಯ ತಿಳಿಯಿತು. ಹಣ ತೆಗೆದುಕೊಂಡ ಲಾಗಾಯಿತು ಬಡ್ಡಿ ಸಹ ಕಟ್ಟಿಲ್ಲವಂತೆ

ಇವನಿನ್ನು ಆ ತರಲೆಯಿಂದ ಬಿಡಿಸಿಕೊಂಡಂತೆಯೆ ಇದೆ. ಅವನೊಬ್ಬ ಹಲಾಲ ಟೋಪಿ. ಹೀಗೆ ಮಾಡಿ ಎರಡು ಸಂಸಾರ ಹಾಳು ಮಾಡಿದ. ಈಗ ಮೂರನೆಯ ಸಂಸಾರಕ್ಕೆ ಕಾಲಿರಿಸಿದ್ದಾನೆ."

ಶ್ರೀದೇವಮ್ಮನ ಸಂಪತ್ತನ್ನು ಕಣ್ಣಾರೆ ಕಂಡಿದ್ದ ರಂಗಮ್ಮ ಭಟ್ಟರ ಮಾತನ್ನು ಥಟ್ಟನೆ ಒಪ್ಪಿಕೊಳ್ಳಲಾರದೆ ಕೇಳಿದರು,

"ಇದು ನಿಜವೆ ಭಟ್ಟರೆ ? ನನಗೇನೊ ಸುಳ್ಳೆಂದು ತೋರುತ್ತೆ. ಹಾಗೆ ಮಾಡಲು ಅವರಿಗೇನು ಕಡಿಮೆ ಇದೆ? ತಕ್ಕಮಟ್ಟಿಗೆ ಅನುಕೂಲವಾಗೇ ಇದ್ದಾರಲ್ಲಾ !"

"ನಿಮ್ಮ ಮಕ್ಕಳಂತೆ ಮಾಡಿದ್ದಕ್ಕೆ ತಲೆ ಕೊಡುವವರಿದ್ದರೆ ನಾವೂ ನಾಳೆ ದಿನ ಶ್ರೀಮಂತರಾಗಬಹುದಮ್ಮ. ಆದರೆ ಅದು ಬಹಳ ದಿನ ಬದುಕುವುದಿಲ್ಲ. ಈ ಮಾತು ಸದ್ಯದಲ್ಲೆ ಸೀತಾರಾಮುವಿನಲ್ಲಿ ಸತ್ಯವಾಗದಿದ್ದರೆ ನನ್ನ ಹೆಸರನ್ನು ಬದಲಿಸಿ ಬಿಡಿ."

"ಅವರು ಇಂಥ ಜನವೆಂದು ನನಗೆ ಗೊತ್ತಿರಲಿಲ್ಲ. ಊರೆಲ್ಲಾ ಅವರ ಮೇಲೆ ಏನೇನೋ ಹೇಳುತ್ತಾರೆ; ನಾನು ನಂಬಿರಲಿಲ್ಲ. ಹಿಂದೆ ಆ ಸಂನ್ಯಾಸಿಯ ಪ್ರಕರಣವಾದಾಗಲೂ ತಮ್ಮನ ಮೋಸದಿಂದಲೆ ಆ ಅಪಮಾನಕ್ಕೆ ಗುರಿಯಾದರೆಂದು ಭಾವಿಸಿದ್ದೆ. ಇನ್ನು ಮೇಲೆ ಅವರ ವಿಷಯದಲ್ಲಿ ಎಚ್ಚರಿಕೆಯಾಗಿರಲೆ ಬೇಕಾಯಿತು."

"ಊರವರ ಮಾತು ಬಿಡಿ—ನೂರಕ್ಕೆ ತೊಂಬತ್ತು ಜನ ಇಲ್ಲದ್ದನ್ನು ಹುಟ್ಟಿಸುವವರು. ಜನರ ಮಾತಿಗೆ ಬೆಲೆ ಕೊಡುವುದೂ ತಪ್ಪು. ಆದರೆ ಈ ವಿಷಯ ಹಾಗಲ್ಲ. ಅವರ ಮೋಸದ ಬಾಳನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಅವರ ವಿಷಯದಲ್ಲಿ ಎಚ್ಚರಿಕೆಯಾಗಿದ್ದಷ್ಟೂ ಒಳ್ಳೆಯದು."

"ಬಡ್ಡಿ ಕಟ್ಟದೆ ನಿಲ್ಲಿಸಿಕೊಂಡಿರುವ ವಿಷಯ ಗೋಪಿಗೆ ಗೊತ್ತಿಲ್ಲವೆ ?"

"ಸರಿ. ಅವನೊಬ್ಬ ಭೋಳೆ ಶಂಕರ. ಮೋಸ ಬೀಳುವುದರಲ್ಲಿ ಒಂದನೆ ನಂಬರು."

"ಈಗೇನು ಮಾಡುವುದು ? ನನಗಂತೂ ಏನೂ ತೋಚುತ್ತಿಲ್ಲ."

"ಗಾಬರಿ ಬೀಳಬೇಡಿ. ಆ ಪತ್ರಕ್ಕೆ ಇನ್ನೂ ಒಂದು ವರ್ಷ ವಾಯಿದೆಯಿದೆ. ಅಷ್ಟರಲ್ಲಿ ನಾನೂ—ನಾಣಿ ಇಬ್ಬರೂ ಸೇರಿ ಹೆಕ್ಕತ್ತಿನ ಮೇಲೆ ಕೂತು

ಸೀತಾರಾಮು ಸಾಲ ತೀರಿಸುವಂತೆ ಮಾಡುತ್ತೇವೆ. ನೀವು ಮಾತ್ರ ಇನ್ನು ಮುಂದೆ ಗೋಪಿ ಈ ಬಗೆಯ ವ್ಯವಹಾರಕ್ಕೆ ಕೈಹಚ್ಚದಂತೆ ಆಸ್ತಿಗೊಂದು ವ್ಯವಸ್ಥೆ ಮಾಡಿ. ಎಲ್ಲ ಸರಿ ಹೋಗುತ್ತದೆ."

"ಆ ಕೆಲಸ ಆದಷ್ಟು ಬೇಗ ಮಾಡುವೆನು; ಇಲ್ಲದಿದ್ದರೆ ಅಣ್ಣ-ತಮ್ಮ ಮಂಡೆ ಒಡೆಸಿಕೊಂಡು ಮೂರು ದಿನದಲ್ಲಿ ಮಣ್ಣಾಗುವರು. ನಿಮಗೆ ನೆರಪಿರಬಹುದು. ಹಿಂದೆ ಒಂದು ಬಾರಿ ಕೃಷ್ಣಪ್ಪನೆಂಬವನು ಸ್ನೇಹದ ಮೇಲೆ ಗೋಪಿಯಿಂದ ಎರಡು ಸಾವಿರ ರೂಪಾಯಿಗಳನ್ನು ಸಾಲವಾಗಿ ಪಡೆದು ತೀರಿಸಲಾರದೆ ತಲೆ ಮರೆಸಿಕೊಂಡಾಗ ಅಣ್ಣ–ತಮ್ಮಂದಿರಿಗೆ ಆ ವಿಷಯವಾಗಿ ಕಾದಾಟ ನಡೆದದ್ದು. ಆ ಪರಿಸ್ಥಿತಿಯನ್ನು ಹದಕ್ಕೆ ತರಲು ನಾನು ಪಟ್ಟ ಪಾಡು ಆ ದೇವರಿಗೆ ಗೊತ್ತು. ಈಗ ಮತ್ತೆ ಅದರ ಪುನರಾವೃತ್ತಿ. ನನಗಂತೂ ಈ ಬಾಳಾಟ ಬೇಸರ ಬಂದಿದೆ."

"ನೀವೀಗ ಧೈರ್ಯಗೆಡಬಾರದು. ನಿಮ್ಮಿಂದಲ ಈ ಮನೆತನ ನಿಲ್ಲಬೇಕಾಗಿದೆ. ನಾನು ಹೇಳಿದಂತೆ ಉಳಿದದ್ದನ್ನಾದರೂ ಭದ್ರಪಡಿಸಿದರೆ ನೆಮ್ಮದಿಯನ್ನು ಕಾಣಬಹುದು. ಅದೋ ನಾಣಿಯೂ ಬಂದಂತಿದೆ. ಆದದ್ದು ಆಗಿ ಹೋಯಿತು; ಅಣ್ಣ–ತಮ್ಮನಿಗೆ ಕಾದಾಟವಾಗದಂತೆ ನೋಡಿಕೊಳ್ಳಿ. ಮಿಕ್ಕಿದ್ದು ನನಗಿರಲಿ........" ಎಂದು ಬಿಚ್ಚುತ್ತಿದ್ದ ಪಿಟೆಯನ್ನು ಭದ್ರವಾಗಿ ಎಳೆದು ಕಟ್ಟಿದರು.

ಅಷ್ಟರಲ್ಲಿ ನಾಣಿ ಅಂಗಳದಲ್ಲಿ ಕಾಲಿಟ್ಟನು. ಎಂದಿನಂತೆ ಗೆಲುವಿರಲಿಲ್ಲ ಮುಖದಲ್ಲಿ. ರುದ್ರಕಳೆ ದುಮು ದುಮು ಎನ್ನುತ್ತಿತ್ತು. ಕೋಪದ ರಂಗಿನ ಜತೆಗೆ ಬಿಸಿಲಿನ ತಾಪ ಸೇರಿ ಮುಖ ಕಡು ಕೆಂಪಾಗಿತ್ತು. ಅವನು ಬಿಡುತ್ತಿದ್ದ ಉಸಿರಿನ ರಭಸಕ್ಕೆ ಕಾಲ ಕೆಳಗಿದ್ದ ಧೂಳು ಪುಟಿದೇಳುತಿತ್ತು. ರುದ್ರಾವತಾರ ಮೂಡಿ ಬಂದಿದೆ ಎನ್ನಲು ಅವನ ಹೆಜ್ಜೆಯೂ ಸಾಕ್ಷಿಯಾಗಿತ್ತು. ಬಿರುಸು ಬಿರುಸಾಗಿ ಹೆಜ್ಜೆಯನ್ನು ಎಸೆಯುತ್ತಾ, ತೋಳುಗಳನ್ನು ಬೀಸುತ್ತಾ ಬಂದ ಅವನನ್ನು ಕಂಡು ಭಟ್ಟರು, ರಂಗಮ್ಮ ಇಬ್ಬರೂ ಹೆದರಿದರು.

ನಾಣಿ ಇಬ್ಬರ ಮುಖವನ್ನೂ ದುರುದುರು ನೋಡಿದ. ಗೋಪಿಯ ವಿಷಯ ಯಾರಿಂದಲೋ ಸೂಕ್ಷ್ಮವಾಗಿ ಅವನಿಗೂ ತಿಳಿದಿತ್ತು. ಇದನ್ನು ತಾಯಿಗೆ ತಿಳಿಸಿ ಈ ದಿನ ಏನಾದರೂ ಒಂದು ನಿರ್ಧಾರಕ್ಕೆ ಬರಬೇಕೆಂದು

ಬಂದಿದ್ದ. ಭಟ್ಟರಿದ್ದುದು ಅವನಿಗೆ ಮುಟ್ಟುಗೋಲು ಹಾಕಿದಂತಾಯಿತು. ಕೋಪವನ್ನು ನುಂಗಿಕೊಂಡು, ತುಟಿಯಲ್ಲಿ ಬಲವಂತದ ನಗೆಯನ್ನು ತಂದು ಮಾತನಾಡಿದ,

"ಕ್ಷಮಿಸಿ ಭಟ್ಟರೆ, ಯಾಕೊ ಈ ದಿನ ಬಿಸಿಲಿನಿಂದ ಬಂದವನಿಗೆ ತಲೆ ತಿರುಗಿ ಕಣ್ಣು ಕತ್ತಲಿಟ್ಟಂತಾಯಿತು. ಮನೆಯಲ್ಲಿ ಎಲ್ಲ ಕ್ಷೇಮ ತಾನೆ ? ತುಂಬಾ ದಿನವಾಯಿತು, ನೀವು ಮನೆಕಡೆ ಬಂದು !"

"ಹೌದಪ್ಪ, ಏನೊ ಹೊಟ್ಟೆಪಾಡಿದೆಯಲ್ಲಾ ಹೇಳು; ಬರಲು ಬಿಡುವಾಗಲೆ ಇಲ್ಲ. ನೀನಾದರೂ ಆ ಕಡೆ ಬರಬಹುದಿತ್ತು. ಹೋಗಲಿ, ಈಗ ನನ್ನ ಜತೆಯಲ್ಲಿ ಬಾ; ನಿನ್ನೊಡನೆ ಸ್ವಲ್ಪ ಮಾತನಾಡುವುದಿದೆ."

"ಈಗ ಆಗುವುದಿಲ್ಲ; ಅಂಗಡಿಯಲ್ಲಿ ಯಾರೂ ಇಲ್ಲ. ಎಂಟು ಗಂಟೆ ಹೊತ್ತಿಗೆ ನಿಮ್ಮಲ್ಲಿಗೆ ತಪ್ಪದೆ ಬರುತ್ತೇನೆ. ನನಗೂ ನಿಮ್ಮಲ್ಲಿ ಮಾತನಾಡುವುದು ಬಹಳವಿದೆ. ಅಷ್ಟು ದೂರ ಇಬ್ಬರೂ ಒಟ್ಟಿಗೆ ಹೋಗೋಣ; ಸ್ವಲ್ಪ ಹೊತ್ತು ಕುಳಿತುಕೊಳ್ಳಿ—ಬಂದೆ" ಎಂದು ಒಳಗಡೆ ಕಾಫಿ ಕುಡಿಯಲು ಹೋದ.

ರಂಗಮ್ಮ ಅವನನ್ನು ಹಿಂಬಾಲಿಸಿ ಉಪಚರಿಸಿದರು. ನಾಣಿ ತುಟಿ ಎರಡು ಮಾಡದೆ, ತಿಂಡಿ ತಿಂದು ಕೈತೊಳೆದು ಭಟ್ಟರನ್ನು ಕರೆದುಕೊಂಡು ಹೊರಬಿದ್ದನು.

## ೭

ಸೀತಾರಾಮು ಬೆಳ್ಳಗೆ, ದುಂಡಗೆ ಎತ್ತರವಾಗಿದ್ದು ನೋಡಲು ಸುಂದರವಾಗಿದ್ದಾನೆ. ಮುಖ ಮನಸ್ಸಿನ ಕನ್ನಡಿಯಹಚ್ಚು ಎಂಬ ನಾಣ್ನುಡಿ ಅವನಲ್ಲಿ ಸುಳ್ಳಾಗಿದೆ. ಅವನನ್ನು ನೋಡಿದವರು ಯಾರೂ ಕೆಟ್ಟವನೆಂದು ಹೇಳುತ್ತಿರಲಿಲ್ಲ. ಅನುಭವಿಸಿ ಅವನ ಅಂತರ್ಯವನ್ನು ತಿಳಿದುಕೊಳ್ಳಬೇಕಾಗಿತ್ತು. ಹೃದಯ ಮೋಸದ ಮನೆಯಾದವರೂ, ಕಣ್ಣು ಮರುಕದ ಬಣ್ಣದ ಕನ್ನಡಕ ಧರಿಸಿ ನಾಲಗೆ

ಸತ್ಯದ ಸೋಗಿನ ರಸತುಂಬಿ, ತಾವು ಮಾಡುವ ಮೋಸದ ಪರಿವೆಯುಂಟಾಗದಂತೆ ಮೋಡಿ ಮಾಡಿ, ಸ್ನೇಹ ಬಯಸಿ ಬಂದವರನ್ನು ರಸ ಹಿಂಡಿದ ಕಬ್ಬಿದಂತೆ ಮಾಡಿ ಎಸೆಯುತ್ತಿದ್ದುವು. ಅವನ ವಾಕ್ಚಾತುರ್ಯ, ಕಣ್ಣಿನ ಸೆಳೆತಕ್ಕೆ ಮಾರುಹೋಗಿ ಹಲವಾರು ಜನ ಅವನ ಮೋಸದ ಮಂಕರಿಗೆ ಬಿದ್ದು ಮಣ್ಣು ಮುಕ್ಕಿದ್ದರು.

ಈಗ ಅನಂತುವಿನ ಸರದಿ. ಅನಂತು ಆ ಊರಿನ ವಕೀಲ ಶ್ಯಾಮರಾಯರ ಅಳಿಯ. ಬೆಂಗಳೂರಿನಲ್ಲಿ ವಾಸ ಮಾಡುತ್ತಿದ್ದನು. ಲೇವಾದೇವಿಯೆ ಅವನ ಜೀವನದ ಮುಖ್ಯ ಕಸುಬಾಗಿತ್ತು.

ಶ್ಯಾಮರಾಯರು ಸೀತಾರಾಮುವಿನ ಖಾಸಾ ಲಾಯರು. ಅನಂತು ಸೀತಾರಾಮುವಿನ ಸಮವಯಸ್ಕ. ಮೋಡಿ ಮಾಡುವ ಮಾತಿನ ಲಹರಿಗೆ ಬಹಳ ಬೇಗ ಬಲಿಯಾಗುತ್ತಿದ್ದನು. ಹಾಗಾಗಿ ಪ್ರತಿ ದಿನ ಒಂದಲ್ಲ ಒಂದು ನೆಪದಲ್ಲಿ ಶ್ಯಾಮರಾಯರ ಹತ್ತಿರ ಹರಟೆ ಕೊಚ್ಚಲು ಬರುತ್ತಿದ್ದ ಸೀತಾರಾಮುವಿನೊಡನೆ ಅನಂತುವಿನ ಸ್ನೇಹವಾಯಿತು. ಇಬ್ಬರಲ್ಲೂ ಒಂದೊಂದು ಬಗೆಯ ಆಕರ್ಷಣೆ ಇದ್ದುದರಿಂದ ಸ್ವಲ್ಪ ದಿನದಲ್ಲೇ ಸ್ನೇಹವೂ ಗಾಢವಾಗಿ ಬೆಳೆಯಿತು. ಅನಂತು ಮಾವನ ಮನೆಗೆ ಬಂದಾಗಲೆಲ್ಲ ಸೀತಾರಾಮುವನ್ನು ಕಾಣದೆ ಹೋಗುತ್ತಿರಲಿಲ್ಲ. ಸೀತಾರಾಮುವೂ ಹಾಗೆ ಅವನು ಬಂದಾಗಲೆಲ್ಲ ತನ್ನ ಆದರಾತಿಥ್ಯಗಳಿಂದ ಮೈತ್ರಿಯನ್ನು ಭದ್ರಪಡಿಸಿಕೊಳ್ಳುವುದನ್ನು ಮರೆಯುತ್ತಿರಲಿಲ್ಲ.

ಅನಂತು ಈ ಬಾರಿ ಬಂದಾಗ, ಆ ಸ್ನೇಹದ ಬಳ್ಳಿ ಬಿಟ್ಟ ಹೂವಿನ ಬಣ್ಣ ತಿಳಿಯಿತು. ಸೀತಾರಾಮು ಅವನಲ್ಲಿ ಹತ್ತು ಸಾವಿರ ರೂಪಾಯಿಗಳ ಸಾಲ ಬೇಡಿದ್ದ. ಅನಂತು ಗೋಪಿಯಂತಲ್ಲ; ವ್ಯವಹಾರದಲ್ಲಿ ಬಹಳ ಗಟ್ಟಿಗ. ಎಷ್ಟೇ ಸ್ನೇಹವಿದ್ದರೂ ದುಡ್ಡಿನ ವಿಷಯದಲ್ಲಿ ತುಂಬಾ ಎಚ್ಚರಿಕೆಯಾಗಿರುತ್ತಿದ್ದ. ತಾನು ಹಣ ಕೊಡಬೇಕಾದಾಗೆಲ್ಲ, ಸಾಲ ತೆಗೆದುಕೊಳ್ಳುವವನು ಒತ್ತೆಯಾಗಿ ಇಡುವ ವಸ್ತುವಿನ ಹಿಂದು ಮುಂದನ್ನು ಕೂಲಂಕಷವಾಗಿ ವಿಚಾರಿಸಿ, ಎಲ್ಲ ವಿಷಯಗಳಿಗೆ ಸಮರ್ಪಕವಾಗಿ ಕಂಡುಬಂದರೆ ಮಾತ್ರ [illegible]. ಆ [illegible] ಸೀತಾರಾಮುವಿನ ಆ ಮಾತಿಗೆ ಥಟ್ಟನೆ ಉತ್ತರ ಕೊಡಲಿಲ್ಲ.

ಅನಂತುವಿಗೆ ಸೀತಾರಾಮುವಿನ ಮಧುರ ವಾಕ್ಚಾತುರ್ಯದ ಪರಿಚಯವಾಗಿತ್ತೆ ವಿನಹ, ವ್ಯವಹಾರದ ಪರಿಚಯವಾಗಿರಲಿಲ್ಲ. ಅವನ ಉಡಿಗೆ-ತೊಡಿಗೆ, ಮನೆಯಲ್ಲಿ ಉಪಯೋಗಿಸುತ್ತಿದ್ದ ಉಪಕರಣ, ಸಣ್ಣ-ಪುಟ್ಟ ವ್ಯವಹಾರಗಳಲ್ಲಿ ವ್ಯಯ ಮಾಡುತ್ತಿದ್ದ ಹಣದ ಕ್ರಮ,—ಇವುಗಳಿಂದ ಅವನೊಬ್ಬ ಶ್ರೀಮಂತನಿರಬಹುದೆಂದು ಊಹಿಸಿದ್ದ. ಅಷ್ಟು ಮಾತ್ರದಿಂದ ಸೀತಾರಾಮುವಿನೊಡನೆ ಅವನು ವ್ಯವಹರಿಸಲು ಸಿದ್ಧನಿರಲಿಲ್ಲ. ಅವನ ಕಸುಬು, ಆಸ್ತಿ-ಪಾಸ್ತಿಗಳ ಬಗ್ಗೆ ಅಕ್ಕಪಕ್ಕದವರಿಂದ ಸಮರ್ಪಕವಾದ ಉತ್ತರವನ್ನು ಪಡೆದ ಹೊರತು ಅದಕ್ಕೆ ಕೈಹಚ್ಚುವುದು ಸರಿಯಲ್ಲವೆಂದು ಮನಸ್ಸಿನಲ್ಲಿ ನಿರ್ಧರಿಸಿ, ನಾಲ್ಕು ದಿನದ ಅವಧಿ ಕೇಳಿ ಅಲ್ಲಿಂದ ಮೆಲ್ಲನೆ ಕಾಲು ಕಿತ್ತನು.

ಸೀತಾರಾಮುವಿಗೆ ಅನಂತುವಿನಲ್ಲಿ ಸಂಪೂರ್ಣ ಭರವಸೆಯಿತ್ತು. ತಾನು ಎರಚಿದ ಸ್ನೇಹದ ಮಂಕುಬೂದಿ ಅವನಲ್ಲಿ ಖಂಡಿತ ಕೆಲಸ ಮಾಡುವುದೆಂದು ನಂಬಿದ್ದ. ಆ ನಂಬಿಕೆಗೆ ಬಲಿಬಿದ್ದೇ ಐದು ಘಂಟೆಯಿಂದ ಅವನಿಗಾಗಿ ನಿಷದ್ ಬಾಗಿನಲ್ಲಿ ಕಾಯುತ್ತಾ ಕುಳಿತಿದ್ದ. ಅಂದು ಅವನ ನಿರ್ಧಾರ ತಿಳಿಯುವ ದಿನ. ಚಳಿಯಲ್ಲಿ ಮೈ ಮುರುಟಿ ಹೋಗುತ್ತಿದ್ದರೂ ಗಣನೆಗೆ ತಾರದೆ ದಾರಿ ಕಾಯುತ್ತಿದ್ದ. ಗಂಟೆ ಆರಾಯಿತು-ಏಳಾಯಿತು; ಅವನ ಸುಳಿವಿಲ್ಲ. ಐದು ಗಂಟೆಗೇ ಬರುತ್ತೇನೆಂದು ಹೇಳಿದ್ದ ಅನಂತು, ಗಂಟೆ ಏಳಾದರೂ ಬರದೆ ಇದ್ದುದು ಸಂಶಯವುಂಟು ಮಾಡಿತು. ಹಾಗಾಗಲು ಕಾರಣವನ್ನು ಹುಡುಕತೊಡಗಿದ. ಮಿದುಳು ಅಲ್ಲಿ ಇಲ್ಲಿ ಕಸರತ್ತು ಮಾಡಿದ ಮೇಲೆ ಕಾರಣ ಹೊಳೆಯಿತು. ಹಿಂದಿನ ದಿನ ಅನಂತು ನಾಣಿಯೊಡನೆ ಪೇಟೆಯಲ್ಲಿ ಅಡ್ಡಾಡುತ್ತಿದ್ದುದು ನೆನಪಿಗೆ ಬಂದು ಕುಳಿತ ನೆಲ ಮುಳ್ಳಾಗಿ ಎದ್ದು ಮನೆಯ ಹಾದಿ ಹಿಡಿದನು.

ಅದುವರೆಗೆ ಮಾಡಿದ್ದ ಸೀತಾರಾಮುವಿನ ಯೋಚನೆಯೆಲ್ಲ ತಲೆ ಕೆಳಗಾಯಿತು. ನಾಣಿಯ ಬೆನ್ನು ಬಿದ್ದ ಅನಂತು ಇನ್ನು ತನ್ನ ಹಿಡಿತಕ್ಕೆ ಸಿಕ್ಕುವುದು ಅಸಂಭವವೆಂದು ಅರಿತುಕೊಂಡ. ಅವನ ಬೇಟೆಯಲ್ಲಿ ಸೋಲಾದುದು ಇದೇ ಮೊದಲನೆಯ ಬಾರಿ. ಆ ಸೋಲು ಅವನ ಅಭಿಮಾನವನ್ನು ಕೆಣಕಿ ತಲೆಯಲ್ಲಿ ಯಾವುದೋ ಹುಚ್ಚನ್ನು ಕೆರಳಿಸಿತು. ಆ ಗುಂಗಿನಲ್ಲೇ ಅವನು ಮನೆ ಮುಟ್ಟಿದನು. ಹೊಸಲು ದಾಟುವುದಕ್ಕೂ ಒಳಗಿನಿಂದ ಎಡೆಬಿಡದ ಕಿರಿಚಾಟ ಬಂದು ಕಿವಿ ಮುಟ್ಟುವುದಕ್ಕೂ ಸಮನಾಯಿತು. ಎದೆ ಝಲ್ಲೆಂದಿತು. ಕೆಟ್ಟ ಯೋಚನೆ

ಗಳಿಂದ ವಿಕಾರವಾಗಿದ್ದ ಮನಸ್ಸು ತನ್ನ ಹೆಂಡತಿ–ಮಕ್ಕಳಲ್ಲಿ ಆಗಬಾರದ್ದನ್ನು ನೆನೆಸಿ ನಡುಗಿತು. ಭಯದಿಂದ ಒಳಗೆ ಛಂಗನೆ ಹಾರಿದ.

ಸದ್ಯ ಬದುಕಿತು ಬಡಜೀವ. ತನ್ನ ಹೆಂಡತಿ–ಮಕ್ಕಳಲ್ಲಿ ಯಾರಿಗೂ ಆಪತ್ತಾಗಿರಲಿಲ್ಲ. ಅದಕ್ಕೆ ಬದಲಾಗಿ ಶ್ರೀಕಂಠುವಿನ ಕುಣಿದಾಟ–ನೆಗೆದಾಟ ಅವ್ಯಾಹತವಾಗಿ ನಡೆದಿತ್ತು. ಹೆಂಡತಿಯನ್ನು ವಿಚಾರಿಸಲಾಗಿ ಕಿವಿಗೆ ಲಕ್ಷ್ಮಿ ಚೇಳೊಂದು ಹೋಗಿದೆಯೆಂದು ತಿಳಿದು ಬಂತು.

ಅಷ್ಟರಲ್ಲಿ ಶ್ರೀದೇವಮ್ಮ ಬಂದು ವೈದ್ಯರ ಬಳಿ ಕರೆದುಕೊಂಡು ಹೋಗು ವುದು ಒಳ್ಳೆಯದೆಂದು ಸಲಹೆಯಿತ್ತರು. ಅವನಿಗೂ ಅದು ಸರಿಯೆನಿಸಿತು ಕೂಡಲೆ ತನ್ನ ಹತ್ತು ವರ್ಷದ ಮಗ ರಾಮುವನ್ನು ಜಟಕಾ ತರಲು ಕಳುಹಿಸಿ ಕೊಟ್ಟ.

ಕಿವಿಗೆ ಹುಳು–ಹುಪ್ಪುಟೆ ಹೋದರೆ ಉಪ್ಪು ನೀರು ಮಾಡಿ ಹಾಕ ಬೇಕೆಂದು ಯಾರೋ ಹೇಳಿದ ಮಾತು ನೆನಪಿಗೆ ಬಂತು. ಹೆಂಡತಿ ಹತ್ತಿರ ಸ್ವಲ್ಪ ಉಪ್ಪು ನೀರು ಮಾಡಿಸಿಕೊಂಡು ಶ್ರೀಕಂಠುವಿನ ಕೈಕಾಲುಗಳನ್ನು ಬಲ ವಾಗಿ ಒತ್ತಿ ಹಿಡಿದು, ಕಿವಿಗೆ ನಾಲ್ಕಾರು ತೊಟ್ಟು ಬಿಟ್ಟ. ಅದರ ಪರಿಣಾಮ ವಾಗಿ ಒಂದೆರಡು ನಿಮಿಷದಲ್ಲಿ ನಿರ್ಜೀವವಾಗಿ ಹೊರಬಿತ್ತು–ಅವನನ್ನು ನಾಟ್ಯ ವಾಡಿಸಿದ ಆ ಚೇಳು–ಅಲ್ಲಲ್ಲ–ಚೇಳೆಂದು ಭ್ರಮೆ ಹಿಡಿಸಿದ ಸಣ್ಣ ಕೆಂಪು ಇರುವೆ.

ಸೀತಾರಾಮು ಕಿಡಿಕಿಡಿಯಾದ. ಶ್ರೀಕಂಠುವಿನ ಅತಿಯಾದ ಹೇಡಿತನ ನಗು ತರುವುದಕ್ಕೆ ಬದಲು ಕೋಪವುಂಟು ಮಾಡಿತ್ತು. ಮನೆಗೆ ಮರಳುವಾಗ ಲಿದ್ದ ಬೇಸರ ಮರುಕಳಿಸಿ ಅವನ ಮೇಲೆ ಹುಚ್ಚಾಪಟ್ಟೆ ರೇಗಾಡಿದ –

"ಥೂ, ನಿನ್ನ ಹೇಡಿತನಕ್ಕಿಷ್ಟು ಬೆಂಕಿಹಾಕ. ಅಷ್ಟೂ ಮಿದುಳು ಬೇಡವೆ? ಚೇಳಿಗೂ ಇರುವೆಗೂ ವ್ಯತ್ಯಾಸ ಗೊತ್ತಾಗದಿದ್ದವನು ನೀನೆಂಥ ಮನುಷ್ಯನಯ್ಯ! ನಿನ್ನಿಂದ ನಮಗೊಂದೊಂದಲ್ಲ ಅವಮಾನ. ಮೂರು ಕಾಸಿನ ಪ್ರಯೋಜನವಿಲ್ಲ. ಯಾವ ಜನ್ಮದ ದುಷ್ಕರ್ಮ ಫಲವೋ ನಿನ್ನನ್ನು ಕಟ್ಟಿಕೊಂಡು ಅಳುವುದು!"

"ಅಕ್ಕ ಆಗ ತಾನೆ ನನ್ನ ಹಾಸಿಗೆಯಲ್ಲಿದ್ದ ಲಕ್ಷ್ಮಿ ಚೇಳೊಂದನ್ನು ಹಿಡಿದು

ಹೊರ ಹಾಕಿದ್ದಳು. ಅದೇ ನೆನಪಿತ್ತು ತಲೆಯಲ್ಲಿ; ಅದಕ್ಕೆ ಅಷ್ಟು ಗಾಬರಿ ಯಾದೆ " ಎಂದು ಮೈ ಮುದುಡಿಕೊಂಡು ತಲೆ ಕೆರೆಯುತ್ತಾ ಗಿಂಜಿದ ಶ್ರೀಕಂಠು.

ಅಷ್ಟರಲ್ಲಿ ಅಕ್ಕಪಕ್ಕದ ನಾಲ್ಕಾರು ಜನ ರಾಮುವಿನಿಂದ ಸುದ್ದಿ ತಿಳಿದು, ತಮತಮಗೆ ತಿಳಿದ ಸೂಕ್ತ ಸಲಹೆಗಳನ್ನು ಕೊಡಲು ಓಡಿಬಂದರು. ಮನೆ ಥಣ್ಣಗಿತ್ತು. ಶ್ರೀದೇವಮ್ಮನಿಂದ ವಿಷಯ ತಿಳಿದು, ಹೊಟ್ಟೆ ಹುಣ್ಣಾಗುವಂತೆ ನಕ್ಕು ಹಿಂತಿರುಗಿದರು. ಅವರ ನಗುವಿನ ನಾದ ಬಹಳ ಹೊತ್ತಿನ ವರೆಗೆ ಆ ವಾತಾವರಣವನ್ನು ತುಂಬಿತ್ತು. ಆ ಗುಂಗು ಇಂಗುವುದರಲ್ಲೆ ರಾಮು ಗಾಡಿ ತಂದು ನಿಲ್ಲಿಸಿದ. ಅವನಿಗೆ ಯಾವುದೂ ಅರ್ಥವಾಗಲಿಲ್ಲ. ಎಲ್ಲರ ಮುಖ ವನ್ನೂ ಪಿಳಿಪಿಳಿ ನೋಡುತ್ತಾ ನಿಂತ. ಉತ್ತರ ಹುಡುಕುವ ಆತುರದಲ್ಲಿ ಗಾಡಿ ತಂದ ವಿಷಯವನ್ನು ತಿಳಿಸಲು ಮರೆತೇ ಬಿಟ್ಟ.

ಅವನ ಕೆಲಸವನ್ನು ಗಾಡಿಯವನೆ ಮಾಡಿದ. ಅವನ ಬೊಬ್ಬೆ ಎರಡು ಮೂರು ಹೊಸ್ತಿಲುಗಳನ್ನು ದಾಟಿ ಬಂದು ಎಲ್ಲರ ಕಿವಿಗಳನ್ನು ಕೊರೆಯಿತು. ಶ್ರೀದೇವಮ್ಮ, ಸೀತಾರಾಮು ಅವನಿಗೆ ಹಿಡಿ ಶಾಪ ಹಾಕುತ್ತಾ ಹೊರಬಂದರು.

ಅವನೆದುರಿಗೆ ಬಂದಾಗ ಮಾತ್ರ ಮುಖದಲ್ಲಿ ಎಲ್ಲಿಲ್ಲದ ಸಮಾಧಾನ ತುಂಬಿ ಬಂತು. ರವಾನೆ ಹಾಕಲು ಮಾತಿನಲ್ಲಿ ಇಲ್ಲದ ನಯ- ವಿನಯ ತುಂಬಿ ಸಕ್ಕರೆಯ ಮೊಳೆ ಹರಿಸಿದರು. ಪ್ರಯೋಜನವಾಗಲಿಲ್ಲ. ಗಾಡಿಯವನು ಗಟ್ಟಿಗ. ಅವರ ಮಾತಿಗೆ ಮರುಳಾಗಲಿಲ್ಲ. ಮಾತಾಡಿದ ಬಾಡಿಗೆಯಲ್ಲಿ ಅರ್ಧ ಹಣ ಕೊಟ್ಟ ಹೊರತೂ ನಿಂತ ಸ್ಥಳ ಕದಲುವುದಿಲ್ಲವೆಂದು ಹಟ ಹಿಡಿದನು. ಕಡೆಗೂ ಹಣ ಕಕ್ಕಲೇ ಬೇಕಾಯಿತು; ಅವನು ಕೇಳಿದಷ್ಟು ಹಣ ಕೊಟ್ಟು ಮೊದಲು ಅಲ್ಲಿಂದ ರವಾನೆ ಹಾಕಿದರು.

ವಿನಾಕಾರಣ ಕೈಯಿಂದ ಹಣ ಹೋದುದು ಅವರನ್ನು ಕೆರಳಿಸಿತ್ತು. ತಾಯಿ–ಮಗ ಇಬ್ಬರೂ ಶ್ರೀಕಂಠುವಿನ ಮೇಲೆ ತಿರುಗಿ ಬಿದ್ದರು. ಶ್ರೀಕಂಠು ಗೋರ್ಕಲ್ಲಿನಂತೆ ಮಾತನ್ನು ಸವರಿ ಹಾಕುತ್ತಾ ಮೂಲೆಯಲ್ಲಿ ಮುದುಡಿ ಕುಳಿತಿದ್ದನು. ಗಂಟಲು ನೋವು ಬರುವಷ್ಟು ಗೊಣಗಿ ಇಬ್ಬರೂ ತಣ್ಣ ಗಾದರು.

ಆ ದಿನ ಆ ಪ್ರಸಂಗ ನಡೆದುದು ಒಳ್ಳೆಯದಾಯಿತು. ಸೀತಾರಾಮು ನಾಣಿಯಲ್ಲಿ ಸೇಡು ತೀರಿಸಿಕೊಳ್ಳುವ ಹಾದಿ ಹುಡುಕುತ್ತಾ ಮನೆ ಮೆಟ್ಟಿದ್ದ. ಶ್ರೀಕಂಠುವಿನ ಪ್ರಕರಣದಿಂದ ಆ ಯೋಚನೆ ತಲೆಯಿಂದ ಮರೆಯಾಗಿ ನಾಣಿ ಸದ್ಯಕ್ಕೆ ಬದುಕಿದ.

ರಾತ್ರೆಯೆಲ್ಲ ಶ್ರೀಕಂಠುವಿನ ಅವಿವೇಕ ನಡುವಳಿಕೆಯೆ ಮೊರೆಯುತ್ತಿತ್ತು ತಲೆಯಲ್ಲಿ; ತನ್ನ ಮನೆಯಲ್ಲಿ ಅವನಿರುವುದು ಸ್ವಲ್ಪವೂ ಹಿಡಿಸಿರಲಿಲ್ಲ. ಹೊರ ಹಾಕಲು ತಾಯಿ ಬಿಡುತ್ತಿರಲಿಲ್ಲ. ಉಭಯತ್ರರಿಗೂ ಸರಿಹೊಂದುವ ಹಾದಿ ಹುಡುಕುವುದರಲ್ಲೆ ಬೆಳಗು ಮಾಡಿದನು. ಹಾದಿ ಸಿಕ್ಕಲಿಲ್ಲ. ಸಮಯ ಉಳಿಯಲಿಲ್ಲ. ಶ್ರೀಕಂಠು ಮಾತ್ರ ಎದ್ದು ಎಂದಿಗಿಂತ ಉತ್ಸಾಹಿತನಾಗಿ ತನ್ನ ಮೊದ್ದು ಹೆಜ್ಜೆಗಳಿಂದ ಮನೆಯನ್ನೆಲ್ಲಾ ಮುಟ್ಟಿ ಮುಟ್ಟಿ ನೋಡುತ್ತಿದ್ದ.

ಮಧ್ಯಾಹ್ನ ಕಳೆಯಿತು. ಸಂಜೆಯಾಯಿತು. ಆ ದಿನವೂ ಅನಂತುವಿನ ಸುಳಿವಿಲ್ಲ. ಅವನ ಸ್ನೇಹ ಮುಗಿಯಿತೆಂದು ಸೀತಾರಾಮು ನಿರ್ಧಾರ ಮಾಡಿಕೊಂಡ. ಅವನ ತಲೆಯಲ್ಲಿದ್ದುದು ಆಗ ಒಂದೇ ಯೋಚನೆ; ನಾಣಿಯೆ ಅದರ ಆಹಾರವಾಗಿದ್ದ. ಅದನ್ನು ಒದಗಿಸಿಕೊಳ್ಳುವುದರಲ್ಲಿ ಆತುರ. ಹಾದಿ ಹುಡುಕಲು ಹೊರಗೆ ಹೊರಟು ನಿಂತ. ಯಾವುದೊ ವಿಷಯ ಹೊತ್ತು ಅವಸರವಾಗಿ ಬಂದ ಗೋಪುವಿನ ಆಗಮನ ಅವನ ಸಂಚಾರವನ್ನು ತಡೆಗಟ್ಟಿತು. ಬಂದ ಬೇಸರವನ್ನು ನುಂಗಿ ಕೃತಕ ವಿನಯ ತೋರಿಸುತ್ತಾ—

"ದಯಮಾಡಬೇಕು. ಅದೇನಿಷ್ಟು ಅವಸರವಾಗಿ ಬಂದದ್ದು ?" ಎಂದು ತನ್ನ ಕೊಠಡಿಯತ್ತ ಸೀತಾರಾಮು ಹೆಜ್ಜೆಯಿಡತೊಡಗಿದ.

ಗೋಪಿಯೂ ಹಿಂಬಾಲಿಸಿದ. ಇಬ್ಬರೂ ಗೊತ್ತಾದ ಸ್ಥಳದಲ್ಲಿ ಹೋಗಿ ಕುಳಿತರು. ಗೋಪಿ ಕರವಸ್ತ್ರದಿಂದ ಮುಖದ ಬೆವರನ್ನು ಒರೆಸಿ ಮುಗಿಸುವುದರಲ್ಲೆ ಸೀತಾರಾಮು ಮಾತು ಮುಂದುವರಿಸಿದ.

"ಏನು ಸಮಾಚಾರ ?"

"ಅನಂತುವಿನ ಹತ್ತಿರ ಹಣ ಕೇಳಿದ್ದಿಯೇನು ?"

ಸೀತಾರಾಮುವಿಗೆ ಚೇಳು ಕುಟುಕಿದಂತಾಯಿತು. ಇದ್ದಕ್ಕಿದ್ದಂತೆ ಆದ ನೋವಿನಿಂದ ಚೇತರಿಸಿಕೊಂಡು ಹೇಳಿದ,

"ಹೌದು—ಆದರೆ ನನಗಲ್ಲ."

"ಯಾರಿಗೆ ? ಎಷ್ಟು ?"

"ರಮಾಕಾಂತನಿಗೆ ಹತ್ತು ಸಾವಿರ."

ಥಟ್ಟನೆ ರಮಾಕಾಂತನ ಹೆಸರು ಹೊಳೆದುದಕ್ಕೆ ಅವನಿಗೇ ಆಶ್ಚರ್ಯವಾಯಿತು. ಸುಳ್ಳು ಬಿಟ್ಟಿದ್ದರೂ ಅದರ ಸುಳಿವು ಹತ್ತದಂತೆ ಮಾತನಾಡಿದ್ದ. ರಮಾಕಾಂತ ಇಬ್ಬರಿಗೂ ಬೇಕಾದ ಮನುಷ್ಯ. ಎಣ್ಣೆಯ ಕಾರ್ಖಾನೆಯನ್ನು ನಡೆಸುತ್ತಿದ್ದ. ಅವನಿಗೆ ಹಣ ಬೇಕಾಗಿದ್ದ ವಿಷಯ ಗೋಪಿಗೂ ಸೂಕ್ಷ್ಮವಾಗಿ ಗೊತ್ತಿತ್ತು. ಎಂತಲೆ ಆ ಹೆಸರನ್ನು ಉಪಯೋಗಿಸಿ ಸದ್ಯಕ್ಕೆ ಬದುಕಿದ.

"ಕೊಟ್ಟೆಸೊ ?"

"ಇಲ್ಲ, ನೆನ್ನೆ ಬಂದು ಯಾವುದೂ ತಿಳಿಸಿ ಹೋಗುವೆನೆಂದು ಹೇಳಿದ್ದ. ಇದುವರೆಗೂ ಅವನ ಸುಳಿವಿಲ್ಲ. ಕಾರಣ ಏನೋ ಗೊತ್ತಾಗಲಿಲ್ಲ. ಅದು ಸರಿ—ಈ ವಿಷಯ ನಿನಗೆ ತಿಳಿಸಿದವರು ಯಾರು ?"

"ನಾಣಿ ಹೇಳಿದ. ಸುಳ್ಳೋ ನಿಜವೋ ಕೇಳೋಣವೆಂದು ಬಂದೆ. ನನ್ನ ಹಣ ತೀರಿಸುವ ವರೆಗೂ ಮತ್ತೆಲ್ಲೂ ಸಾಲಕ್ಕೆ ಕೈಹಚ್ಚಬೇಡ ಪುಣ್ಯಾತ್ಮ ! ಆ ಮೇಲೆ ನನ್ನ ಬಾಳು ಹಾಳಾದೀತು !"

ನಾಣಿಯ ಹೆಸರು ಕೇಳಿದ ಕೂಡಲೆ ಅವನ ಮೈ ಬೆಂಕಿಯಾಗಿ ಅವನ ಕಣ್ಣಿನಿಂದ ಕಿಡಿ ಹಾರಿತು. ಪ್ರಯತ್ನಪೂರ್ವಕವಾಗಿ ಆ ಕೋಪವನ್ನು ನುಂಗಿ ಉತ್ತರಿಸಿದ.

"ಇಲ್ಲ ಕಣಯ್ಯಾ, ನಿನಗ್ಯಾಕಷ್ಟು ಭಯ ! ನನ್ನ ಸ್ನೇಹದಲ್ಲಿ ನಿನಗೆ ವಿಶ್ವಾಸವುಂಟೋ ಇಲ್ಲವೊ ?"

"ವಿಶ್ವಾಸವಿಲ್ಲದೆ ನಿನಗೆ ಕೊಡಿಸಿದೆನೆ ? ಅವರಿವರು ಭಯ ಹುಟ್ಟಿಸುವುದರಿಂದ ಗಾಬರಿಯಾಗಿ ಕೇಳಿದೆ ಅಷ್ಟೆ."

ದೊಡ್ಡದಾಗಿ ನಕ್ಕು—

"ಏನೂ ಗಾಬರಿಯಾಗಬೇಡ, ಧೈರ್ಯವಾಗಿರು" ಎಂದು ಬೆನ್ನು ತಟ್ಟಿ— ಒಳಗೆ ಹೋಗಿ ಕಾಫಿ ತಂದುಕೊಟ್ಟು ತಾನೂ ಕುಡಿದ.

"ನಾನು ನಾಳೆ ಶಿವಮೊಗ್ಗೆಗೆ ಹೋಗುತ್ತೇನೆ. ಬರುವುದು ಒಂದು ವಾರವಾಗಬಹುದು. ಅಲ್ಲಿ ವರೆಗೆ ನನ್ನ ಪರವಾಗಿ ಸಟ್ಟಾಪನ್ನು ನೀನೇ ಆಡಬೇಕು"

ಎಂದು ಕುಡಿದ ಲೋಟವನ್ನು ಕೆಳಗಿರಿಸಿ, ಕಿಸೆಯಿಂದ ನೂರು ರೂಪಾಯಿನ ನೋಟೊಂದನ್ನು ತೆಗೆದು ಕೊಟ್ಟ.

"ಅದೇನೀಗ ಶಿವಮೊಗ್ಗೆಗೆ?"

ಕಿಸೆಯೊಳಗೆ ನೋಟನ್ನು ತುಂಬುತ್ತಾ ಕುತೂಹಲ ತಡೆಯಲಾರದೆ ಸೀತಾರಾಮು ಕೇಳಿದ.

"ಅಮ್ಮಾವರನ್ನು ಮನೆಗೆ ಕರೆತರಬೇಡವೆ ?"

"ಹಾಗೇ ಸಮಾಚಾರ! ಯಾರ್ಯಾರು ಹೊರಡುತ್ತೀರಿ ?"

"ಈಗ ಹೋಗುವುದು ನಾನೂ ರಾನೆ ಇಬ್ಬರೆ."

"ನಾಣಿ ?"

"ಅವನೂ ಬರುತ್ತಾನೆ, ಆದರೆ ನಾಳೆಯಲ್ಲ; ಇನ್ನೆರಡು ದಿನ ಕಳೆದು. ಈ ಲಗ್ನದಲ್ಲಿ ಅವನಿಗೂ ಒಂದು ಕಟ್ಟು ಹಾಕಿ ಬಿಡಬೇಕು. ಇಲ್ಲದಿದ್ದರೆ ಅವನನ್ನು ಹಿಡಿಯುವುದು ಕಷ್ಟ."

"ಅದಿರಲಿ, ನನಗೆ ತಿಂಡಿ ಯಾವಾಗ ಕೊಡಿಸುವೆ ?"

"ಅದಕ್ಕೇನು, ಈಗಲೇ ಕೊಡಿಸುವೆ ನಡೆ" ಎಂದು ಅವನ ಹೆಗಲಿಗೆ ಕೈ ಹಾಕಿ ಹೋಟೇಲಿಗೆ ಕರೆದುಕೊಂಡು ನಡೆದ.

ಸೀತಾರಾಮು ಗೋಪಿಯೊಡನೆ ಮಾತನಾಡುತ್ತಿದ್ದರೂ ಅವನ ತಲೆ, ನಾಣಿಯಲ್ಲಿ ತೀರಿಸಿಕೊಳ್ಳುವ ಸೇಡಿನ ಬಗ್ಗೆ ಕೆಲಸ ಮಾಡುತ್ತಿತ್ತು.

## ೮

ಸಟ್ಟಾ ಆಡುವುದರಲ್ಲಿ ಸೀತಾರಾಮು ಎತ್ತಿದ ಕೈ. ಅದೇ ಅವನ ಜೀವನದ ಮುಖ್ಯ ಕಸುಬಾಗಿತ್ತು. ಅದರಲ್ಲಿ ಮಾಹಿತಿಯೂ ಇತ್ತು. ಆ ಬಗ್ಗೆ ತನ್ನದೇ ಆದ ಗಣಿತವೊಂದನ್ನು ಬೇರೆ ಗೊತ್ತು ಮಾಡಿಕೊಂಡಿದ್ದ. ದಿನವೆಲ್ಲಾ ಗುಣಿಸಿ ಗುಣಿಸಿ ತನ್ನ ಮನಸ್ಸೊಪ್ಪುವ ಒಂದು ಸಂಖ್ಯೆಯನ್ನು ಪತ್ತೆಹಚ್ಚುತ್ತಿದ್ದ. ತನ್ನ ತಲೆಯಿಂದಲೆ ಹೊರಬಿದ್ದ ಆ ಸಂಖ್ಯೆಯ ಮೇಲೆ ಸಂಪೂರ್ಣ ಭರವಸೆ

ಯಿರಿಸಿ ನೂರಾರು ರೂಪಾಯಿಗಳನ್ನು ಹಿಂದು ಮುಂದು ನೋಡದೆ ಅರ್ಚಿಸು ತ್ತಿದ್ದ.

ತಿಂಗಳಲ್ಲಿ ಐದಾರು ದಿನ ಇವನ ಪೂಜೆ ಸಾರ್ಥಕವಾಗುತಿತ್ತು. ಕಳೆದು ಕೊಂಡುದು ಮೂರು ಪಾಲಾದರೆ ಬರುತ್ತಿದ್ದುದು ಒಂದು ಪಾಲು. ಆದರೂ ಅದರ ಆಶೆ ಬಿಡುತ್ತಿರಲಿಲ್ಲ. ಒಂದಲ್ಲ ಒಂದು ದಿನ ತಾನು ಅದರಿಂದ ಲಕ್ಷಾ ಧೀಶ್ವರನಾಗುವೆನೆಂಬ ಭರವಸೆ ಅವನಿಗಿತ್ತು. ಭವಿಷ್ಯದ ಗರ್ಭದಲ್ಲಿದ್ದ ತನ್ನ ಆಶೆಯ ಆ ನಿಜರೂಪವನ್ನು ಕಾಣುವ ಆತುರದಿಂದ ಬದುಕನ್ನು ಪಣ ಒಡ್ಡಿ ಆಟದ ದಾಳವನ್ನು ಎಡೆಬಿಡದೆ ಉರುಳಿಸುತ್ತಿದ್ದ.

ಸೀತಾರಾಮು ಬಹಳ ಬುದ್ಧಿವಂತ, ಚತುರ. ಅವನ ಬುದ್ಧಿಚಾತುರ್ಯಕ್ಕೆ ವಕೀಲನಾಗಿದ್ದಿದ್ದರೆ ತುಂಬಾ ಒಳ್ಳೆಯ ಹೆಸರು ಗಳಿಸುತ್ತಿದ್ದ. ದುರ್ವಿಧಿ ಅವನ ಬುದ್ಧಿಯನ್ನು ವಿದ್ಯೆಯಿಂದ ವಿಕಾಸಗೊಳಿಸಲು ಬಿಡಲಿಲ್ಲ. ತಾಯಿಯ ಗರ್ಭದಲ್ಲಿ ಇರುವಾಗಲೆ ತಂದೆ ತೀರಿ ಹೋಗಿದ್ದರು. ಬದುಕಿಗೆ ಯಾವ ಆಸರೆಯೂ ಇರದ ಶ್ರೀದೇವಮ್ಮ ಅವನನ್ನು ಎಸ್. ಎಸ್. ಎಲ್. ಸಿ. ಗಡಿ ದಾಟಿಸಬೇಕಾದರೆ ಏಳು ಕೆರೆ ನೀರು ಕುಡಿದಿದ್ದರು. ಸ್ವಭಾವತಃ ಆಕೆ ತುಂಬಾ ಚತುರೆ, ಜಾಣೆ. ಮೆಣಸಿನ ಪುಡಿ–ಹಪ್ಪಳ ಮಾಡುವುದರ ಜತೆಗೆ, ರೋಗದಿಂದ ನರಳುವ ಮಕ್ಕ ಳಿಗೆ ಮುಡಿಸು ಮಾಡಿ, ಸಟ್ಟಾ ಆಡಿ ಅಂತೂ ಇಂತೂ ದಿನ ದಬ್ಬಿದ್ದರು.

ವಿದ್ಯಾಭ್ಯಾಸಕ್ಕೆ ಶರಣು ಹೊಡೆದ ಸೀತಾರಾಮು ಬೆಂಗಳೂರಿನ ಜವಳಿ ಅಂಗಡಿಯೊಂದರಲ್ಲಿ ಕಾರಕೂನನಾಗಿ ಕೆಲಸ ಮಾಡಲು ನಿಂತ. ಅವನು ಹುಟ್ಟು ಬಡವನಾದರೂ ಶ್ರೀಮಂತಿಕೆಯ ಡೌಲಿನಲ್ಲಿ ತುಂಬಾ ಆಸಕ್ತನಾಗಿದ್ದ. ಜನ್ಮದ ಜತೆಯಲ್ಲಿ ಕಡ್ಡಾಯವಾಗಿ ಬಂದಿದ್ದ ಸರಳತನ ಅವನಿಗೆ ಸ್ವಲ್ಪವೂ ಒಗ್ಗುತ್ತಿರಲಿಲ್ಲ. ಹೇಗಾದರೂ ಮಾಡಿ ತಾನೊಬ್ಬ ಶ್ರೀಮಂತನಾಗಲೇ ಬೇಕೆಂದು ಹಾತೊರೆಯುತ್ತಿದ್ದ. ಅದಕ್ಕೆ ತಕ್ಕಂತೆ ತನ್ನ ಯಜಮಾನನ ಶ್ರೀಮಂತ ನಡವಳಿಕೆಗಳು ಹೃದಯದಲ್ಲಿ ಕಿಡಿಯಾಗಿದ್ದ ಆಶೆಯನ್ನು ಊದಿ–ಊದಿ ಬೆಂಕಿ ಮಾಡುತ್ತಿದ್ದವು.

ಪಂಚೇಂದ್ರಿಯಗಳು ಕಾರಕೂನಗಿರಿಗೆ ವಶವಾಗಿ ಕರ್ತವ್ಯ ಸಾಗಿಸಿದ್ದರೂ ಮನಸ್ಸು ಹಣಗಾರನಾಗಲು ಹಂಚಿಕೆ ಹುಡುಕುತ್ತಲೆ ಇತ್ತು. ನ್ಯಾಯ–ನೀತಿ ಯಿಂದ ತುಂಬಾ ಹಣ ಗಳಿಸಲು ತಾನು ಸಂಪಾದಿಸಿಕೊಂಡ ವಿದ್ಯೆ ಸಾಲದೆಂದು

ತಿಳಿದು, ಆ ಆಶೆಯನ್ನು ತೊರೆದು ಅಡ್ಡ ಹಾದಿಯೊಂದನ್ನು ಹುಡುಕುತ್ತಿದ್ದ. ಆ ಸಮಯಕ್ಕೆ ಸರಿಯಾಗಿ ಧರ್ಮಪ್ರಕಾಶ ಗೋಪಾಲರಾಯರ ಬ್ಯಾಂಕ ವ್ಯವಹಾರದ ಮಾದರಿ ಕಿವಿಗೆ ಬಿದ್ದು, ಅವನ ಬಹುದಿನದ ಸಮಸ್ಯೆಯನ್ನು ಬಿಡಿಸಿತ್ತು. ಮನೋಭಿಲಾಷೆಗೆ ತಕ್ಕಂತೆ ಬದುಕಿಗೆ ಒಂದು ಹೊಸ ಹಾದಿ ಹೊಳೆದು ತನ್ನ ಕಾರಕೂನಗಿರಿಗೆ ಶರಣು ಹೊಡೆದು ಹೊರಬಂದ. ಸಂಗಡವೆ ಎಡೆಬಿಡದ ಸಟ್ಟಾಪೂಜೆಗೆ ಪ್ರಾರಂಭವಾಯಿತು. ಅದೇ ಅವನು ಶ್ರೀಮಂತನಾಗಲು ಹಿಡಿದ ಹೊಸ ಹಾದಿ. ಅಳಿದರೂ ಅದರಲ್ಲೆ, ಉಳಿದರೂ ಅದರಲ್ಲೆ ಎಂಬ ನಿರ್ಧಾರಕ್ಕೆ ಬಂದು ನಿಷ್ಠಾವಂತ ಭಕ್ತನಾದ.

ಸಟ್ಟಾ ಆಟದ ಅನುಭವ ಅವನಿಗೆ ಹೊಸದಲ್ಲ. ಬುದ್ಧಿ ತಿಳಿದಂದಿನಿಂದಲೂ ತಾಯಿಗೆ ಆ ವ್ಯವಹಾರದಲ್ಲಿ ಸಹಕರಿಸುತ್ತಿದ್ದವನೆ ಅವನು. ಅದರ ಮರ್ಮವನ್ನು ಆದಷ್ಟು ಕೆದಕಿ ನೋಡಿದ್ದ. ಜೀವನಾಡಿಯ ಪರಿಚಯವನ್ನೂ ಸಾಕಷ್ಟು ಮಾಡಿಕೊಂಡಿದ್ದ. ಹಾಗಾಗಿ ಅದನ್ನು ತನ್ನ ಜೀವನದ ಮುಖ್ಯ ಕಸುಬಾಗಿ ಆರಿಸಿಕೊಂಡ.

ಶ್ರೀದೇವಮ್ಮನಿಗೆ ಸಟ್ಟಾ ಆಟದ ಪರಿಚಯವಾದುದು ನೆರೆಮನೆಯ ಶಿವರಾಮೈಯ್ಯನಿಂದ. ಶಿವರಾಮೈಯ್ಯ ಅವರ ಕಷ್ಟಕ್ಕೆ ಕರಗಿ, ಸಟ್ಟಾ ಆಟದಿಂದ ಅದೃಷ್ಟ ತಿರುಗಿದರೂ ತಿರುಗಬಹುದೆಂಬ ಮೂಢವಿಶ್ವಾಸದಿಂದ ದಿನಕ್ಕೆ ಎರಡಾಣೆ ಅದಕ್ಕಾಗಿ ವೆಚ್ಚಮಾಡಿಸುತ್ತಿದ್ದರು. ದಿನ ಬರದಿದ್ದರೂ ಒಟ್ಟಿನಲ್ಲಿ ನಷ್ಟವಿರಲಿಲ್ಲ. ಅದರಿಂದ ತಿಂಗಳಿಗೆ ಎಂಟು-ಹತ್ತು ರೂಪಾಯಿ ವರಮಾನವಿದ್ದೇ ಇತ್ತು.

ದುಡ್ಡು ಬಂದಾಗ ಹಿಗ್ಗಿ ತಾವು ಕಟ್ಟುವ ಹಣದ ಮಿತಿಯನ್ನು ಹೆಚ್ಚಿಸುತ್ತಿರಲಿಲ್ಲ. ತಮ್ಮ ಆಶೆಯನ್ನು ಒಂದೇ ತೂಕದಲ್ಲಿರಿಸಿದ್ದರು. ಬಂದರೆ ಅದರಲ್ಲೆ ಬರಬೇಕು, ಬರದಿದ್ದರೆ ಅಷ್ಟೆ ನಷ್ಟವಾಗಬೇಕು. ಈ ಒಂದು ಹಿಡಿತ ಅವರನ್ನು ಏರುಪೇರಿಗೆ ಗುರಿಯಾಗದಂತೆ ಕಾದುಕೊಂಡು ಬಂದಿತ್ತು.

ಸೀತಾರಾಮು ಆ ವಿಷಯದಲ್ಲಿ ತಾಯಿಗೆ ತದ್ವಿರುದ್ಧವಾಗಿದ್ದ. ಅವರು ಉಪಕಸುಬಾಗಿರಿಸಿಕೊಂಡಿದ್ದ ಸಟ್ಟಾ ಆಟ ಅವನ ಜೀವನದ ಕಸುಬಾದರೂ ಆ ಹಿಡಿತ ಅವನದಾಗಲಿಲ್ಲ. ದಿನದಿನಕ್ಕೆ ಪ್ರಮಾಣವನ್ನು ಹೆಚ್ಚಿಸುತ್ತಲೆ ಬಂದ. ಅದರ ಪರಿಣಾಮವಾಗಿ ಆಗಾಗ್ಗೆ ನಷ್ಟವನ್ನು ಎದುರಿಸಬೇಕಾಗುತ್ತಿತ್ತು.

ಅದೃಷ್ಟ ಕೆಟ್ಟ ಸ್ನೇಹಿತರು ಸೀತಾರಾಮುವಿನ ಮೋಡಿಗೆ ಬಲಿಯಾಗಿ ಆ ನಷ್ಟಕ್ಕೆ ತಲೆಯೊಡ್ಡುತ್ತಿದ್ದುದರಿಂದ ಅವನು ಉಳಿದುಕೊಳ್ಳುತ್ತಿದ್ದ.

ಅವನು ತುಂಬಾ ಚತುರ. ತನ್ನ ಕಾರ್ಯಕ್ಕೆ ಮತ್ತೊಬ್ಬರನ್ನು ಉಪಯೋಗಿಸಿಕೊಂಡು, ಅದರ ಪ್ರಯೋಜನವನ್ನು ಪಡೆಯುವುದರಲ್ಲಿ ಸಿದ್ಧಹಸ್ತನಾಗಿದ್ದ. ಇವನ ಸಟ್ಟಾ ಆಟದ ಚಾತುರ್ಯ ಅತ್ಯಾಸೆಯಿದ್ದ ಸಾಹ್ಕಾರು ಜನ ಶ್ರೀಮಂತರನ್ನು ಬಳಿಗೆ ಸೆಳೆದಿತ್ತು. ಸಾಕಷ್ಟು ಅನುಕೂಲವಿದ್ದರೂ ಅತೃಪ್ತಿಗೆ ತುತ್ತಾದ ಅವರು ಇವನ ಕೈಗೊಂಬೆಯಾದರು. ಅವನನ್ನು ನಂಬಿ ಅವನ ಹೆಸರಿನಲ್ಲಿ ನೂರಾರು ರೂಪಾಯಿ ಸಟ್ಟಾ ಆಡುತ್ತಿದ್ದರು.

ಮೊದಮೊದಲು ಮಿತ್ರರನ್ನು ನಂಬಿಸಲಿಕ್ಕಾಗಿ, ಸಟ್ಟಾದಲ್ಲಿ ಹಣ ಬರದಿದ್ದರೂ ತನ್ನ ಕೈಯಿಂದ ಹಣ ತೆತ್ತು, ಅವರನ್ನು ತನ್ನ ಬಲೆಯಲ್ಲಿ ಭದ್ರವಾಗಿ ಸಿಕ್ಕಿಸಿಕೊಂಡ. ಕಡೆಕಡೆಗೆ ಬಂದ ಹಣದಲ್ಲಿ ಅರ್ಧವನ್ನು ಅವರಿಗಿತ್ತು, ಉಳಿದರ್ಧವನ್ನು ತನ್ನ ಕಿಸೆಗೆ ತುಂಬುತ್ತಿದ್ದ. ಹಣ ಕಟ್ಟಿದವರಿಗೆ ನಷ್ಟವಂತೂ ಮಾಡುತ್ತಿರಲಿಲ್ಲ; ಮೇಲೆ ಸ್ವಲ್ಪ ಆದಾಯವನ್ನೂ ತೋರಿಸುತ್ತಿದ್ದ.

ಇದರಿಂದ ಕಟ್ಟುವವರ ಆಶೆ ಮುರಿಯಲಿಲ್ಲ. ಕಟ್ಟುತ್ತಾ ಹೋದರೆ ಒಂದಲ್ಲ ಒಂದು ದಿನ ಹೆಚ್ಚು ಹಣ ಪಡೆಯಬಹುದೆಂಬ ದುರಾಶೆ ಅವರು ಆಟವನ್ನು ಮುಂದುವರಿಸುವಂತೆ ಮಾಡಿತ್ತು.

ಅವರ ಚಟ ಸೀತಾರಾಮುವಿಗೆ ಜೀವ ತುಂಬಿತು. ಅವನು ತನ್ನ ಬೊಕ್ಕಸ ತುಂಬಿಕೊಳ್ಳತೊಡಗಿದ. ನಿರ್ಗತಿಕನಾದ ಅವನಲ್ಲಿ ನಾಲ್ಕು ಕಾಸು ಕೂಡಿತು. ಆ ಹಣದ ಪ್ರಭಾವವೂ ಅವನ ಮೇಲೆ ಮೂಡದೆ ಇರಲಿಲ್ಲ. ಇದ್ದಕ್ಕಿದ್ದಂತೆ ಮನೆ—ಮೈ, ಉಡಿಗೆ—ತೊಡಿಗೆ ಎಲ್ಲವೂ ಮಾರ್ಪಾಟಾದುವು. ಎಲ್ಲದರಲ್ಲೂ ಹೊಸತನ-ಸಿರಿತನವೆದ್ದು ಕಂಡುಬಂದಿತು.

ಅವನ ಈ ಮಾರ್ಪಾಟು ಶ್ರೀಮಂತ ಬದುಕಿನ ಮಾದರಿ ಸಟ್ಟಾ ಸ್ನೇಹಿತರನ್ನು ಸಂಶಯಗೊಳಿಸಿತು. ಅವರು ಅವನ ಹೆಸರಿನಲ್ಲಿ ತಮ್ಮ ಹಣವನ್ನು ಕಟ್ಟಲು ಹೆದರಿ, ಹಿಂಜರಿದರು. ಆಡುವ ಆಸೆ ಬಿಡಲಿಲ್ಲ. ಸ್ವತಃ ಆಡುವುದು ಅವರ ಅಂತಸ್ತಿಗೆ ಕಡಿಮೆಯಾಗಿತ್ತು. ಅಪ್ಪಿ—ತಪ್ಪಿ ಸಿಕ್ಕಿಬಿದ್ದರೆ ಸೆರೆಯಾಗಬಹುದೆಂಬ ಹೆದರಿಕೆಯೂ ಅವರನ್ನು ಸ್ವತಃ ಮುಂದುವರಿಸಲು ಬಿಡಲಿಲ್ಲ. ಸೀತಾರಾಮುವಿನ ಹತ್ತಿರ ಆಡಿಸಲೂ ನಂಬಿಕೆ ಸಾಲದಾಯಿತು. ಹಾಗೂ

ಹೀಗೂ ಕೊಂಚ ದಿನ ಕಳೆಯಲಿ ನೋಡೋಣವೆಂದು ಸುಮ್ಮನಾದರು.

ಸೀತಾರಾಮು ಸಗ್ಗಲಿಲ್ಲ. ಅದರಿಂದ ತನಗೇನೂ ನಷ್ಟವಿಲ್ಲವೆನ್ನುವಂತೆ ನಡೆದುಕೊಳ್ಳುತ್ತಿದ್ದ. ಕಟ್ಟುವುದನ್ನು ನಿಲ್ಲಿಸಿದುದು ಯಾಕೆಂತಲೂ ಕೇಳಲಿಲ್ಲ. ಹಾಗೆ ಮಾಡುವುದರಿಂದ ತನ್ನಲ್ಲಿ ಸಂಶಯಕ್ಕೆಡೆಯಾಗುವುದೆಂಬ ತಿಳುವಳಿಕೆ ಅವನಲ್ಲಿ ಜಾಗೃತವಾಗಿತ್ತು. ಮರೆತು ಕೂಡ ಅವರ ಬಳಿ ಸುಳಿಯುತ್ತಿರಲಿಲ್ಲ.

ಸ್ನೇಹಿತರು ಸೋತರು. ಅವನ ಸೋಗಿನ ಸತ್ಯಕ್ಕೆ ತಲೆ ಬಗ್ಗಿದರು. ಹಣದ ಹುಚ್ಚಿಗೆ ಬಲಿಯಾದ ಅವರು ಮತ್ತೆ ಅವನ ಮರೆ ಹೊಕ್ಕರು. ಸೀತಾರಾಮು ತನ್ನ ಬಿಗಿ ಬಿಟ್ಟುಕೊಡಲಿಲ್ಲ; ಸೆಣಸಾಡಿಸಿ ಒಪ್ಪಿಕೊಂಡ.

ಈ ಘಟನೆ ನಡೆದುದು ಅವನಿಗೆ ಒಳ್ಳೆಯದೆ ಆಯಿತು. ಅವನಲ್ಲಿ ಇಲ್ಲದ ಸತ್ಯವನ್ನು ತುಂಬಿ ವ್ಯಕ್ತಿತ್ವವನ್ನು ಹೆಚ್ಚಿಸಿತು. ಸೀತಾರಾಮು ಪ್ರಾಣವನ್ನು ಕೇಳಿದರೂ ಕೊಡಲು ಸಿದ್ಧರಾದರು ಸ್ನೇಹಿತರು. ಅವರ ಪರೀಕ್ಷೆಗೆ ಹೆಚ್ಚು ದಿನ ಉಳಿಯಲಿಲ್ಲ. ಅವನು ಅವರಲ್ಲಿರಿಸಿದ್ದ ಗುರಿಯನ್ನು ಈ ಬಾರಿ ಸಾಧಿಸಿಯೇ ಬಿಟ್ಟ.

ಆ ವಾರ ತಾನು ಪತ್ತೆ ಹಚ್ಚಿದ ಸಂಖ್ಯಾ ಖಂಡಿತ ಬರುವುದೆಂದೂ, ಅದರ ಮೇಲೆ ಇಷ್ಟವಿದ್ದಷ್ಟು ಹಣವನ್ನು ನಿಸ್ಸಂದೇಹವಾಗಿ ಕಟ್ಟಬಹುದೆಂದೂ ಅವರನ್ನು ಹುರಿದುಂಬಿಸಿದ. ಅವನ ಮಾತಿನಲ್ಲಿ ನಂಬಿಕೆಯಿರಿಸಿದ್ದ ಅವರು ಎರವಾಡದೆ, ನಾಲ್ಕಾರು ಸಾವಿರ ರೂಪಾಯಿಗಳನ್ನು ಒಟ್ಟಿಗೆ ತಂದು ಅವನ ಕೈಗಿತ್ತರು.

ಆ ದಿನ ತಾನು ಗೊತ್ತು ಹಚ್ಚಿದ ಸಂಖ್ಯೆ ಬಂದೇ ಬರುವುದೆಂಬ ಸಂಪೂರ್ಣ ಭರವಸೆಯಿದ್ದರೂ ಒಂದೊಂದು ಬಾರಿ ಅಷ್ಟೇ ಭರವಸೆಯಿಟ್ಟಿದ್ದ ಅಂಕಿ ಬುಡಮೇಲಾಗುತ್ತಿದ್ದ ದಿನವನ್ನು ನೆನೆದು, ಕೇವಲ ಹತ್ತಿಪ್ಪತ್ತು ರೂಪಾಯಿಗಳನ್ನು ಮಾತ್ರ ಕಟ್ಟಿ, ಉಳಿದದ್ದನ್ನು ತನ್ನ ಪೆಟ್ಟಿಗೆಗೆ ತುಂಬಿದ.

ಬೆಳಗಾಯಿತು. ವರ್ತಮಾನ ಪತ್ರಿಕೆ ಸಂತೋಷ ಸುದ್ದಿಯನ್ನು ತಂದಿತ್ತು. ತಾನು ಹಣ ಕಟ್ಟಿದ್ದ ಅಂಕಿ ಗೆದ್ದಿತ್ತು. ಕೈ ಕೈ ಹಿಸುಕಿಕೊಂಡ. ಅಷ್ಟು ಹಣವನ್ನು ಕಟ್ಟಿದ್ದಿದ್ದರೆ ಲಕ್ಷಾಂತರ ರೂಪಾಯಿಗಳನ್ನು ಗಳಿಸಬಹುದಿತ್ತು. ಇಷ್ಟು ಒಳ್ಳೆಯ ಅವಕಾಶ ಹಿಂದೆ ಬಂದಿರಲಿಲ್ಲ; ಮುಂದೆ ಬರಲಾರದು.

ತನ್ನ ಮುಂಕುಬುದ್ಧಿಗೆ ಶಾಪ ಹಾಕಿದ.

ಥಟ್ಟನೆ ಸ್ನೇಹಿತರ ನೆನಪಾಯಿತು. ಕುಸಿದು ಬಿದ್ದ. ಇದು ವರೆಗೆ ಅವನು ಹೊಡೆದ ಹಣದ ಸಂತೋಷವನ್ನೆಲ್ಲಾ ಆ ನೆನಪು ಕೊಚ್ಚಿ ಹಾಕಿತು. ಅಂದು ಅದೇ ಅಂಕಿ ಗೆಲ್ಲುವುದೆಂದೂ ಅದರ ಮೇಲೆಯೆ ಹಣ ಕಟ್ಟುನೆನೆಂದೂ ಸ್ನೇಹಿತರಿಂದ ಐದಾರು ಸಾವಿರ ರೂಪಾಯಿಗಳನ್ನು ಸೆಳೆದಿದ್ದ. ಈಗ ಆ ಅಂಕಿ ಗೆದ್ದಿದೆ. ಸಂಜೆಯೊಳಗೆ ಲಕ್ಷಾಂತರ ರೂಪಾಯಿಗಳನ್ನು ಎಣಿಸಿಬಿಡಬೇಕು. ಇಲ್ಲದಿದ್ದರೆ ತನ್ನ ಗುಟ್ಟು ರಟ್ಟಾಗಿ ಪ್ರಾಣಕ್ಕೆ ಸಂಚಕಾರ ಬರುತ್ತದೆ. ನಾಲಗೆ ಉಳಿಸಿಕೊಳ್ಳಲು ಅಷ್ಟು ಹಣ ತನ್ನಲ್ಲಿಲ್ಲ. ಈ ಗಂಡಾಂತರದಿಂದ ಬಿಡುಗಡೆ ಯಾಗಬೇಕಾದರೆ ತಲೆ ಮರೆಸಿಕೊಳ್ಳುವುದೊಂದೇ ದಾರಿ. ಅದೇ ಸರಿಯೆಂದು ಯೋಚಿಸಿದ. ಅಷ್ಟರಲ್ಲಿ ವಿಷಯ ತಿಳಿದು ಸ್ನೇಹಿತರು ಸಂತೋಷದಿಂದ ಹಾರಿ ಬಂದಿದ್ದರು. ಅವರನ್ನು ಸತ್ಕರಿಸಿ ಸಂಜೆಗೆ ಹಣ ತೆಗೆದುಕೊಂಡು ಬರುವೆನೆಂದು ಹೇಳಿ ಕಳುಹಿಸಿಕೊಟ್ಟು, ಪ್ರಯಾಣದ ಸಿದ್ಧತೆಗೆ ನಿಂತನು.

ಮಧ್ಯಾಹ್ನದ ರೈಲಿಗೆ ಹೊರಡಲೇ ಬೇಕು. ಇಲ್ಲದಿದ್ದರೆ ಆಪತ್ತು ಶತಃ ಸಿದ್ಧ. ಸಮಯ ಬಹಳ ಕಡಿಮೆಯಿತ್ತು. ಬೇಕಾದ ಸಾಮಾನನ್ನು ತೆಗೆದು ಕೊಂಡು ಬೇಡವಾದ್ದನ್ನು ಅಲ್ಲಿಯೆ ಬಿಟ್ಟು, ಮನೆಯವರನ್ನು ಕರೆದುಕೊಂಡು ಊರಿಗೆ ಶರಣು ಹೊಡೆದು ಹೊರಟೇ ಬಿಟ್ಟ.

ಆ ದಿನ ರಾತ್ರಿಯ ವರೆಗೆ ಸಟ್ಟಾ ಸ್ನೇಹಿತರು ಸೀತಾರಾಮುವನ್ನು ಕಾದು ಕಾದು ಗಾಬರಿಯಾಗಿ ಮನೆಯ ಕಡೆ ಧಾವಿಸಿದರು. ಅಕ್ಕ-ಪಕ್ಕದವರಿಂದ ವಿಷಯ ತಿಳಿದು, ಹಣೆ ಕುಟಿ ಚಚ್ಚಿಕೊಂಡು ಸಂಕಟಪಟ್ಟು ಮರಳಿದರು. ಸಟ್ಟಾಕ್ಕೆ ಸಂಬಂಧಪಟ್ಟ ವಿಷಯವಾದ್ದರಿಂದ ರಕ್ಷಣಾ ಶಾಖೆಗೆ ದೂರುಕೊಡುವ ಚೈತನ್ಯವೂ ಅವರಲ್ಲಿರಲಿಲ್ಲ.

ಮೈಸೂರಿಗೆ ಬಂದ ಒಂದು ವರ್ಷದ ವರೆಗೆ ಯಾವ ಉತ್ಪತ್ತಿಯೂ ಇಲ್ಲದೆ ಇದ್ದದ್ದನ್ನೆ ಕರಗಿಸುತ್ತಾ ದಿನ ದಬ್ಬುತ್ತಿದ್ದ. ಅವನ ಜೀವಮಾನದಲ್ಲಿ ಯಾವ ಕಸುಬೂ ಇಲ್ಲದೆ ಇದ್ದುದು ಇದೇ ಮೊದಲನೆಯ ಬಾರಿ. ಕೂತು ಉಂಡು ಜೀವಕ್ಕೆ ಬೇಸರ ಬಂತು. ಮತ್ತೆ ತನ್ನ ವೃತ್ತಿಗೆ ಕಾಲಿಟ್ಟ. ಆ ವೇಳೆ ಗಾಗಲೆ ಅವನು ಬೆಂಗಳೂರಲ್ಲಿ ಮಾಡಿದ ಮೋಸಕೃತ್ಯ ಜನರ ಮನಸ್ಸಿನಿಂದ ಅಳಿಸಿ ಹೋಗಿತ್ತು. ಹೊಸ ಹುರುಪಿನಿಂದ ಬದುಕಿನ ಬಳ್ಳಿಗೆ ನೀರೆರೆಯ

ತೊಡಗಿದ.

ಆಗಲೆ ಅವನಿಗೆ ಗೋಪಿಯ ಸ್ನೇಹವಾದುದು. ಗೋಪಿಯೂ ಸಟ್ಟಾ ಭಕ್ತನಾದುದರಿಂದ ದಿನೇ ದಿನೇ ಇಬ್ಬರ ಸ್ನೇಹವೂ ಗಾಢವಾಗಿ ಬೆಳೆಯಿತು. ಸೀತಾರಾಮುವಿನ ಅದೃಷ್ಟ ಮತ್ತೆ ಹೆಡೆಯೆತ್ತಿ ನಿಂತಿತು.

ಇದುವರೆಗೆ ಸಿಕ್ಕಿದ ಸ್ನೇಹಿತರೆಲ್ಲರಿಗಿಂತ ಗೋಪಿ ಮತ್ತೂ ಹತ್ತಿರವಾದ. ಅದಕ್ಕೆ ಸೀತಾರಾಮುವಿನ ಸ್ನೇಹದ ಮೋಡಿಯೊಂದೇ ಕಾರಣವಾಗಿರಲಿಲ್ಲ. ನಂಬಿದ ಗೆಳೆಯನಿಗಾಗಿ ಬದುಕನ್ನು ಬಲಿಗೊಡುವ ಗೋಪಿಯ ಸ್ನೇಹನಿಷ್ಠೆಯೂ ಸಟ್ಟಾಪ್ರೇಮವೂ ಕಾರಣವಾಗಿತ್ತು. ಆ ಗುಟ್ಟನ್ನರಿತ ಸೀತಾರಾಮು ಅವನನ್ನೊಂದೇ ಪಟ್ಟಿಗೆ ವಿನಾಶಕ್ಕೊಯ್ಯದೆ ಸ್ವಲ್ಪಸ್ವಲ್ಪವಾಗಿ ಹಿಡಿದು ಜಗ್ಗುತಿದ್ದ.

ಗೋಪಿಯ ಸ್ನೇಹ ಬೆಳೆದು ಬಳ್ಳಿಯಾಗುವಾಗ ಸೀತಾರಾಮುವಿನ ಕೈ ಬರಿದಾಯಿತು. ಬೆಂಗಳೂರಿನಿಂದ ಮೋಸ ಮಾಡಿ ತಂದ ಹಣದಲ್ಲಿ ಇರಲು ಶಾಶ್ವತವಾದ ನೆರಳೊಂದನ್ನು ಅವನು ಮಾಡಿಕೊಂಡಿದ್ದ. ಉಳಿದ ಹಣದಲ್ಲಿ ಸ್ವಲ್ಪ ಭಾಗ ಕೂತು ತಿಂದು ವೆಚ್ಚವಾಯಿತು; ಸ್ವಲ್ಪ ಹಣ ಸಟ್ಟಾದಲ್ಲಿ ಕರಗಿತು. ಮಿಕ್ಕಿದ್ದು ಮಕ್ಕಳು ಮರಿಯ ಔಷಧಿ–ಪಥ್ಯಕ್ಕೆ ವೆಚ್ಚವಾಯಿತು. ಆ ಹಣದ ಸಂಗಡ ಶ್ರೀಕಂಠು ಸಂನ್ಯಾಸಿಯಾಗಿ ಸಂಪಾದಿಸಿಕೊಟ್ಟ ಹಣವೂ ಕರಗಿತ್ತು. ಸ್ವಲ್ಪ ದಿನ ಸಟ್ಟಾದಿಂದಲೂ ಆದಾಯವಿರಲಿಲ್ಲ. ಹಾಗಾಗಿ ಕಡೆಕಡೆಗೆ ಕಸುಬಿಗೆ ಜೀವ ತುಂಬುವುದೆ ಕಷ್ಟವಾಯಿತು. ಅಷ್ಟರಲ್ಲಿ ಗೋಪಿ ತನ್ನ ಸೆಕ್ಯೂರಿಟಿಯಿಂದ ಐದು ಸಾವಿರ ರೂಪಾಯಿ ಸಾಲ ಕೊಡಿಸಿದ. ಆ ಹಣದ ಬಲದ ಮೇಲೆ ಸೀತಾರಾಮು ಬೇಕಾದಷ್ಟು ಗಳಿಸಿದ. ಗಳಿಸಿದಷ್ಟು ಕಳೆಯುತ್ತಲೂ ಬಂದ.

ಆ ದಿನ ಕುತೂಹಲದಿಂದ 'ಸಂಡೇ ಟೈಮ್ಸ್' ಪತ್ರಿಕೆಯನ್ನು ಕೈಗೆ ತೆಗೆದುಕೊಂಡ. ನೋಡುತ್ತಿದ್ದಂತೆ ಕಣ್ಣು ಅರಳಿತು; ತುಟಿಯಲ್ಲಿ ನಗೆ ಮಿನುಗಿತು. ಅವನು ಬಿಟ್ಟಿದ್ದ ಬಾಣದ ಗುರಿ ಸರಿಯಿತ್ತು. ಗೋಪಿ ಕಟ್ಟು ಹೋದ ನೂರು ರೂಪಾಯಿಗಳಲ್ಲಿ ಎಂಬತ್ತು ರೂಪಾಯಿಗಳು ಬಂದ ಹಾದಿ ಹಿಡಿದರೂ ಉಳಿದ ಇಪ್ಪತ್ತು ರೂಪಾಯಿ ಅವನ ಹಣದ ನಾಲ್ಕರಷ್ಟು ಸಂಪಾದಿಸಿ ಕೊಟ್ಟಿತ್ತು.

ಕಮ್ಮಿ ಗಂಟೆನಲ್ಲಿ ದೊಡ್ಡ ಗಂಟೊಂದನ್ನು ಹೊಡೆದು ಮೂರು ವರ್ಷಗಳ ಮೇಲಾಗಿತ್ತು. ಹಣ ಪಡೆಯುವುದರಲ್ಲಿ ಆತುರ. ಸಂಜೆಯಾಗುವ ವರೆಗೆ ಕಾಯಲೆ ಬೇಕಿತ್ತು. ಕೈಲಿದ್ದ ಪತ್ರಿಕೆಯನ್ನು ಕೆಳಗೆಸೆದು ಕಣ್ಣನ್ನು ಗಡಿಯಾರದ ಕಡೆ ಹೊರಳಿಸಿದ. ಹನ್ನೊಂದು ಹೊಡೆದು ನಾಲ್ವತ್ತು ನಿಮಿಷಗಳಾಗಿದ್ದವು. ಸಂಜೆ ಇನ್ನೂ ಬಹಳ ದೂರವಿತ್ತು. ಹೊರಗೆ ಅಡ್ಡಾಡಲು ಹೋಗುವಂತೆಯೂ ಇರಲಿಲ್ಲ. ಹನ್ನೆರಡು ಗಂಟೆಗೆ ಮನೆಗೆ ಯಾರನ್ನೊ ಬರಹೇಳಿ ಬಂದಿದ್ದ. ಅಂದು ಶನಿವಾರವಾದ್ದರಿಂದ ಸಟ್ಟಾ ಸಂಖ್ಯೆಯ ಗುಣಾಕಾರಕ್ಕೂ ರಜೆಯಿತ್ತು. ಹಾಗಾಗಿ ಮನಸ್ಸು ಸಂಜೆ ಬರುವ ಹಣದ ವಿನಿಯೋಗಕ್ಕೆ ಹಾರಿತು.

ಹೆಂಡತಿ ಜಾನಕಿಗೆ ಬಹಳ ದಿನದಿಂದ ಒಂದು ಜತೆ ಚಿನ್ನದ ಬಳೆಮಾಡಿಸಿ ಹಾಕುವೆನೆಂದು ಸೀತಾರಾಮು ಹೇಳುತ್ತಾ ಬಂದಿದ್ದ. ಹಿಂದೆ ತಾನೇ ಮಾಡಿಸಿ ಹಾಕಿದ್ದ ಎರಡು ಜತೆ ಬಳೆಗಳನ್ನು ಸಟ್ಟಾಪೂಜೆಗಾಗಿ ಮಾರಿದ್ದ. ಆ ಪ್ರಸಂಗದಿಂದಾಗಿ ಗಂಡ-ಹೆಂಡತಿ ಮುನಿಸಿಕೊಂಡು ಬಹಳ ದಿನಗಳ ವರೆಗೆ ಮಾತುಕತೆ ಬಿಟ್ಟಿದ್ದರು. ಆ ನೋವು–ನೆನಪು ತಲೆಯಿಂದ ಅಳಿಸಿರಲಿಲ್ಲ. ಇಂದು ಅದು ಮರುಕಳಿಸಿ, ಆ ಹಣವನ್ನು ಬಳೆಗಾಗಿಯೆ ಉಪಯೋಗಿಸುವ ಸಲಹೆಕೊಟ್ಟಿತು. ಅವನ ಮನಸ್ಸೂ ಅದನ್ನೇ ಗಟ್ಟಿ ಮಾಡಿತು.

ನ್ಯಾಯವಾಗಿ ಆ ಹಣ ಅವನದಲ್ಲ; ಗೋಪಿಗೆ ಸಲ್ಲಬೇಕಾದದ್ದು. ಅದು ಗೊತ್ತಿದ್ದೂ ಬಳೆ ಮಾಡಿಸುವ ನಿರ್ಧಾರ ಮಾಡಿದ್ದ. ಹಾಗೆ ಮಾಡುವಾಗ ಆ ಹಣ ತನ್ನದೆಂಬ ಭಾವನೆಯೆ ತುಂಬಿತ್ತು ಅವನಲ್ಲಿ; ಗೋಪಿಯ ನೆನಪು ಸಹ ಆಗಲಿಲ್ಲ.

ಅದು ಅವನಿಗೆ ಹೊಸದೇನಲ್ಲ. ಅದು ವರೆಗೆ ನಾಲ್ಕಾರು ಜನರ ದುಡ್ಡನ್ನು ನಿರಾಯಾಸವಾಗಿ ನುಂಗಿ ನೀರು ಕುಡಿದಿದ್ದ. ಆ ಅಭ್ಯಾಸಬಲ ಕಂಡವರ ದುಡ್ಡನ್ನು, ಯಾವ ನೋವು–ನಾಚಿಕೆಗೂ ಅವಕಾಶ ಕೊಡದೆ, ತನ್ನದಾಗಿ ಮಾಡಿಕೊಳ್ಳುವಷ್ಟು ದೂರ ಬೆಳೆದು ಬಂದಿತ್ತು.

ಹಣ ಕೊಟ್ಟವರಿಗೆ ಕಾಸಿನ ಕಿಲುಬು ಕೂಡ ತೋರಿಸುವಂತಿರಲಿಲ್ಲ. ವಾರಸುದಾರರು ಹಣ ಕೇಳಿದಾಗ ಮುಖದ ಮುಂದೆ ನಷ್ಟದ ಕನ್ನಡಿ ಹಿಡಿದು,

ಅವರ ಸಂಗಡ ತಾನೂ ಮರುಗುವಂತೆ ನಟಿಸಿ ಆ ಪ್ರಸಂಗದಿಂದ ಪಾರಾಗಿ ಬಿಡುತ್ತಿದ್ದ. ಗೋಪಿಗೂ ಅದೇ ಅಸ್ತ್ರ ಸಿದ್ಧವಾಯಿತು. ತನ್ನ ಬುದ್ಧಿಚಾತುರ್ಯಕ್ಕೆ ತಾನೆ ಬೆನ್ನು ತಟ್ಟಿಕೊಂಡ.

ಅಷ್ಟರಲ್ಲಿ ಶ್ರೀದೇವಮ್ಮ ತಮ್ಮ ರಗಳೆಯನ್ನು ಹಾಡುತ್ತಾ ಬಂದರು. ಅವರಿಗೆ ಬಹಳ ದಿನದಿಂದ ರಾಮೇಶ್ವರದ ಹುಚ್ಚು ಹಿಡಿದಿತ್ತು ತಲೆಯಲ್ಲಿ. ಪ್ರತಿದಿನ ಬೆಳಿಗ್ಗೆ ವರ್ತಮಾನ ಪತ್ರಿಕೆ ಬಂದೊಡನೆ ಒಂದು ಬಾರಿ ಬಂದು ಮಗನ ದಿನದ ಉತ್ಪತ್ತಿ ಎಷ್ಟೆಂದು ತಿಳಿವವರೆಗೂ ನೆಮ್ಮದಿಯಿರುತ್ತಿರಲಿಲ್ಲ. ಸೀತಾರಾಮು ಕೊಡುತ್ತಿದ್ದ ಆದಾಯದ ಅಂಕಿ-ಅಂಶ ಅವರ ಆಶೆಯನ್ನು ಮೊಳಕೆಯೊಡೆದ ಸ್ಥಳದಲ್ಲೆ ಮುದುಡುವಂತೆ ಮಾಡುತ್ತಿದ್ದರೂ ಆ ಕುಡಿಯನ್ನು ಸಂಪೂರ್ಣ ಬಾಡಲು ಬಿಡುತ್ತಿರಲಿಲ್ಲ. ನಂಬಿಕೆಯ ನೀರೆರೆದು ಅದಕ್ಕೆ ಉಸಿರು ತುಂಬುತ್ತಾ ಬಂದಿದ್ದರು.

ಆ ದಿನ ಮಗನ ಅರಳಿದ ಮುಖ ಕಂಡು, ಅವರ ಆಶೆಯ ಕುಡಿಯೂ ಅರಳಿತು. ಅವನಿಂದ ಬಂದ ಉತ್ತರ ಮಾತ್ರ ಅವರ ಆ ಸುಖವನ್ನು ಹೆಚ್ಚು ಹೊತ್ತು ಉಳಿಸಲಿಲ್ಲ. ಪ್ರತಿದಿನ ಸ್ವಲ್ಪವಾದರೂ ಆದಾಯ ತೋರಿಸುತ್ತಿದ್ದ ಮಗ ಆ ದಿನ ಏನೂ ಬರಲಿಲ್ಲವೆಂದು ಕೈಯಾಡಿಸಿದ. ಎಂದಿನಂತೆ ಮುಖ ಸೋಲು ಬಿಟ್ಟು ಒಳಗೆ ಹೊರಟರು.

ಅವರು ಹಜಾರದಲ್ಲಿ ಕಾಲಿಡುವುದಕ್ಕೂ, ಹೊರಗಿನ ಅಂಗಳದಲ್ಲಿ ಯಾರೊ ತಲೆಯಿಕ್ಕಿದಂತಾದುದಕ್ಕೂ ಸಮನಾಯಿತು. ಬಾಗಿಲ ಬಳಿ ಹೋಗಿ ಮೆಲ್ಲನೆ ಬಗ್ಗಿ ನೋಡಿದರು. ಎದೆ ಧಸ್ಸೆಂದಿತು. ನಾಣಿ-ಭಟ್ಟರು-ಕೃಷ್ಣ ಸೆಟ್ಟರು ಸಂಗಡ ಒಂದಿಬ್ಬರು ಕೋರ್ಟಿನ ಕೆಲಸಗಾರರು ಹೀಗೆ ನಾಲ್ಕೈದುಜನ ಬಂದು ನಿಂತಿದ್ದರು. ಶ್ರೀದೇವಮ್ಮ ಒಂದು ಗಳಿಗೆ ಹೆದರಿದರೂ—ಧೃತಿಗೆಡಲಿಲ್ಲ. ಧೈರ್ಯ ತಂದು ಕೇಳಿದರು—

"ಕೂತುಕೊಳ್ಳಿ, ಯಾರು ಬೇಕಾಗಿತ್ತು ನಿಮಗೆ ?"

"ಸೀತಾರಾಮುವನ್ನು ಕಾಣಬೇಕು" ಶೆಟ್ಟರೆಂದರು.

"ಅವನಿಲ್ಲ ಮನೆಯಲ್ಲಿ. ಕಡಕೊಳದ ಕಡೆ ಹೋಗಬೇಕೆಂದಿದ್ದ—ಏನು ಮಾಡಿದ್ದಾನೊ ಏನೊ !"

ಸಮಯಕ್ಕೆ ಸರಿಯಾಗಿ ಸುಳ್ಳು ಬಿಡುವ ಜಾಣ್ಮೆ ಅವರಲ್ಲಿದ್ದುದರಿಂದ ಅನಾಯಾಸವಾಗಿ ಬಂದಿತು ಆ ಮಾತು.

"ಊಟಕ್ಕೆ ಮನೆಗೆ ಬರುತ್ತಾರೆ ತಾನೆ ?"

"ಹಾಗೆಂದು ಹೇಳಿ ಹೋಗಿದ್ದಾನೆ—ನೋಡಬೇಕು. ಯಾಕೆ ? ಏನಾಗ ಬೇಕಾಗಿತ್ತು ?"

"ಆವರು ನನ್ನಿಂದ ಹಣ ತೆಗೆದುಕೊಂಡಿದ್ದಾರೆ. ಅದರ ವಸೂಲಿಗಾಗಿ ಬಂದಿದ್ದೇನೆ."

"ನೀವು ನಾಳೆ ಬಂದರೆ ಒಳ್ಳೆಯದು. ಇಂದು ಅವನು ಬರುವ ನೆಚ್ಚಿಗೆಯೂ ಇಲ್ಲ."

"ನೀವು ಹೇಳಿ ಹೇಳಿದ ಹಾಗೆ ಬರಲು ಇದು ಕೋರ್ಟಿನ ಕೆಲಸ. ಇಂದು ಹಣ ಕಟ್ಟದಿದ್ದರೆ ಜಪ್ತಿ ಮಾಡಬೇಕೆಂದು ಕೋರ್ಟಿನ ಆರ್ಡರಾಗಿದೆ."

"ನೀವು ಮೊದಲೆ ತಿಳಿಸಿ ಬರಬೇಕಾಗಿತ್ತು. ಇದ್ದಕ್ಕಿದ್ದಂತೆ ಹೀಗೆ ಬಂದರೆ ಹಣ ಕಟ್ಟುವುದು ಹೇಗೆ ?"

"ಚೆನ್ನಾಗಿ ಹೇಳಿದಿರಿ; ಎಷ್ಟು ತಿಳಿಸಿದರೂ ಮನಸ್ಸಿನ ಮೇಲೇ ಹಾಕಿಕೊಳ್ಳದಿದ್ದರೆ ಯಾರ ತಪ್ಪು ಅದು ? ಉದಾಸೀನ ಮಾಡಿದ್ದಕ್ಕೆ ಅನುಭವಿಸಬೇಕು."

"ಎಷ್ಟು ಹಣ ಕಟ್ಟಬೇಕು ?"

"ಬಡ್ಡಿಯೆ ಸುಮಾರು ಆರು ನೂರು ರೂಪಾಯಿ ವರೆಗಾಗುತ್ತೆ. ಅಸಲಿನ ಬಗ್ಗೆ ಸ್ವಲ್ಪವಾದರೂ ಕಟ್ಟಲೆ ಬೇಕು."

"ಅಷ್ಟು ಹಣವನ್ನು ನಿಂತ ನಿಲುವಿನಲ್ಲಿ ಎಲ್ಲಿ ಒದಗಿಸುತ್ತಾನೆ ? ಅವನೂ ಕೈಸೋತಿದ್ದಾನೆ. ದೊಡ್ಡ ಮನಸ್ಸು ಮಾಡಿ ಸ್ವಲ್ಪ ದಿನ ಅವಧಿಕೊಡಬೇಕು."

"ಅವಧಿ ಕೊಟ್ಟು ಕೊಟ್ಟು ಸಾಕಾಗಿ ಬಂದಿರುವುದು. ಇನ್ನು ಏನೂ ಮಾಡುವಂತಿಲ್ಲ—" ಎಂದು ಅಮೀನನ ಕಡೆ ಹೊರಳಿ ಹೇಳಿದರು, "ಏಳಯ್ಯ, ಮನೆಯಲ್ಲಿರುವ ಚರ ಸ್ವತ್ತುಗಳ ಪಟ್ಟಿ ತಯಾರು ಮಾಡು; ಹೊತ್ತಾಗುತ್ತೆ."

ಅಮೀನನು ತನ್ನ ಕೆಲಸಕ್ಕಾಗಿ ಎದ್ದುನಿಂತುದನ್ನು ನೋಡಿ ಶ್ರೀದೇವಮ್ಮ ಗಾಬರಿಯಾಗಿ ಹೇಳಿದರು,

"ಮಧ್ಯಾಹ್ನ ಎರಡು ಗಂಟೆಯ ವರೆಗಾದರೂ ನೋಡಿ, ಬರದಿದ್ದರೆ ನಿಮ್ಮಿಷ್ಟದಂತೆ ಮಾಡಬಹುದು."

ಶೆಟ್ಟರು ಜತೆಯಲ್ಲಿದ್ದವರ ಮುಖ ನೋಡಿದರು. ಅವರು ತಲೆ ಹಾಕಲು, ತಾವೂ ಸಮ್ಮತಿ ಸೂಚಿಸಿದರು. ಶ್ರೀದೇವಮ್ಮ ಮೆಲ್ಲಗೆ ಒಳಗೆ ಜಾರಿದರು.

ಸೀತಾರಾಮು ಹೊರಗೆ ನಡೆದ ಮಾತುಕತೆಯೆಲ್ಲವನ್ನೂ ಕೇಳಿಕೊಂಡಿದ್ದ. ಇನ್ನು ತಾನು ಒಳಗೇ ಇದ್ದರೆ ಪರಿಸ್ಥಿತಿ ವಿಕೋಪಕ್ಕೆ ಹೋಗುತ್ತದೆಂದರಿತು ಡ್ರಾಯರಿನಿಂದ ನೋಟಿನ ಕಂತೆಯೊಂದನ್ನು ತೆಗೆದು ಕಿಸೆಗೆ ತುಂಬಿ, ತಾಯಿಯಿಂದ ಸೂಚನೆ ಬರುವ ಮುನ್ನವೆ, ಹಿತ್ತಲು ಬಾಗಿಲಿನಿಂದ ಸದ್ದು ಮಾಡದೆ ಹೊರಗೆ ಹೋಗಿ, ಆಗ ತಾನೆ ಬಂದವನಂತೆ ಮುಂಬಾಗಿಲಿನಿಂದ ಅವರ ಮುಂದೆ ಹಾಜರಾದ.

ಅವನಿಗೆ ನವರಸಗಳನ್ನು ಆಯಾ ಸಮಯಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳುವ ಕಲೆ ಚೆನ್ನಾಗಿ ಕೈಗೂಡಿತ್ತು. ಹೊಟ್ಟೆಯಲ್ಲಿ ಕುದಿಯುತ್ತಿದ್ದರೂ, ಮೇಲೆ ಮುಗುಳುನಗೆಯ ಮುಸುಕೆಳೆದು, ಏನೂ ತಿಳಿಯದವನಂತೆ ನಮಸ್ಕರಿಸಿ ಮಾತಿಗೆ ಮೊದಲಿಟ್ಟ.

"ಕ್ಷಮಿಸಬೇಕು—ಎಷ್ಟು ಹೊತ್ತಾಯಿತು ತಾವು ಬಂದು? ನಾನು ಕಡಕೊಳಕ್ಕೆ ಹೋಗಬೇಕೆಂದು ಹೊರಟವನು. ಅಕಸ್ಮಾತ್ ರೈಲು ತಪ್ಪಿದ್ದುದರಿಂದ ತಮ್ಮ ದರ್ಶನದ ಪುಣ್ಯ ಪಡೆದೆ. ಬಂದದ್ದು ಒಳ್ಳೆಯದೆ ಆಯಿತು."

"ಹೌದು, ಬಂದದ್ದು ಒಳ್ಳೆಯದೆ ಆಯಿತು. ಇಲ್ಲದಿದ್ದರೆ ಉಭಯತ್ರರಿಗೂ ತೊಂದರೆಯಿತ್ತು. ಕಡೆಗೂ ನೀವು ನನ್ನನ್ನು ನಿಮ್ಮ ಮನೆ ಬಾಗಿಲದವರೆಗೆ ಬರಮಾಡಿಕೊಂಡೇ ಬಿಟ್ಟಿರಿ. ಹಣ ತೆಗೆದುಕೊಂಡ ಲಾಗಾಯಿತು ಆ ಕಡೆ ಮುಖ ಸಹ ಹಾಕಲಿಲ್ಲ. ನಾನೂ ಇದುವರೆಗೆ ಕಾದು ನೋಡಿದೆ. ಈಗ ವಿಧಿಯಿಲ್ಲದೆ ಜಪ್ತಿ ಆರ್ಡರ್ ತೆಗೆಯಬೇಕಾಯಿತು. ನನಗೀಗ ಹಣದ ಅಡಚಣೆ ತುಂಬಾ ಇದೆ. ಬಡ್ಡಿ ಪೂರ್ತಾ ಚುಕ್ತಾ ಮಾಡಿ ಅಸಲಿನ ಬಗ್ಗೆ ಅರ್ಧ ಹಣವನ್ನಾದರೂ ನೀವೀಗ ಕೊಡಲೇ ಬೇಕು."

"ಇದ್ದಕ್ಕಿದ್ದಂತೆ ಇಷ್ಟು ದೊಡ್ಡ ಪೆಟ್ಟು ಕೊಟ್ಟರೆ ಹೇಗೆ ಸಹಿಸಲಿ? ಸ್ವಲ್ಪ ಕನಿಕರ ತೋರಿಸಬೇಕು."

"ಕನಿಕರ ಅನ್ನುವುದು ಈಗ ನನ್ನಲ್ಲಿ ಹೆಸರಿಗೂ ಇಲ್ಲ. ನಿಮ್ಮಂಥವರು ಎಂದೋ ಅದನ್ನು ಕೊಲೆ ಮಾಡಿಬಿಟ್ಟಿರಿ."

"ಮನಸ್ಸನ್ನು ಅಷ್ಟು ಕಲ್ಲು ಮಾಡಬೇಡಿ. ತೆಗೆದುಕೊಳ್ಳಿ, ಈಗ ನನ್ನ ಲ್ಲಿರುವುದು ಇಷ್ಟೆ. ಇನ್ನೆರಡು ತಿಂಗಳಲ್ಲಿ ಪೂರ್ತ ಹಣ ಸಲ್ಲಿಸಿ ಪತ್ರ ವಾಪಸ್ಸು ಪಡೆಯುತ್ತೇನೆ" ಎಂದು ಸೀತಾರಾಮು ಒಂದೊಂದು ರೂಪಾಯಿನ ನೂರು ನೋಟುಗಳನ್ನು ಕಿಸೆಯಿಂದ ತೆಗೆದು ಎಣಿಸಿಟ್ಟನು.

ಶೆಟ್ಟರು ಅದನ್ನು ಕಡೆಗಣ್ಣಿನಿಂದಲೂ ನೋಡದೆ ರೊಯ್ಯನೆ ಎಸೆದು ಹೇಳಿದರು,

"ನಿಮ್ಮಲ್ಲಿ ನಾನು ಭಿಕ್ಷೆ ಬೇಡಲು ಬಂದಿಲ್ಲ. ಬಡ್ಡಿ ಬಾಬ್ತು ಆರುನೂರು ರೂಪಾಯಿ, ಅಸಲಿನ ಅರ್ಧ ಹಣ ಇರಿಸಿ ಮಾತನಾಡಿ. ಹಿಂದಿನ ಕೃಷ್ಣಶೆಟ್ಟಿ ಯಲ್ಲ ನಾನು. ಇನ್ನು ಮುಂದೆ ನನ್ನಲ್ಲಿ ನಿಮ್ಮ ಯಾವ ಆಟವೂ ನಡೆಯುವು ದಿಲ್ಲ."

"ನೀವು ಅಷ್ಟು ಕಟ್ಟುನಿಟ್ಟಾಗಿ ಹೇಳಿದರೆ ನಾನೇನು ಮಾಡಲಿ? ಈಗ ನನ್ನ ಹತ್ತಿರವಿರುವುದು ಅಷ್ಟೆ!"

ಅದುವರೆಗೆ ಮಿಟಿಮಿಟಿ ನೋಡುತ್ತಾ ಕುಳಿತಿದ್ದ ಭಟ್ಟರು ನಡುವೆ ಬಾಯಿ ಹಾಕಿದರು,

"ಏನಾದರೂ ಮಾಡಿ ಕೊಟ್ಟುಬಿಡು ಸೀತಾರಾಮು. ಬೆಳಿಸಿಕೊಂಡು ಹೋದರೆ ನಿನಗೇ ಹೊರೆಯಲ್ಲವೇ?"

ಭಟ್ಟರ ಆ ಉಪಚಾರದ ಮಾತು ನಾಣಿಯನ್ನು ಕೆರಳಿಸಿತು. ರೇಗಿ ಹೇಳಿದ,

"ಆ ಉಪಚಾರದ ಮಾತೆಲ್ಲ ಬೇಡಿ ಭಟ್ಟರೆ, ಮೊದಲು ಕೇಳಿದಷ್ಟು ಹಣ ಇರಿಸಿ ಮಾತನಾಡೆಂದು ಹೇಳಿ. ದಾಕ್ಷಿಣ್ಯಕ್ಕೆ ತಲೆಕೊಟ್ಟೇ ನಾವೀಗ ಈ ಸ್ಥಿತಿಗೆ ಬಂದದ್ದು."

"ನಿನ್ನನ್ನಾರೂ ಇಲ್ಲಿ ಕರೆಸಲಿಲ್ಲ, ತೆಪ್ಪಗಿರಯ್ಯ. ಕೊಟ್ಟವರು ಅವರಿದ್ದಾರೆ, ತೆಗೆದುಕೊಂಡವನು ನಾನಿದ್ದೇನೆ. ನಾವು ನೋಡಿಕೊಳ್ಳುತ್ತೇವೆ. ನಡುವೆ ನಿನಗ್ಯಾಕೆ ತಲೆಹರಟೆ!" ಸೀತಾರಾಮುವೂ ಕೆರಳಿ ನುಡಿದ.

"ಸ್ವಲ್ಪ ಹಲ್ಲು ಹಿಡಿದು ಮಾತಾಡು ಸೀತಾರಾಮು. ಕೊಟ್ಟವರು ಅವ ರಾದರೆ ಕೊಡಿಸಿದವರ ತಮ್ಮ ನಾನು. ನಾಳೆ ನೀನು ಹೇಳಕೇಳದೆ ತಲೆ ಮರೆಸಿಕೊಂಡು ಓಡಿ ಹೋದರೆ ತಲೆ ಕೊಡಬೇಕಾದವರು ನಾವು, ಅವರಲ್ಲ; ತಿಳಿಯಿತೆ? ಜೋಕೆ! ಇನ್ನೊಂದು ಬಾರಿ ಈ ಮಾತಾಡೀಯೆ!"

ನಾಣಿಯ ಪ್ರತಿಯೊಂದು ಮಾತೂ ಸೀತಾರಾಮುವಿನ ಕೋಪವನ್ನು ನೆತ್ತಿಗೇರಿಸುತ್ತಿತ್ತು. ಆ ಸಮಯದಲ್ಲಿ ವಿರಸಕ್ಕೆಡೆಗೊಟ್ಟರೆ ಅಪಾಯ ತನಗೇ ಎಂದು ತಿಳಿದಿದ್ದ ಅವನು, ಬಂದ ಕೋಪವನ್ನು ದವಡೆಯಲ್ಲಿ ತಿಕ್ಕಿ ಸಮಾಧಾನ ತಂದುಕೊಂಡು ಶೆಟ್ಟರಿಗೆ ಹೇಳಿದ,

"ಈ ಸಮಯದಲ್ಲಿ ನನ್ನ ಮೇಲೆ ಸ್ವಲ್ಪ ಕರುಣೆದೋರಬೇಕು. ನಾನೀಗ ಬರಿಗೈ ಆಗಿದ್ದೇನೆ. ಇನ್ನೊಂದು ನೂರು ರೂಪಾಯಿಗಳನ್ನು ಹೇಗಾದರೂ ಮಾಡಿ ಕೊಡುತ್ತೇನೆ. ಅಷ್ಟರಲ್ಲಿ ನೀವು ತೃಪ್ತರಾಗಿ ಹೋಗಬೇಕು" ಎಂದು ಉತ್ತರಕ್ಕೆ ಕಾಯದೆ ಹೊರಟದ್ದವನು, ನಾಣಿ ಮಾತಿಗೆ ಮೊದಲಿಡಲು ಹಾಗೆಯೆ ನಿಂತನು.

"ಅಷ್ಟಕ್ಕೆ ನೀವು ಖಂಡಿತ ಒಪ್ಪಕೂಡದು ಶೆಟ್ಟರೆ. ಕಡೆಗೆ ಬಡ್ಡಿಯ ನ್ನಾದರೂ ಪೂರ್ತಿ ತೆಗೆದುಕೊಳ್ಳಬೇಕು. ಅವನು ಮಹಾಕೊರಮ. ಮೋಸ ಮಾಡುವುದರಲ್ಲಿ ಒಂದನೆ ನಂಬರು. ಇದೇ ಶ್ಯಾಮರಾಯರ ಅಳಿಯ ಅನಂತು ಇದ್ದಾನಲ್ಲಾ, ಅವನನ್ನು ನಮ್ಮ ಗದ್ದೆಗೆ ಕರೆದುಕೊಂಡು ಹೋಗಿ, ನಮ್ಮ ರೈತನ ಕೈ ಬೆಚ್ಚಗೆ ಮಾಡಿ, ಆ ಜಮೀನು ತನ್ನದೆಂದು ಅವನಿಂದ ಹೇಳಿಸಿ, ಅದರ ಆಧಾರದ ಮೇಲೆ ಹತ್ತು ಸಾವಿರ ರೂಪಾಯಿ ಸಾಲ ಬೇಡಿದ್ದ. ಅನಂತು ನಮ್ಮಣ್ಣನಂತಲ್ಲ; ಗಟ್ಟಿಗನಾದ್ದರಿಂದ ಈ ಕೊರಮನ ಹಿಡಿತದಿಂದ ತಪ್ಪಿಸಿ ಕೊಂಡ. ಈಗ ಕನ್ನಗತ್ತರಿಗೆ ಸಿಕ್ಕಿದವರು ನಾವು. ನಮಗೂ ನಾಮ ಎಳೆದು, ಹೇಳದೆ ಕೇಳದೆ ಈ ಊರಿನಿಂದ ಪರಾರಿಯಾಗಬೇಕೆಂದಿದ್ದಾನೆ. ಮಾತಿಗೆ ಮರುಳಾಗಿ ಮೋಸಹೋದೀರಿ. ಬಡ್ಡಿ ಹಣ ಪೂರ್ತಿ ಕೊಡವಿದ್ದರೆ ನಿರ್ದಾಕ್ಷಿಣ್ಯವಾಗಿ ಜಪ್ತಿ ಮಾಡಿಸಿ ಬಿಡಿ."

ನಾಣಿಯ ಮೈ ಮಾತಿನ ಕಾವಿನಿಂದ ಥರಥರ ನಡುಗುತ್ತಿತ್ತು.

ಅನಂತು ಸೀತಾರಾಮುವಿನ ವ್ಯವಹಾರದ ವಿಷಯ ಈವರೆಗೆ ಯಾರಿಗೂ ತಿಳಿದಿರಲಿಲ್ಲ. ಯಾವ ಮಾತನ್ನೆ ಆಗಲಿ, ಭಟ್ಟರಿಗೆ ತತ್‌ಕ್ಷಣ ತಿಳಿಸುತ್ತಿದ್ದ

ನಾಣಿ ಕೆಲಸದ ಅವಾಂತರದಲ್ಲಿ ಇದನ್ನು ಮರೆತಿದ್ದ. ಈ ವಿಷಯ ಅಲ್ಲಿದ್ದವ ರನ್ನು ಆಶ್ಚರ್ಯಗೊಳಿಸಿತು. ಸೀತಾರಾಮುವಿನ ಚಾಣಕ್ಯತನಕ್ಕೆ ಕ್ಷಣಮಾತ್ರ ತಲೆದೂಗಿದರೂ ಅವನ ವ್ಯಕ್ತಿತ್ವಕ್ಕೆ ಹೆದರಿದರು. ಸ್ವಲ್ಪ ಹೊತ್ತು ಮೌನ ತಾಳಿತು, ಆ ವಾತಾವರಣ. ಎಲ್ಲರೂ ಗರಬಡಿದವರಂತೆ ಸೀತಾರಾಮುವ ನ್ನೊಮ್ಮೆ, ನಾಣಿಯನ್ನೊಮ್ಮೆ ಮಿಟಿ-ಮಿಟಿ ನೋಡುತ್ತಾ ಕುಳಿತರು.

ತನ್ನ ಕಾರಸ್ಥಾನವೆಲ್ಲಾ ಬಯಲಾದುದಕ್ಕೆ ಸೀತಾರಾಮು ಹೆದರಿ ನಡು ಗಿದ. ಬೆವರು ಅವನ ಮೈ ತೊಳೆಯಿತು. ಮೈ ಕೊಡವಿಕೊಂಡ. ಬೆವರಿನ ಹನಿಗಳ ಜೊತೆಯಲ್ಲಿ ಹೆದರಿಕೆ ಕರಗಿ ಆ ಸ್ಥಳದಲ್ಲಿ ಅಭಿಮಾನ ತಲೆಯೆತ್ತಿ ನಿಂತಿತು. ಓಡಿ ಹೋಗಿ ನಾಣಿಯ ಕುತ್ತಿಗೆಯ ರಕ್ತ ಹೀರಬೇಕೆಂದು ಕಾತರಿ ಸಿತು, ಅವನ ಜೀವ. ವಿಧಿಯಿಲ್ಲದೆ ಆ ಇಚ್ಛೆಯನ್ನು ತಡೆದು ಹಿಡಿದ. ಆ ವೇಗ ಅವನನ್ನು ಒಳಕ್ಕೆ ರಭಸದಿಂದ ನೂಕಿತು.

ಹೆಂಡತಿಯ ಪೆಟ್ಟಿಗೆ, ತಾಯಿಯ ಕೃಷ್ಣಾಜಿನದ ಚೀಲ, ಮಕ್ಕಳಗೋಲಕ ಎಲ್ಲವನ್ನೂ ಜಾಲಾಡಿ-ಕುಟ್ಟಿ ಪುಡಿ ಮಾಡಿ, ನೂರು ರೂಪಾಯಿ ಒಟ್ಟುಮಾಡಿ ಶೆಟ್ಟರ ಮುಂದೆ ತಂದಿರಿಸಿದ. ಶೆಟ್ಟರು ಸಗ್ಗಲಿಲ್ಲ. ಬಡ್ಡಿ ಬಾಬತ್ತಿನ ಹಣ ಪೂರ್ಣ ಕೊಟ್ಟ ಹೊರತು ಮುಟ್ಟುವುದಿಲ್ಲವೆಂದು ಕಟ್ಟು-ನಿಟ್ಟಾಗಿ ಹೇಳಿದರು.

ಸೀತಾರಾಮು ಸೋತ. ವಿಧಿಯಿಲ್ಲದೆ ತಾಯಿಯ ಮುಂದೆ ಆ ದಿನ ಸಟ್ಟಾದಲ್ಲಿ ಬಂದ ನಾನ್ನೂರು ರೂಪಾಯಿಗಳ ವಿಷಯ ತಿಳಿಸಿ, ಅದರ ಆಧಾ ರದ ಮೇಲೆ ತಾಯಿ ಮತ್ತು ಹೆಂಡತಿಯ ಕುತ್ತಿಕೆಯಲ್ಲಿದ್ದ ಚಿನ್ನದ ಸರಗಳನ್ನು ಬೇಡಿದ. ಸೀತಾರಾಮು ಹಣದ ವಿಷಯದಲ್ಲಿ ತಮಗೆ ವಂಚನೆ ಮಾಡಿದ್ದನ್ನು ನೆನೆಸಿ ಶ್ರೀದೇವಮ್ಮ ಬೇಸರಪಟ್ಟರೂ, ಆ ಸಮಯದ ಕಷ್ಟಕ್ಕೆ ಕರಗಿ ಮರು ಮಾತಾಡದೆ ಸರವನ್ನು ತೆಗೆದುಕೊಟ್ಟರು. ಜಾನಕಿಗೆ ದುಃಖವಾದರೂ ವಿಧಿ ಯಿಲ್ಲದೆ ಮೌನವಾಗಿ ಅತ್ತೆಯನ್ನು ಅನುಸರಿಸಿದಳು.

ಆ ಸರಗಳನ್ನು ತೆಗೆದುಕೊಂಡು ಹೋಗಿ ನಾಟುಕೋಟೆ ಬ್ಯಾಂಕಿನಲ್ಲಿ ಅಡುವಿರಿಸಿ ನಾನ್ನೂರು ರೂಪಾಯಿಗಳನ್ನು ತಂದು ಬಡ್ಡಿ ಹಣ ತುಂಬಿದನು. ಎಲ್ಲರೂ ಎದ್ದು ನಿಂತರು. ಭಟ್ಟರಿಗೆ ಥಟ್ಟನೆ ಏನೋ ಹೊಳೆದು ಸೀತಾರಾಮು ವಿಗೆ ಹೇಳಿದರು,

"ನೀನು ಕೋಪ ಮಾಡಿಕೊಳ್ಳದಿದ್ದರೆ ಒಂದು ಮಾತು ಹೇಳುವೆನು."

"ಹೇಳಿ, ಹಿತ ಬಯಸಿ ಹೇಳಿದರೆ ಕೋಪವೇಕೆ ಮಾಡಿಕೊಳ್ಳಬೇಕು !"

"ಗೋಪಿಯ ಸೆಕ್ಯೂರಿಟಿ ತೆಗೆದು ನಿನ್ನ ಮನೆ ಆಧಾರಮಾಡಿ ಹೊಸ ಪತ್ರ ಬರೆಸಿಬಿಡು—ಎಲ್ಲ ಸರಿ ಹೋಗುತ್ತೆ."

"ಇದು ನನ್ನ ಮನೆಯಲ್ಲ–ಮಾವನದು. ನನ್ನದಾಗಿದ್ದಿದ್ದರೆ ಆ ಕೆಲಸ ವನ್ನು ಆಗಲೆ ಮಾಡುತ್ತಿದ್ದೆ."

"ಮತ್ತೆ ಯಾರೊ ಇದನ್ನು ನಿನ್ನದೆಂದೆ ಹೇಳಿದರಲ್ಲ !"

"ತಾಳಿ, ಪತ್ರ ತಂದು ತೋರಿಸುತ್ತೇನೆ" ಎಂದು ಸರ್ರನೆ ಒಳಗೆ ನುಗ್ಗಿ, ಕಬ್ಬಿಣದ ಕಪಾಟಿನಲ್ಲಿರಿಸಿದ್ದ ಪತ್ರ ತಂದು ತೋರಿಸಿದನು.

ದೂರದರ್ಶಿಯಾದ ಸೀತಾರಾಮು ಮುಂದೆ ಹೀಗೆಲ್ಲಾ ಆಗಬಹುದೆಂದು ತಿಳಿದೇ, ತನ್ನ ಮನೆಯನ್ನು ತತ್ಕಾಲಕ್ಕೆ 'ಶುದ್ಧ ಶುಂಠಿ' ಮಾವನ ಹೆಸರಿಗೆ ಮಾಡಿದ್ದ. ಅದು ಅವನನ್ನು ಈ ಸಮಯದಲ್ಲಿ ಕಾಯಿತು. ಪತ್ರ ಕಂಡು ಸದ್ದಿಲ್ಲದೆ ಎಲ್ಲರೂ ಹೊರಟರು. ಸೀತಾರಾಮು ತಲೆಬಾಗಿಲ ವರೆಗೂ ಮೌನ ವಾಗಿ ಹೋಗಿ ಸಾಗಹಾಕಿದ.

ಈ ಘಟನೆ ಅವನ ಜೀವನದ ಸೋಲಿನ ಮೊದಲ ಚಿಹ್ನೆಯಾಗಿತ್ತು. ಅದರಿಂದ ಅವನ ತಲೆ ನೆಮ್ಮದಿಯಿಲ್ಲದೆ ರಾಟೆಯಂತೆ ಗಿರಿಗಿರಿ ಸುತ್ತುತ್ತಿತ್ತು. ಗಂಟೆ ಮೂರಾದರೂ ಊಟಕ್ಕೇಳಲಿಲ್ಲ. ಕರೆಯಲು ಬಂದವರ ಮೇಲೆ ಕೆರ ಳಿದ ಹಾವಿನಂತೆ ಬೀಳುತ್ತಿದ್ದ. ಅವನ ನಾಡಿ–ನಾಡಿಯೂ ನಾಣಿಯ ರಕ್ತ ವನ್ನು ಬೇಡುತ್ತಿತ್ತು. ಹೀರುವ ಹಾದಿಯನ್ನು ಹುಡುಕುತ್ತಿದ್ದ. ಮಿಂಚಿನ ವೇಗದಲ್ಲಿ ಹೊಳೆದ ಯಾವುದೊ ಒಂದು ಭಾವನೆ ಅವನ ಮನಸ್ಸಿಗೆ ನೆಮ್ಮದಿ ಯನ್ನುಂಟು ಮಾಡಿತು. ಕೂಡಲೆ ತಾಯಿಯನ್ನು ಕರೆದು ಹೊರಗಿನವರ್ಯಾ ರಿಗೂ ಕೇಳದಂತೆ, ಮೆಲ್ಲನೆ ಏನೋ ಪಿಸುಗುಟ್ಟಿ, ಅವರನ್ನು ಎಲ್ಲಿಗೋ ಕಳು ಹಿಸಿ ಕೊಟ್ಟು, ಹುಚ್ಚನಂತೆ ತನ್ನಲ್ಲೆ ತಾನು ವಿಕಾರವಾಗಿ ನಕ್ಕು ಊಟಕ್ಕೆದ್ದು ಹೊರಟ.

# ೯

ಶಿವಮೊಗ್ಗೆಗೆ ನಾಣಿ ಹೋಗಿ ಆಗಲೆ ಐದಾರು ದಿನವಾಗಿತ್ತು. ಅಲ್ಲಿಂದ ಈ ದಿನ ರಂಗಮ್ಮನಿಗೊಂದು ಪತ್ರವೂ ಬಂದಿತ್ತು. ಗೋಪಿ ನಾಣಿಗೆ ಲಗ್ನ ನಿಶ್ಚಯಿಸಿ ಬರೆದಿದ್ದ. ಲಗ್ನಕ್ಕೆ ಕೇವಲ ಒಂದು ವಾರ ಉಳಿದಿತ್ತು. ಇನ್ನೆರಡು ದಿನದಲ್ಲಿ ನಾವಿಬ್ಬರೂ ಬಂದು, ಲಗ್ನಕ್ಕೆ ಬೇಕಾದ ಬಟ್ಟೆ–ಬರೆ, ಮಂಗಳದ್ರವ್ಯ ವನ್ನು ಹೊಂದಿಸಿ, ಮನೆಯವರನ್ನು ಕರೆದುಕೊಂಡು ಹೋಗುವೆವೆಂದೂ, ಅಷ್ಟ ರಲ್ಲಿ ಭಟ್ಟರಿಗೆ ತಿಳಿಸಿ ಐದಾರು ದಿನದ ಮಟ್ಟಿಗೆ ಮನೆಗೊಂದು ಜನ ಗೊತ್ತು ಮಾಡಬೇಕೆಂದೂ ತಿಳಿಸಿದ್ದ. ಹುಡುಗಿ ತುಂಬಾ ಲಕ್ಷಣವಾಗಿದ್ದಾಳೆಂದೂ ಮನೆತನ ಒಳ್ಳೆಯದೆಂದೂ, ನಾಣಿ ತುಂಬಾ ಮೆಚ್ಚಿದನೆಂದೂ ಬರೆಯಲು ಮರೆಯಲಿಲ್ಲ.

ರಂಗಮ್ಮನಿಗೆ ಹಿಡಿಸಲಾರದಷ್ಟು ಹಿಗ್ಗು. ನಾಣಿಗೆ ಒಪ್ಪಿಗೆಯಾದ ಹುಡುಗಿಯೇ ದೊರೆತದ್ದು ಅವರ ಸಂತೋಷವನ್ನು ಇಮ್ಮಡಿಗೊಳಿಸಿತು. ಹುಡುಗಿಯನ್ನು ನೋಡುವುದರಲ್ಲಿ ಆತುರ. ಮನಸ್ಸು ಬೇಕಾದ ರೂಪನ್ನು ಚಿತ್ರಿಸಿ ಆನಂದಪಟ್ಟಿತು. ತಮ್ಮ ಹುಚ್ಚಿಗೆ ತಾವೇ ನಕ್ಕರು. ಇದ್ದಕ್ಕಿದ್ದಂತೆ ಮನಸ್ಸು ಮತ್ತೊಂದು ದಿಕ್ಕಿಗೆ ಹಾರಿತು. ಆ ಹಾದಿಯಲ್ಲಿ ಲಗ್ನಕ್ಕೆ ಬೇಕಾದ ಸಲಕರಣೆಗಳನ್ನು ಹೊಂದಿಸುವ ಸಡಗರವೆ ತುಂಬಿತ್ತು. ಎಲ್ಲವನ್ನೂ ಒಟ್ಟು ಮಾಡತೊಡಗಿದರು. ಮನಸ್ಸಿನ ಓಡಾಟದಲ್ಲಿ ಒಲೆಯ ಮೇಲೆ ಹಾಲಿರಿಸಿ ಬಂದಿರುವುದು ನೆನಪಿಗೇ ಬರಲಿಲ್ಲ.

ಒಲೆಗೆ ಉಕ್ಕಿದ ಹಾಲಿನ ವಾಸನೆ ಹಿಡಿದು, ಶಕುಂತಳ ಅಡಿಗೆ ಮನೆಗೆ ಹೋಗಿ ಹಾಲಿಳಿಸಿ, ತಾಯಿಯನ್ನು ಹುಡುಕಿಕೊಂಡು ಅಂಗಳಕ್ಕೆ ಬಂದಳು. ಕೈಲಿ ಕಾಗದ ಹಿಡಿದು ರಂಗಮ್ಮ ಶಿಲಾಮೂರ್ತಿಯಂತೆ ಕುಳಿತಿದ್ದರು. ಬಿಟ್ಟ ಕಣ್ಣು ಬಿಟ್ಟಂತೆ ತಾಯಿಯನ್ನು ನೋಡುತ್ತಾ ನಿಂತಳು. ತಾಯಿಯ ತುಟಿಯ ಮೇಲೆ ಮೆಲುನಗೆಯಾಡುತಿತ್ತು. ತುಂಟ ಕೃಷ್ಣ ಚಿಟಾರನೇ ಚೀರಿ ರಂಗ ಮ್ಮನ ಸಮಾಧಿಯನ್ನು ಭಂಗಪಡಿಸಿದ. ಅವನ ಚೀರಾಟಕ್ಕೆ ಕೈಲಿದ್ದ ಕಾಗದ ಹೆದರಿ ಕೆಳಗೆ ಬಿತ್ತು. ಕಣ್ಣು ಎದುರಿಗಿದ್ದ ಶಕುಂತಳೆಯನ್ನು ಕಂಡು ನಾಚಿತು. ಕಾಗದ ಎತ್ತಿಹಿಡಿದು ಶಕುಂತಳೆಗೆ ಕೊಡುತ್ತಾ ಹೇಳಿದರು,

"ನಾಣಿಗೆ ಲಗ್ನ ನಿಶ್ಚಯ ಮಾಡಿಬಿಟ್ಟಿದ್ದಾರೆ. ಇನ್ನು ನಾಲ್ಕೈದು ದಿನ ದಲ್ಲಿ ಎಲ್ಲ ಅಣಿ ಮಾಡಿಕೊಂಡು ಹೊರಡಬೇಕು. ಉಳಿದದ್ದು ಹೇಗೋ ಆಗುತ್ತೆ. ನಿನ್ನನ್ನು ಕರೆದುಕೊಂಡು ಹೋಗುವುದೆ ಇರುವುದು. ಹಸಿ ಮೈ–ಹೆಚ್ಚುಕಡಿಮೆಯಾದರೆ ಕಷ್ಟ."

ರಂಗಮ್ಮನ ಮಾತು ಶಕುಂತಳೆಯ ಕಿವಿಗೆ ನಾಟಲೆ ಇಲ್ಲ. ಅಣ್ಣನ ಕಾಗದ ಕಂಡು ಅವಳೂ ಹಿಗ್ಗಿದಳು. ನಾಣಿಗೆ ತಕ್ಕ ಹೆಂಡತಿ ಸಿಕ್ಕಿದ್ದು ಸಮಾಧಾನ ತಂದಿತ್ತು. ಎಲ್ಲಕ್ಕಿಂತ ಅವಳ ಕಣ್ಣು ಓಡಿದುದು ಮನೆತನದ ವಿಷಯದ ಮೇಲೆ. ಅವಳ ದೃಷ್ಟಿಯಲ್ಲಿ ವಿದ್ಯೆ–ರೂಪು–ಸಂಪತ್ತಿಗಿಂತಲೂ ಮನೆತನ ಮುಖ್ಯವಾಗಿತ್ತು. ಆ ಬಗ್ಗೆ ತನಗಾದ ತೃಪ್ತಿಯನ್ನು ತಾಯಿಯ ಮುಂದೆ ಆಡಿ ತಿಳಿಸುವುದನ್ನೂ ಮರೆಯಲಿಲ್ಲ.

"ಒಳ್ಳೆ ಮನೆತನದ ಹುಡುಗಿಯೆಂದು ಬರೆದಿದ್ದಾನೆ; ಅಂದ ಮೇಲೆ ಹುಡುಗಿ ಒಳ್ಳೆಯವಳಾಗಿರಲೆ ಬೇಕು; ಅಲ್ಲವೇನಮ್ಮ ?"

"ಬರಿಯ ಮನೆತನದ ಮೇಲೆ ಮನುಷ್ಯನ ಗುಣ ತೂಕ ಮಾಡುವುದಕ್ಕಾಗುವುದಿಲ್ಲ. ಒಳ್ಳೆಯವರಾಗಲು ಮನೆತನದ ಜತೆಗೆ ಪೂರ್ವಜನ್ಮದ ಉತ್ತಮ ಸಂಸ್ಕಾರದ ಬಲವೂ ಬೇಕು."

"ಈ ತತ್ವವನ್ನು ಈಗಿನವರು ಒಪ್ಪುವುದಿಲ್ಲವಲ್ಲಮ್ಮ—ಎಲ್ಲಾ ಸುಳ್ಳೆಂದು ಹೇಳುತ್ತಾರೆ. ನನಗೂ ನಿನ್ನಳಿಯನಿಗೂ ಆಗಾಗ್ಗೆ ಈ ಬಗ್ಗೆ ವಾದಬೀಳುತ್ತಲೆ ಇರುತ್ತೆ. ಪಾಶ್ಚಾತ್ಯರ ಅಭಿಪ್ರಾಯ ತೆಗೆದುಕೊಂಡು ನನ್ನ ಬಾಯಿ ಕಟ್ಟಿಸಿ ಬಿಡುತ್ತಾರೆ."

"ಏನೋಪ್ಪಮ್ಮ, ನನಗೇನೊ ಹಿರಿಯರ ಈ ಅಭಿಪ್ರಾಯದಲ್ಲಿ ಸುಳ್ಳಿದೆಯೆಂದೆನಿಸುವುದಿಲ್ಲ. ರಸಋಷಿಗಳು ತಮ್ಮ ಅನುಭವಸಿದ್ಧವಾದ ಮಾತನ್ನು ಹೇಳಿದ್ದಾರೆಂದು ನನ್ನ ನಂಬಿಕೆ. ಇಷ್ಟರ ಮೇಲೆ ಹೇಗೊ ಯಾರು ಕಂಡಿದ್ದಾರೆ." ಎಂದು ಅಡಿಗೆಮನೆ ಕಡೆ ಹೊರಟರು. ಶಕುಂತಳೆಯೂ ಕೈಲಿದ್ದ ಕಾಗದವನ್ನು ಕಿಟಕಿಗೂಡಿನಲ್ಲಿರಿಸಿ ತನ್ನ ಕೊಠಡಿಗೆ ಜಾರಿದಳು.

ರಂಗಮ್ಮ ಕಾಫಿಗೆ ಸಿದ್ಧ ಮಾಡುತ್ತಿದ್ದಂತೆಯೇ ಹೊರಗಡೆ ಯಾರೋ ಬಾಗಿಲು ತಟ್ಟಿದರು. ತಾವೆ ಹೋಗಿ ಕದವನ್ನು ತೆರೆದರು. ಬಂದವರು ಭಟ್ಟರು.

ಅಂಗವಸ್ತ್ರದಿಂದ ಮುಖ ಒರೆಸಿಕೊಳ್ಳುತ್ತಾ ನಿಂತಿದ್ದರು. ರಂಗಮ್ಮ ಎರಡು ಹೆಜ್ಜೆ ಹಿಂದೆಯಿರಿಸಿ ಹೇಳಿದರು,

"ಬನ್ನಿ ಬನ್ನಿ, ನಾನೇ ನಿಮಗೆ ಹೇಳಿ ಕಳುಹಿಸಬೇಕೆಂದಿದ್ದೆ; ನೀವೇ ಬಂದದ್ದು ಒಳ್ಳೆಯದಾಯಿತು. ನಾಣಿಗೆ ಲಗ್ನ ನಿಶ್ಚಯಿಸಿ ಗೋಪಿ ಕಾಗದ ಬರೆದಿದ್ದಾನೆ. ನಿಮಗೂ ಬಂದಿರಬಹುದು." ಎಂದು ಹಜಾರಕ್ಕೆ ಬಂದು ಚಾಪೆಯ ಮೇಲೆ ಅವರನ್ನು ಕೂರಿಸಿ ಕಾಗದವನ್ನು ಕೈಗಿತ್ತರು.

"ಹೌದು, ನನಗೂ ಬರೆದಿದ್ದಾನೆ. ಈಗ ತಾನೆ ಬಂತು. ವಿಷಯ ತಿಳಿದವನೆ ಓಡಿ ಬಂದೆ. ನಿಮ್ಮಲ್ಲಿ ಸ್ವಲ್ಪ ಮಾತಾಡುವ ಕೆಲಸವೂ ಇತ್ತು." ಎಂದು ಕಾಗದದ ಮೇಲೆ ಕಣ್ಣಾಡಿಸಿದರು.

"ಲಗ್ನಕ್ಕೆ ದಿನವಿರಿಸಿದುದು ಬೇಗಾಯಿತಲ್ಲವೆ ? ಇನ್ನೂ ನಾಲ್ಕು ದಿನ ಕೂಡಿ ಬಂದಿದ್ದರೆ ಅನುಕೂಲವಿತ್ತು."

"ಈಗೇನಮ್ಮ, ದುಡ್ಡಿದ್ದರೆ ಎರಡೇ ಎರಡು ದಿನದಲ್ಲಿ ಲಗ್ನ ಮಾಡಿ ಬಿಡ ಬಹುದು. ಮೊದಲಿನಂತೆ ಎಲ್ಲ ಪದಾರ್ಥಗಳೂ ಮನೆಯಲ್ಲೇ, ಮಡಿಯಲ್ಲೇ ಆಗಬೇಕೆಂಬ ಆಚಾರನಿಷ್ಠೆಯೂ ಜನರಲ್ಲಿಲ್ಲ. ಇಷ್ಟಕ್ಕೂ ನೀವು ಗಂಡಿನವರು ತಾನೆ! ಹೇಗೂ ನಡೆದುಹೋಗುತ್ತದೆ."

"ಅದು ಸರಿಯಪ್ಪ ! ಅಲ್ಲ, ಲೋಕಾರೂಢಿಗೆ ಹೇಳಿದೆ ನಾನು. ಹೆಣ್ಣಿ ನವರಿಗೆ ತಾನೆ ಕಷ್ಟವಲ್ಲವೆ ? ನೀವಂದ ಹಾಗೆ ದುಡ್ಡಿದ್ದರೆ ಎಲ್ಲ ಆಗುತ್ತದೆ ಯೆನ್ನಿ. ಮತ್ತೆ ಆಚಾರದ ಮಾತು ಬಿಡಿ, ಅದು ಎಂದೋ ಹೋಯಿತು. ಕಾಲಕ್ಕೆ ತಕ್ಕಂತೆ ಮಣಿಯಲೆ ಬೇಕು. ಬಂದೆ ಸ್ವಲ್ಪ ಕೂತುಕೊಳ್ಳಿ" ಎಂದು ಎದ್ದು ಒಳಗೆ ಹೋಗಿ, ಲೋಟಗಳಿಗೆ ಕೆಟಲಿನಿಂದ ಕಾಫಿ ಬಗ್ಗಿಸಿ ಶಕುಂತಳಾ ಭಟ್ಟರಿಗೆ ಕೊಟ್ಟು, ತಾನೂ ಗಂಟಲು ಒದ್ದೆ ಮಾಡಿಕೊಂಡು ಬಂದು ಮತ್ತೆ ಮಾತಿಗೆ ಕುಳಿತರು.

ಮನೆಯವರಾಗಿ ಒಗ್ಗಿ ಹೋಗಿದ್ದುದರಿಂದ ಭಟ್ಟರು ಉಪಚಾರ ಮಾಡಿಸಿ ಕೊಳ್ಳದೆಯೆ ಬಟ್ಟಲವನ್ನು ಖಾಲಿ ಮಾಡಿದರು. ರಂಗಮ್ಮ ಮಾತನಾಡ ಬೇಕೆಂಬು ಬಾಯಿ ತೆರೆಯುವಷ್ಟರಲ್ಲಿ ಭಟ್ಟರೆ ಹೇಳಿದರು,

"ಮನೆತನವೇನೋ ಒಳ್ಳೆಯದೆಂದು ಬರೆದಿದ್ದಾನೆ. ಹುಡುಗಿ ಹೇಗಿ

ದ್ದಾಳೊ ಬಂದ ಮೇಲೆ ನೋಡಬೇಕು. ಶಾಂತಳಂತಿದ್ದರೆ ಸಂಸಾರ ಬಂಗಾರ ವಾಗುತ್ತದೆ."

"ಅದು ಹೌದು, ಅಷ್ಟಿದ್ದರೆ ಬೇಕಾದಷ್ಟು. ಇಷ್ಟಕ್ಕೂ ನಾವು ಬಯಸಿ ದಂತೆ ಎಲ್ಲ ಆಗುವುದಿಲ್ಲ. ಅವರವರ ಕರ್ಮಕ್ಕೆ ತಕ್ಕಂತೆ ಸಿಗುತ್ತಾರೆ. ಒಳ್ಳೆ ಯದೊ ಕೆಟ್ಟದ್ದೊ, ಪಾಲಿಗೆ ಬಂದದ್ದನ್ನು ಪಂಚಾಮೃತವೆಂದು ಪ್ರೀತಿಯಿಂದ ಅನುಭವಿಸಬೇಕು. ಅದು ಹೇಗೋ ಆಗುತ್ತೆ. ಮನೆಗೆ ಜನ ನೋಡಿಸು ಎಂದು ಬರೆದಿದ್ದಾನಲ್ಲಾ ಯಾರನ್ನು ನೋಡುವುದು? ನೀವಂತೂ ನಮ್ಮ ಜತೆಗೆ ಬರಲೆಬೇಕು."

"ಅದೇ ತಿಳಿಸಬೇಕೆಂದು ಬಂದೆ. ಈ ಬಾರಿ ನಾನು ಬರಲು ಸಾಧ್ಯ ವಿಲ್ಲ.......... !"

ಅರ್ಧದಲ್ಲೆ ತಡೆದು ಆತುರವಾಗಿ ಹೇಳಿದರು ರಂಗಮ್ಮ,

"ಹಾಗೆಲ್ಲಾ ಆಗುವುದಿಲ್ಲ, ನೀವು ಬರಲೆಬೇಕು. ನಿಮ್ಮ ವಿನಾ ಪೌರೋಹಿತ್ಯಕ್ಕೆ ಬೇರೆಯವರನ್ನು ಖಂಡಿತ ಒಪ್ಪಲಾರೆ. ನಮಗಾಗಿ ನಾಲ್ಕು ದಿನದ ಮಟ್ಟಿಗೆ ಯಾವ ಕೆಲಸವಿದ್ದರೂ ಬಿಟ್ಟು ಬನ್ನಿ."

"ನಾನು ಹೇಳುವುದನ್ನು ಪೂರ್ತಿ ಕೇಳಿಯಮ್ಮ; ಆಮೇಲೆ ನೀವು ಹೇಳಿ ದಂತೆ ಮಾಡುತ್ತೇನೆ. ನೆನ್ನೆ ದಿನ ರಾತ್ರೆ ಯಾರೊ ಬಂದು ನಮ್ಮ ಕಪಿಲೆ ಹಸುವನ್ನು ಕದ್ದುಕೊಂಡು ಹೋಗಿದ್ದಾರೆ. ಇದುವರೆಗೆ ನಮ್ಮ ಮನೆಯಲ್ಲಿ ಕಳ್ಳತನವೆ ಆಗಿದ್ದಿಲ್ಲ. ಈಗ ಮನೆ ಬಿಟ್ಟು ಒಂದು ಗಳಿಗೆ ಹೊರಗೆ ಹೋಗಲೂ ಹೆದರಿಕೆಯಾಗುತ್ತಿದೆ."

"ಯಾರಪ್ಪ ಪಾಪಾತ್ಮರು, ಹಾಗೆ ಮಾಡಿದವರು? ಅನ್ಯಾಯವಾಯಿತು! ತುಂಬಾ ಹಾಲು ಕೊಡುತಿತ್ತು."

"ಏನು ಮಾಡುವುದು ಹೇಳಿ, ನಮಗೆ ಅನುಭವಿಸುವ ಋಣವಿಲ್ಲ." ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳಿದರು, "ನನಗ್ಯಾಕೊ ಸೀತಾ ರಾಮುವಿನ ಮೇಲೆ ಅನುಮಾನವಾಗಿದೆ. ಶ್ರೀದೇವಮ್ಮ ನಮ್ಮ ಮನೆಯ ಕಡೆ ಸುಳಿಯದೆ ವರ್ಷಾಂತರವಾಗಿ ಹೋಗಿತ್ತು. ಅಂಥಾದ್ದರಲ್ಲಿ—ಹಸು ಕಳೆದು ಹೋದ ಹಿಂದಿನ ದಿನ ಮಧ್ಯಾಹ್ನ ಯಾವುದೊ ಶಾಸ್ತ್ರ ಕೇಳುವ ನೆವ ದಲ್ಲಿ ಬಂದು, ಆ ಮಾತು ಈ ಮಾತಾಡಿ ಹಸುವಿನ ವಿಷಯಕ್ಕೆ ಬಂದು ಮುಟ್ಟಿ

ದರು. ಮಾತಾಡುತ್ತಿದ್ದಂತೆಯೆ ಕೊಟ್ಟಿಗೆಗೆ ಹೋಗಿ ಅದರ ಮೈ ಸವರಿ ತಮಗೊಂದು ಅಂಥಾ ಹಸುವನ್ನು ಕೊಡಿಸಬೇಕೆಂದು ಕೇಳಿದರು."

ಅವರ ಮಾತನ್ನು ಅರ್ಧದಲ್ಲೆ ತಡೆದು ರಂಗಮ್ಮ ಕೇಳಿದರು,

"ಯಾಕೆ, ಸೀತಾರಾಮು ಇಲ್ಲವಂತೊ! ಅವನು ಮನಸ್ಸು ಮಾಡಿದರೆ ಅದರಪ್ಪನಂಥ ಹಸು ತಂದು ಕಟ್ಟಬಲ್ಲ! ಶ್ರೀದೇವಮ್ಮ ಯಾಕೆ ಹಾಗೆ ಕೇಳಿದರು ?"

"ಸೇಡು ತೀರಿಸಿಕೊಳ್ಳಲಿರಬಹುದು. ನಾಣಿಗೆ ನಾನು ಬೆಂಬಲಿಗನಾಗಿರುವುದು ಅವರಿಗೆ ಕಣ್ಣು ಚುಚ್ಚುತ್ತಿದೆ."

"ಅಷ್ಟು ಮಾತ್ರಕ್ಕೆ ಕಳವಿನ ಅಪರಾಧವನ್ನು ಅವರ ಮೇಲೆ ಹೊರಿಸುವುದು ನನಗೇನು ಅಷ್ಟು ಸರಿ ಕಂಡುಬರಲಿಲ್ಲ."

"ತಾಳಿ, ವಿವರಣೆ ಪೂರ್ತಿ ಕೇಳಿ; ಅನಂತರ ನಿಮ್ಮ ಅಭಿಪ್ರಾಯ ತಿಳಿಸಿ. ಅದೇ ದಿನ ರಾತ್ರೆ ಶ್ರೀದೇವಮ್ಮ ನಮ್ಮಲ್ಲಿಗೆ ಬಂದರು. ಮಗನಿಗೂ ತಮಗೂ ರಾದ್ಧಾಂತವಾಗಿದೆಯೆಂದೂ, ಆ ದಿನ ನಮ್ಮಲ್ಲೆ ಮಲಗಗೊಡಬೇಕೆಂದೂ— ಇಲ್ಲದ ಘಟನೆಯನ್ನು ಸೃಷ್ಟಿಸಿ ಕಣ್ಣೀರಿನ ಹೊಳೆಯಲ್ಲಿ ತೇಲಿಬಿಟ್ಟರು. ಯಾರಿಗೆ ತಾನೆ ಅದನ್ನು ಕೇಳಿ ಕರುಳು ಚುರುಕ್ಕೆನಿಸುವುದಿಲ್ಲ ಹೇಳಿ ? ನಾನಂತೂ ಎರಡು ತೊಟ್ಟು ಕಣ್ಣೀರೂ ಸುರಿಸಿಬಿಟ್ಟೆ."

"ಬಿಡಿ. ಮಲಗುವವರಿಗೆ ಹಾಸಿಕೊಟ್ಟಂತಾಯಿತು. ಆಮೇಲೆ.... ?"

"ಮಾರಾಯರಾಗಿ ಮಲಗಬಹುದೆಂದು ಸಮ್ಮತಿಯಿತ್ತೆ. ವಿಶಾಲಾಕ್ಷಿ ಅವರಿಗೆ ಹಾಸಿಗೆ ಮಾಡಿಕೊಟ್ಟಳು. ಸುಮಾರು ಮಧ್ಯರಾತ್ರೆಯಿರಬಹುದು. ಬಾಗಿಲು ಕಿರ್ರೆಂದ ಶಬ್ದವಾಯಿತು. ನಿದ್ದೆಯ ಜೊಂಪು. ಏಳಲು ಸೋಮಾರಿತನ ಮಾಡಿ ಹಾಗೇ ಬಿದ್ದುಕೊಂಡೆ. ಬೆಳಿಗ್ಗೆ ಎದ್ದು ನಿತ್ಯದಂತೆ ಗೋವಿನ ಮೈ ಸವರಲೆಂದು ಕೊಟ್ಟಿಗೆಗೆ ಹೋಗಿ ನೋಡುತ್ತೇನೆ — ಕೊಟ್ಟಿಗೆ ಖಾಲಿ !..........."

"ಅದನ್ನು ಕಂಡು ಶ್ರೀದೇವಮ್ಮ ಏನೆಂದರು ?"

"ಏನನ್ನುತ್ತಾರೆ ! ಅವರಿಗೆ ಸೋಗು ಹಾಕಲು ಹೇಳಿಕೊಡಬೇಕಿಲ್ಲ. ಸಮಯಕ್ಕೆ ತಕ್ಕಂತೆ ನಡೆಯುವ ಜಾಣ್ಮೆ ತಾಯಿ-ಮಗನಲ್ಲಿ ಚೆನ್ನಾಗಿದೆ.

ಅಪರಾಧಿತನ ಅವರ ಮುಖದಲ್ಲಿ ಮರೆತೂ ಸುಳಿಯಲಿಲ್ಲ. ಮರುಕದಲ್ಲಿ ನಮಗಿಂತ ಒಂದು ಕೈ ಮುಂದಿದ್ದರು."

ರಂಗಮ್ಮ ನಕ್ಕು ಹೇಳಿದರು,

"ಅಬ್ಬಾ ಜನವೆ, ಜಗತ್ತನ್ನು ತಿಳಿಯುವುದು ಬಹಳ ಕಷ್ಟ. ನಿಜಕ್ಕೂ ಅವರು ಇಂಥಾ ನೀಚ ಕೆಲಸಕ್ಕಿಳಿಯುವರೆಂದು ನಾನು ತಿಳಿದಿರಲಿಲ್ಲ."

"ಅಷ್ಟೇ ಅಲ್ಲ, ಸಮಯ ಬಿದ್ದರೆ ತಲೆಯೊಡೆಯಲು ಸಹ ಹೇಸುವ ಜನವಲ್ಲ ಅವರು. ನನಗಿನ್ನೊಂದು ಸಂಶಯ ಬಂದಿದೆ—ನಾಣಿ ಊರಿಗೆ ಹೊರಡುವ ದಿನ ನಿಮ್ಮ ಬೀದಿಯ ತಿರುವಿನಲ್ಲಿ ಆದ ಅನಾಹುತವೇನಾದರೂ ಗೊತ್ತೆ ನಿಮಗೆ ?"

"ಇಲ್ಲವಲ್ಲ ? ಮನೆಯಲ್ಲಿ ಯಾರಾದರೂ ಹುಡುಗರಿದ್ದಿದ್ದರೆ ತಿಳಿಸುತ್ತಿದ್ದರು. ಯಾಕೆ ? ಏನಾಯಿತು ?"

"ಯಾರೊ ಅದೃಷ್ಟ ಕೆಟ್ಟವನೊಬ್ಬ ಶಿವಮೊಗ್ಗೆಯ ರೈಲಿಗೆ ಹೊರಟಿದ್ದವನು ಆ ತಿರುವಿನಲ್ಲಿ ತಲೆಯೊಡೆದು ಬಿದ್ದಿದ್ದನಂತೆ."

"ಪಾಪ! ಯಾವ ದುರಾತ್ಮರೋ ಹಾಗೆ ಮಾಡಿದವರು ? ಕೈಯಾದರೂ ಹೇಗೆ ಬಂದಿತು ಹೇಳಿ !"

"ದುಷ್ಕೃತ್ಯ ಮಾಡುವವರ ಮನಸ್ಸು ಕಲ್ಲಾಗಿರುತ್ತದೆ ರಂಗಮ್ಮ. ನನ್ನ ಮನಸ್ಸು ಆ ಕೆಲಸವನ್ನು ಸೀತಾರಾಮುವೆ ಮಾಡಿದ್ದಾನೆಂದು ಹೇಳುತ್ತಿದೆ. ಕೋಪದ ಉದ್ರೇಕದಲ್ಲಿದ್ದ ಅವನು ಕತ್ತಲೆಯಲ್ಲಿ ಯಾರೆಂದು ಸರಿಯಾಗಿ ಗಮನಿಸದೆ ಆ ರೈಲಿನ ವೇಳೆಗೇ ಹೊರಟಿದ್ದ ನಾಣಿಯಂತಿದ್ದ ಆ ಬಡಪಾಯಿಯ ಮೇಲೆ ತನ್ನ ಸೇಡು ತೀರಿಸಿಕೊಂಡಿರಬೇಕು. ಯಾಕೆಂದರೆ ಆ ಮನುಷ್ಯ ಬಹಳ ಸಭ್ಯನೆಂದೂ, ಯಾರೋ ಕತ್ತಲಿನಲ್ಲಿ ಅವನ ಪರಿಚಯವಾಗದೆ ತಪ್ಪು ತಿಳಿದು ಹೊಡೆದಿದ್ದಾರೆಂದೂ ಜನರು ಆಡಿಕೊಳ್ಳುತ್ತಿದ್ದಾರೆ. ಅಂದ ಮೇಲೆ ಅಪರಾಧಿ ಯಾರೆಂದು ಊಹಿಸುವುದು ಕಷ್ಟವೇನಾಗುವುದಿಲ್ಲ."

"ಸೀತಾರಾಮುವಿಗೆ ನಾಣಿಯನ್ನು ಕಂಡರೆ ಯಾಕಷ್ಟು ದ್ವೇಷ ?"

"ಅವನ ಬಣ್ಣ ಬಯಲಾದಂದಿನಿಂದ ನಾಣಿಗೆ ಅವನ ತಲೆಕಂಡರಾಗುವುದಿಲ್ಲ ಅವಕ್ಕೆ! ಅಲ್ಲದೆ, ಅನಂತು ಹಣ ಕೊಡದಂತೆ ತಡೆದ. ಜಪ್ತಿ ಮಾಡಿಸುತ್ತಿತಿಗೆಸಿ ಶೆಟ್ಟರ ಬಡ್ಡಿ ಹಣವನ್ನು ಕತ್ತಿನ ಮೇಲೆ ಕೂತು ಕಟ್ಟಿಸಿದ. ಇವೆಲ್ಲ

ರೊಚ್ಚಿಡೆ ಅವನಿಗೆ. ಮೊನ್ನಿನ ದಿನವೇ ಅವರಿಬ್ಬರಿಗೂ ಕೈಕೈ ಹತ್ತಬೇಕಿತ್ತು. ನಾವೆಲ್ಲ ಇದ್ದುದರಿಂದ ಸಾಧ್ಯವಾಗಲಿಲ್ಲ. ಆ ಸೇಡನ್ನು ಹೀಗೆ ತೀರಿಸಿಕೊಂಡಿರ ಬೇಕೆಂದು ನನ್ನ ಊಹೆ. ಸದ್ಯ ಆ ದಿನ ನಾಣಿಯ ಪ್ರಯಾಣ ತಪ್ಪಿದುದು ಒಳ್ಳೆಯದಾಯಿತು. ಇಲ್ಲದಿದ್ದರೆ ಅವನು ಗಂಡಾಂತರಕ್ಕೆ ಗುರಿಯಾಗುತ್ತಿದ್ದ. ಇದಕ್ಕೇ ನೋಡಿ ಭಗವಂತನ ಲೀಲೆ ಎನ್ನುವುದು."

ರಂಗಮ್ಮ ಆ ಸುದ್ದಿಯಿಂದ ಹೆದರಿ ಕಂಗಾಲಾದರು. ಅವರ ಜೀವಮಾನ ದಲ್ಲಿ ಅಷ್ಟು ಹೆದರಿರಲಿಲ್ಲ. ಆ ಘಟನೆಯಿಂದ ಮನಸ್ಸು ಒಂದು ಕ್ಷಣದಲ್ಲಿ ಕಾಣಬಾರದ ಕೆಟ್ಟ ಕನಸುಗಳನ್ನೆಲ್ಲ ಕಂಡಿತು. ಮೃತ್ಯುಸ್ವರೂಪನಂತಿದ್ದ ಸೀತಾರಾಮು ನಾಣಿಯ ಬೆನ್ನು ಬಿದ್ದು, ಸಮಯ ಕಾದು, ಕಡೆಗೂ ಅವನ ತಲೆ ಯೊಡೆದಿದ್ದಾನೆ; ಅವನ ಹೆಂಡತಿ ಮಕ್ಕಳು ನಿರ್ಗತಿಕರಾಗಿ ಕಣ್ಣೀರಿಡುತ್ತಿದ್ದಾರೆ; ಸೊಸೆಯ ಕಣ್ಣೀರು ರಂಗಮ್ಮನನ್ನು ಕಾಳಿ ರೂಪ ತಾಳಿಸಿದೆ; ಹುಚ್ಚೆದ್ದ ರಂಗಮ್ಮ ಭಟ್ಟರ ಸಹಾಯದಿಂದ ಸೀತಾರಾಮುವನ್ನು ಸೆರೆಯಲ್ಲಿರಿಸಿ, ಚೂರು ಚೂರಾಗಿ ಸಾಯುವಂತೆ ಮಾಡಿದ್ದಾರೆ; ಒರಟನಾದ ಗೋಪಿ ತಮ್ಮನು ಕಾಲ ವಾದ ಕೆಲವು ದಿನದಲ್ಲೆ ಅವನ ಆಸ್ತಿ–ಮನೆ–ಮಠವೆಲ್ಲವನ್ನೂ ತನ್ನ ಕೈವಶ ಪಡಿಸಿಕೊಂಡು ಕಟುಕನಾಗಿ, ತಾಯಿ–ನಾದಿನಿ–ಮಕ್ಕಳನ್ನು ಮನೆಯಿಂದ ಹೊರಗೆ ಹಾಕಿದ್ದಾನೆ; ಅವನ ರಕ್ಷಣೆಯಿಂದ ಹೊರಬಿದ್ದ ಅವರು, ನೋವಿನ ತಿರುಗಣೆಯಲ್ಲಿ ಸಿಕ್ಕಿ ನುಚ್ಚುನೂರಾಗಿ ಸಾವಿನ ಹಾದಿ ಹಿಡಿದಿದ್ದಾರೆ—ಅಬ್ಬಾ ! ಎಷ್ಟು ಭಯಂಕರ ಯೋಚನೆ !

ರಂಗಮ್ಮನ ತಲೆ ಕೆಟ್ಟಿತು. ನಡುಕದಿಂದ ಮೈಹಿಡಿತ ತಪ್ಪಿದಂತಾ ಯಿತು. ಕಣ್ಣು ಕತ್ತಲೆ ಕಟ್ಟಿ ಕೂತಲ್ಲೆ ಬೀಳುವಂತಾದರು. ತತ್‌ಕ್ಷಣ– ಅಂಗೈಗಳನ್ನು ನೆಲಕ್ಕೆ ಭದ್ರವಾಗಿ ಊರಿ ಚೇತರಿಸಿಕೊಂಡರು. ತಲೆಯನ್ನು ಹೊಕ್ಕಿದ್ದ ಆ ಕೆಟ್ಟ ಯೋಚನೆಯನ್ನು ಒತ್ತಾಯವಾಗಿ ಹೊರಕ್ಕೆ ತಳ್ಳಿದರು. ಶುಭ ಕಾಲದಲ್ಲಿ ಅಶುಭವನ್ನು ಯೋಚಿಸಿದುದಕ್ಕೆ ತಮಗೆ ತಾವೇ ಹಿಡಿಶಾಪ ಹಾಕಿಕೊಂಡರು. ಅವರ ಈ ಹೊಯ್ದಾಟ ಭಟ್ಟರಿಗೆ ತಿಳಿಯದೆ ಹೋಗಲಿಲ್ಲ. ಧೈರ್ಯ ತುಂಬಲು ಹೇಳಿದರು,

"ತುಂಬಾ ಹೆದರಿದಂತೆ ಕಾಣುತ್ತೆ—ಏನೂ ಗಾಬರಿಯಾಗಬೇಡಿ. ನಾಣಿಯ ತಲೆಕೊದಲು ಕೂಡ ಅಲ್ಲಾಡಿಸುವ ಯೋಗ್ಯತೆಯಿಲ್ಲ ಸೀತಾರಾಮು

ವಿಗೆ. ಅವನ ಮೈ ಬಲದ ಮುಂದೆ ಸೀತಾರಾಮು ಗಾಳಿಗೆ ತೂರಿ ಹೋಗುವ ಕಸದಂತಿದ್ದಾನೆ. ಎದುರು ಬಿದ್ದರೆ ಇರುವೆಯನ್ನು ತಿಕ್ಕಿ ಹೊಸಕಿ ಹಾಕುವಂತೆ ಹಾಕಬಲ್ಲ, ನಾಣಿ."

ಆ ಮಾತು ನಾಣಿಯಲ್ಲಿ ಸತ್ಯವಾಗಿತ್ತು. ಅವನು ಆಜಾನುಬಾಹು. ಸುಮಾರು ಆರಡಿ ಎತ್ತರವಿದ್ದನು. ಎತ್ತರಕ್ಕೆ ತಕ್ಕಂತೆ ಗಾತ್ರ, ಗಾತ್ರಕ್ಕೆ ತಕ್ಕಂತೆ ಸ್ಥೈರ್ಯ-ಶೌರ್ಯವಿತ್ತು. ದೃಢಕಾಯನೂ ತೇಜೋವಂತನೂ ಆದ ತಮ್ಮ ಮಗನಲ್ಲಿ ಅಂಜುಬುರುಕತನವನ್ನು ಎಣಿಸಿದ್ದಕ್ಕೆ ರಂಗಮ್ಮ ತಮಗೆ ತಾವೆ ನಾಚಿದರು. ಆದರೂ ಮತ್ತೊಂದು ಭಾವನೆ ಅವರ ಮನಸ್ಸನ್ನು ಸ್ವಲ್ಪ ಅಲುಗಾಡಿಸಿತು. ಭಟ್ಟರಲ್ಲಿ ತಿಳಿಸಿ ಅದರ ಪರಿಹಾರವನ್ನೂ ಮಾಡಿಕೊಂಡರು.

"ಎದುರು ಬಿದ್ದರೆ ನನ್ನ ಮಗನ ಬಲದ ಮುಂದೆ ಯಾರೂ ಉಳಿಯ ಲಿಕ್ಕಿಲ್ಲವೆಂಬ ಭರವಸೆ ನನಗೂ ಇದೆ. ಆದರೆ ಮೊನ್ನಿನ ಹಾಗೆ ಸ್ವಲ್ಪವೂ ಸುಳಿವು ಕೊಡದೆ, ಮರೆಯಲ್ಲಿ ಪ್ರಾಣಕ್ಕೆ ಅಪಾಯ ತಂದೊಡ್ಡಿದರೆ ಮಾತ್ರ ಕಷ್ಟ."

"ಈಗ ವಿಷಯ ಸಮಗೆ ಹೇಗೂ ತಿಳಿದಿದೆಯಲ್ಲ! ಮುಂಚೆಯೆ ನಾಣಿಗೆ ಸೂಕ್ಷ್ಮ ಕೊಟ್ಟು ಬಿಟ್ಟರಾಯಿತು; ಅಪಾಯ ತಾನೇ ತಪ್ಪುತ್ತದೆ. ಹ್ಞಾ! ಒಂದು ವಿಷಯ ನಿಮ್ಮನ್ನು ಆಗಲೆ ಕೇಳಬೇಕೆಂದಿದ್ದೆ. ಮಾತಿನ ಮಧ್ಯದಲ್ಲಿ ಮರತೇ ಹೋಯಿತು. ನಾಣಿ ಇಂಥಾ ದಿವಸ, ಇಂಥಾ ಹೊತ್ತಿನಲ್ಲೆ ಹೊರ ಡುವನೆಂಬ ಸುದ್ದಿ ಸೀತಾರಾಮುವಿಗೆ ಹೇಗೆ ತಿಳಿಯಿತು?"

"ಅವನು ಹೊರಡುವ ಹಿಂದಿನ ದಿನ, ಗೋಪಿಗೆ ಯಾವುದೋ ಸುದ್ದಿ ಮುಟ್ಟಿಸುವ ನೆವ ಹೂಡಿ ಶ್ರೀದೇವಮ್ಮ ಬಂದು ನನ್ನನ್ನು ಕೇಳಿಕೊಂಡು ಹೋಗಿದ್ದರು. ಹೀಗೆಂದು ತಿಳದಿದ್ದರೆ ನಾನು ಅವರಿಗೆ ಆ ಸುದ್ದಿ ಹೇಳುತ್ತಲೆ ಇರಲಿಲ್ಲ."

"ಹೇಳಿದ್ದು ಒಳ್ಳೆಯದಾಯಿತು. ಮುಂದೆ ಅವನ ವಿಷಯದಲ್ಲಿ ಎಚ್ಚ ರಿಕೆ ವಹಿಸಲು ಒಳ್ಳೆ ಅವಕಾಶ ಕಲ್ಪಿಸಿಕೊಟ್ಟೆ. ಅಂತೂ ಎರಡು ಕೆಲಸವೂ ಅವರ ಕರಾಮತ್ತಿನಿಂದಲೆ ನಡೆದದ್ದೆಂದು ಇದರ ಆಧಾರದ ಮೇಲೆ ನಿಸ್ಸಂಶಯ ವಾಗಿ ಹೇಳಬಹುದು. ಇನ್ನು ಅವರ ವಿಷಯದಲ್ಲಿ ನೀವು ಎಚ್ಚರಿಕೆಯಾಗಿ ರಲೆ ಬೇಕು."

"ಹೌದು ಹೌದು, ಹುತ್ತದ ಬಳಿ ಮನೆ ಮಾಡಿ ಮೈಮರೆತಿರುವುದು ಒಳ್ಳೆಯದಲ್ಲ. ಆದಷ್ಟು ಬೇಗ ಆ ಹಾವನ್ನು ಹಿಡಿದು ಹಾಕಲೆಬೇಕು; ಇಲ್ಲದಿದ್ದರೆ ಅಲ್ಲಿಂದ ಮನೆಯನ್ನಾದರೂ ಬದಲಿಸಬೇಕು. ಆ ಬಗ್ಗೆ ನೀವು ನಿಶ್ಚಿಂತೆಯಿಂದಿರಿ. ಒಂದು ವಸ್ತುವಿನ ಬಣ್ಣ ಇಂಥದೆ ಎಂದು ಗೊತ್ತಾದ ನಂತರ ಮತ್ತೆಂದೂ ಮೋಸ ಬೀಳುವುದಿಲ್ಲ."

"ಅದು ಹೌದಪ್ಪ, ವ್ಯಕ್ತಿಯ ಪರಿಚಯವೆ ಅವನ ಬಗ್ಗೆ ನಡೆದುಕೊಳ್ಳುವ ನಡವಳಿಕೆಯನ್ನು ಕಲಿಸುತ್ತದೆ. …………ಅಲ್ಲಾ ಭಟ್ಟರೆ! ಈಗ ಒಳ್ಳೇ ಅವಕಾಶ ಸಿಕ್ಕಿದೆ. ತಪ್ಪಿತಸ್ಥರು ಅವರೇ ಎಂದು ನಿಮ್ಮ ಮನಸ್ಸಿಗೆ ಬಂದ ಮೇಲೆ ನೇರವಾಗಿ ಏಕೆ ನೀವು ಅವರ ಮೇಲೆ ದೂರು ಕೊಟ್ಟು ಹಿಡಿಸಿ ಶಿಕ್ಷೆಗೆ ಗುರಿಪಡಿಸಬಾರದು ?"

"ಸರಿಯಾದ ಆಧಾರ ಸಾಕ್ಷಿಯಿಲ್ಲದೆ ಹಾಗೆಲ್ಲ ಮಾಡಲು ಸಾಧ್ಯವಿಲ್ಲ. ನನಗೂ ಅದೇ ಅಭಿಪ್ರಾಯವಿತ್ತು. ನೆನ್ನೆಯಿಂದ ಬಿಡದೆ ಅದರ ಸುಳಿವು ಸಿಗುವುದೇನೋ ಎಂದು ಪ್ರಯತ್ನ ಮಾಡಿ ನೋಡಿದೆ. ಏನೂ ಪ್ರಯೋಜನವಾಗಲಿಲ್ಲ. ಸದ್ಯಕ್ಕೆ ಅದನ್ನು ಅಲ್ಲಿಗೆ ಕೈಬಿಟ್ಟೆ."

"ಹೀಗಾದರೆ ಅವರ ದುಷ್ಟತನ ಮುರಿಯುವುದು ಹೇಗೆ?"

"ಅದಕ್ಕೂ ಒಂದು ಕಾಲ ಬರುತ್ತದೆ. ಒಮ್ಮೆ ಅಪರಾಧ ಮಾಡಿದವರು ಮತ್ತೊಮ್ಮೆ ಮಾಡದೆ ಇರುವುದಿಲ್ಲ. ಆಗ ತಕ್ಕ ಬುದ್ಧಿ ಕಲಿಸಿದರಾಯಿತು. ನೀವು ಮಾತ್ರ ಅವರ ವಿಷಯದಲ್ಲಿ ಎಂದಿನಂತೆಯೆ ಇರಿ. ಅವರ ಕಾರಸ್ಥಾನ ನಮಗೆ ತಿಳಿದಿದೆ ಎನ್ನುವ ಸುಳಿವು ಕೂಡ ಕೊಡಬೇಡಿ. ಸದ್ಯದಲ್ಲೆ ಅವರ ಬಣ್ಣ ಬಯಲಿಗೆ ಬರುತ್ತೆ."

"ಈ ವಿಷಯವನ್ನು ಗೋಪಿಗೆ ತಿಳಿಸಿದರೇನು ?"

"ಆ ಕೆಲಸ ಮಾತ್ರ ಮಾಡಬೇಡಿ. ಅದರಿಂದ ಪರಿಸ್ಥಿತಿ ಮತ್ತಷ್ಟು ಬಿಗುವಾಗುತ್ತದೆ. ಸೀತಾರಾಮುವಿನ ವಿಷಯದಲ್ಲಿ ಯಾರು ಏನು ಹೇಳಿದರೂ ಗೋಪಿಯ ಹತ್ತಿರ ನಡೆಯುವುದಿಲ್ಲ; ಅವನು ನಂಬುವುದೂ ಇಲ್ಲ. ಅವನಿಗೆ ಮದ್ದು ಹಾಕಿ ವಶಪಡಿಸಿಕೊಂಡವನಂತಿದ್ದಾನೆ. ಅವರಿಬ್ಬರನ್ನೂ ಅಷ್ಟು ಹತ್ತಿರ ಸೆಳೆಯಬೇಕಾದರೆ ಏನೋ ರಹಸ್ಯವಿರಬೇಕು. ಅದನ್ನು ಪತ್ತೆ ಹಚ್ಚದೆ

ವಿಧಿಯಿಲ್ಲ—ಪತ್ತೆ ಹಚ್ಚುತ್ತೇನೆ. ಗೋಪಿಯ ಜೀವನವನ್ನು ಒಂದು ಹದ್ದು ಬಸ್ತಿಗೆ ತರದಿದ್ದರೆ ಲಚ್ಚಪ್ಪನಿಗೆ ಕೊಟ್ಟ ಭರವಸೆ ಮಣ್ಣಾಗಿ ಮಿತ್ರದ್ರೋಹದಿಂದ ಮರುಗಬೇಕಾಗುತ್ತೆ. ಅಷ್ಟಕ್ಕೆಂದಿಗೂ ಬಿಡುವುದಿಲ್ಲ. ನಾನಿನ್ನು ಬರಲೇ ?" ಎಂದು ಅಂಗವಸ್ತ್ರವನ್ನು ಕೊಡವಿಕೊಂಡು ಮೇಲೆದ್ದರು.

ರಂಗಮ್ಮನೂ ನಲುಗಿಹೋಗಿದ್ದ ಸೀರೆಯ ಅಂಚನ್ನು ಕೊಡವಿಕೊಂಡು ಏಳುತ್ತಾ ಹೇಳಿದರು,

"ಕಡೆಗೂ ಜನಕ್ಕೆ ಏನು ಮಾಡುವುದೆಂದು ಹೇಳಲೆ ಇಲ್ಲ."

"ಮಾತು ಬೇರೆ ಹಾದಿಗೆ ಹೊರಳಿದ್ದರಿಂದ ಮರೆತಿದ್ದೆ. ಆ 'ಜನ' ನಾನೇ ಆಗುತ್ತೇನೆ. ನೀವು 'ಅಲ್ಲ' ಎಂದು ಹೇಳಬಾರದು, ತಪ್ಪು ತಿಳಿಯಲೂ ಬಾರದು. ನಿಮ್ಮ ಮನೆ ಉಪ್ಪುಂಡಿದ್ದಕ್ಕೆ ಹಿತ ಬಯಸುವುದು ನನ್ನ ಕರ್ತವ್ಯ. ಅದಕ್ಕೆ ತಕ್ಕ ಸಮಯವೂ ಒದಗಿದೆ. ಈ ಬಾರಿ ನನ್ನ ಮಾತನ್ನು ನಡೆಸಿ ಕೊಡಿ. ಇಷ್ಟೆಲ್ಲಾ ಕಾರಸ್ಥಾನ ನಡೆದಿರುವಾಗ ನಿಮ್ಮ ಮನೆಯನ್ನು ಬೇರೆಯ ವರ ಮೇಲೆ ಬಿಟ್ಟು ಹೋಗುವುದು ತುಂಬಾ ಅಪಾಯಕರ. ಪೌರೋಹಿತ್ಯ ಕ್ಕೇನು ! ಯಾರು ಮಾಡಿಸಿದರೂ ಆಗುತ್ತೆ. ನನ್ನ ಮಾತು ಮನಸ್ಸಿಗೆ ಬಂತೆ ?"

"ನೀವು ನಮ್ಮ ಮನೆಯ ಪುರೋಹಿತರು ಮಾತ್ರವಲ್ಲ, ಹಿತೈಷಿಯಾದ ಬಂಧುವೂ ಆಗಿದ್ದೀರಿ. ನಿಮ್ಮ ಮಾತಿಗೆ ಎರಡಾಡುವ ಚೈತನ್ಯ ನನ್ನಲ್ಲಿಲ್ಲ. ನೀವು ಹೇಳಿದಂತೆಯೆ ಆಗಲಿ."

ಎರಡು ಹೆಜ್ಜೆ ಮುಂದಿಟ್ಟ ಭಟ್ಟರು ಮತ್ತೆ ನಿಂತು ಹೇಳಿದರು,

"ಮನೆಯ ರಕ್ಷಣೆಗಾಗಿ ಉಳಿದಿದ್ದೇನೆಂದು ಗೋಪಿಗೆ ಮಾತ್ರ ತಿಳಿಯ ಕೂಡದು. ನೀವು ಏನೂ ಗೊತ್ತಿಲ್ಲದವರಂತೆ ಸುಮ್ಮನಿದ್ದು ಬಿಡಿ. ನಾನು ಅವನಿಗೆ ಸರಿಯಾದ ಕಾರಣ ಕೊಟ್ಟು ಸಮಾಧಾನ ಪಡಿಸುವೆನು. ಆಯಿತು, ನಾನಿನ್ನು ಹೊರಡುವೆನು. ಅಗತ್ಯ ಬಿದ್ದರೆ ಹೇಳಿ ಕಳುಹಿಸಿ, ಬರುತ್ತೇನೆ" ಎಂದು ಉತ್ತರಕ್ಕೆ ಕಾಯದೆ ಹೊರಬಿದ್ದರು.

ಭಟ್ಟರು ಹೊರಗೆ ಹೋಗುವುದಕ್ಕೂ ಶ್ರೀದೇವಮ್ಮ ಒಳಗೆ ಬರುವು ದಕ್ಕೂ ಸಮನಾಯಿತು. ರಂಗಮ್ಮನ ಮುಖ ಬೇಸರದಿಂದ ಮುದುಡಿತು. ಶ್ರೀದೇವಮ್ಮನ ಮುಖ ನೋಡಲೂ ಬೇಡವಾಯಿತು ಅವರಿಗೆ. ಕಾಫಿ ಬಟ್ಟೆ

ಲನ್ನು ಒಳಗಿಡುವ ನೆವದಲ್ಲಿ ಅವರಿಗೆ ಕೂತುಕೊಳ್ಳಿ ಎಂತಲೂ ಹೇಳದೆ, ಎದ್ದು ನಡೆದರು.

ಶ್ರೀದೇವಮ್ಮನ ಮುಖದ ಮೇಲೆ ಛಟೀರನೆ ಬಾರಿಸಿದಂತಾಯಿತು. ರಂಗಮ್ಮ ಎಂದೂ ಹೀಗೆ ನಡೆದವರಲ್ಲ. ಅವರ ಇಂದಿನ ನಡವಳಿಕೆಯಲ್ಲಿ ಅನುಮಾನವುಂಟಾಯಿತು. ತಮ್ಮ ಕಾರಸ್ಥಾನವೇನಾದರೂ ಗೊತ್ತಾಗಿರ ಬಹುದೆ? ಎಂದು ಹೆದರಿದರು.

ಗೊತ್ತಾಗಿರಲಿಕ್ಕಿಲ್ಲ, ಬಹಳ ಗುಟ್ಟಿನಲ್ಲಿ ನಡೆದ ಕೆಲಸ ಅದು. ಹೆದರು ವುದು ಅನಾವಶ್ಯಕ—ಹಾಗೆಂದು ಅವರ ಮನಸ್ಸು ಸಮಾಧಾನ ಹೇಳಿತು.

ಹಾಗಿದ್ದ ಮೇಲೆ ರಂಗಮ್ಮನ ಇಂದಿನ ನಡವಳಿಕೆಗೆ ಕಾರಣ?— ಯೋಚಿಸಿ ಮೆದುಳು ಕೆಟ್ಟಿತು. ಕಾರಣ ಹೊಳೆಯಲಿಲ್ಲ. ಬಂದ ಮೇಲೆ ಜಾಡು ಒಡಿದು ಕೇಳಿದರಾಯಿತೆಂದು ಸುಮ್ಮನಾದರು.

ಒಳಗೆ ಹೋದ ರಂಗಮ್ಮನಿಗೆ ಭಟ್ಟರ ಮಾತು ನೆನವಾಗಿ, ತಾವು ಹಾಗೆ ನಡೆದುದು ತಪ್ಪಾಯಿತೆಂದು ತಿಳಿದು ಸಮಾಧಾನ ತುಂಬಿ ಹೊರಗೆ ಬಂದರು. ಅಷ್ಟರಲ್ಲಿ ಅವರ ಸ್ವಭಾವಜನ್ಯವಾದ ಸೌಜನ್ಯವೂ ಜಾಗೃತಿಗೊಂಡಿತ್ತು. ಅಲ್ಲಿ ವರೆಗೆ ನಿಂತಿದ್ದ ಶ್ರೀದೇವಮ್ಮನ ನಿಲುವು ಅವರ ಕರುಳನ್ನು ಹಿಂಡಿತು. ತಮ್ಮ ಅಸಭ್ಯತನದ ನಡತೆಗೆ ಅಸಹ್ಯಪಟ್ಟು, ಹಿತವಾದ ಮಾತಿನಿಂದ ಅವರನ್ನು ಕೂತು ಕೊಳ್ಳುವಂತೆ ಹೇಳಿ ತಾವೂ ಕುಳಿತರು.

"ಯಾಕೊ ಈದಿನ ತಲೆಗೆ ಸ್ವಲ್ಪವೂ ನೆಮ್ಮದಿಯಿಲ್ಲ ನೋಡಿ—ಏನೂ ಬೇಡವಾಗಿದೆ."

"ಯಾಕೆ, ಮಕ್ಕಳೆಲ್ಲ ಆರೋಗ್ಯವಾಗಿದ್ದಾರೊ ಇಲ್ಲವೊ?"

"ದೇವರ ದಯದಿಂದ ಸದ್ಯಕ್ಕೆ ಎಲ್ಲರೂ ಸುಖವಾಗಿದ್ದಾರೆ."

"ಬದುಕಿದೆ ಬಿಡಿ—ನಿಮ್ಮ ಮುದುಡಿದ ಮುಖ, ಮಾತಿನ ರೀತಿ ನೋಡಿ ಗಾಬರಿಯಾಗಿ ಹೋದೆ. ಸಾಲದಿದ್ದಕ್ಕೆ ನಿಮ್ಮ ಬೀದಿ ತಿರುವಿನಲ್ಲಿ ನಾನು ಊರಿಗೆ ಹೊರಟ ದಿನ, ಅದೇ ಹೊತ್ತಿನಲ್ಲಿ, ಯಾರೊ ತಲೆಯೊಡೆದು ಬಿದ್ದಿದ್ದ ರೆಂದು ಸುದ್ದಿ ಬೇರೆ ಬಂದಿತ್ತು. ನಿಮ್ಮ ಮುಖ ನೋಡಿದ ಕೂಡಲೆ ಹೊಳೆ ದಿದ್ದು ಅದೆ—ಖಂಡಿತವಾಗಿ! ಸದ್ಯ ಹುಡುಗ ಹುಷಾರಾಗಿ ಹೋಗಿ ಊರು ಸೇರಿದ್ದಾನಲ್ಲಾ—ಅಷ್ಟೇ ಸಾಕು."

ದನಿಯಲ್ಲಿ ಇಲ್ಲದ ಹಿತ ತುಂಬಿತ್ತು. ಈ ದಿನ ಅಲ್ಲಿಗೆ ಬಂದದ್ದು–ತಮ್ಮ ದುಷ್ಕೃತ್ಯಗಳ ಸುಳಿವೇನಾದರೂ ಅವರಿಗೆ ಹೊಳೆದಿರಬಹುದೋ ಹೇಗೆ ?— ಎನ್ನುವ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಉದ್ದೇಶದಿಂದ ಬಂದ ಕೆಲಸವಾಯಿತು. ಹೆಚ್ಚು ಕೆದಕದೆ ಆ ವಿಷಯ ತಾನಾಗಿಯೇ ಹೊರ ಬಿದ್ದಿತ್ತು.

"ಅಕಸ್ಮಾತ್ ಆ ದಿನ ಪ್ರಯಾಣ ತಪ್ಪದೆ ಇದ್ದಿದ್ದರೆ, ಈ ವೇಳೆಗೆ ಅವನ ಮದುವೆಗೆ ಬದಲು ಶ್ರಾದ್ಧಕ್ಕೆ ಹೊಂದಿಸಿಕೊಳ್ಳಬೇಕಾಗುತ್ತಿತ್ತು. ದೇವರು ದೊಡ್ಡವನು. ಯಾರ ಮೇಲೆ ಯಾರಿಗೆ ಜಿದ್ದಿತ್ತೊ ! ಕೇಳಿದರೆ ಹೊಟ್ಟೆ ಸುಟ್ಟು ಹೋಗುತ್ತೆ."

ಶ್ರೀದೇವಮ್ಮ ತಮ್ಮ ಅಂತರ್ಯದ ಮೇಲೆ ತೆರೆಯೆಳೆದು, ಆ ಸಮಯಕ್ಕೆ ತಕ್ಕ ಕೋಪ ತಾಪವನ್ನು ಎಳೆತಂದು ಹೇಳಿದರು,

"ನಿಜ ಅಮ್ಮ, ಕೇಳಿದರೆ ಹೊಟ್ಟೆಗೆ ಬೆಂಕಿ ಹಾಕಿದಂತಾಗುತ್ತೆ. ನನಗೂ ಆ ಸುದ್ದಿ ಕೇಳಿದ ದಿನ ಒಂದು ಕಾಳನ್ನ ಹೊಟ್ಟೆಗೆ ಹೋಗಿದ್ದರೆ ಕೇಳಿ. ಪಾಪಿ ಷ್ಟರು ಯಾರೊ—ಅವರ ಹೊಟ್ಟೆಗೆ ಬೆಂಕಿ ಹಾಕಬೇಕು; ಮಾಡಿದವರು ಅನುಭವಿಸುತ್ತಾರೆ."

"ಅದು ಹೌದು, ಕರ್ಮಕ್ಕೆ ತಕ್ಕ ಫಲ ಕಟ್ಟಿಟ್ಟದ್ದು. ಮಾಡಿದ್ದು ಎಲ್ಲೂ ಹೋಗುವುದಿಲ್ಲ. ಹೋಗಲಿ ಆ ಮಾತು ಬಿಡಿ. ಇನ್ನೇನು ಶ್ರೀದೇವಮ್ಮ ಸಮಾಚಾರ ?"

"ನನಗೊಂದು ಹತ್ತು ರೂಪಾಯಿ ಬೇಕಾಗಿತ್ತು, ಇನ್ನೆರಡು ದಿನದಲ್ಲಿ ತಂದುಕೊಡುತ್ತಿದ್ದೆ—" ಎಂದು ತಾವು ಬಂದ ಉದ್ದೇಶವನ್ನು ಹಣದ ಬೇಡಿಕೆ ಯಿಂದ ಮುಚ್ಚಿದರು.

"ಅದಕ್ಕೇನು, ನಿಧಾನವಾಗಿ ತಂದುಕೊಡಿ, ಪರವಾಯಿಲ್ಲ. ಕೊಡುತ್ತೇನೆ —ಬಂದೆ" ಎಂದು ಒಳಗೆ ಹೋಗಿ ಹಣ ತಂದು ಅವರ ಕೈಗಿತ್ತರು.

"ಬರುತ್ತೇನೆ" ಎಂದು ಹೇಳಿ ಶ್ರೀದೇವಮ್ಮ ಒಂದು ಗಳಿಗೆಯೂ ನಿಲ್ಲದೆ ಹೊರಟುಬಿಟ್ಟರು.

ಅವರ ನಡೆ-ನುಡಿಯಿಂದ ರಂಗಮ್ಮನಿಗೆ ಯಾವ ಸಂಶಯವೂ ಉಂಟಾಗ ಲಿಲ್ಲ. ಅವರ ಪ್ರತಿಯೊಂದು ಮಾತೂ ತಮ್ಮ ಹಿತವನ್ನೇ ಬಯಸುತ್ತಿತ್ತು.

ಎಷ್ಟು ಯೋಚಿಸಿದರೂ ಅವರಲ್ಲಿ ಕೆಡುಕಿದ್ದಂತೆ ಕಾಣಲೆ ಇಲ್ಲ. ಸಮಯ ಬಂದಾಗ ಸತ್ಯ ತಾನೆ ಹೊರಬೀಳುತ್ತದೆಂದು ಸಮಾಧಾನ ತಂದುಕೊಂಡು ಕೆಲಸಕ್ಕೆದ್ದು ಹೊರಟರು.

## ೧೦

ಸೀತಾರಾಮುವಿನ ತಲೆಯಲ್ಲಿ ಯಾವುದೊ ಹೊಸ ಹಂಚಿಕೆ ಇಣಿಕಿ ನೋಡಿತ್ತು. ಈದಿನ ತುಂಬಾ ಖುಷಿಯಾಗಿದ್ದಾನೆ. ಏನೊ ಸಡಗರ, ಏನೊ ಸಂಭ್ರಮ. ಉಡಿಗೆ–ತೊಡಿಗೆಯಲ್ಲಾ ವಿಶೇಷವಿದೆ. ತಲೆಯಿಂದ ಕಾಲಿನ ವರೆಗೆ ಸುವಾಸನೆಯ ಲೇಪವಾಗಿದೆ. ಎಡೆತಾಕಿದಲ್ಲೆಲ್ಲಾ ಪರಿಮಳ ತುಂಬಿ ಹತ್ತಿರಿದ್ದವರ ಮೂಗನ್ನು ಅರಳಿಸುತ್ತಿದೆ. ಎಲ್ಲರ ಮನಸ್ಸನ್ನೂ ಕೆರಳಿಸುವ ಆ ಓಡಾಟ ಅವನಿಗೆ ಹಿತವಾಗಿದೆ. ಹತ್ತಾರು ಬಾರಿ ಅಡಿಗೆ ಮನೆಯಿಂದ ಹಜಾರಕ್ಕೂ ಹಜಾರದಿಂದ ಅಡಿಗೆ ಮನೆಗೂ ಎಡೆತಾಕುತ್ತಿದ್ದಾನೆ. ಕಣ್ಣು ಯಾರಲ್ಲೊ ನೆಟ್ಟು ದೂರದಿಂದಲೆ ಸೌಂದರ್ಯದ ರಸ ಹೀರಿ ತೃಪ್ತಿಪಡಿಸುತ್ತಿದೆ. ದೇಹ ಯಾವುದೊ ಹೊಸ ಸುಖವನ್ನು ನೆನೆದು ಚೆಂಡಿನಂತೆ ಪುಟಿಯುತ್ತಿದೆ. ಇಂದು ಉಳಿದವರೂ ಸಂತೋಷದ ಗುಂಗಿನಲ್ಲಿರುವುದರಿಂದ ಅವನ ಹೊಸತನ ಯಾರಿಗೂ ಅಚ್ಚರಿಯುಂಟು ಮಾಡಲಿಲ್ಲ.

ಶ್ರೀಕಂಠು, ಅವನ ಪತ್ನಿ ಶಾರದೆ ಇವರಿಬ್ಬರನ್ನುಳಿದು ಮಿಕ್ಕೆಲ್ಲರೂ ಸೀತಾರಾಮುವಿನಂತೆ ಸಂತೋಷದ ಮಧುಪಾನ ಮಾಡಿ ಎಡೆಯಾಡುತ್ತಿದ್ದಾರೆ. ಅವರ ಮೇಲೂ ಬೆಲೆ ಬಾಳುವ ಬಟ್ಟೆ ಹೆಮ್ಮೆಯಿಂದ ಮೆರೆದು ನಿಂತಿದೆ. ಜಾನಕಿಯ ಸಂಭ್ರಮವಂತೂ ಹೇಳತೀರದು.

ಹೊಸ ಒಡವೆ, ಹೊಸ ತೊಡವು ತೊಟ್ಟು ಹೊಸ ಹುಡುಗಿಯಂತಿದ್ದ ಅವಳು, ಇಂದು ತನ್ನ ಸೇವೆಯಲ್ಲೂ ಹೊಸತನವನ್ನೆ ತುಂಬಿ ಎಲ್ಲರನ್ನೂ ಬೆರಗುಗೊಳಿಸಿದ್ದಾಳೆ. ಇಂದಿನ ಅವಳ ಕಾಫಿ ತಿಂಡಿಯ ಸೇವಾರ್ಥದಲ್ಲಿ ಎಲ್ಲರೂ ಹೊಟ್ಟೆ ನೀವಿಕೊಳ್ಳುವಂತಾಗಿದೆ. ಸೀತಾರಾಮು ಬೇಡಬೇಡ

ವೆಂದರೂ ಮತ್ತೆರಡು ಚಕ್ಕುಲಿಯನ್ನು ಹಾಕಿ ಒತ್ತಾಯವಾಗಿ ತಿನ್ನಿಸಿದಳು. ತಿನ್ನಲಾರದೆ ತಿಂದ.

ಹೊಟ್ಟೆಗೆ ಹೆಚ್ಚಾದರೂ ಹಿತವಾಗಿತ್ತು. ಜಾನಕಿ ಅಷ್ಟು ಪ್ರೀತಿ ತೋರಿ ಬಹಳ ದಿನವಾಗಿತ್ತು. ಅದಕ್ಕೆ ಸೀತಾರಾಮುವೇ ಕಾರಣವಾಗಿದ್ದ. ತಾನು ಮಾಡಿಸಿಕೊಟ್ಟ ಒಡವೆಯನ್ನೆಲ್ಲಾ ಸಟ್ಟಾ ಆಟಕ್ಕಾಗಿ ಒಂದೊಂದೆ ಕಳೆದಿದ್ದ. ಆ ಬೇಸರದಿಂದ ಗಂಡ–ಹೆಂಡಿರಲ್ಲಿ ನಡುನಡುವೆ ವೈಮನಸ್ಸು ಉಂಟಾಗುತಿತ್ತು. ಈಗ ವಾರದ ಕೆಳಗೆ ಸಟ್ಟಾ ಆಟದಲ್ಲಿ ಎಂಟು ನೂರು ರೂಪಾಯಿ ಅವನ ಕೈಗೆ ಮೊತ್ತವಾಗಿ ಬಂದಿತ್ತು. ಆ ಹಣದಲ್ಲಿ ಎರಡು ಜತೆ ಚಿನ್ನದ ಬಳೆ ಮಾಡಿಸಿ ಆ ಬೇಸರವನ್ನು ದೂರ ಮಾಡಿದ್ದ. ಅದರ ಪ್ರಭಾವವೆ ಇಂದು ಇಷ್ಟೆಲ್ಲಾ ಮಾಡಿಸಿದುದು.

ಕಾಫಿ ತಂದಿಟ್ಟು ಒಯ್ಯಾರ ಮಾಡಿ ಹೊರಟಿದ್ದ ಹೆಂಡತಿಯ ಕೈಹಿಡಿದು ಜಗ್ಗಿ ನಿಲ್ಲಿಸಿದ. ಗಾಡಿ ಬಂತೆಂಬ ಸುದ್ದಿ ಮುಟ್ಟಿಸಲು ಶ್ರೀದೇವಮ್ಮ ಬಂದದ್ದು, ಪ್ರಣಯ ಚೇಷ್ಟೆಗೆ ಮುಟ್ಟುಗೋಲು ಹಾಕಿದಂತಾಯಿತು. ಕೈ ಬಿಟ್ಟು ಸಪ್ಪೆ ಮುಖ ಹಾಕಿ ಬಂದ ಹಸಿವನ್ನು ಕಣ್ಣಲ್ಲಿಯೆ ಹಿಂಗಿಸಿ, ತಾಯಿಯ ಹಿಂದೆ ನಡೆದ.

ಇಬ್ಬರೂ ಸೇರಿ ಬಾಡಿಗೆ ಮಾತಾಡಿದರು. ಹೊತ್ತಾಗಿದ್ದುದರಿಂದ ಎಲ್ಲ ರನ್ನೂ ಗಡಿಬಿಡಿ ಮಾಡಿ ಹೊರಡಿಸಿ, ಒಲಂಪಿಯಾ ಟಾಕೀಸಿಗೆ ಕರೆದುಕೊಂಡು ಬಂದು ಸರಿಯಾದ ಸ್ಥಳ ಮಾಡಿ ಕೂರಿಸಿದ. ತಾನು ಮಾತ್ರ ಗಂಡಸರ ಸೀಟಿನಲ್ಲಿ ಹೋಗಿ ಕೊಂಚ ಹೊತ್ತು ದೇಹವೂರಿದ್ದು ಅನಂತರ ಅಲ್ಲಿಂದ ಮೆಲ್ಲಗೆ ಹೊರಗೆ ಜಾರಿದ.

ಮನೆಯಿಂದ ಎಲ್ಲರೂ ಹೊರಟು ಹೋದ ಮೇಲೆ, ಶಾರದೆ ಬಾಗಿಲು ಹಾಕಿಕೊಂಡು ಗಂಡನ ಬಳಿ ಹೋಗಿ ಕುಳಿತಳು. ಹಾಗೆ ಕುಳಿತು ಬಹಳ ದಿನವಾಗಿತ್ತು. ಅವನ ಹುಚ್ಚು ನಡವಳಿಕೆ ಅವಳನ್ನು ಅವನಿಂದ ದೂರ ಮಾಡಿತ್ತು. ಯಾವ ಜನ್ಮದ ಕರ್ಮಫಲವೊ, ಮಾನವ ಜನ್ಮ ಪಡೆದೂ ಪಶುವಿನಂತಿದ್ದಾನೆ. ವ್ಯವಹಾರ ಜ್ಞಾನದ ಗಂಧವೇ ಇಲ್ಲ. ಊಟ–ಉಡಿಗೆ ಯಲ್ಲಿ ಅನಾಗರಿಕತೆ ಎದ್ದು ಕಾಣುತ್ತಿದೆ. ನಡವಳಿಕೆಯಲ್ಲಿ ಮಗುವನ್ನು ಮೀರಿಸುತ್ತಾನೆ. ಯಾವುದು ಮಾಡಬೇಕು, ಯಾವುದು ಬಿಡಬೇಕು ಎನ್ನು

ವುದೆ ಗೊತ್ತಾಗುವುದಿಲ್ಲ. ಮನಸ್ಸಿಗೆ ತೋಚಿದಂತೆ ನಡೆಯುವುದೆ ಅವನ ಪದ್ಧತಿಯಾಗಿತ್ತು. ಆ ಹುಚ್ಚು ನಡವಳಿಕೆಗೆ ಹೆದರಿ ಮರ್ಯಾದೆಯಿದ್ದ ಶಾರದೆ ಅವನಿಂದ ದೂರವಾದಳು. ಅದರಿಂದ ಶ್ರೀಕಂಠುವಿಗೆ ಯಾವ ನೋವೂ ಆಗ ಲಿಲ್ಲ; ಆ ಬಾಧೆ ತಪ್ಪಿದ್ದಕ್ಕಾಗಿ ಮತ್ತಷ್ಟು ಸಂತೋಷಿಯಾದ.

ಶಾರದೆಯ ಒಂಟಿ ಬಾಳು ಸೀತಾರಾಮುವಿಗೆ ಹಬ್ಬವಾಯಿತು. ಆಗಾಗ ಕೆಣಕುತ್ತಿದ್ದ. ಸುಖದಲ್ಲಿ ಅತೃಪ್ತಿಯಿದ್ದ ಅವಳ ದೇಹ ಅವನ ಕಾಮಪಿಪಾ ಸೆಗೆ ಬಲಿಯಾಗಲು ತವಕಿಸಿದರೂ, ವಿವೇಕ ಅವಳನ್ನು ತಡೆದು ಹಿಡಿದಿತ್ತು. ಅವಳು ಹುಟ್ಟಿದುದು ಒಂದು ಒಳ್ಳೆಯ ಮನೆತನದಲ್ಲಿ. ತಾಯಿ ತುಂಬಾ ಸಂಸ್ಕೃತಿ. ಯುಳ್ಳವರಾಗಿದ್ದರು. ಸಂಯಮ ಆಕೆಯ ಬದುಕಿನ ಕೈದೀವಿಗೆಯಾಗಿತ್ತು. ಆ ರಕ್ತ, ಆ ನೋಟ, ಆ ನೆನಪು ಅವಳನ್ನು ವಂಚಕ ಸೀತಾರಾಮುವಿನಿಂದ ಉಳಿಸಿತ್ತು.

ಅವನು ಮಹಾನೀಚ. ಅಲ್ಲೇ ಇನ್ನು ಸ್ವಲ್ಪ ದಿನವಿದ್ದರೆ ಒತ್ತಾಯವಾಗಿ ಯಾದರೂ ತನ್ನನ್ನು ಹಾಳು ಮಾಡದೆ ಬಿಡಲಾರ. ಅವನ ಅನ್ನಕ್ಕೆ ತಲೆ ಕೊಟ್ಟು ತೊಂದರೆಗೀಡಾಗುವುದಕ್ಕಿಂತ ಸ್ವತಂತ್ರವಾಗಿ ಎಲ್ಲಿಯಾದರೂ ದುಡಿದು ಆತ್ಮಗೌರವವನ್ನು ಗಳಿಸಿಕೊಳ್ಳುವುದೊಳ್ಳೆಯದೆಂಬ ನಿರ್ಧಾರಕ್ಕೆ ಶಾರದೆ ಬಂದಿದ್ದಳು. ಆ ಪ್ರಸ್ತಾಪ ಮಾಡಲೆಂದೆ ಶ್ರೀಕಂಠುವಿನ ಬಳಿ ಬಂದದ್ದು ಅವನ ಮಿಟ-ಮಿಟಿ ನೋಟವನ್ನು ತಡೆದು ಹೇಳಿದಳು.

"ಇಲ್ಲಿ ಕೇಳಿ, ನಾಳೆ ನಾಡಿದ್ದರಲ್ಲಿ ನಾವು ಈ ಮನೆ ಬಿಡಬೇಕಾಗುತ್ತೆ. ನನಗೆ ಇನ್ನಿಲ್ಲಿರಲು ಇಷ್ಟವಿಲ್ಲ. ಎಲ್ಲಾದರೂ ನಾಲ್ಕು ಮನೆ ಜೀತ ಬಳಿದು ಬದುಕುವುದೆಂದು ಗಟ್ಟಿ ಮಾಡಿದ್ದೇನೆ. ನನ್ನೊಡನೆ ನೀವು ಬರುತ್ತೀರಿ ತಾನೇ ?"

"……………… !"

"ಏನೂ ಹೆದರಬೇಡಿ—ನಿಮ್ಮನ್ನು ಯಾವ ಕೆಲಸಕ್ಕೂ ಕರೆಯುವುದಿಲ್ಲ. ಇಲ್ಲಿಯಂತೆ ಅಲ್ಲೂ ಕೂತುಂಡೆ ಕಾಲ ಹಾಕಬಹುದು. ಸುಮ್ಮನೆ ನೆಪಕ್ಕೆ ನನ್ನ ಜತೆಗೆ ಗಂಡುಸೆಂದಿದ್ದರೆ ಸಾಕು; ಬಾಕಿ ಎಲ್ಲಾ ನಾನು ನೋಡಿಕೊಳ್ಳು ವೆನು. ಬರುತ್ತೀರಿ ತಾನೆ ?"

"………………"

"ನಾನು ಕೇಳುತ್ತಿರುವುದು ನಿಮ್ಮನ್ನು, ಗೋಡೆಯನ್ನಲ್ಲ; ಮಾತಾಡಿ. ಸುಮ್ಮನೆ ಹೀಗೆ ಗುಂಡುಕಲ್ಲಂತಿದ್ದರೆ ಹೇಗೆ? ಮನಸ್ಸಿನಲ್ಲೇನಿದೆಯೆನ್ನುವುದ ನ್ನಾದರೂ ಹೇಳಿ; ಅದರಂತೆಯೆ ಮಾಡೋಣ."

"ಅಕ್ಕನನ್ನು ಬಿಟ್ಟು ನಾನೆಲ್ಲೂ ಬರುವುದಿಲ್ಲ."

ಧ್ವನಿಯಲ್ಲಿ ನಿರ್ಧಾರ ತುಂಬಿ ಹೇಳಿದ ಶ್ರೀಕಂಠ.

"ಯಾಕೆ?"

"ಅವಳಿಲ್ಲದಿದ್ದರೆ ನನ್ನನ್ನೆಲ್ಲರೂ ಹೊಡೆದೂ ಬೈದೂ ಮಾಡುತ್ತಾರೆ— ಅದಕ್ಕೆ!"

"ಹಾಗಾಗದಿರುವಂತೆ ನಾನು ನೋಡಿಕೊಳ್ಳುವೆನು, ಬನ್ನಿ. ನಿಮ್ಮ ಹತ್ತಿರ ಒಬ್ಬರೂ ಸುಳಿಯದಿರುವಂತೆ ಮಾಡಿದರೆ ಸರಿಯೋ ಇಲ್ಲವೊ!"

"......................."

"ಮಾತಾಡದಿದ್ದರೆ ಅಷ್ಟೆ. ಇನ್ನು ಕೇಳುವುದೆ ಅಲ್ಲ—ರಟ್ಟೆ ಹಿಡಿದು ಜಗ್ಗಿ ಎಳೆದುಕೊಂಡು ಹೋಗುವೆನು. ಮತ್ತಗಿದ್ದರೆ ಹಾಗೆ!"

ಆ ಮಾತು ಕೇಳಿ ಶ್ರೀಕಂಠ ದೊಡ್ಡದಾಗಿ ಅಳಲು ಪ್ರಾರಂಭಮಾಡಿದ. ಶಾರದೆಯ ಸಮಾಧಾನ ಕರಗಿ—ಅಲ್ಲಿ ತಿರಸ್ಕಾರ, ಕೋಪ ಹೆಡೆಯಾಡಿತು. ಕೂತಲ್ಲಿಂದ ಛಟ್ಟನೆದ್ದು ಹೇಳಿದಳು,

"ಸದ್ಯ ನನ್ನ ಜತೆ ನೀವು ಬರದಿದ್ದರೂ ಚಿಂತೆಯಿಲ್ಲ, ಈ ಹಾಳು ಅಳು ಮೋರೆ ಮಾತ್ರ ನೋಡಲಾರೆ. ನಿಮ್ಮಕ್ಕನ ಹತ್ತಿರವೆ ಇರಿ, ನನಗೆ ದೇವರಿ ದ್ದಾನೆ" ಎಂದು ಎರಡು ಹೆಜ್ಜೆ ಮುಂದಿಟ್ಟವಳು, ಶ್ರೀಕಂಠ ಮಾತಿಗೆ ಪ್ರಾರಂಭ ಮಾಡಲು ಮತ್ತೆ ನಿಂತಳು.

"ಸದ್ಯ ಬದುಕಿದೆ" ಎಂದು ಕಾಲು ಚಾಚಿ ಮಲಗಿದ.

"ಬದುಕಲಿಕ್ಕಾಗಿಯೆ ಹುಟ್ಟಿದವರು ನೀವು—ಏನೂ ಗಾಬರಿ ಪಡಬೇಡಿ; ಭಂಡತನದಿಂದಲಾದರೂ ಬದುಕುತ್ತೀರಿ. ನಿಮ್ಮನ್ನು ನೋಡಿದರೆ ಮೈಯಲ್ಲಿ ಬೆಂಕಿಯೇಳುತ್ತೆ. ಏನು ಮಾಡುವುದು! ನಿಮ್ಮದು ತಪ್ಪಿಲ್ಲ. ನಾನು ಮಾಡಿದ ಕರ್ಮ ಅಂಥಾದ್ದು. ನಿಮ್ಮಂಥವರನ್ನು ಕಟ್ಟಿಕೊಂಡು ಹೀಗೆಲ್ಲ ಅನುಭವಿಸಬೇಕೆಂದು ಹಣೆಯಲ್ಲಿ ಬರೆದಿರುವಾಗ ಯಾರು ಏನು ಮಾಡಲೂ ಸಾಧ್ಯವಿಲ್ಲ. ಹಾಳಾಗಿ

ಹೋಗಲಿ, ಇನ್ನು ನಿಮಗಾಗಿ ನಾನು ಅಳುವುದಿಲ್ಲ. ಧೈರ್ಯ ಮಾಡಿ ಒಬ್ಬಳೆ ಬದುಕನ್ನು ಎದುರಿಸುವೆನು. ಇನ್ನು ನಿಮ್ಮ ದಾರಿ ನಿಮಗೆ, ನನ್ನ ದಾರಿ ನನಗೆ !"

ಶಾರದೆಯ ಧ್ವನಿಯಲ್ಲಿ ನಿರ್ಧಾರವಿತ್ತು. ಮುಂದಿನ ಹಾದಿ ಹುಡುಕುತ್ತಾ ಅಡಿಗೆ ಮನೆಗೆ ನಡೆದಳು. ತಾನು ಅವರ ಮನೆಗೆ ಬಂದಂದಿನಿಂದ ಗಾಣದ ಎತ್ತಿನಂತೆ ದುಡಿಯುತ್ತಿದ್ದಳು. ದಿನದಲ್ಲಿ ಒಂದು ಗಳಿಗೆಯೂ ಅವಳಿಗೆ ಬಿಡುವಿರುತ್ತಿರಲಿಲ್ಲ. ಆ ಎಡೆಬಿಡದ ದುಡಿತಕ್ಕೆ ಇಂದು ಕೊನೆ.

ಬಿಡುಗಡೆಯ ನೆನಪಾಗಿ ಮನಸ್ಸು ಹಗುರವಾಯಿತು. ಎಂದಿಗಿಂತ ಸಮಾಧಾನದಿಂದಲೆ ಕೆಲಸ ಮಾಡತೊಡಗಿದಳು. ಒಲೆಯ ಮೇಲೆ ಅನ್ನಕ್ಕೆಸರಿಡುತ್ತಿದ್ದಂತೆ ಯಾರೊ ಕದ ತಟ್ಟಿದಂತಾಯಿತು. ಶ್ರೀಕಂಠು ತಲೆಯ ಮೇಲೆ ಬೆಟ್ಟ ಹೊತ್ತಂತೆ ಅಲುಗಾಡದೆ ಕುಳಿತಿದ್ದ. ಶಾರದೆ ತಾನೆ ಹೋಗಿ ಕದ ತೆರೆದಳು.

ಬಂದವನು ಸೀತಾರಾಮು. ಸರ್ಪವನ್ನು ಕಂಡಂತೆ ಹೆದರಿ ಹಿಮ್ಮೆಟ್ಟಿದಳು. ಬಾಗಿಲು ಅಗುಳಿಯಿಕ್ಕಿ, ಒಳಗೆ ಜಾರುತ್ತಿದ್ದ ಶಾರದೆಯ ಸೆರಗು ಹಿಡಿದು ಜಗ್ಗಿ ನಿಲ್ಲಿಸಿದ. ಆ ಹಿಡಿತದಿಂದ ಕೊಸರಿಕೊಂಡು ಹೋಗಲು ಇದ್ದ ಬಲವನ್ನೆಲ್ಲ ಪ್ರಯೋಗಿಸಿದಳು. ಅವನ ಪುರುಷ ಬಲದ ಮುಂದೆ ಅವಳ 'ಸ್ತ್ರೀತನ' ಕುಸಿದು ಬಿತ್ತು. ಆ ಪ್ರಯತ್ನ ಕೈಬಿಟ್ಟು ಮಾತಿನ ಅಸ್ತ್ರ ಹೂಡಿದಳು.

"ಒಳಗಡೆ ನಿಮ್ಮ ಮಾವ ಇದ್ದಾರೆ."

"ಇದ್ದರೆ ಇರುತ್ತಾನೆ—ಅವನು ಯಾ[illegible] ! ಆ ಷಂಡನಿಗೆ ಹೆದರಿಕೊಳ್ಳಬೇಕೆ? ಬಾ ರೂಮಿಗೆ ಹೋಗೋಣ" ಎಂದು, ಶಾರದೆ ಸಂಗಡ ಬರಲು ವಿರೋಧಿಸಿದರೂ ಲೆಕ್ಕಕ್ಕೆ ತರದೆ, ಅವಳ ಹೆಗಲ ಮೇಲೆ ಬಲಾತ್ಕಾರವಾಗಿ ಕೈಹಾಕಿ ತನ್ನ ಕೊಠಡಿಯತ್ತ ಸಾಗಿದ.

ಅವನು ಕರೆದುಕೊಂಡು ಹೋಗುವ ರಭಸಕ್ಕೆ ಕಾಲು, ಶಾರದೆಯ ಮಾತನ್ನು ತಳ್ಳಿ ಹಾಕಿ ಮುಂದೆ-ಮುಂದೆ ಹೋಗುತ್ತಿತ್ತು. ಹಜಾರಕ್ಕೆ ಕಾಲಿರಿಸಿದಾಗ ಶ್ರೀಕಂಠು ಎದುರಾದ. ಸೀತಾರಾಮುವಿನ ವರ್ತನೆಯಿಂದ ಅವ

ನಲ್ಲಿ ಯಾವ ಪ್ರತಿಕ್ರಿಯೆಯೂ ಉಂಟಾಗಲಿಲ್ಲ. ಆ ವಿಷಯ ತನಗೆ ಸಂಬಂಧ ಪಟ್ಟಿದ್ದಲ್ಲವೆನ್ನುವಂತಿದ್ದ.

ಶಾರದೆ ಸಹಾಯಕ್ಕಾಗಿ ಗಂಡನ ಕಡೆ ನೋಡಿದಳು. ಅದಕ್ಕೆ ಉತ್ತರ ವಾಗಿ ದೊಡ್ಡದಾಗಿ ನಕ್ಕುಬಿಟ್ಟ. ಅವಳ ಕೋಪ ನೆತ್ತಿಗೇರಿತು. ಇಂಥಾ ಸಮಯದಲ್ಲೂ ಸತ್ತ ಕೊರಡಿನಂತೆ ನಡೆದುಕೊಳ್ಳುತ್ತಿರುವುದು ಅವಳ ಮೈಯಲ್ಲಿ ಬೆಂಕಿ ಮೂಡಿಸಿತು. ಹೋಗಿ ಆ ಷಂಡನ ಹಲ್ಲು ಮುರಿದು ಅದರ ಆಹುತಿ ಯಿಂದ ತನ್ನ ಕೋಪಾಗ್ನಿಯನ್ನು ಶಮನ ಮಾಡಿಕೊಳ್ಳಬೇಕೆಂದು ಪ್ರಯತ್ನ ಪಟ್ಟಳು. ಪ್ರಯತ್ನ ಹೆಚ್ಚಿದಂತೆ ಸೀತಾರಾಮುವಿನ ಹಿಡಿತದ ಬಿಗಿಯೂ ಹೆಚ್ಚಾಯಿತು. ಆ ಪರಿಸ್ಥಿತಿ ಅವಳ ಮುಂದಿನ ಬಾಳನ್ನು ಕಣ್ಣು ಮುಂದೆ ಹಿಡಿಯಿತು. ನೋಡಿ–ನೋಡಿ ದುರ್ಬಲವಾದ ಕಣ್ಣು ನೋವನ್ನು ಸಹಿಸದೆ ನೀರು ಕಾರಿತು. ಅಷ್ಟರಲ್ಲಿ ಇಬ್ಬರೂ ಕೊಠಡಿ ತಲುಪಿದ್ದರು. ಸೀತಾರಾಮು ಅವಳನ್ನು ಬಲವಂತವಾಗಿ ಹಾಸಿಗೆಯ ಮೇಲೆ ಕೂರಿಸಿ–ಬಾಗಿಲು ಅಗುಳಿ ಹಾಕಿ, ಹೋಗಿ ಅವಳ ಪಕ್ಕದಲ್ಲಿ ಕುಳಿತ. ಶಾರದೆ ದೂರ ಸರಿದಳು. ಭಂಡ ತನ ಮಾಡಿಕೊಂಡು ಹತ್ತಿರ ಸರಿದು ಹೇಳಿದ,

"ಯಾಕಿಷ್ಟು ಒದ್ದಾಟ ಮಾಡುತ್ತೀಯೆ! ಕೈಗೆ ಬಂದ ಸುಖವನ್ನು ಯಾರಾದರೂ ಕಳೆದುಕೊಳ್ಳುತ್ತಾರೆಯೆ! ನಿನಗೆ ಹೇಗೂ ಶ್ರೀಕಂಠುವಿನಿಂದ ಸುಖವಿಲ್ಲ. ನಿಮ್ಮಿಬ್ಬರ ಜೀವನಕ್ಕೂ ನಾನೆ ಹೊಣೆ. ಹೇಗೆ ನೋಡಿದರೂ ನಿನಗೆ ನಾನು ಬೇಕೇ ಬೇಕು. ಹಠ ಮಾಡಬೇಡ."

"ನನಗೆ ಯಾರೂ ಬೇಡ, ನನ್ನ ಬೆಂಬಲಕ್ಕೆ ದೇವರಿದ್ದಾನೆ. ಅನ್ನ ಕೊಡಲು ರಟ್ಟೆಯಿದೆ."

"ಸುಖದ ಬದುಕಿಗೆ ರಟ್ಟೆ ಬಲವೊಂದೆ ಸಾಕೆ?"

"ನನಗಷ್ಟೆ ಸಾಕು. ನನ್ನ ರಟ್ಟೆ ಗೌರವದಿಂದ ಅನ್ನ-ಬಟ್ಟೆ ಕೊಡಿಸು ತ್ತದೆ ಎನ್ನುವ ಭರವಸೆ ನನಗಿದೆ. ಅದಕ್ಕಿಂತ ಹೆಚ್ಚಿಗೆ ನನಗೇನೂ ಬೇಡ."

"ಇದಕ್ಕೆ ಶ್ರೀಕಂಠು ಒಪ್ಪಿದನೆ?"

"ಅವರೇಕೆ ಒಪ್ಪಬೇಕು? ಅವರು ಯಾವ ಮಹಾ ಗಂಡುಸೆಂದು ಹೇಳಲಿ? ನೀವೀಗ ತಾನೆ ಹೇಳಲಿಲ್ಲವೆ 'ಅವನೊಬ್ಬ ಷಂಡ—ಲೆಕ್ಕಕ್ಕಿಡು ವುದು ಬೇಡ' ವೆಂದು!"

"ಹಾಗಾದರೆ ನೀನು ನಮ್ಮ ಮನೆ ಬಿಟ್ಟು..........!"

ಅರ್ಧದಲ್ಲಿಯೆ ಅವನ ಮಾತು ತಡೆದು ಹೇಳಿದಳು.

"ಹೌದು, ಇನ್ನು ನಾನು ನಿಮ್ಮ ಮನೆಯಲ್ಲಿರುವುದಿಲ್ಲ. ನಾಳೆ-ನಾಡಿದ್ದರಲ್ಲಿ ಹೊರಡಬೇಕೆಂದಿದ್ದೇನೆ. ನಾನಾಗಿಯೆ ತಿಳಿಸಬೇಕೆಂದಿದ್ದೆ."

"ಸಂಗಡ ಶ್ರೀಕಂಠು ಬರದಿದ್ದರೆ ಏನು ಮಾಡುವೆ ?"

"ಒಬ್ಬಳೆ ಹೋಗುವೆನು. ನನಗೆ ಯಾವ ಭಯವೂ ಇಲ್ಲ. ಇನ್ನೂ ಅಂಥವರನ್ನು ಕಟ್ಟಿಕೊಂಡು ಹೋದರೆ ಕಷ್ಟ ಹೆಚ್ಚು."

ಮತ್ತೂ ಹತ್ತಿರ ಸರಿದು ಕೇಳಿದ,

"ಇಲ್ಲ ಇಲ್ಲ. ನಿನ್ನನ್ನು ನನ್ನ ಜೀವವಿರುವ ವರೆಗೆ ಬಿಟ್ಟು ಕೊಡುವುದಿಲ್ಲ. ನೀನು ನನಗೆ ಬೇಕು."

ತಾನೂ ದೂರ ಸರಿಯುತ್ತಾ ಹೇಳಿದಳು,

"ನನಗೆ ನೀವು ಬೇಡವಲ್ಲ-ಅದಕ್ಕೇನು ಮಾಡಲಿ ಹೇಳಿ !"

"ಯಾಕೆ ಶಾರದೆ, ನನ್ನಲ್ಲಿ ರೂಪಿಲ್ಲವೇ, ಯೌವ್ವನವಿಲ್ಲವೇ, ಸಂಪತ್ತಿಲ್ಲವೇ ? ಯಾವುದಕ್ಕೆ ಕಡಿಮೆಯಿದೆ ಹೇಳು !"

"ಅವೆಲ್ಲ ನನಗೆ ಬೇಕಿಲ್ಲವಲ್ಲ ! ನನಗೆ ಬೇಕಾಗಿರುವುದು ನನ್ನ ಮನೆತನದ ಗೌರವವೊಂದೆ. ಅದರ ಮುಂದೆ ಯಾವುದೂ ನನಗೆ ಹೆಚ್ಚಿಲ್ಲ. ಸುಮ್ಮನೆ ಮಾತಾಡಿ ಯಾಕೆ ಗಂಟಲು ನೋಯಿಸಿಕೊಳ್ಳುವಿರಿ ? ನನಗೆ ಒಳಗೆ ಕೆಲಸವಿದೆ—ಬಿಟ್ಟುಬಿಡಿ " ಎಂದು ಏಳಲು ಹೋದಳು.

ಸೀತಾರಾಮು ತಡೆದು ಹೇಳಿದ,

"ಇಲ್ಲ, ಬಿಡುವುದಿಲ್ಲ. ನೀನು ನನಗೆ ಬೇಕೇ ಬೇಕು. ಒತ್ತಾಯವಾಗಿಯಾದರೂ ನಿನ್ನಿಂದ ಸುಖ ಪಟ್ಟೇ ಪಡುತ್ತೇನೆ. ನನ್ನ ಇಚ್ಛೆಯ ಮುಂದೆ ಯಾರ ಬಲವೂ ನಡೆಯುವುದಿಲ್ಲ."

ಕಾಮದ ಉದ್ರೇಕದಲ್ಲಿದ್ದವನು ಪಶುವಿನಂತಾದ. ವಿವೇಕ ಮೈ ಮುದುಡಿ ಮೂಲೆ ಸೇರಿತು. ತನ್ನ ಇಚ್ಛೆ ತುಂಬಿಕೊಳ್ಳುವುದರ ಹೊರತು ಮತ್ತೆ ಯಾವುದೂ ಗಮನಕ್ಕೆ ಬರಲಿಲ್ಲ. ಅವನ ಪಶುಬಲದ ಮುಂದೆ ಶಾರದೆ ಸೋತಳು. ಕೊಠಡಿ ತುಂಬಾ ಮೌನ ತುಂಬಿತು. ಆಗಾಗ ಅವಳ ನರಳಾಟ ನೋವಿನ ನುಡಿ ಮೌನದ ಗರ್ಭವನ್ನು ಸೀಳಿ ಹೊರಬರುತ್ತಿತ್ತು.

ಆ ವೇಳೆಗೆ ಹೊರಗೆ ಯಾರೊ ಬಡಬಡ ಬಾಗಿಲು ತಟ್ಟಿದರು. ಹಿಂದು–ಮುಂದು ನೋಡದೆ ಶ್ರೀಕಂಠು ಹೋಗಿ ಬಾಗಿಲು ತೆರೆದು ಬಂದ. ಸೀತಾರಾಮುವನ್ನು ವಿಚಾರಿಸುತ್ತ ಶ್ರೀಕಂಠುವನ್ನು ಹಿಂಬಾಲಿಸಿ ಹಜಾರಕ್ಕೆ ಬಂದರು ಭಟ್ಟರು. ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅರ್ಥ ಮಾಡಿಕೊಂಡು, ವಿವರ ತಿಳಿಯಲು ಶ್ರೀಕಂಠುವನ್ನು ಕೇಳಿದರು. ಅವನು ನಡೆದ ಸಂಗತಿಯನ್ನೆಲ್ಲ ಮಗುವಿನಂತೆ ಮುಚ್ಚುಮರೆಯಿಲ್ಲದೆ ತಿಳಿಸಿದ.

ಯಾವ ವಿಚಾರವೂ ಇಲ್ಲದೆ ಹೆಂಡತಿಗಾದ ಅಪಮಾನವನ್ನು ಹುಚ್ಚುಹುಚ್ಚಾಗಿ ನಗುತ್ತಾ ಹೇಳಿದ ಶ್ರೀಕಂಠುವಿನ ನಡವಳಿಕೆ ಅಸಹ್ಯವನ್ನಾಗಲೀ, ಆಶ್ಚರ್ಯವನ್ನಾಗಲೀ ಉಂಟು ಮಾಡಲಿಲ್ಲ. ಅವನನ್ನು ಯಾತಕ್ಕೂ ಬಾರದ, ಸಾಕಷ್ಟು ಬುದ್ಧಿ ಬೆಳೆಯದ ಅರೆಹುಚ್ಚು ಮನುಷ್ಯನೆಂದು ಅವರು ಎಂದೋ ನಿರ್ಧರಿಸಿದ್ದರು. ಹಾಗಾಗಿ ಅವನನ್ನು ಲಕ್ಷ್ಯಕ್ಕೆ ತರದೆ ಶಾರದೆಯ ಮಾನ ರಕ್ಷಣೆಗೆ ತಾವು ನಿಂತರು.

ಅವಳ ಅಸಹಾಯಕತೆ ಕರುಳನ್ನು ಚುರುಕ್ಕೆನಿಸಿತು. ಒಳಗಿಂದ ನರಳಾಟವೂ ಕೇಳಿ ಬರುತ್ತಿತ್ತು. ಕೋಪಾಗ್ನಿಗೆ ತುತ್ತಾದ ಅವರು ಕದವನ್ನು ಒದ್ದು, ಆ ಪಾಪಿಗೆ ತಕ್ಕ ಬುದ್ಧಿ ಕಲಿಸಬೇಕೆಂದು, ಎರಡು ಹೆಜ್ಜೆ ಮುಂದಿಡುವುದರಲ್ಲೆ ಹೊರಗೆ ಮಾತಿನ ಸದ್ದು ಕೇಳಿ, ಸೀತಾರಾಮುವೆ ಕದ ತೆರೆದು ಈಚೆಗೆ ಬಂದ. ಭಟ್ಟರನ್ನು ಕಂಡು ಮೈ ನಡುಗಿತು. ಕೊಠಡಿಯ ಕದವನ್ನು ಮುಂದಕ್ಕೆಳೆದು, ಸುರಿಯುತ್ತಿದ್ದ ಬೆವರನ್ನು ಒರೆಸಿಕೊಳ್ಳುತ್ತಾ ಹೇಳಿದ,

"ಏನು, ಇಷ್ಟು ಅಪರೂಪವಾಗಿ ಬಂದುಬಿಟ್ಟಿರಿ ?"

"ಗೋಪಿಯಿಂದೇನಾದರೂ ಕಾಗದ ಬಂದಿದೆಯೇನೊ ವಿಚಾರಿಸೋಣವೆಂದು ಬಂದೆ. ರಂಗಮ್ಮನೂ ಹೋಗಿ ಆಗಲೆ ಏಳೆಂಟು ದಿನವಾಯಿತು. ನೆನ್ನೆಯೆ ಬರಬೇಕಾಗಿತ್ತು; ಇದುವರೆಗೆ ಬಂದಿಲ್ಲ. ನಿನಗೇನಾದರೂ ಗೊತ್ತೆ, ಯಾವಾಗ ಬರುತ್ತಾರೆಂದು ?"

"ಇಲ್ಲವಲ್ಲ—ನನಗೆ ಗೊತ್ತೇ ಇಲ್ಲ ಅವರ ಸುದ್ದಿ. ಹೋದಲಾಗಾಯಿತು ಗೋಪು ಕೂಡ ಕಾಗದ ಬರೆದಿಲ್ಲ. ಕೂತುಕೊಳ್ಳಿ, ನಿಂತೇ ಇದ್ದೀರಲ್ಲಾ !"

"ಇಲ್ಲ ಹೋಗುತ್ತೇನೆ, ಹೊತ್ತಾಯಿತು" ಎಂದು ಉತ್ತರಕ್ಕೆ ಕಾಯದೆ ಹೊರಬಂದರು.

ಕದ ತಟ್ಟಲು ಹೋದಾಗ ಇದ್ದ ಅವರ ಭಾವಾವೇಶ ಅನಂತರ ಉಳಿಯ ಲಿಲ್ಲ. ದುಷ್ಟನಾದ ಅವನನ್ನು ಈಗಲೆ ಎದುರು ಹಾಕಿಕೊಂಡರೆ ಮುಂದೆ ಎಲ್ಲ ಕೆಲಸ ಹಾಳಾಗಬಹುದೆಂಬ ಸಂದೇಹ ಬಂದು, ಆ ಪರಿಸ್ಥಿತಿಯಿಂದ ಉಂಟಾದ ತಮ್ಮ ಭಾವವನ್ನು ಮರೆಮಾಡಿ ಮಾತಾಡಿದ್ದರು.

ಅದೂ ಅಲ್ಲದೆ ಶಾರದೆಯ ಸರಳಾಟದಿಂದ ಆ ವಿಷಯ ಭಟ್ಟರಿಗೆ ಗೊತ್ತಾಗಿ ಹೋಗಿದೆಯೆಂಬ ಭಾವನೆಯೂ ಸೀತಾರಾಮುವಿನಲ್ಲಿ ಸೂಚಿತ ವಾಗಿತ್ತು. ಅದಕ್ಕೆ ಸರಿಯಾಗಿ ಅವನು ಹೊರಬಂದಾಗ ಶಾರದೆ ಭಟ್ಟರ ಧ್ವನಿ ಹಿಡಿದು ಅವರಿಗೆ ತಿಳಿಯಲೆಂದೋ ಏನೋ, ಸೀತಾರಾಮುವನ್ನು ಗಟ್ಟಿಯಾಗಿ ಶಪಿಸುತ್ತಿದ್ದಳು. ಆ ಶಾಪ ಅವನ ರಕ್ತವನ್ನು ಹೀರಿ, ದೇಹವನ್ನು ಬೆಂಡು ಮಾಡುತ್ತಿತ್ತು. ಆಗ ಅಷ್ಟೆ ಶಿಕ್ಷೆ ಸಾಕೆಂದು ಭಟ್ಟರು ಆ ವಿಷಯವಾಗಿ ಮಾತೆತ್ತಲಿಲ್ಲ.

ಅವರು ಆ ದಿನ ಆ ಬೀದಿಗೆ ಬಂದದ್ದು ಅಂಚೆಯವನನ್ನು ಕಾಣುವು ದಕ್ಕೆಂದು. ಅವನ ಕೈ ಬೆಚ್ಚಗೆ ಮಾಡಿ ಸೀತಾರಾಮುವಿಗೆ ಬರುವ ಕಾಗದ ವನ್ನು ಒಂದು ವಾರದ ವರೆಗೆ ತಮಗೆ ಕೊಡಬೇಕೆಂದು ಹೇಳಿದ್ದರು. ಎಂದೂ ಇಂಥಾ ಮೋಸಕ್ಕೆ ಕೈಹಾಕಿದವರಲ್ಲ. ಗೋಪಿ ಅಡ್ಡಹಾದಿಗೆ ಬಿದ್ದಿರಬಹು ದೆಂಬ ಸಂಶಯ ಬಂದು, ಅದರ ಸತ್ಯಾಸತ್ಯತೆಯನ್ನು ತಿಳಿಯಲೆಂದು ಹಾಗೆ ಮಾಡಿದ್ದರು. ಆ ಕೆಲಸ ಮಾಡಲು ಮನಸ್ಸು ತುಂಬಾ ಅಸಹ್ಯಪಟ್ಟಿತ್ತು. ವಿಧಿಯಿಲ್ಲದೆ ಮಾಡಿದ್ದರು. ಅವರ ಮಾತಿಗೆ ಅಂಚೆಯವನೂ ಒಪ್ಪಿದ್ದ. ಹಾಗಾಗಿ ನಾಲ್ಕೈದು ದಿನದಿಂದ ಆ ಬೀದಿಯ ಧೂಳು ಜಾಡಿಸಿದ್ದರು. ಈ ದಿನ ಅವರ ಪರಿಶ್ರಮ ಸಾರ್ಥಕವಾಯಿತು. ಗೋಪುವಿನಿಂದ ಸೀತಾರಾಮುವಿಗೆ ಕಾಗದ ಬಂದಿತ್ತು. ಒಡೆದು ಓದಬೇಕೆನ್ನುವಷ್ಟರಲ್ಲಿ ಅವನ ಕೊಠಡಿಯಿಂದ ಸರಳಾಟ ಕೇಳಿಬಂತು. ಕಾಗದವನ್ನು ಹಾಗೇ ಸೊಂಟಕ್ಕೆ ಸಿಕ್ಕಿಸಿ, ಸುದ್ದಿ ತಿಳಿಯಲು ಹೋಗಿ ಕದ ತಟ್ಟಿದರು.

ಮನೆಯ ಕಡೆ ಹೊರಟಿದ್ದವರಿಗೆ ಕಾಗದದ ನೆನಪಾಯಿತು. ಮನೆ ತಲಪುವವರೆಗೂ ಆತುರ. ಅರ್ಧ ದಾರಿ ಸಾಗಿ ಬಂದಿದ್ದರು. ಸ್ವಲ್ಪ ಹೊತ್ತಿ ಗೆಲ್ಲಾ ಮನೆ ಸೇರಬಹುದಿತ್ತು. ಮನಸ್ಸು ಕೇಳಲಿಲ್ಲ. ವಿಧಿಯಿಲ್ಲದೆ ಸೊಂಟ ದಿಂದ ಕಾಗದವನ್ನು ತೆಗೆದು ಒಡೆದು ಬಿಡಿಸಿ ಓದಿದರು.

ಕಾಗದದ ತುಂಬಾ ಬರಿಯ ಸಟ್ಟಾ ನಂಬರಿನ ವಿಷಯವೇ ತುಂಬಿತ್ತು. ಸಟ್ಟಾ ಆಡುವುದು ಮನೆಹಾಳುತನದ ಕೆಲಸ. ಸೀತಾರಾಮು ತನ್ನ ಬದುಕಿನ ಹುಚ್ಚನ್ನು ಗೋಪುವಿನಲ್ಲೂ ತುಂಬಿದ್ದಾನೆ. ಆದ್ದರಿಂದಲೇ ಇಬ್ಬರ ಸ್ನೇಹವೂ ಅಷ್ಟು ಗಾಢವಾಗಿರುವುದು.

ಲಕ್ಷಾಂತರ ರೂಪಾಯಿ ಗಳಿಕೆಯ ಹುಚ್ಚಿರುವ ಗೋಪಿ ಸಟ್ಟಾ ಆಟಕ್ಕೆ ಬಲಿಯಾಗಿರುವುದೇನೂ ಅಚ್ಚರಿಯಲ್ಲ. ಅದರಲ್ಲಿ ನಾಲ್ಕು ಕಾಸು ಬಂದರಾಯಿತು, ಇಲ್ಲದಿದ್ದರೆ ಮನೆಮಠವೆಲ್ಲ ಕ್ಷಣಾರ್ಧದಲ್ಲಿ ನಿರ್ನಾಮವಾಗಿ ಕೈಲಿ ಕರಟ ಹಿಡಿದು ಹೋಗಬೇಕಾಗುತ್ತದೆ. ಇದು ಎಲ್ಲರಿಗೆ ಹೇಳಿಸಿದ್ದಲ್ಲ. ಗೋಪಿ ಮೊದಲೆ ಒರಟ–ಹಟಮಾರಿ. ಹೋದದ್ದು ಹೋಗಲಿ, ಕಡೆವರೆಗೆ ನೋಡಿಯೆ ಬಿಡೋಣವೆಂದು ಇದ್ದದ್ದನ್ನೆಲ್ಲಾ ಕಳೆದು ಬಿಟ್ಟರೆ...........? ಹೆಂಡತಿ ಮಕ್ಕಳ ಗತಿ...........?

ಮುಂದೆ ಯೋಚಿಸುವುದೂ ಬೇಡವಾಯಿತು. ತಲೆ ಕೊಡವಿಕೊಂಡರು. ಈ ಬಾರಿ ಅವಳಿಗೆ ಈ ವಿಷಯ ತಿಳಿಸಿ, ಅವಳಿಂದಲೆ ಆವನು ದಾರಿಗೆ ಬರುವಂತೆ ಮಾಡಬೇಕೆಂದು ನಿರ್ಧರಿಸಿಕೊಂಡರು. ಮನಸ್ಸು ಸ್ವಲ್ಪ ಹಗುರವಾಯಿತು. ಮನೆಯೂ ಸಿಕ್ಕಿತ್ತು.

ಭಟ್ಟರು ಬಂದದ್ದು ಸೀತಾರಾಮುವಿಗೆ ಮುಳ್ಳು ಚುಚ್ಚಿದಂತಾಗಿತ್ತು. ಅವರು ತನ್ನನ್ನು ಪರೀಕ್ಷಿಸುವುದಕ್ಕೆಂದೆ ಬಂದಿದ್ದರೆಂದು ತಿಳಿದಿದ್ದನು. ತನ್ನ ನಾಶಕ್ಕೆ ನಾಣಿಯೊಡನೆ ಭಟ್ಟರೂ ಸೇರಿದ್ದಾರೆಂದೆ ಅವನ ಕಲ್ಪನೆ. ಅವರಿಬ್ಬರನ್ನು ಬಗೆಹರಿಸಿದ ಹೊರತು ಮನಸ್ಸಿಗೆ ನೆಮ್ಮದಿಯಿಲ್ಲ. ಸಮಯ ಕಾಯಬೇಕು. ಈಗಲೆ ದುಡುಕಿದರೆ ಮೊನ್ನೆ ನಡೆದ ಅಪಘಾತಕ್ಕೆ ತಾನೇ ಅಪರಾಧಿಯೆಂದು ತೋರಿಸಿಕೊಟ್ಟಂತಾಗಿ ದುಃಖಕ್ಕೀಡಾಗಬೇಕಾಗುತ್ತದೆ. ಸ್ವಲ್ಪ ದಿನ ಕಾಯುವುದೆ ಒಳ್ಳೆಯದೆಂದು ಮನಸ್ಸನ್ನು ಹದಕ್ಕೆ ತಂದುಕೊಂಡ. ಅಷ್ಟರಲ್ಲಿ ಗಡಿಯಾರವೂ ಐದೂವರೆ ಗಂಟೆಯಾಯಿತೆಂದು ಸೂಚಿಸಿ ಸಮಯದ ಎಚ್ಚರಿಕೆ ಕೊಟ್ಟಿತು. ಅವಸರವಸರವಾಗಿ ಮೈ ಮುಖ ಸರಿಮಾಡಿಕೊಂಡು, ಸುದ್ದಿ ಹೊರಗೆ ಹಾಕಬಾರದೆಂದು ಶಾರದೆಗೆ ಬೆಜ್ಜರಿಕೆ ಹಾಕಿ ಥಿಯೇಟರಿನ ಕಡೆ ಹೆಜ್ಜೆ ಹಾಕಿದ. ಅವನು ಅಲ್ಲಿ ತಲುಪುವುದಕ್ಕೂ ಆಟ ಮುಗಿಯುವುದಕ್ಕೂ ಸಮನಾಗಿತ್ತು. ಹೆಂಗಸರು ಮಕ್ಕಳನ್ನು ಕರೆದುಕೊಂಡು ಮನೆಗೆ ಬಂದ.

ಶಾರದೆ ತಲೆಯನ್ನೆಲ್ಲ ಕೆದರಿಕೊಂಡು ಹುಚ್ಚಿಯಂತಿದ್ದಳು. ಸರಿಪಡಿಸಿ ಕೊಳ್ಳುವ ಗೋಜಿಗೆ ಹೋಗಲಿಲ್ಲ. ಮನಸ್ಸೂ ಆಗಲಿಲ್ಲ. ಆಗ ಅವಳ ಮನಸ್ಸೂ ಕೆದರಿದ ತಲೆಯಂತೆ ಕ್ರಮತಪ್ಪಿತ್ತು. ಅದರ ಹೊಯ್ದಾಟ ಮುಖ ದಲ್ಲಿ ಸ್ಪಷ್ಟವಾಗಿ ಮೂಡಿತ್ತು. ಅವಳನ್ನು ಕಂಡು ಶ್ರೀದೇವಮ್ಮ, ಜಾನಕಿ ಇಬ್ಬರೂ ಹೆದರಿದರು. ಹಿಂದು–ಮುಂದು ಓಡಾಡಿ ಕೆದಕಿ ಕೇಳಿದರು. ಶಾರದೆ ತುಟಿ ಎರಡು ಮಾಡಲಿಲ್ಲ. ಬಂದ ಬೆಂಕಿಯನ್ನೆಲ್ಲಾ ಹೃದಯದಲ್ಲೆ ತುಂಬಿ ಸುಡುತ್ತಿದ್ದಳು. ಅವಳು ಬಿಟ್ಟ ಉಸಿರಿನ ಕಾವಿನಿಂದ, ಮನಸ್ಸಿನಲ್ಲಿ ಏನೋ ಬೆಂಕಿ ಹೊತ್ತಿದೆಯೆಂದೂ ಕಾವು ಕಡಿಮೆಯಾಗುವವರೆಗೆ ಹೇಳಲಾರಳೆಂದೂ ತಿಳಿದು ಅವರು ಮೌನವಾಗಿ ತಮ್ಮ ತಮ್ಮ ಕೆಲಸಗಳಿಗೆ ತೆರಳಿದರು.

ಬೆಳಗಾಗುವುದರಲ್ಲಿ ಶಾರದೆಯ ಹಾಸಿಗೆ ಖಾಲಿಯಾಗಿತ್ತು. ಸೀತಾ ರಾಮು-ಭಟ್ಟರು ಇವರಿಬ್ಬರ ಹೊರತು ಮತ್ತಾರಿಗೂ ಕಾರಣ ತಿಳಿಯಲಿಲ್ಲ. ಸೀತಾರಾಮುವಿನ ಸ್ವಭಾವವರಿತ ಶ್ರೀದೇವಮ್ಮ ತಿಳಿಯುವ ಪ್ರಯತ್ನವನ್ನೂ ಮಾಡಲಿಲ್ಲ; ಅವಳನ್ನು ಹುಡುಕುವ ಗೋಜಿಗೂ ಹೋಗಲಿಲ್ಲ.

## ೧೧

'ಪೋಸ್ಟ್' ಎಂದು ಅಂಚೆಯವನು ಎರಡು ಕಾಗದಗಳನ್ನು ಎಸೆದು ಹೋದ. ಒಳಗೆ ಸುಶೀಲಮ್ಮನೊಡನೆ ಯಾವುದೊ ಮಾತಿನಲ್ಲಿದ್ದ ಸೂರಪ್ಪ ಆ ಕೂಗನ್ನು ಕೇಳಿ ಹಜಾರಕ್ಕೆ ಹಾರಿ ಬಂದರು. ಬಗ್ಗಿ ನೀಡಿದ ಕೈಗೆ ಕಾಗದ ಗಳು ಸ್ವಾಗತ ಬಯಸಿ ಸರಾಗವಾಗಿ ಬಂದುವು.

ಆವೆರಡರಲ್ಲಿ ಒಂದು ಅವರಿಗೆ ಭಟ್ಟರು ಬರೆದದ್ದು; ಮತ್ತೊಂದು ಗೋಪುವಿಗೆ ಸೀತಾರಾಮು ಬರೆದದ್ದು. ಭಟ್ಟರು ತಮಗೆ ಬರೆದ ಕಾಗದವನ್ನು ಒಡೆದು ಓದಿದರು. ಓದುತ್ತಿದ್ದಂತೆ ಮುಖದ ಬಣ್ಣ ಬದಲಾಯಿಸಿತು. ಗೆಲು ವಿದ್ದ ಮುಖದಲ್ಲಿ ಗಾಬರಿ ತುಂಬಿತು. ಗೋಪು ಸಟ್ಟಾ ಆಟಕ್ಕೆ ಬಲಿಯಾಗಿರು ವುದನ್ನು ತಿಳಿದು ಎದೆ ನಡುಗಿತು. ಆ ನಡುಕಕ್ಕೆ ಮತ್ತಷ್ಟು ಪುಟಕೊಟ್ಟುದು

ಸೀತಾರಾಮುವಿನ ದುಷ್ಟ ನಡವಳಿಕೆಯ ವರ್ಣನೆ. ನೀಚನಾದ ಅವನ ಕಪಿ ಮುಷ್ಟಿಯಿಂದ ಗೋಪುವಿನ ಬಿಡುಗಡೆ ಅಸಾಧ್ಯವೆಂದೂ, ಮುಂಪೆ ಅವನ ಜೀವನ ಹೇಗೆ ಹರಿಯುವುದೆಂಬುದನ್ನು ತಿಳಿಸಲು ಬರುವುದಿಲ್ಲವೆಂದೂ ಬರೆದಿದ್ದರು. ಸಾಲದುದಕ್ಕೆ ಮೊನ್ನೆ ನಡೆದ ಎರಡು ಘಟನೆಗಳನ್ನೂ ಸೂಕ್ಷ್ಮವಾಗಿ ತಿಳಿಸಿ ಅವರ ಭಯವನ್ನು ಹೆಚ್ಚಿಸಿದ್ದರು. ಸಂಗಡ ತಾವು ಶಾಂತಳ ಬಗ್ಗೆ ಹೊತ್ತಿದ್ದ ಜವಾಬ್ದಾರಿಯನ್ನು ಮರೆತಿಲ್ಲವೆಂದೂ, ಅದಕ್ಕಾಗಿ ತಮ್ಮ ಬಾಳನ್ನು ಬಲಿ ಕೊಡಲು ಸಿದ್ಧರಿರುವರೆಂದೂ ಬರೆದು ತಿಳಿಸಿ, ಸೂರಪ್ಪನ ಧೈರ್ಯ–ವಿಶ್ವಾಸಗಳಿಗೆ ಸ್ವಲ್ಪ ಜೀವ ತುಂಬಿದ್ದರು.

ಮನೆ ಮುರುಕ ಸ್ನೇಹಿತ, ಸಟ್ಟಾ ಆಟ ಇವು ಗೋಪಿಯ ಬಾಳನ್ನು ಒಯ್ಯುವ ಹಾದಿಯನ್ನು ಮನಸ್ಸಿನಲ್ಲೆ ಚಿತ್ರಿಸಿ ನೋಡಲಾರದೆ ಸೂರಪ್ಪ ಕ್ಷಣ ಕಾಲ ಕಣ್ಣು ಒತ್ತಿ ಹಿಡಿದರು. ಅಬ್ಬಾ! ಮಾನವನ ಬಾಳು ಎಷ್ಟು ಭಯಂಕರ! ಎಂತಹ ರಹಸ್ಯ! ಯಾರ ಬಾಳು ಹೇಗೆ ಹರಿಯುತ್ತದೆನ್ನುವುದು ತಿಳಿಯುವುದೆ ಕಷ್ಟವಾಗಿದೆ. ಆ ದಿನ ಅಂಗಡಿಯಲ್ಲಿ ನಡೆದ ಹಳ್ಳಿಯುವನ ಘಟನೆಯಿಂದ ಗೋಪುವಿನ ವ್ಯಕ್ತಿತ್ವಕ್ಕೆ ಸಾಕಷ್ಟು ಬೆಲೆ ಕಟ್ಟಿದ್ದೆ. ನನ್ನ ವಿವೇಚನಾ ಶಕ್ತಿಯ ತಾರತಮ್ಯ ಜ್ಞಾನ ಸುಳ್ಳಾಗುವುದೆಂದು ತೋರುತ್ತದೆ. ಯಾವುದಾದರೊಂದು ಘಟನೆಯಿಂದ ಮನುಷ್ಯನ ಜೀವಮಾನಕ್ಕೆ ತೂಗಿ ನೋಡುವುದು ಮೂಢತನವೆ ಸರಿ. ಈಗೇನು ಮಾಡಲಿ? ಈಗಲೆ ಎಚ್ಚರಿಕೆ ತೆಗೆದುಕೊ[illegible] ದಿದ್ದರೆ, ಸಟ್ಟಾ ಆಟ ಗೋಪಿ–ಶಾಂತಳ ಬಾಳನ್ನು ಬಲಿ ತೆಗೆದುಕೊ[illegible] ಸಂದೇಹವಿಲ್ಲ. ಒಂದು ಪಕ್ಷ ಹಾಗಾದಲ್ಲಿ ಗೋಪಿಗೆ ಗು[illegible] ಸುಶೀಲ ಕೆರಳಿ ಕಾಳಿಯಾಗಿ, ತಮ್ಮಿಬ್ಬರ ದಾಂಪತ್ಯ ಜೀವನ ಸಂತಾನ [illegible] ಮಣ್ಣುಪಾಲಾಗುವುದು ಖಂಡಿತ. ಅಷ್ಟಕ್ಕೆ ಬಿಡಬಾರದು. [illegible] ಹವ್ಯಾಸದಿಂದ ಗೋಪಿಯನ್ನು ದೂರವಿರಿಸಲು ಬೇಕಾದ ಎಲ್ಲ ಪ್ರಯತ್ನ[illegible] ನಾನೂ ಭಟ್ಟರೂ ಸೇರಿ ಆದಷ್ಟು ಬೇಗ ಮಾಡಲೆ ಬೇಕು. ಎಂದು [illegible] ಮುಂದನ್ನು ಹಿಂಜಿ ಒಂದು ನಿರ್ಧಾರಕ್ಕೆ ಬರಲು ಮನಸ್ಸು ಸ್ವಲ್ಪ [illegible] ಯಿತು. ಬೆನ್ನ ಹಿಂದೆ ಕೈಕಟ್ಟಿ ಮಾಡಬೇಕಾದ ಪ್ರಯತ್ನವನ್ನು [illegible] ಕೊಂಚ ಹೊತ್ತು ಅತ್ತಿತ್ತ ಓಡಾಡಿದರು. ಥಟ್ಟನೆ ಅವರ ದೃಷ್ಟಿ [illegible] ಗೋಪುವಿಗೆ ಬರೆದ ಕಾಗದದ ಕಡೆ ಹರಿಯಿತು. ಮನಸ್ಸು ಗೊಂದಲಕ್ಕೆ [illegible]

“ಕಾಗದ ಒಡೆಯಲೋ—ಹಿಂತಿರುಗಿ ಗೋಪಿಗೆ ಕಳುಹಿಸಿಬಿಡಲೋ ?”

“ಅವನ ಬದುಕಿನ ಬಣ್ಣದ ಪರಿಚಯವಾಗಬೇಕಾಗಿರುವ ಈ ಸಮಯ ದಲ್ಲಿ ಒಡೆಯುವುದರಿಂದ ಉಪಕಾರವೆ ಆಗುತ್ತದೆ.”

“ಮತ್ತೊಬ್ಬರ ಕಾಗದವನ್ನು ಅವರ ಒಪ್ಪಿಗೆಯಿಲ್ಲದೆ ಒಡೆಯುವುದು ಅಪರಾಧವಲ್ಲವೆ ?”

“ಅವನು ಪರಕೀಯನಲ್ಲ—ನಿನ್ನ ಅಳಿಯ. ಬದುಕಿನ ರಕ್ಷಣೆಯಲ್ಲಿ ತಂದೆಯಷ್ಟೆ ನಿನಗೂ ಅಧಿಕಾರವಿದೆ. ಹಾದಿಬಿಟ್ಟು ಹೋಗಿರುವ ಈ ಸಮಯ ದಲ್ಲಿ ಅವನ ನಡೆ-ನುಡಿ, ಆಚಾರ-ವ್ಯವಹಾರಗಳನ್ನು ಪರೀಕ್ಷಿಸುವುದರಲ್ಲಿ ಏನೂ ತಪ್ಪಿಲ್ಲ.”

ಮನಸ್ಸಿನ ಹೊಯ್ದಾಟದಲ್ಲಿ ಸಿಕ್ಕಿದವರು, ವಿವೇಕ ನೀಡಿದ ಸಮ್ಮತಿ ಯಿಂದ ಅಳಿದು ಹೊಯ್ದು ಮಾಡದೆ, ಒಡೆದು ಓದಿದರು. ಕಾಗದದ ಒಕ್ಕಣೆ ಭಟ್ಟರ ಕಾಗದಕ್ಕೆ ಪುಟವಿಟ್ಟಂತಿತ್ತು.

ಇನ್ನು ಮುಂದೆ ತಾವಿಬ್ಬರೂ ಸೇರಿ ಸ್ವಲ್ಪ ಬಂಡವಾಳವನ್ನು ಹಾಕಿ ಸ್ವಂತ ವಾಗಿ ಸಟ್ಟಾ ಆಟವನ್ನು ಆಡಿಸಬೇಕೆಂದೂ, ಬಂದ ಲಾಭದಲ್ಲಿ ಇಬ್ಬರೂ ಹಂಚಿ ಕೊಳ್ಳುವುದೆಂದೂ, ಈ ಹಂಚಿಕೆ ಕೈಗೂಡಬೇಕಾಗಿದ್ದರೆ ನಾಣಿಯನ್ನು ತಮ್ಮಿಂದ ಆದಷ್ಟು ದೂರವಿಡಬೇಕೆಂದೂ ಬರೆದಿದ್ದನು. ಸೂರಪ್ಪನವರಿಗೆ ಭಯದ ಸಂಗಡ ತಿರಸ್ಕಾರ-ಕೋಪಗಳು ಹೆಡೆಯೆತ್ತಿ ನಿಂತವು. ಮತ್ತೆ ಮನಸ್ಸು ಹದ ತಪ್ಪಿತು. ತಮ್ಮ ಕೋಪವನ್ನೆಲ್ಲಾ ಹೆಜ್ಜೆಯಲ್ಲಿ ತುಂಬಿ ನೆಲವನ್ನು ನಡುಗಿ ಸುತ್ತಾ ಓಡಾಡಿದರು.

“ಬೆಳಗಾದರೆ ತನ್ನ ಸಂಸಾರ ಬೆಳೆಯುತ್ತದೆ. ಅದರ ಏಳಿಗೆಯ ಕಡೆ ಗಮನವಿಲ್ಲವೆ ದುಷ್ಟ ಸಹವಾಸ-ದುಶ್ಚಟಗಳಿಗೆ ಬಲಿಯಾಗುತ್ತಿದ್ದಾನಲ್ಲಾ— ಅವನು ಮನುಷ್ಯನೆ ? ಎಳೆಯ ಮಕ್ಕಳಾದರೆ ಬುದ್ಧಿ ಹೇಳಬಹುದು; ತಿಳಿ ತಿಳಿದು ತಪ್ಪು ಮಾಡುವವರಿಗೆ ಯಾರೇನು ಮಾಡಲು ಸಾಧ್ಯ ? ಇಚ್ಛೆ ಬಂದಂತೆ ನಡೆದು ಹಾಳಾಗಲಿ, ಯಾರಿಗೇನು ?”

“ಸ್ನೇಹದಲ್ಲಿ, ವ್ಯವಹಾರದಲ್ಲಿ ಆಪತ್ತು-ಅಪಾಯವಿದ್ದರೂ ಅದರ ಅರಿ ವಾಗದೆ ಒಳ್ಳೆಯದನ್ನೆ ಭಾವಿಸಿಕೊಂಡು ವ್ಯವಹರಿಸುತ್ತಿದ್ದರೆ, ಅಂಥವರನ್ನು

ಸೀತಾರಾಮುವಿನ ದುಷ್ಟ ನಡವಳಿಕೆಯ ವರ್ಣನೆ. ನೀಚನಾದ ಅವನ ಕಪಿ ಮುಷ್ಟಿಯಿಂದ ಗೋಪುವಿನ ಬಿಡುಗಡೆ ಅಸಾಧ್ಯವೆಂದೂ, ಮುಂದೆ ಅವನ ಜೀವನ ಹೇಗೆ ಹರಿಯುವುದೆಂಬುದನ್ನು ತಿಳಿಸಲು ಬರುವುದಿಲ್ಲವೆಂದೂ ಬರೆದಿದ್ದರು. ಸಾಲದುದಕ್ಕೆ ಮೊನ್ನೆ ನಡೆದ ಎರಡು ಘಟನೆಗಳನ್ನೂ ಸೂಕ್ಷ್ಮವಾಗಿ ತಿಳಿಸಿ ಅವರ ಭಯವನ್ನು ಹೆಚ್ಚಿಸಿದ್ದರು. ಸಂಗಡ ತಾವು ಶಾಂತಳ ಬಗ್ಗೆ ಹೊತ್ತಿದ್ದ ಜವಾಬ್ದಾರಿಯನ್ನು ಮರೆತಿಲ್ಲವೆಂದೂ, ಅದಕ್ಕಾಗಿ ತಮ್ಮ ಬಾಳನ್ನು ಬಲಿ ಕೊಡಲು ಸಿದ್ಧರಿರುವರೆಂದೂ ಬರೆದು ತಿಳಿಸಿ, ಸೂರಪ್ಪನ ಧೈರ್ಯ-ವಿಶ್ವಾಸಗಳಿಗೆ ಸ್ವಲ್ಪ ಜೀವ ತುಂಬಿದ್ದರು.

ಮನೆ ಮುರುಕ ಸ್ನೇಹಿತ, ಸಟ್ಟಾ ಆಟ ಇವು ಗೋಪಿಯ ಬಾಳನ್ನು ಒಯ್ಯುವ ಹಾದಿಯನ್ನು ಮನಸ್ಸಿನಲ್ಲೇ ಚಿತ್ರಿಸಿ ನೋಡಲಾರದೆ ಸೂರಪ್ಪ ಕ್ಷಣ ಕಾಲ ಕಣ್ಣು ಒತ್ತಿ ಹಿಡಿದರು. ಅಬ್ಬಾ! ಮಾನವನ ಬಾಳು ಎಷ್ಟು ಭಯಂಕರ! ಎಂತಹ ರಹಸ್ಯ! ಯಾರ ಬಾಳು ಹೇಗೆ ಹರಿಯುತ್ತದೆನ್ನುವುದು ತಿಳಿಯುವುದೆ ಕಷ್ಟವಾಗಿದೆ ಆ ದಿನ ಅಂಗಡಿಯಲ್ಲಿ ನಡೆದ ಹಳ್ಳಿಯವನ ಘಟನೆಯಿಂದ ಗೋಪುವಿನ ವ್ಯಕ್ತಿತ್ವಕ್ಕೆ ಸಾಕಷ್ಟು ಬೆಲೆ ಕಟ್ಟಿದ್ದೆ. ನನ್ನ ವಿವೇಚನಾ ಶಕ್ತಿಯ ತಾರತಮ್ಯ ಜ್ಞಾನ ಸುಳ್ಳಾಗುವುದೆಂದು ತೋರುತ್ತದೆ. ಯಾವುದಾದರೊಂದು ಘಟನೆಯಿಂದ ಮನುಷ್ಯನ ಜೀವಮಾನಕ್ಕೆ ತೂಗಿ ನೋಡುವುದು ಮೂರ್ಖತನವೆ ಸರಿ. ಈಗೇನು ಮಾಡಲಿ ?, ಈಗಲೆ ಎಚ್ಚರಿಕೆ ತೆಗೆದುಕೊಳ್ಳದಿದ್ದರೆ, ಸಟ್ಟಾ ಆಟ ಗೋಪಿ-ಶಾಂತಳ ಬಾಳನ್ನು ಬಲಿ ತೆಗೆದುಕೊಳ್ಳುವುದರಲ್ಲಿ ಸಂದೇಹವಿಲ್ಲ. ಒಂದು ಪಕ್ಷ ಹಾಗಾದಲ್ಲಿ ಗೋಪಿಗೆ ಗುಂ[illegible] ಸುಶೀಲ ಕೆರಳಿ ಕಾಳಿಯಾಗಿ, ತಮ್ಮಿಬ್ಬರ ದಾಂಪತ್ಯ ಜೀವನ ಸಂತಾನ ಎಲ್ಲವೂ ಮಣ್ಣುಪಾಲಾಗುವುದು ಖಂಡಿತ. ಅಷ್ಟಕ್ಕೆ ಬಿಡಬಾರದು. ಆ ದುಷ್ಟ ಹವ್ಯಾಸದಿಂದ ಗೋಪಿಯನ್ನು ದೂರವಿರಿಸಲು ಬೇಕಾದ ಎಲ್ಲ ಪ್ರಯತ್ನವನ್ನೂ ನಾನೂ ಭಟ್ಟರೂ ಸೇರಿ ಆದಷ್ಟು ಬೇಗ ಮಾಡಲೇ ಬೇಕು. ಎಂದು ಏನೇನು ಮುಂದನ್ನು ಓಂಜಿ ಒಂದು ನಿರ್ಧಾರಕ್ಕೆ ಬರಲು ಮನಸ್ಸು ಸ್ವಲ್ಪ ಹಗುರವಾಯಿತು. ಬೆನ್ನ ಹಿಂದೆ ಕೈಕಟ್ಟಿ ಮಾಡಬೇಕಾದ ಪ್ರಯತ್ನವನ್ನು ನೆನೆಯುತ್ತಾ ಕೊಂಚ ಹೊತ್ತು ಅತ್ತಿತ್ತ ಓಡಾಡಿದರು. ಥಟ್ಟನೆ ಅವರ ದೃಷ್ಟಿ ಸೀತಾರಾಮು ಗೋಪುವಿಗೆ ಬರೆದ ಕಾಗದದ ಕಡೆ ಹರಿಯಿತು. ಮನಸ್ಸು ಗೊಂದಲಕ್ಕೆ ಬಿತ್ತು.

"ಕಾಗದ ಒಡೆಯಲೋ—ಹಿಂತಿರುಗಿ ಗೋಪಿಗೆ ಕಳುಹಿಸಿಬಿಡಲೋ ?"

"ಅವನ ಬದುಕಿನ ಬಣ್ಣದ ಪರಿಚಯವಾಗಬೇಕಾಗಿರುವ ಈ ಸಮಯದಲ್ಲಿ ಒಡೆಯುವುದರಿಂದ ಉಪಕಾರವೆ ಆಗುತ್ತದೆ."

"ಮತ್ತೊಬ್ಬರ ಕಾಗದವನ್ನು ಅವರ ಒಪ್ಪಿಗೆಯಿಲ್ಲದೆ ಒಡೆಯುವುದು ಅಪರಾಧವಲ್ಲವೆ ?"

"ಅವನು ಪರಕೀಯನಲ್ಲ—ನಿನ್ನ ಅಳಿಯ. ಬದುಕಿನ ರಕ್ಷಣೆಯಲ್ಲಿ ತಂದೆಯಷ್ಟೆ ನಿನಗೂ ಅಧಿಕಾರವಿದೆ. ಹಾದಿಬಿಟ್ಟು ಹೋಗಿರುವ ಈ ಸಮಯದಲ್ಲಿ ಅವನ ನಡೆ-ನುಡಿ, ಆಚಾರ-ವ್ಯವಹಾರಗಳನ್ನು ಪರೀಕ್ಷಿಸುವುದರಲ್ಲಿ ಏನೂ ತಪ್ಪಿಲ್ಲ."

ಮನಸ್ಸಿನ ಹೊಯ್ದಾಟದಲ್ಲಿ ಸಿಕ್ಕಿದವರು, ವಿವೇಕ ನೀಡಿದ ನಮ್ರತೆಯಿಂದ ಅಳಿದು ಹೊಯ್ದು ಮಾಡದೆ, ಒಡೆದು ಓದಿದರು. ಕಾಗದದ ಒಕ್ಕಣೆ ಭಟ್ಟರ ಕಾಗದಕ್ಕೆ ಪುಟವಿಟ್ಟಂತಿತ್ತು.

ಇನ್ನು ಮುಂದೆ ತಾವಿಬ್ಬರೂ ಸೇರಿ ಸ್ವಲ್ಪ ಬಂಡವಾಳವನ್ನು ಹಾಕಿ ಸ್ವಂತವಾಗಿ ಸಟ್ಟಾ ಆಟವನ್ನು ಆಡಿಸಬೇಕೆಂದೂ, ಬಂದ ಲಾಭದಲ್ಲಿ ಇಬ್ಬರೂ ಹಂಚಿಕೊಳ್ಳುವುದೆಂದೂ, ಈ ಹಂಚಿಕೆ ಕೈಗೂಡಬೇಕಾಗಿದ್ದರೆ ನಾಣಿಯನ್ನು ತಮ್ಮಿಂದ ಆದಷ್ಟು ದೂರವಿಡಬೇಕೆಂದೂ ಬರೆದಿದ್ದನು. ಸೂರಪ್ಪನವರಿಗೆ ಭಯದ ಸಂಗಡ ತಿರಸ್ಕಾರ-ಕೋಪಗಳು ಹೆಡೆಯೆತ್ತಿ ನಿಂತವು. ಮತ್ತೆ ಮನಸ್ಸು ಹದ ತಪ್ಪಿತು. ತಮ್ಮ ಕೋಪವನ್ನೆಲ್ಲಾ ಹೆಜ್ಜೆಯಲ್ಲಿ ತುಂಬಿ ನೆಲವನ್ನು ನಡುಗಿಸುತ್ತಾ ಓಡಾಡಿದರು.

"ಬೆಳಗಾದರೆ ತನ್ನ ಸಂಸಾರ ಬೆಳೆಯುತ್ತದೆ. ಅದರ ಏಳಿಗೆಯ ಕಡೆ ಗಮನವಿಲ್ಲದೆ ದುಷ್ಟ ಸಹವಾಸ-ದುಶ್ಚಟಗಳಿಗೆ ಬಲಿಯಾಗುತ್ತಿದ್ದಾನಲ್ಲಾ—ಅವನು ಮನುಷ್ಯನೆ ? ಎಳೆಯ ಮಕ್ಕಳಾದರೆ ಬುದ್ಧಿ ಹೇಳಬಹುದು; ತಿಳಿತಿಳಿದು ತಪ್ಪು ಮಾಡುವವರಿಗೆ ಯಾರೇನು ಮಾಡಲು ಸಾಧ್ಯ ? ಇಚ್ಛೆ ಬಂದಂತೆ ನಡೆದು ಹಾಳಾಗಲಿ, ಯಾರಿಗೇನು ?"

"ಸ್ನೇಹದಲ್ಲಿ, ವ್ಯವಹಾರದಲ್ಲಿ ಆಪತ್ತು-ಅಪಾಯವಿದ್ದರೂ ಅದರ ಅರಿವಾಗದೆ ಒಳ್ಳೆಯದನ್ನೆ ಭಾವಿಸಿಕೊಂಡು ವ್ಯವಹರಿಸುತ್ತಿದ್ದರೆ, ಅಂಥವರನ್ನು

ಹಿರಿಯರು ತಿಳುವಳಿಕೆ ಕೊಟ್ಟು ರಕ್ಷಿಸದೆ, ಕೋಪ ತಿರಸ್ಕಾರಗಳಿಗೆಡೆ ಕೊಟ್ಟು ಅವರಿಂದ ವಿಮುಖರಾಗುವುದೂ ಅಪರಾಧವೇ ಆಗುತ್ತದೆ."

"ಹೌದು, ಅದು ನಿಶ್ಚಯ. ಎಷ್ಟಾದರೂ ನಾನು ದೊಡ್ಡವನು. ಅವನನ್ನು ತಿದ್ದುವುದು ನನ್ನ ಕರ್ತವ್ಯ. ನಾನೇ ಅಂದುಕೊಂಡಂತೆ ಗೋಪಿ—ಎರಡನೆಯ ಗುಂಪಿಗೆ ಸೇರಿದ್ದರೂ ಇರಬಹುದು. ಯಾವುದಾದರೊಂದು ಚಟಕ್ಕೆ ಬಿದ್ದವರನ್ನು ಮೋಸದ ಬುಟ್ಟಿಗೆ ತುಂಬಿಕೊಳ್ಳುವುದು ಕಷ್ಟವೇನೂ ಅಲ್ಲ. ಇರಲಿ, ಆದಷ್ಟು ಬೇಗ ಮೈಸೂರಿಗೆ ಹೋಗಿ ಏನಾದರೊಂದು ವ್ಯವಸ್ಥೆ ಮಾಡುವೆನು......" ಎಂದು ಕಾಗದಗಳನ್ನು ಮತ್ತೊಮ್ಮೆ ಓದಿ ಹರಿದೆಸೆದರು.

ಬಹಳ ಹೊತ್ತು ಸೂರಪ್ಪನವರು ಒಳಗೆ ಬರದಿದ್ದುದನ್ನು ಕಂಡು ವಿಷಯ ತಿಳಿಯುವ ಕುತೂಹಲದಿಂದ ಹಜಾರಕ್ಕೆ ಕಾಲಿರಿಸಿದ ಸುಶೀಲಮ್ಮ ಹರಿದ ಕಾಗದದ ಚೂರುಗಳನ್ನೂ ಸೂರಪ್ಪನವರನ್ನೂ ಮಿಟಿಮಿಟಿ ನೋಡುತ್ತ ಮೂಕರಂತೆ ನಿಂತರು. ಸೂರಪ್ಪ ಬಂದ ಕಾಗದವನ್ನು ಸುಶೀಲಮ್ಮನಿಗೆ ತೋರಿಸದೆ ಎಂದೂ ಹೀಗೆ ಹರಿದಿರಲಿಲ್ಲ. ಇಂದಿನ ಅವರ ನಡವಳಿಕೆ ಅವರನ್ನು ನಾಚಿಸಿತು. ಹೆಂಡತಿಯನ್ನು ಕಂಡು ಅಪರಾಧಿಯಂತೆ ನಡುಗಿದರು. ಅವರಿಗೂ ಇಂದಿನ ಗಂಡನ ನಡವಳಿಕೆ ಅರ್ಥವಾಗಲಿಲ್ಲ. ಆ ವಿಚಿತ್ರ ವರ್ತನೆಯ ಕಾರಣವನ್ನು ತಿಳಿದು ಮನಸ್ಸನ್ನು ಹಗುರ ಮಾಡಿಕೊಳ್ಳಬೇಕೆಂದು ಸುಶೀಲಮ್ಮ ನಿರ್ಧರಿಸಿದರು. ಮಾತನ್ನು ಪ್ರಾರಂಭಿಸುವ ಜಾಡನ್ನು ಹುಡುಕುತ್ತಿರುವಷ್ಟರಲ್ಲಿ, ಅವರ ಮೂಕ ವರ್ತನೆಗೆ ಬೆದರಿದ ಸೂರಪ್ಪ ಮಾತಿಗೆ ಮೊದಲಿಟ್ಟರು.

"ಗಾಬರಿಯಾಗಬೇಡ. ನನ್ನ ಹಳೆಯ ಸ್ನೇಹಿತನೊಬ್ಬ ತನ್ನ ಸ್ವಂತ ವಿಷಯವನ್ನು ಹುಚ್ಚಾಬಟ್ಟೆ ಗೀಚಿದ್ದ. ಹಂಗಸರು ಓದಲು ಅಯೋಗ್ಯವಾದ ಕಾಗದ ಅದು. ಆದ್ದರಿಂದ ಅದನ್ನು ಹರಿದು ಹಾಕಿದೆ."

ನಿಜಸ್ಥಿತಿಯನ್ನು ಹೇಳಿದರೆ ವಿಪರೀತಕ್ಕಿಟ್ಟುಕೊಳ್ಳುವುದೆಂದೂಹಿಸಿ ಸುಳ್ಳು ಬೆಟ್ಟಿದ್ದರು. ಆ ಮಾತಂದುದಕ್ಕ ಅವರ ಮನಸ್ಸು ಬಹಳ ನೊಂದಿತು. ಎಂಥ ಸಮಯದಲ್ಲೂ ಸುಳ್ಳಾಡದಿದ್ದವರು ಸುಶೀಲಮ್ಮನ ಸ್ವಭಾವಕ್ಕೆ ಹೆದರಿ, ಗೋಪಿಯ ಕ್ರಮ ತಪ್ಪಿದ ಬದುಕನ್ನು ಮುಚ್ಚಲೆಂದು ಹಾಗೆ ಹೇಳಿದ್ದರು. ಸೂಕ್ಷ್ಮಮತಿಯಾದ ಸುಶೀಲಮ್ಮ ಅಷ್ಟರಲ್ಲಿ ತೃಪ್ತರಾಗದೆ ತಮಗಿದ್ದ ಮತ್ತೊಂದು

ಸಂಶಯದಿಂದ ಗಂಡನನ್ನು ಮತ್ತೆ ಗೊಂದಲದಲ್ಲಿ ಕೆಡವಿದರು.

"ಎರಡು ಕಾಗದವಿದ್ದಂತಿದೆಯಲ್ಲಾ—ಮತ್ತೊಂದೆಲ್ಲಿಯದು ?"

ಸೂರಪ್ಪ ಸ್ವಲ್ಪ ತಬ್ಬಿಬ್ಬಾದರು. ಅದನ್ನು ತೋರಿಸಿಕೊಳ್ಳದೆ ಸವರಿಕೊಂಡು ಹೇಳಿದರು,

"ಗೋಪಿಗೆ ಅವನ ಸ್ನೇಹಿತನಿಂದ ಬಂದ ಕಾಗದ ಅದು. ಕುತೂಹಲ ತಡೆಯದೆ ಮತ್ತೊಬ್ಬರ ಕಾಗದವನ್ನು ಒಡೆಯುವುದು ಅಪರಾಧವಾದರೂ ಒಡೆದು ಓದಿಬಿಟ್ಟೆ. ಒಡೆದ ಮೇಲೆ ಹಾಗೇ ಇಡುವುದು ಅನ್ಯಾಯವೆಂದು ಹರಿದು ಹಾಕಿದೆ."

"ಒಳ್ಳೆಯದು ಮಾಡಿದಿರಿ. ವಿಶೇಷ ವರ್ತಮಾನವೇನಾದರೂ ಇತ್ತೆ ಅವರಲ್ಲಿ ?"

ಸುಶೀಲಮ್ಮನ ಆ ಮಾತಿನಲ್ಲಿ ಗೋಪಿಯ ನಡವಳಿಕೆಯನ್ನು ತಿಳಿದುಕೊಳ್ಳುವ ಕುತೂಹಲವಿತ್ತು. ಸೂರಪ್ಪನಿಗೆ ಆ ಭಾವನೆ ಅರ್ಥವಾದರೂ ನಿಜ ಸಂಗತಿಯನ್ನು ತಿಳಿಸಲು ಹೆದರಿ ಆಗಲೂ ನುಳ್ಳಿಬಿಟ್ಟರು.

"ಅಂಥಾದ್ದೇನೂ ಇರಲಿಲ್ಲ—ಕಾಗದವ ತುಂಬಾ ಬರಿಯ ಕ್ಷೇಮ ಸಮಾಚಾರವೆ !"

"ಹೋಗಲಿ ಬಿಡಿ—ಅದಕ್ಯಾಕಿಷ್ಟು ಗಾಬರಿಯಾಗಬೇಕು ! ಅದರಿಂದ ಅವರಿಗೇನೂ ನಷ್ಟವಾಗಲಿಲ್ಲವಲ್ಲ !" ಎಂದು ಒಳಕ್ಕೆ ಹೊರಡುವಷ್ಟರಲ್ಲಿ ತಪ್ಪು—ತಪ್ಪು ಹೆಜ್ಜೆಯಿರಿಸುತ್ತಾ, 'ಅ........ನ್ನ ! ಅ........ತ್ತ' ಎಂದು ತೊದಲು ನುಡಿಯುತ್ತಾ, ಅವರ ಒಂದೂವರೆ ವರ್ಷದ ಪುಟ್ಟಮಗು ಶಾರದೆ ಬಂದು, ತಾಯಿಯ ಕಾಲುಗಳನ್ನು ತಬ್ಬಿ ಹಿಡಿದು ನಿಂತಿತು. ಸುಶೀಲಮ್ಮ ಆ ಮಗುವನ್ನು ಕಂಡು ಎಲ್ಲಿಲ್ಲದ ಸಿಟ್ಟುಬಂತು. ಅದನ್ನು ಒಂದು ಪಕ್ಕಕ್ಕೆ ತಿರಸ್ಕರಿಸುತ್ತಾ ಹೇಳಿದರು,

"ಥೂ, ಇದೊಂದು ಶನಿ. ಹೋದಹೋದಲ್ಲಿ ಕೈಕಾಲಿಗೆ ಬಂದು ಸುತ್ತಿಕೊಳ್ಳುತ್ತೆ."

"ಆ ಮಗುವನ್ನು ಕಂಡರೆ ಯಾಕೆ ಹಾಗೆ ಸಿಡಿಯುತ್ತೀಯೆ—ಒಳ್ಳೆ ಮಲತಾಯಿಯ ಹಾಗೆ ! ಏನೂ ಅರಿಯದ ಕೂಸು ಅದು. ಅದರ ಮೇಲೆ ನಿಮ್ಮ ಕೋಪ-ತಾಪ ತೋರಿಸುವುದ ? ಚೆನ್ನಾಗಿದೆ ! ಬಾಮ್ಮ ಶಾರೂ,

ನನ್ನ ಹತ್ತಿರ ಬಾ. ಅಮ್ಮನಿಗೇನೋ ಸಿಟ್ಟು ಬಂದಿದೆ. ಈಗವಳ ಹತ್ತಿರ ಹೋಗಬೇಡ ಬಾ" ಎಂದು ಸೂರಪ್ಪ ಮಗುವನ್ನು ಎತ್ತಿ ತಬ್ಬಿ ಮುದ್ದಾಡಿದರು.

ಸೂರಪ್ಪನ ಸಮಾಧಾನ–ಸೌಜನ್ಯವನ್ನು ಕಂಡು ಸುಶೀಲಮ್ಮ ನಾಚಿದರು. ತುಂಬಿದ ನಡವಳಿಕೆಯಲ್ಲಿ ಅವರೂ ಕಡಿಮೆಯಾದವರಲ್ಲ. ಬದುಕಿನ ಯಾವುದೋ ಪೆಟ್ಟು ಅವರ ಸೌಜನ್ಯದ ಮೇಲೆ ಬರೆ ಎಳೆದಿತ್ತು. ಈ ನೋವು ಇಬ್ಬರಿಗೂ ಇದ್ದರೂ ಸೂರಪ್ಪ ಅದನ್ನು ಮೆಟ್ಟಿ ತಮ್ಮ ಸ್ವಭಾವವನ್ನು ಕಾದಿರಿಸಿಕೊಂಡಿದ್ದರು. ಸುಶೀಲಮ್ಮ ಅದಕ್ಕೆ ತುತ್ತಾಗಿದ್ದರು. ಇದು ಅವರ ದೌರ್ಬಲ್ಯ. ಅದನ್ನೆ ತಿಳಿಸಿದರು,

"ಯಾಕೊ ನನಗೆ ಹೆಣ್ಣು ಮಕ್ಕಳೆಂದರೆ ಬೇಸರ ಬರುತ್ತೆ. ದೇವರು ಹೆಣ್ಣು ಮಕ್ಕಳನ್ನು ಕೊಡುವುದಕ್ಕಿಂತ ಬಂಜೆ ಮಾಡಿದ್ದರೆ ಎಷ್ಟೋ ಸಂತೋಷಿಯಾಗಿರುತ್ತಿದ್ದೆ. ಈ ಹಾಳು ಹೆಣ್ಣುಮಕ್ಕಳನ್ನಿತ್ತು ನನ್ನ ರಕ್ತ ಒಣಗಿಸುತ್ತಿದ್ದಾನೆ. ಸಾಲದಿದ್ದಕ್ಕೆ ಈ ದರಿದ್ರ ಮಗು ರತ್ನಳ ಹೋಲಿಕೆ ಜೇರೆ ಹೊತ್ತಿದೆ. ಅದರ ಮುಖ ಕಂಡಾಗಲೆಲ್ಲ ಅವಳ ನೆನಪು ಬಂದು, 'ಈ ಮಗು ಯಾಕಾದರೂ ಬದುಕಿದೆ, ದೇವರೇ !' ಎನ್ನುವಂತಾಗುತ್ತದೆ. ನಾನೇನು ಮಾಡಲಿ ?"

"ದೇವರು ಕೊಟ್ಟ ಸಂತಾನವನ್ನು ಹಳಿಯಬೇಡ. ಹೆಣ್ಣುಮಕ್ಕಳಾದರೇನು, ಗಂಡುಮಕ್ಕಳಾದರೇನು; ಎಲ್ಲ ಒಂದೆ. ಮುಖ್ಯ ನಮ್ಮ ಕರ್ಮ ಚೆನ್ನಾಗಿರಬೇಕು; ಹುಟ್ಟುವ ಮಕ್ಕಳೂ ಸುಕೃತಶಾಲಿಗಳಾಗಿರಬೇಕು. ಬ್ರಹ್ಮಲಿಪಿ ಗಂಡು–ಹೆಣ್ಣಿಗೆ ಸಮನಾಗಿರುತ್ತೆ. ಹಿಂದೆ ಅವರವರು ಮಾಡಿದ ಕರ್ಮಕ್ಕೆ ತಕ್ಕಂತೆ ಹಣೆಯಲ್ಲಿ ಬರೆದು ಕಳುಹಿಸುವನು. ನಾವು ಸತ್ಕರ್ಮ ಮಾಡಿದ್ದರೆ ಒಳ್ಳೆ ಮಕ್ಕಳು ಜನಿಸುತ್ತಾರೆ; ದುಷ್ಕರ್ಮ ಮಾಡಿದ್ದರೆ ಕೆಟ್ಟವರು ಜನಿಸುತ್ತಾರೆ. ದೋಷ ನಮ್ಮದೆ, ಮಕ್ಕಳದಲ್ಲ. ಶಾರಿ ರತ್ನಳಂತಿದ್ದಾಳೆಂದು ನೀನು ಸುಮ್ಮನೆ ಆ ಅರಿಯದ ಕೂಸಿಗೆ ವ್ಯಥೆಯುಂಟು ಮಾಡುವೆಯಲ್ಲಾ, ಇದು ಸರಿಯೆ ? ರೂಪವೊಂದೇ ಆದರೆ ಅದೃಷ್ಟವೂ ಒಂದೇ ಆಗುತ್ತದೆಯೆ ? ರತ್ನಳ ಹಣೆಬರಹ ಹಾಗಿತ್ತು; ಅದಕ್ಕೆ ಯಾರೇನು ಮಾಡಲು ಸಾಧ್ಯ ? ರತ್ನಳಂತೆ ಶಾಂತ ಇಲ್ಲ, ಶಾಂತಳಂತೆ ಶಾರದೆ ಆಗುವುದಿಲ್ಲ. ಸುಮ್ಮನೆ ನೀನು ಇಲ್ಲದ್ದನ್ನು ತಲೆಗೆ ಹಚ್ಚಿಕೊಂಡು ತಲೆ ಕೆಡಿಸಿಕೊಳ್ಳುವೆ, ಅಷ್ಟೆ."

ಗೋಪಿಯ ಇತ್ತೀಚಿನ ನಡವಳಿಕೆಯಿಂದ ಸೂರಪ್ಪನಿಗೆ ಅಳುಕಿದ್ದರೂ ತೋರಿಸಿಕೊಳ್ಳನೆ, ಸುಶೀಲಮ್ಮನ ಸಮಾಧಾನಕ್ಕಾಗಿ ಕಡೆಯ ಮಾತೆಂದಿದ್ದರು.

"ಆ ಮಾತೆಲ್ಲ ಸುಳ್ಳು ನೋಡಿ. ಇನ್ನು ಸ್ವಲ್ಪ ದಿನ ಹೋಗಲಿ, ನನ್ನ ಮಾತಿನಲ್ಲೆಷ್ಟು ಸತ್ಯವಿದೆ ಎನ್ನುವುದು ನಿಮಗೇ ಗೊತ್ತಾಗುತ್ತೆ. ಶಾಂತಳ ಲಗ್ನವಾಗಿ ಇನ್ನೂ ವರ್ಷವಾಗಿಲ್ಲ—ಆಗಲೆ ಒಡಕು ಧ್ವನಿ ಕೇಳಿಬರುತ್ತಿದೆ."

ಸೂರಪ್ಪ ಮೆಟ್ಟಿಬಿದ್ದು ಹೇಳಿದರು,

"ಒಡಕು ಧ್ವನಿ ? ಎಂದಿಗೂ ಇಲ್ಲ. ಅವಳತ್ತೆ, ಅತ್ತಿಗೆ, ನಾದಿನಿ, ಮೈದುನರೆಲ್ಲರೂ ದೇವರಂಥ ಮನುಷ್ಯರು. ಒಡಕು ಧ್ವನಿಗೆ ಅವಕಾಶವೇ ಇಲ್ಲ. ಅವಳ ಬದುಕಿನಲ್ಲಿ ಸುಖ ಕಟ್ಟಿದ್ದ ಬುತ್ತಿ. ನೀನು ತಪ್ಪು ತಿಳಿದಿರುವೆ."

ಒಂದು ಸಮಯ ಗೋಪಿಯಿಂದ ಸುಖ ಸಿಗದಿದ್ದರೂ, ಉಳಿದವರಿಂದ ಶಾಂತಳಿಗೆ ನೆಮ್ಮದಿಯಿದೆಯೆನ್ನುವ ನಂಬಿಕೆಯಿಂದ ನಿರ್ಧಾರವಾಗಿ ಆ ಮಾತು ಹೇಳಿದ್ದರು.

"ತಪ್ಪು ತಿಳಿದವಳು ನಾನಲ್ಲ, ನೀವೆಂದು ಹೇಳಿ. ನಿಮಗೊಂದು ಹುಚ್ಚು. ಯಾರು ಎಷ್ಟೇ ಒಳ್ಳೆಯವರಾದರೂ ಬಂದ ಭಾಗ್ಯವೇನು ? ಕೈ ಹಿಡಿದ ಗಂಡ ನೆಟ್ಟಗಿಲ್ಲದಿದ್ದ ಮೇಲೆ !"

ಸೂರಪ್ಪ ಕಂಗಾಲಾದರು. ಸುಶೀಲಮ್ಮನ ಮಾತು ಅವರ ನಿರ್ಧಾರವನ್ನು ತಲೆಬುಡ ಮಾಡಿತ್ತು. ತಮ್ಮ ಅಭಿಪ್ರಾಯಕ್ಕಿಂತ ಅನುಭವಸ್ಥರಾದವರ ಅಭಿಪ್ರಾಯವೆ ಸರಿ ಎನ್ನಿಸಿತು. ಕಾಗದದ ಒಕ್ಕಣೆಗೂ ಅವರ ಮಾತಿಗೂ ಅಕ್ಷರಶಃ ತಾಳೆಯಿತ್ತು. ಶಾಂತಳ ಭವಿಷ್ಯ ನೆನೆದು ಭಯದಿಂದ ನಡುಗಿದರು. ಮನಸ್ಸನ್ನು ಸ್ತಿಮಿತಕ್ಕೆ ತಂದು ವಿಷಯವನ್ನು ಪೂರ್ತಿ ತಿಳಿದುಕೊಳ್ಳಲು ಮತ್ತೆ ಕೇಳಿದರು.

"ಗೋಪಿ ಕೆಟ್ಟವನೆಂದು ನಿನಗೆ ಹೇಳಿದವರು ಯಾರು ?"

"ನನಗೆ ಯಾರೂ ಹೇಳಲಿಲ್ಲ; ಅವರು ಇಲ್ಲಿದ್ದಾಗ ಒಂದೆರಡು ನಡವಳಿಕೆಯಿಂದ ನಾನೇ ತಿಳಿದುಕೊಂಡೆ. ಅವರ ಸ್ವಭಾವ ಏನೂ ಒಳ್ಳೆಯದಲ್ಲ. ಹೊಸ ದಾಂಪತ್ಯ. ಸುಖಪಡುವ ಹುಚ್ಚಿನಲ್ಲಿ ಕೆಟ್ಟ ಗುಣ ಮುಚ್ಚಿದ್ದರೂ ಸ್ವಲ್ಪ ದಿನ ಕಳೆದ ನಂತರ ಅದು ಶಾಂತಳನ್ನು ಸುಡದಿದ್ದರೆ ನನ್ನ ಹೆಸರನ್ನು ಬದಲಿಸಿ ಬಿಡಿ."

ಕೈಲಿ ಒಂದು ಬಟ್ಟಲು ಹಿಡಿದು ಉಪ್ಪಿಗೆಂದು ಬಂದ ಸುಂದರಿ ದನಿಗೂಡಿಸಿದಳು.

"ನಿಜ ಸೂರಪ್ಪನವರೆ, ಸುಶೀಲಮ್ಮ ಸುಳ್ಳು ಹೇಳುತ್ತಿಲ್ಲ; ಶಾಂತಳ ಗಂಡ ಬಹಳ ಸಣ್ಣ ಸ್ವಭಾವದವರು."

"ನಿನಗೆ ಹೇಗೆ ಗೊತ್ತು ?"

"ನಿಮ್ಮ ಅಳಿಯ ಈ ಬಾರಿ ಬಂದಾಗ ಒಂದು ವಿಚಿತ್ರ ಸಂಗತಿ ನಡೆಯಿತು. ಆಗ ಚಾಮುಂಡೇಶ್ವರಿ ನಾಟಕ ಕಲಾಮಂಡಲಿಯವರು ತಮ್ಮ 'ತಿಲೋತ್ತಮೆ' ನಾಟಕದಿಂದ ಊರವರ ಮನಸ್ಸನ್ನು ಸೂರೆಗೊಂಡಿದ್ದ ವಿಷಯ ನಿಮಗೆಲ್ಲ ಗೊತ್ತಿದ್ದದ್ದೆ."

"ಹೂಂ ಮುಂದೆ ?"

"ನೀವೂ ನಿಮ್ಮ ಮನೆಯವರನ್ನೆಲ್ಲ ಒಂದು ಬಾರಿ ಕಳುಹಿಸಿದ್ದಿರಿ. ನಾಟಕ ಚೆನ್ನಾಗಿದ್ದುದರಿಂದ ನನಗೂ ಶಾಂತಳಿಗೂ ಮತ್ತೊಮ್ಮೆ ನೋಡುವಾಸೆಯುಂಟಾಯಿತು. ದುಡ್ಡಿಗೇನು ಮಾಡುವುದು ? ಎರಡನೆಯ ಬಾರಿ ನೋಡಲು ನಮ್ಮ ತಂದೆ ನನಗೂ ಒಪ್ಪಲಿಲ್ಲ, ನೀವೂ ಶಾಂತಳನ್ನು ಕಳುಹಿಸುವುದಿಲ್ಲವೆಂದಿರಿ. ಆಸೆಯೋ ಪ್ರಬಲವಾಗಿತ್ತು. ಏನಾದರೂ ಮಾಡಿ ಹೋಗಲೇಬೇಕೆಂದು ಗಟ್ಟಿ ಮಾಡಿದೆವು. ನಮ್ಮ ಆಶೆ ಪೂರ್ಣ ಮಾಡಲು ಉಳಿದ ಅಸ್ತ್ರ ಒಂದೆ........!"

"ಅದೆ—ಗಂಡಂದಿರನ್ನು ಕಿವಿ ಹಿಂಡುವುದು !"

ಸುಂದರಿ ನಕ್ಕು ಹೇಳಿದಳು,

"ನೀವು ಸರಿಯಾಗಿ ಹೇಳಿದಿರಿ; ನಾವು ಹೂಡಿದ ಅಸ್ತ್ರವೂ ಅದೆ. ಒಂದೆರಡು ಬಾರಿ ಓಂದು—ಮುಂದು ಓಡಾಡಿ ಕಿವಿ ತುಂಬಿಸಿದ ನಂತರ ನಮ್ಮ ಪ್ರಯತ್ನ ಫಲಿಸಿತು. ಆದರೆ ಮತ್ತೊಂದು ತೊಡಕುಂಟಾಯಿತು. ಸಂಗಡ ತಾವೂ ಬರುತ್ತೇವೆಂದು ಗಂಡಸರು ಹಠ ಹಿಡಿದರು. ನಾವು ಸ್ನೇಹಿತರೆಲ್ಲ ಸೇರಿ ಒಟ್ಟಾಗಿ ಹೋಗುವುದೆಂದು ನಿರ್ಧಾರಮಾಡಿದ್ದರಿಂದ ಒಳ್ಳೆ ಮಾತಿನಿಂದಲೆ ಅವರ ಹಠವನ್ನು ಮುರಿದು ಹೊರಟೆವು."

"ಪರವಾಯಿಲ್ಲ—ಏನೋ ಎಂದು ತಿಳಿದಿದ್ದೆ; ಸಾಕಷ್ಟು ಸಾಹಸ ಮಾಡಿದ್ದೀರಿ."

"ಮುಂದೆ ಕೇಳಿ, ನಮ್ಮ ಸಾಹಸದ ಪರಿಣಾಮವನ್ನು! ಶಾಂತಳಿಗೆ ಟಿಕೆಟ್ಟಿಗೆಂದು ಆವಳ ಗಂಡ ಚಿಲ್ಲರೆ ಇಲ್ಲವೆಂದೊ ಏನೊ, ಹತ್ತು ರೂಪಾಯಿನ ನೋಟೊಂದನ್ನು ಕೊಟ್ಟಿದ್ದರು. ಗಲಾಟೆ ತುಂಬಾ ಇದ್ದುದರಿಂದ ಟಿಕೆಟ್ಟು ಕೊಳ್ಳುವುದರಲ್ಲಿ ಹೆಚ್ಚುಕಡಿಮೆಯಾಗಬಹುದೆಂದು ನಾನೂ ಅದಕ್ಕೆ ಸಿದ್ಧಳಾಗೆ ಹೋಗಿದ್ದೆ. ಆದಿನ ನಮ್ಮ ದುರದೃಷ್ಟಕ್ಕೊ ಏನೊ, ಒಂದನೆಯ ತರಗತಿ ಬಿಟ್ಟು ಉಳಿದೆಲ್ಲ ದರ್ಜೆಗಳೂ ಭರ್ತಿಯಾಗಿದ್ದವು."

"ಏನು ಮಾಡಿದಿರಿ ಆಗ?"

"ಮಾಡುವುದೇನು, ಹಿಂದಿರುಗಿ ಬರಲು ಇಷ್ಟವಿಲ್ಲದೆ ಒಬ್ಬೊಬ್ಬರು ಐದೈದು ರೂಪಾಯಿ ಕೊಟ್ಟು ಒಂದನೆ ದರ್ಜೆಗೆ ಹೋಗಿ ಕುಳಿತೆವು. ಆಟ ಸೊಗಸಾಗಿತ್ತು; ನಮ್ಮ ನೋಟದ ಆಶೆಯೂ ತೀರಿತ್ತು. ಆದರೇನು--ಶಾಂತಳ ಗಂಡ ಆ ಸಂತೋಷವನ್ನು ಚೂರು ಚೂರು ಮಾಡಿದರು. ಮನೆಗೆ ಬಂದ ನಂತರ ಶಾಂತ ಅನುಭವಿಸಿದ ನೋವಿನಿಂದ ನಾಟಕ ನೋಡದಿದ್ದರೆ ಚೆನ್ನಾಗಿತ್ತೆಂದೆನಿಸಿತು."

"ಯಾಕೆ; ಏನಾಯಿತು ?"

"ಅಷ್ಟು ದುಡ್ಡು ಕೊಟ್ಟು ಹೋಗಬಾರದಿತ್ತಂತೆ. ಅದೂ ಅಲ್ಲದೆ, ಅವಳು ಮೊದಲನೆ ತರಗತಿಗೆ ಹೋಗಿಲ್ಲವೆಂದೂ, ಕೈಲಿ ದುಡ್ಡುಳಿಸಿಕೊಂಡು ತನಗೆ ಮೋಸ ಮಾಡುತ್ತಿದ್ದಾಳೆಂದೂ ರಂಪ ಮಾಡಿದರಂತೆ. ಸಿಟ್ಟಿನ ಭರದಲ್ಲಿ ಕೆನ್ನೆ ಹಿಂಡಿದ ಗುರುತು ಮೂರು ದಿನದ ವರೆಗೆ ಮಾದಿರಲಿಲ್ಲ. ಅಷ್ಟೇ ಆಗಿದ್ದರೆ ಎಷ್ಟೋ ಸಮಾಧಾನವಿತ್ತು ಅವರು ಅಷ್ಟಕ್ಕೇ ತೃಪ್ತರಾಗಲಿಲ್ಲ. ಹಿಂದು–ಮುಂದು ಆ ಹಣಕ್ಕಾಗಿ ನಡೆದುಕೊಂಡ ಅವರ ನಡವಳಿಕೆ ನನಗೇ ಅಸಹ್ಯವಾಗುತ್ತೆ."

"ಏನು ಮಾಡಿದ, ಬಿಡಿಸಿ ಹೇಳು."

"ಟಿಕೆಟ್ಟಿಗಾಗಿ ಎರಡು ರೂಪಾಯಿ ಅಂದಾಜು ಹಾಕಿ, ಉಳಿದ ಹಣವನ್ನು ತನಗೆ ತಂದು ಕೊಡಲೇಬೇಕೆಂದು ಬೆದರಿಕೆ ಹಾಕಿದರಂತೆ. ಪಾಪ, ಅವಳು ನಿಮಗೆ ತಿಳಿಸಿದರೆ ನೀವೆಲ್ಲ ಬಯ್ಯುವಿರೊ ಅಥವಾ ನೊಂದುಕೊಳ್ಳುವಿರೊ ಎಂದು ಹೆದರಿ ಹೇಳದೆ ಒಂದೆರಡು ದಿನ ಗಂಡನ ಹಿಂಸೆಯನ್ನು ಮೌನದಿಂದಲೆ ಸಹಿಸಿದಳು."

ಸುಶೀಲಮ್ಮ ನೊಂದು ಗಂಡನ ಕಡೆ ತಿರುಗಿ ಹೇಳಿದರು,

"ಪಾಪದ ಹುಡುಗಿ !"

ಸೂರಪ್ಪ ದೊಡ್ಡದಾದ ನಿಟ್ಟುಸಿರೊಂದೆಳೆದರು. ಸುಂದರಿ ಮಾತು ಮುಂದುವರಿಸಿದಳು—

"ಆಮೇಲೆ ಸಹಿಸಲಿಕ್ಕಾಗದೆ ನನ್ನ ಹತ್ತಿರ ಬಂದು ನಡೆದ ವಿಷಯ ತಿಳಿಸಿ ಮೂರು ರೂಪಾಯಿಗಳನ್ನು ಕೈಗಡವಾಗಿ ತೆಗೆದುಕೊಂಡು ಹೋಗಿ ಗಂಡನಿಗೆ ಕೊಟ್ಟಳು. ಅಷ್ಟರ ಮೇಲೆ ಅವರು ಸಮಾಧಾನವಾದರಂತೆ. ಅವಳು ಮಾತ್ರ ಹೋಗುವವರೆಗೂ ದಿನಕ್ಕೊಂದು ಬಾರಿಯಾದರೂ ಆ ಘಟನೆ ನೆನೆದು ಕಣ್ಣೀರಿಡದೆ ಇರುತ್ತಿರಲಿಲ್ಲ. ಇಂಥಾ ಸಣ್ಣ ಸ್ವಭಾವದ ಗಂಡಸರಿಂದ ಬದುಕಿನಲ್ಲಿ ಸುಖ ತಾನೆ ಹೇಗೆ ಸಿಗಬೇಕು ಹೇಳಿ !"

"ನಾನು ಹೇಳಿದ್ದರೆ ನಂಬುತ್ತಿರಲಿಲ್ಲ, ಮಾತನ್ನು ತಟ್ಟಿ ಹಾರಿಸುತ್ತಿದ್ದರು ಇವರು. ಸಮಯಕ್ಕೆ ಸರಿಯಾಗಿ ನೀನು ಬಂದದ್ದು ಒಳ್ಳೆಯದಾಯಿತು. ನನಗೆ ಮೊದಲೆ ಗೊತ್ತು ಹೀಗೆಲ್ಲ ಆಗುತ್ತದೆಂದು ! ನನ್ನ ಸಂತಾನ ಅಂಥಾದ್ದು. ಯಾರೇನು ಮಾಡುವರು? ಅದಕ್ಕೆ—ಶಾಂತಳಿಗೆ ಲಗ್ನ ಬೇಡವೆಂದೆ. ನನ್ನ ಮಾತಿಗೆ ಬೆಲೆ ಕೊಡಬೇಕಲ್ಲ !"

ಸೂರಪ್ಪ ಕೇಳಲಾರದೆ ಕಿವಿ ಮುಚ್ಚಿ ಹೇಳಿದರು,

"ಸಾಕು ಪುಣ್ಯಾತಗಿತ್ತಿ, ಇಲ್ಲಿಗೆ ನಿಲ್ಲಿಸು ಆ ಮಾತನ್ನು. ಮುಂದೆ ಬೆಳೆಸಬೇಡ. ಭವಿಷ್ಯದ ಗರ್ಭದಲ್ಲಿ ಒಳ್ಳೆಯದಿದೆಯೊ, ಕೆಟ್ಟದಿದೆಯೊ ಈಗಲೆ ನೆನೆಸಿ ಯಾಕೆ ತಲೆ ಕೆಡಿಸಿಕೊಳ್ಳಬೇಕು ! ಬಂದಾಗ ಎದುರಿಸೋಣ. ಒಳಗೆ ಅಡಿಗೆಯಾಯಿತಾ ನೋಡು ? ಹೊಟ್ಟೆ ತುಂಬಾ ಹಸಿಯುತ್ತೆ."

ತಮ್ಮ ಹೊಟ್ಟೆಯಲ್ಲಿ ಸಂಕಟವಿದ್ದರೂ ಮುಚ್ಚಿ, ಬೇಕೆಂತಲೆ ಮಾತನ್ನು ಬೇರೆ ದಿಕ್ಕಿಗೆ ಹೊರಳಿಸಿದರು.

"ಹೌದು, ನಮ್ಮ ಮನೆಯಲ್ಲೂ ಅದೇ ಗಲಾಟೆ. ಹಸಿವು—ಹಸಿವೆಂದು ಬೊಬ್ಬೆಯಿಡುತ್ತಿದ್ದಾರೆ. ಅಡಿಗೆ ಆದಮೇಲೆ ಉಪ್ಪಿಗೆ ಕೈಯಿಡುತ್ತೇನೆ— ಜಾಡಿ ಖಾಲಿ. ತರಿಸೋಣವೆಂದರೆ ಅಪ್ಪ ಮನೆಯಲ್ಲಿಲ್ಲ. ನೀವಿರುವಾಗ ಇನ್ನೇನು ಚಿಂತೆ !" ಎಂದು ನಕ್ಕಳು ಸುಂದರಿ.

"ಸರಿ ಸರಿ, ನಾವೇನು ಸುಮ್ಮನೆ ಕೊಡುವೆವೆ? ಏನೋ ಸಮಯ ಅಂದರೆ ಒಬ್ಬರಿಗೊಬ್ಬರು ಆಗುವುದು ಇದ್ದೇ ಇದೆ. ಬಟ್ಟಲು ತಾ ಕೊಡುವೆನು. ಬೇಗ ಹೋಗಿ ಎಲ್ಲರಿಗೂ ಊಟಕ್ಕಿಡು. ಆಗಲೆ ಗಂಟೆ ಹನ್ನೆರಡಾಯಿತು." ಎಂದು ಬಟ್ಟಲು ತೆಗೆದುಕೊಂಡು ಸರಸರ ಒಳಗೆ ಹೋದರು.

ಸೂರಪ್ಪ ಶಾರಿಯನ್ನು ಎತ್ತಿಕೊಂಡೇ ಬಚ್ಚಲು ಮನೆಗೆ ಕೈಕಾಲು ತೊಳೆಯಲು ಜಾರಿದರು.

ಸುಂದರಿ ಉಪ್ಪು ತೆಗೆದುಕೊಂಡು ತನ್ನ ಮನೆಗೆ ಹೊರಳಿದಳು

## ೧೨

ನಾಣಿ ತುಂಬಾ ರಸಿಕ. ಅವನ ಕಣ್ಣು ಕಸದಲ್ಲೂ ರಸವನ್ನೇ ಹುಡುಕುತ್ತದೆ. ಬಾಲ್ಯದಿಂದಲೂ ಪ್ರತಿಯೊಂದು ಕೆಲಸದಲ್ಲಿ, ಮಾತಿನಲ್ಲಿ ರಸಪ್ರವಾಹವನ್ನು ತಡೆ–ಬಡೆಯಿಲ್ಲದೆ ಹರಿಸುತ್ತಲೆ ಬಂದಿದ್ದ. ಈಗಂತೂ ವಯಸ್ಸಿಗೆ ತಕ್ಕಂತೆ ಆ ರಸಿಕತನ ಹೆಚ್ಚಾಗಿದೆ. ತಾರುಣ್ಯದ ನೆರೆ ಉಕ್ಕಿ ಬಂದಂದಿನಿಂದ ತನ್ನ ಗೆಳೆಯರನ್ನು ಸಾಕು ಸಾಕು ಮಾಡಿದ್ದಾನೆ. ಒಮ್ಮೆ ಅನಂತು ಅವನ ಕೈಗೆ ಸಿಕ್ಕಿ ಹಣ್ಣುಹಣ್ಣಾಗಿದ್ದ.

ಅವನ ಲಗ್ನವಾದ ಹೊಸದು. ಅನಂತುವಿಗೆ ಹೆಂಡತಿಯನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗಬೇಕೆಂಬಾಸೆಯುಂಟಾಯಿತು. ಅವನ ಅತ್ತೆ–ಮಾವ, ಹೆಂಡತಿ ಎಲ್ಲರೂ ಹಳೆಯ ಸಂಪ್ರದಾಯದವರು ಹಾಗೂ ಹೀಗೂ ಕಷ್ಟಪಟ್ಟು ಹೆಂಡತಿಯನ್ನು ಒಪ್ಪಿಸಿದರೂ, ಅತ್ತೆ-ಮಾವಂದಿರನ್ನೊಪ್ಪಿಸಲು ಸಾಧ್ಯವಾಗಲಿಲ್ಲ. ತನ್ನ ಕಷ್ಟವನ್ನು ನಾಣಿಯಲ್ಲಿ ತೋಡಿಕೊಂಡ.

ನಾಣಿ ಶಾಮರಾಯರಿಗೆ ಬಹಳ ಬೇಕಾದವನಾಗಿದ್ದ. ಆಮನೆಯಲ್ಲಿ ಅವನಿಗೆ ತುಂಬಾ ಗೌರವವಿತ್ತು. ಮಧ್ಯಸ್ಥಿಕೆಗೆ ಒಪ್ಪಿದ. ಬುದ್ಧಿಯ ಬತ್ತಳಿಕೆಯಲ್ಲಿರುವ ಬಾಣವೆಲ್ಲ ವೆಚ್ಚವಾದರೂ ಜಗ್ಗಲಿಲ್ಲ, ಆ ವೃದ್ಧ ದಂಪತಿಗಳು. ನಾಣಿ ಸೋಲಲಿಲ್ಲ. ಅವನ ಕುಶಾಗ್ರ ಬುದ್ಧಿಗೆ ಮತ್ತೊಂದು ಮಾರ್ಗ ಹೊಳೆಯಿತು.

ಬಹು ಬೇಗ ಮುಗಿದುಹೋಗಿತ್ತು. ಕುತೂಹಲ ತಡೆಯಲಾರದೆ, ಕಿಟ್ಟು ತಿಳಿಸುವುದರಲ್ಲಿ ಅವಸರವಾಗಿ, ತಾನೇ ಕೇಳಿದ. ನಡೆದ ಕತೆಯನ್ನು ತಿಳಿಸಲು ಕಿಟ್ಟುವಿಗೆ ನಗುವೆ ಬಿಡದು. ಕಡೆಗೆ ಗಟ್ಟಿ ಮನಸ್ಸು ಮಾಡಿ, ನಾಣಿಗೂ ತನ್ನಕ್ಕನಿಗೂ ನಡೆದ ವಿಷಯವನ್ನು ಚಾಚೂ ಬಿಡದಂತೆ ತಿಳಿಸಿ ಹೊಟ್ಟೆ ಹುಣ್ಣಾಗುವಂತೆ ಬಿದ್ದು-ಬಿದ್ದು ತಾನೂ ನಕ್ಕನು—ಅವರನ್ನೂ ನಗಿಸಿದನು.

ತಾನಿತ್ತ ಪಾತ್ರವನ್ನು ಮೆಚ್ಚುವಂತೆ ನಿರ್ವಹಿಸಿದುದನ್ನು ಕಂಡು ನಾಣಿಗೆ ತುಂಬಾ ಸಂತೋಷವಾಯಿತು. ಕಿಟ್ಟುವಿಗೆ ಹೊಟೇಲಿನಲ್ಲಿ ಸಂಪೂರ್ಣ ಕಂಠ ಪೂರ್ತಿ ತಿಂಡಿ ಕೊಡಿಸಿ, ಅನಂತರ ಅಂಗಡಿಗೆ ಕರೆದುಕೊಂಡು ಹೋಗಿ, ಅವನು ಬೇಡವೆಂದರೂ ಕೇಳದೆ, ಒತ್ತಾಯ ಮಾಡಿ ಒಂದು ಸೊಗಸಾದ ವಲ್ಲಿ ಹೊದೆಸಿ ಕಳುಹಿಸಿದ.

ಅನಂತುವಿನ ದುಮುದುಮು ಮಾತ್ರ ಒಂದು ವಾರದ ವರೆಗೆ ಹಾಗೆಯೆ ಇತ್ತು. ಅವನ ಮಡಿಕೆ ಮುಖ ಕಂಡು ಎದುರು ಬಂದವರು ಮಾತನಾಡಿಸಲೂ ಹೆದರಿ ಮುದುರಿ ಹೋಗುತ್ತಿದ್ದರು. ನಾಣಿಗಂತೂ ಜನ್ಮ ಜಾಲಾಡಿ ಬಿಟ್ಟಿದ್ದ. ಅದರಿಂದ ಅವನಿಗೆ ಕೋಪ ಬರಲಿಲ್ಲ. ತಾನು ಹೂಡಿದ್ದ ನಾಟಕದ ಝೇಂಕಾರ ಧ್ವನಿ ಕಿವಿಯಲ್ಲಿ ಮಧುರವಾಗಿ ಮಿಡಿಯುತ್ತಿದ್ದುದರಿಂದ, ನಾಣಿ ನಗುತ್ತಲೆ ಅವನ ಕೋಪವನ್ನು ಸಹಿಸಿದ. ಒಂದು ವಾರದ ನಂತರ ಮತ್ತೆ ಅವರಿಬ್ಬರೂ ಒಂದಾದರು.

ಹೊಸದಾಗಿ ಲಗ್ನವಾದ ನಾಣಿಯ ಮನಸ್ಸಿನಲ್ಲಿ, ತನ್ನ ಎಳೆಹರೆಯದ ಈ ಬಗೆಯ ಸವಿ ನೆನಪುಗಳು ಒಂದಾದ ಮೇಲೊಂದರಂತೆ ಗುಂಯ್‌ಗುಡುತ್ತಾ ಬಂದುವು. ಮನಸ್ಸು ಮನೆಗೆ ಹಾರಿತು. ಇನ್ನೂ ಗಂಟೆ ಏಳಿದ್ದರೂ ತಲೆನೋವೆಂದು ಅಣ್ಣನಿಗೆ ಸುಳ್ಳು ನೆವ ಹೇಳಿ, ಲೆಕ್ಕದ ಪುಸ್ತಕವನ್ನು ಅವನ ಕೈಗಿತ್ತು ಮನೆಯ ಹಾದಿ ಹಿಡಿದ.

ಮನೆಯಲ್ಲಿ ಪಗಡೆಯ ದಾಳ ಎಡೆಬಿಡದೆ ಉರುಳುತಿತ್ತು. ನಡುನಡುವೆ ಕೋಪ–ನಗುವಿನ ಸ್ಪರ್ಧೆಯೂ ನಡೆದಿತ್ತು.

"ಅಯ್ಯೋ, ಶಾಂತಳದು ಹಣ್ಣಿದ ಜೋಡಿ—ಅನ್ಯಾಯವಾಯಿತು. ಇನ್ನು ಅವಳು ಸೋತ ಹಾಗೆ!"

"ನನಗೆ ದುಗಬಿತ್ತು ನೋಡಲ್ಲಿ—ನಿನ್ನ ಕಾಯಿಯ ಗತಿ!"

"ಅಬ್ಬಾ, ಅಂತೂ ಕೊನೆ ಮುಟ್ಟಿದೆ. ನಾನೆ ಮೊದಲು ಗೆದ್ದವಳು."

"ಥೂ, ಕಾಯೆಲ್ಲ ಮನೆಯಲ್ಲೆ ಕೂತಿವೆ. ಏನು ಮಾಡಿದರೂ ಇವತ್ತು ಮನೆ ಮುಂದಿನ ಹಾಸೇ ದಾಟುತ್ತಿಲ್ಲ."

ಅತ್ತಿಗೆ-ನಾದಿನಿ-ಓರಗಿತ್ತಿಯರ ಸೊಲ್ಲು ಹೀಗೆ ನಾನಾ ಬಣ್ಣ ಪಡೆದು ಹಜಾರವನ್ನು ತುಂಬಿತ್ತು.

ಎರಡನೆ ಆಟ ಹೂಡುವುದರಲ್ಲೆ ನಾಣಿ ಹಾಜರಾದ. ಅವನ ಕಣ್ಣು ಸರಸುವಿನ ಕಡೆಗೇ ನೆಟ್ಟಿತ್ತು. ಎಲ್ಲರಿಗಿಂತ ಮೊದಲು ಕಂಡವಳೂ ಅವಳೆ. ನಾಣಿ ತುಟಿಯಲ್ಲಿ ಪ್ರೇಮದ ಮಧು ತುಂಬಿ ಅರಳಿಸಿದ ಆ ಹೂವಿನ ಸುಮಧುರ ಕಂಪು ಸರಸುವಿಗೂ ತಾಕಿ ಅಲ್ಲೂ ನಗೆಯ ಹೂ ಪ್ರೇಮದ ಮಧು ತುಂಬಿ ಅರಳಿತು. ಅಷ್ಟರಲ್ಲಿ ಆ ನಗೆಯ ಸುಳಿವನ್ನು ಹಿಡಿದು ಎಲ್ಲರೂ ಹಿಂದಿರುಗಿದರು. ನಾಣಿ ನಗುತ್ತಲೆ ನಿಂತಿದ್ದ. ಅವನ ರಸಿಕತನ ಎಲ್ಲರ ತುಟಿಯಲ್ಲೂ ಹುಸಿನಗೆ ತೇಲಿಸಿತು. ಸರಸುವಿನ ಮುಖ ನಾಚಿಗೆಯಿಂದ ಕೆಂಪಾಯಿತು. ಕತ್ತು ತಗ್ಗಿಸಿದಳು. ನಗು ಮೆಲ್ಲನೆ ಒಳಗೆ ಜಾರಿತು

ಅವನು ಬಂದವನೆ ಕೊಠಡಿಗೆ ಹೋಗದೆ ಪಗಡೆ ಹಾಸಿನ ಕಡೆ ಹೊರಳಿದ. ಓರೆನೋಟದಲ್ಲಿ ಗಂಡನ ಚಲನ-ವಲನವನ್ನು ನೋಡುತ್ತಿದ್ದ ಸರಸು, ಎಲ್ಲರ ಮುಂದೆ ಅವನ ಕುಚೇಷ್ಟೆಗೆ ಈಡಾಗಲು ಹೆದರಿ, ಮೆಲ್ಲನೆ ಅಲ್ಲಿಂದ ನುಸುಳಿಕೊಳ್ಳಲು ಹವಣಿಸಿದಳು.

"ನಾನೇನು ಹುಲಿಯೆ ಹೆದರಲು ?" ಎಂದು ಹೇಳುತ್ತಾ ಹೋಗಿ ನಾಣಿ ಅವಳ ಹಿಂದೆ ಏಳದಂತೆ ತಡೆಯಾಗಿ ನಿಂತ.

ಸರಸು ವಿಧಿಯಿಲ್ಲದೆ ಮುದುರಿಕೊಂಡು ಒದ್ದಾಡುತ್ತಾ ಅಲ್ಲೇ ಕೂತಳು.

ಅವಳ ಒದ್ದಾಟ ಕಂಡು ನಾಣಿ ಅಂದ ಮಾತಿಗೆ ಶಕುಂತಲೆಯೆ ಉತ್ತರ ಕೊಟ್ಟಳು.

"ಅದು ಹೆದರಿಕೆಯಲ್ಲ--ನಾಚಿಕೆ."

"ನಾಚಿಕೆಯೆಂದೊ ಅದರ ಅರ್ಥ ! ಹಾಗಾದರೆ ನೀನೂ ಹೊಸದರಲ್ಲಿ ನಿನ್ನ ಗಂಡನನ್ನು ಕಂಡರೆ ಹೀಗೇ ನಾಚುತ್ತಿದ್ದೆ ಅನ್ನು !"

"ನಾನೊಬ್ಬಳೆ ಏನು, ಮದುವೆಯಾದ ಹೊಸದರಲ್ಲಿ ಎಲ್ಲರೂ ಅಷ್ಟೆ. ನಾಲ್ಕು ದಿನವೆ ಆ ನಾಚಿಕೆ ಭಯವೆಲ್ಲ !"

"ಆಮೇಲೆ ?"

ಆವರೆಗೆ ಸುಮ್ಮನೆ ಕೂತಿದ್ದ ರಾಧೆ ಚುಚ್ಚಿ ನುಡಿದಳು,

"ತಿರುಗು-ಮುರುಗ. ಆ ಸ್ಥಾನ ನಿನಗೇ ಬರುತ್ತೆ. ನೀನೆ ಹೆದರಬೇಕು, ನಾಚಬೇಕು ಅವಳಿಗೆ!"

"ಅಷ್ಟೇ ತಾನೆ, ಒಳ್ಳೆಯದೆ ಆಯಿತು. ಹೆಂಡತಿಯ ಹಿಡಿತದಲ್ಲಿದ್ದ ಗಂಡನು ಎಂದಿಗೂ ಹಾಳಾಗುವುದಿಲ್ಲ."

"ಹಾಗಾದರೆ ನೀನು ಹೆಂಡತಿಯ ಹಿಡಿತಕ್ಕೆ ಬಗ್ಗಿ ನಡೆಯುವವನು—ಎಂದಂತಾಯಿತು."

"ನಿಸ್ಸಂಕೋಚವಾಗಿ. ನೀತಿಗೆಡದೆ ಇರುವಂತೆ ನನ್ನನ್ನು ಹಿಡಿತದಲ್ಲಿರಿಸಿ ಕೊಳ್ಳುವ ಚೈತನ್ಯ ಅವಳು ಪಡೆದರೆ ನನಗೆ ನಿಜವಾಗಿಯೂ ಸಂತೋಷವೆ !"

ಎಲ್ಲರೂ ಸರಸುವಿನ ಮುಖ ನೋಡಿ ಮೆಲುನಗೆಯಾಡಿಸಿದರು. ಆ ನಗೆಯಲ್ಲಿ 'ನಿನ್ನ ಗಂಡ ನಿನಗೆ ಹೇಗೆ ಸೋತಿದ್ದಾನೆ ನೋಡು !' ಎನ್ನುವ ಭಾವ ತುಂಬಿತ್ತು.

ರಾಧೆ ಥಟ್ಟನೆ ಹೇಳಿದಳು,

"ಆಮೇಲೆ ನಿನ್ನನ್ನು ಎಲ್ಲರೂ ಹೆಣ್ಣಿಗನೆಂದು ಕರೆಯುವರಲ್ಲಾ, ಅದಕ್ಕೇನು ಮಾಡುವೆ ?"

"ನನ್ನಂತೆ ಬದುಕಿ ಆ ಮಾತನ್ನು ಸುಳ್ಳುಮಾಡುವೆನು."

ಶಕುಂತಳೆಯೆಂದಳು,

"ಅದರಂತೆ ಕೊನೆವರೆಗೂ ನಡೆಯಬೇಕಲ್ಲ !"

"ನೀವೇ ನೋಡುವಿರಂತೆ—ಈಗ್ಯಾಕೆ ಆ ಮಾತು ! ಎಲ್ಲ ನಿಮ್ಮ ನಾಲ್ವರ ಪೈಕಿ ಒಬ್ಬರು ಏಳಿ ನೋಡೋಣ !"

ಎಲ್ಲರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಯಾರಿಗೂ ಏಳಲು ಇಷ್ಟವಾಗಲಿಲ್ಲ. ಎಲ್ಲರ ಇಂಗಿತವನ್ನೂ ಅರ್ಥ ಮಾಡಿಕೊಂಡ ಸರಸು ನೆಲಕ್ಕೆ ಕೈಯೂರಿ ಮೆಲ್ಲನೆ ಏಳತೊಡಗಿದಳು. ಹಿಂದೆ ನಿಂತಿದ್ದ ನಾಣಿ ಸುಳಿವು ತಿಳಿದು, ಕಾಲಿನಿಂದ ಅವಳ ಕೈ ಬೆರಳನ್ನು ಮೆಲ್ಲನೆ ಅದುಮಿ, ಏಳದಂತೆ ತಡೆದ. ಸರಸು ಬಂದ ನಗೆ ನುಂಗಿ ಹಾಗೇ ಸವರಿಸಿ ಕುಳಿತಳು. ಅದನ್ನು ಕಂಡು ಶಾಂತ ಮುಸಿ ನಗೆಯಿಂದ ತನ್ನ ಸ್ಥಳ ಬಿಟ್ಟುಕೊಟ್ಟಿದ್ದಳು. ಆ ಸ್ಥಳದಲ್ಲಿ

ನಾಣಿ ಬಂದು ಕುಳಿತ. ಶಾಂತ ಶಕುಂತಳೆಯ ಪಕ್ಕದಲ್ಲಿ ಹೋಗಿ ಕುಳಿತು ಆಟ ನೋಡತೊಡಗಿದಳು.

ಆಟ ಪ್ರಾರಂಭವಾಯಿತು. ನಾಣಿ ಎಸೆದ ಮೊದಲ ದಾಳದಲ್ಲೆ ಜಯ ಕಾಣುತ್ತಿತ್ತು. ಒಳ್ಳೇ ಹುರುಪಿನಿಂದ ಆಡುತ್ತಿದ್ದ. ಅವನ ಎದುರಿಗೆ ಕುಳಿತ ವಳೆ ಸರಸು. ನಡುನಡುವೆ ಆಟದ ಜತೆಗೆ ಕುಚೇಷ್ಟೆ ಬೇರೆ ಮಾಡುತ್ತಿದ್ದ. ಅವನ ಸರಸವಾಣಿ, ದಾಳವೆಸೆಯುವ ಚಾಕಚಕ್ಯತೆ ಆಟಕ್ಕೆ ಒಳ್ಳೇ ಸ್ವಾರಸ್ಯ ತುಂಬಿತ್ತು. ಸ್ವಲ್ಪ ಹೊತ್ತಿನಲ್ಲೆ ಸರಸುವಿನ ಒಂದು ಹಣ್ಣಿನ ಜೋಡಿ, ನಾಣಿ ಗುರಿಯಿರಿಸಿದ ಗರಕ್ಕೆ ತುತ್ತಾಗಿ ನೆಲಕ್ಕೆ ಉರುಳಿತು. ಕೀಟಲೆ ದನಿಯಲ್ಲಿ ಹೇಳಿದ,

"ಪಾಪ, ಪೆಚ್ಚಾಯಿತು ಮುಖ!"

ಅದುವರೆಗೆ ಬಾಯಿ ಹೊಲಿದಂತಿದ್ದ ಸರಸು ಥಟ್ಟನೆ ಉತ್ತರ ಕೊಟ್ಟಳು,

"ಯಾಕೆ ಪೆಚ್ಚಾಗಬೇಕು! ಹೋದರೆ ಹೋಯಿತು. ಮತ್ತೊಂದು ಜೋಡಿ ತರುತ್ತೇನೆ."

"ಏನೋ ಅಂತಿದ್ದೆ, ಪರವಾಯಿಲ್ಲ, ಅಮ್ಮಾವರು ಜೋರಿದ್ದಾರೆ!"

"ನಿನ್ನಿಚ್ಛೆ ಪೂರ್ಣವಾಗುವುದರಲ್ಲಿ ಸಂದೇಹವಿಲ್ಲ ನಾಣಿ" ಎಂದು ಶಕುಂತಳ ಬಗ ತಾನೆ ನಡೆದ ಮಾತಿನ ನೆನಪು ಕೊಟ್ಟಳು.

ಎಲ್ಲರೂ ಮುಸಿ ಮುಸಿ ನಕ್ಕರು. ನಾಣಿಯೂ ನಕ್ಕನು. ಅಂತೂ ಇಂತೂ ಆ ಆಟ ಮುಗಿಯಿತು. ಕಡೆಗೂ ಸರಸು ಸೋತಳು. ಗಂಡನನ್ನು ಗೆಲ್ಲಬೇಕೆಂದು ಎಚ್ಚರಿಕೆಯಿಂದ ಆಡಿದ್ದಳು. ಅವಳ ಇಚ್ಛೆ ಕೈಗೂಡಲಿಲ್ಲ. ಸೋಲಿಸುವ ಆಸೆ ಅಳಿಯಲೂ ಇಲ್ಲ. ಮುಂದಿನ ಆಟದಲ್ಲಿ ಹೇಗಾದರೂ ಪಟ್ಟು ಸೋಲಿಸಬೇಕೆಂದು ಹಠ ತೊಟ್ಟಳು. ಕಾಯಿ ಜೋಡಿಸಿ ಎರಡನೇ ಆಟಕ್ಕೆ ಕೈ ಹಚ್ಚಬೇಕೆನ್ನುವಷ್ಟರಲ್ಲಿ, ನಾಣಿ ಕೆಣಕು ಮಾತಿನ ಬಾಣವೆಸೆದ,

"ಸ್ತ್ರೀಯರು ಪುರುಷರಿಗೆ ಸಮಾನರೆಂದು ಬೊಬ್ಬೆಯಿಡುತ್ತಿರುವ ಈ ಕಾಲದಲ್ಲಿ ನನಗೆ ನೀನು ಸೋತದ್ದು ತುಂಬಾ ಅವಮಾನ."

ಆ ಮಾತು ಅಭಿಮಾನಿಯಾದ ಸರಸುವನ್ನು ರೇಗಿಸಿತು. ಸೋಲಿನ ಬೇಸರದಲ್ಲಿದ್ದವಳು ಹುಡುಗಾಟದ ಹೂಬಾಣಕ್ಕೇ ನೊಂದು, ಮುಖವನ್ನು ಗಂಟಿಗೆಯಂತೆ ಮಾಡಿಕೊಂಡು ಆಟ ಬಿಟ್ಟಿದ್ದಳು.

ಅವಳಿಗೆ ಕೋಪ ಬಂದಿದೆಯೆಂದು ಗೊತ್ತಿದ್ದರೂ, ಅಷ್ಟು ಸಣ್ಣ ಮಾತಿಗೆ ಆಟ ಬಿಟ್ಟಿದ್ದಳಲ್ಲಾ, ಎನ್ನುವ ಬೇಸರದಿಂದ ನಾಣಿ ಚುಚ್ಚಿ ನುಡಿದ,

"ಒಂದೇ ಆಟಕ್ಕೆ ಸಾಕಾಯಿತೇನು ?"

ಸರಸು ಆ ಮಾತಿಗೆ ಉತ್ತರಿಸದೆ ಶಾಂತಳಿಗೆಂದಳು,

"ಅಕ್ಕಾ, ಈ ಆಟ ನೀವು ಆಡಿ ಬನ್ನಿ, ನಾನು ಮತ್ತೊಂದಾಟಕ್ಕೆ ಬರುವೆನು."

"ನೀವೇ ಬನ್ನಿ ಅತ್ತಿಗೆ, ನನಗೆ ಮತ್ತೂ ಖುಷಿ !"

ಕಡೆಗೂ ತನ್ನವಳು ಆಟಕ್ಕೆ ಬರದೆ ಉಳಿದಳಲ್ಲಾ ಎನ್ನುವ ನೋವಿನಿಂದ ಹೊಟ್ಟೆಯುರಿ ಮಾತಾಡಿ, ಆ ಮಾತಿನ ಪರಿಣಾಮ ಅವಳಲ್ಲೆಷ್ಟರ ಮಟ್ಟಿಗಾಗಿರಬಹುದೆಂದು ತಿಳಿಯಲು ಕುತೂಹಲದಿಂದ ಆ ಕಡೆ ಕಣ್ಣು ಹೊರಳಿಸಿದ.

ಸರಸು ಅದನ್ನು ಲಕ್ಷ್ಯ ಮಾಡದೆ ಶಾಂತಳಿಗೆಂದಳು,

"ಈ ಬಾರಿ ಅವರನ್ನು ಸೋಲಿಸಲೇ ಬೇಕು ಅಕ್ಕ ನೀವು; ಇಲ್ಲದಿದ್ದರೆ ಸುಮ್ಮನಿರುವುದಿಲ್ಲ."

ಶಾಂತ ನಕ್ಕು ದಾಳವೆಸೆದಳು. ಮೊದಲನೆಯ ಗರ ಶುಭಶಕುನದಂತಿತ್ತು. ದಾಳ ತಾನು ತೋರಿದ ಘನತೆಯನ್ನು ಒಂದೇ ಬಾರಿಗೆ ಕಳೆದುಕೊಳ್ಳಲಿಲ್ಲ. ಅವಳು ಬಿಡುತ್ತಿದ್ದ ಪ್ರತಿಯೊಂದು ಉರುಳಿನಲ್ಲೂ ಒಳ್ಳೆ ದಾಯವನ್ನೆ ತುಂಬಿಕೊಡುತ್ತಿತ್ತು. ಅದನ್ನು ಕಂಡು ಸರಸುವಿನ ಮುಖ ಅರಳಿತು.

"ಸದ್ಯ ಎಚ್ಚರಿಕೆಯಾಗಿರಬೇಕಪ್ಪ; ಇಲ್ಲದಿದ್ದರೆ ಮೀಸೆ ಮಣ್ಣಾದೀತು." ಎಂದು ನಾಣಿ ನೆಟ್ಟಗೆ ಕುಳಿತ.

ಗರ ಹಾಕುವುದರಲ್ಲಿ ಶಾಂತಳಿಗೂ ನಾಣಿಗೂ ಪೈಪೋಟಿ ಬಿತ್ತು. ಆಟ ಭರಾಟೆಯಿಂದ ಸಾಗಿತು; ನೋಡುವವರ ಕುತೂಹಲವನ್ನು ಕೆರಳಿಸುವಂತಿತ್ತು. ನಡುನಡುವೆ ಕೋಪ-ತಾಪ–ನಗುಗಳು ಸ್ಪರ್ಧೆ ನಡೆಸಿಯೆ ಇದ್ದುವು.

ಸ್ವಾರಸ್ಯ ತುಂಬಿ ಬಂದಾಗ ಪುರಾಣಕ್ಕೆ ಹೋಗಿದ್ದ ರಂಗಮ್ಮನವರು ಬಂದರು. ಎಲ್ಲರೂ ಆಟದಲ್ಲಿ ತಲ್ಲೀನರಾಗಿದ್ದುದರಿಂದ ಯಾರೂ ಅವರ ಕಡೆ ಗಮನ ಹರಿಸಲಿಲ್ಲ. ಹೊದ್ದ ಶಾಲನ್ನು ಸ್ಟ್ಯಾಂಡಿನಲ್ಲಿರಿಸಿ ತಾವೆ ಅವರ ಬಳಿ ಹೋಗಿ ಸ್ವಲ್ಪ ಹೊತ್ತು ಆಟ ನೋಡುತ್ತಾ ನಿಂತರು. ಮಕ್ಕಳು ಸೊಸೆಯರು

ಕೂಡಿ ಆಡುವುದನ್ನು ನೋಡಿ ತುಂಬಾ ಹಿಗ್ಗು. ಆ ಸಂತೋಷ ಅವರ ಮೈಯಲ್ಲೆಲ್ಲಾ ಕಚಗುಳಿಯಿಡುತ್ತಿತ್ತು. ಮೈತುಂಬಿ ಬಂದ ಹಿಗ್ಗನ್ನು ಮಾತಿನಲ್ಲಿ ಹರಿಸಿದರು.

"ಒಳ್ಳೆ ಪಗಡೆಯಾಟದ ಹುಚ್ಚಾಯಿತಲ್ಲ ನಿಮಗೆ!"

ಆಟದ ರಂಗಿನಲ್ಲಿದ್ದ ನಾಣಿ ತಾಯಿಯನ್ನುಬ್ಬಿಸಿ ಮಾತಾಡಿದ,

"ನಮಗೆ ಪಗಡೆಯಾಟದ ಹುಚ್ಚಾದರೆ ನಿನಗೆ ಪುರಾಣದ ಹುಚ್ಚು; ಹುಚ್ಚನ್ನು ವ್ಯಕ್ತಪಡಿಸುವುದರಲ್ಲಿ ನೀನೇನೂ ಕಮ್ಮಿಯಾದವಳಲ್ಲ. ಅದಿರಲಿ; ಇವತ್ತು ಪುರಾಣದಲ್ಲೇನು ವಿಶೇಷ ?"

"ಶ್ರೀರಾಮ ಪಿತೃವಾಕ್ಯ ಪರಿಪಾಲನೆಗಾಗಿ ಕಾಡಿಗೆ ಹೊರಟು ನಿಂತಿದ್ದಾನೆ; ತನ್ನ ಸರ್ವಸ್ವವನ್ನೂ ಅಣ್ಣನಲ್ಲಿ ಕಾಣುತ್ತಿರುವ ಲಕ್ಷ್ಮಣ ಸ್ವಂತ ಸುಖವನ್ನೂ ಕಡೆಗಣಿಸಿ, ವನವಾಸದ ಅವಧಿಯಲ್ಲಿ ಅವನ ಸಹವಾಸ-ಸಾನ್ನಿಧ್ಯ ಸುಖವನ್ನು ತನಗೆ ಒದಗಿಸಿ ಕೊಡಬೇಕೆಂದು ಅಣ್ಣನಲ್ಲಿ ಗೋಳಿಡುತ್ತಿದ್ದಾನೆ. ತುಂಬಾ ಸೊಗಸಾಗಿದೆ ಆ ಸನ್ನಿವೇಶ; ಮನಸ್ಸು ಕರಗುವಂತಿದೆ. ಅಣ್ಣ ತಮ್ಮಂದಿರ ಪ್ರೇಮವನ್ನು ಕಂಡು ಪರಮಾನಂದವಾಗುತ್ತದೆ. ಇದ್ದರೆ ಹಾಗಿರಬೇಕು."

"ಪುರಾಣದಲ್ಲಿ ಕೇಳಿ ಸಂತೋಷ ಹೊಂದಿ ಬಿಡು—ಜೀವನದಲ್ಲಿ ಕಾಣುವುದೊ ಇಲ್ಲವೊ ! ಅಂತೂ ಬರಬರುತ್ತಾ ಪುರಾಣ ಪುಣ್ಯಕಥೆ ಜೋರಾಯಿತು ನಿನಗೆ. ನೀನೇ ಪುಣ್ಯ ಮಾಡಿದ್ದೀಯೆ, ಕೂತಲ್ಲೆ ಎಲ್ಲ ನಡೆದು ಹೋಗುತ್ತೆ. ಅದರಲ್ಲೂ ಅತ್ತಿಗೆ ನಿನ್ನನ್ನು ಕಣ್ಣಲ್ಲಿ ಮುಚ್ಚಿಟ್ಟು, ದೇವರಂತೆ ಸೇವೆ ಮಾಡುತ್ತಿದ್ದಾಳೆ; ಇನ್ನೇನು ನಿನಗೆ ಕೊರತೆ !" ಇತ್ತೀಚೆಗೆ ಒಡಕುಂಟಾಗುತ್ತಿರುವ ತಮ್ಮ ಅಣ್ಣ-ತಮ್ಮಂದಿರ ಬಗ್ಗೆ ವಿಷಯ ಹೊರಳದಿರಲೆಂದು ಮಾತನ್ನು ಬೇರೆ ಕಡೆ ತಿರುಗಿಸಿದ್ದ.

"ನನ್ನಷ್ಟೆ ವಯಸ್ಸಾದಾಗ ನಿನಗೂ ಆ ಸುಖ ಕಟ್ಟಿಟ್ಟಿದ್ದು. ನಿನ್ನ ಪುಣ್ಯದಲ್ಲಿ ನಾವೂ ಕಷ್ಟಪಟ್ಟವರೆ !"

"ನಮಗೂ ಇಂಥಾ ಸೊಸೆಯರೆ ಸಿಗಬೇಕಲ್ಲ !" ಎಂದು ಸರಸ-ಶಾಂತ ಇವರಿಬ್ಬರ ಕಡೆಗೂ ದೃಷ್ಟಿ ಹರಿಸಿದ. ಇಬ್ಬರ ಮುಖವೂ ಅರಳಿತು.

"ಎಲ್ಲರಿಗೆ ಸಿಗುವವರೂ ಇಂಥವರೆ, ಅವರನ್ನು ಬಳಸಿಕೊಳ್ಳುವುದರಲ್ಲಿದೆ. ನಾವು ಒಳ್ಳೆಯವರಾದರೆ, ಅವರೂ ಒಳ್ಳೆಯವರಾಗಿರುತ್ತಾರೆ; ಕೆಟ್ಟವರಾದರೆ ಅವರೂ ಕೆಟ್ಟವರಾಗುತ್ತಾರೆ."

ತಾಯಿಯ ಮಾತು ಕೇಳಿ ಬಹಳ ಮೆಚ್ಚಿಗೆಯಾಯಿತು ನಾಣಿಗೆ. ಅವರ ಬಗ್ಗೆ ಪ್ರೀತಿಯೂ ಉಕ್ಕಿ ಬಂತು. ಉಬ್ಬಿ ಕೇಳಿದ,

"ಒಳ್ಳೆ ಮಾತಾಡಿದೆ— ಕೋಟಿ ವರಹದ ಮಾತು ಅದು. ನಿನ್ನ ಬಾಯಿ ಸಿಹಿ ಮಾಡಬೇಕು. ಅಂದ ಹಾಗೆ, ಅತ್ತಿಗೆ ಮಡಿಯಲ್ಲಿ ಸಿಹಿಸಜ್ಜಿಗೆ ಮಾಡಿರಿಸಿದ್ದಾಳೆಂದು ತೋರುತ್ತೆ, ಹೋಗಿ ಬಾಯಿ ಸಿಹಿ ಮಾಡಿಕೊ."

"ಯಾಕೆ ಶಾಂತ ಮಾಡಿದೆ; ನಾನು ಮಾಡಿಕೊಳ್ಳುತ್ತಿದ್ದೆನಲ್ಲಾ ! ಮೊದಲಿನಿಂದಲೂ ಕೆಲಸ ಮಾಡಿದ ಜೀವ ನನ್ನದು. ಕೂತುಣ್ಣುವುದೆಂದರೆ ಬೇಸರ ಬರುವುದೆ ಸರಿ. ಕೈಕಾಲಿನಲ್ಲಿ ಬಲವಿದ್ದಷ್ಟು ದಿನ ನನ್ನ ಕೆಲಸ ನಾನು ಮಾಡಿಕೊಳ್ಳುವೆನು. ಆಮೇಲೆ ನೀವು ಮಾಡುವುದು ಇದ್ದದ್ದೆ" ಎಂದು ರಾಗಯಿಳಿದು ಮಡಿ ಮಾಡಲು ನೀರುಮನೆಗೆ ಹೋದರು.

ಅಷ್ಟರಲ್ಲಿ ಆಟವೂ ಮುಗಿದಿತ್ತು. ಎಲ್ಲರಿಗಿಂತ ಮೊದಲು ಗೆದ್ದವಳು ಶಾಂತ. ನಾಣಿಯ ಮುಖ ಚಿಕ್ಕದಾಯಿತು. ಅತ್ತಿಗೆಯನ್ನು ಸೋಲಿಸಬೇಕೆಂದು ಹರಪ್ರಯತ್ನ ಮಾಡಿದ್ದ. ಆ ಬಾರಿ ಅವನ ಶಪಥ ನಡೆಯಲಿಲ್ಲ. ಅವನ ಒದ್ದಾಟ ಕಂಡು ನರಸುವಿನ ಮುಖ ಹಿಗ್ಗಿತು. ಕೆಣಕಿ ನುಡಿದಳು,

"ಅಕ್ಕ, ಅವರನ್ನು ಸೋಲಿಸಿದ್ದು ಒಳ್ಳೆಯದಾಯಿತು. ಅತ್ತೆ ಹತ್ತಿರ ಹೇಳಿ ಒಂದು ಪಾವು ಹಾಲು ನಿನ್ನ ಹೊಟ್ಟೆಗೆ ಹುಯ್ಯುವೆನು. ಪಾಪ ! ಮುಖ ಪೆಚ್ಚಾಯಿತು. ಹೆಂಗಸರು ಅಬಲೆಯರೆಂದು ಗೊತ್ತಿದ್ದೂ, ಅವರಿಗೆ ಸೋತದ್ದು ತುಂಬಾ ಅವಮಾನವೆ ಸರಿ !" ಎಂದು ಓರೆಗಣ್ಣಿನಿಂದ ಗಂಡನನ್ನು ತಿವಿದು ನೋಡಿದಳು.

ರಸಪ್ರಿಯನಾದ ನಾಣಿಗೆ ನರಸುವಿನ ಆ ಕೆಣಕು ನುಡಿ, ಹಿತವಾದ ತಿವಿತದ ನೋಟ ತುಂಬಾ ಹಿಡಿಸಿತು. ಕಣ್ಣಲ್ಲಿ ಪ್ರೀತಿಯ ಕೋಪ ತುಂಬಿ, ತುಟಿಯಲ್ಲಿ ತುಂಟ ನಗೆಯೊಂದನ್ನು ಅವಳೆಡೆಗೆ ತೇಲಿಬಿಟ್ಟು, ಎದ್ದು ಹೋಗಿ [illegible] ಅತ್ತಿಗೆಯನ್ನು ಒತ್ತಾಯವಾಗಿ ಕೂರಿಸಿಕೊಂಡು ಮತ್ತೊಂದು ಆಟ ಹೂಡಿದ.

"ಈ ಬಾರಿ ನಾನು ಸೋತರೆ ಸರಸು ಕೊಟ್ಟ ಶಿಕ್ಷೆಯನ್ನು ಅನುಭವಿಸು ವೆನು. ನೋಡೋಣ, ದಾಳ ನನ್ನ ಹಿಡಿತಕ್ಕೆ ಸಿಗುವುದೊ ಇಲ್ಲವೊ " ಎಂದು ಪಣಕಟ್ಟಿ ದಾಳವನ್ನು ಎರಡು ಕೈಯಲ್ಲೂ ಚೆನ್ನಾಗಿ ತಿಕ್ಕಿ ಉರುಳಿಸಿದ.

ಬೀಳುತ್ತಿದ್ದ ಗರ ನಾಣಿಯ ಪಂಥವನ್ನು ಸಾರ್ಥಕ ಪಡಿಸುವಂತಿತ್ತು. ಈ ಬಾರಿ ನಾಣಿಗೇ ಜಯ ಸಿದ್ಧವೆಂದು ಎಲ್ಲರೂ ನಿರ್ಧರಿಸಿದರು. ಆಟ ಸ್ವಾರಸ್ಯವಾಗಿರುವಾಗ, ಶಿವಪೂಜೆಗೆ ಕರಡಿ ಬಿಟ್ಟಂತೆ ಗೋಪಿ ಬಂದ.

ಬಂದವನೆ ಆಟದ ಗುಂಪಿನ ಕಡೆ ಕಣ್ಣಾಡಿಸಿದ. ನಾಣಿಯ ಸಂಗಡ ಶಾಂತ ಆಡುತ್ತಿದ್ದುದನ್ನು ಕಂಡು ಕಣ್ಣು ಕೆಂಡ ಕಾರಿತು; ಹೊಟ್ಟೆಯಲ್ಲಿ ಕಿಚ್ಚೆ ದ್ದಿತು. ತಡೆಯಲಾರದೆ ನಡುವೆಯೆ ಕೂಗು ಹಾಕಿದ,

"ಕುಡಿಯಲು ಒಂದು ಲೋಟಾ ನೀರು ತಾ ಶಾಂತ, ತುಂಬಾ ಬಾಯಾ ರಿಕೆಯಾಗಿದೆ."

ಏಳುತ್ತಿದ್ದ ಶಾಂತಳನ್ನು ತಡೆದು ನಾಣಿ ಆಡುತ್ತಲೆ ಹೇಳಿದ,

"ನೀವು ಆಡಿ ಅತ್ತಿಗೆ; ಸರಸು, ಅಣ್ಣಾನಿಗೆ ನೀರು ತೆಗೆದುಕೊಂಡು ಹೋಗಿ ಕೊಡು."

"ಛೆ ಛೆ ಛೆ! ಅವಳು ಯಾಕೆ ತರಬೇಕು! ಶಾಂತೆ ತರುವಳು. ಏಳು ಶಾಂತ....... .... !"

"ತಂದರೆ ತಪ್ಪೇನು! ಭಾವನೆಂದರೆ ಅಣ್ಣನಿಗೆ ಸಮಾನ. ಹೋಗು ಸರಸು, ತಂದುಕೊಡು."

ಒಳಗಿನಿಂದ ಬಂದ ರಂಗಮ್ಮ ಮಗನ ಇಂಗಿತವನ್ನು ಧ್ವನಿಯ ಮೂಲಕ ತಿಳಿದು ನುಡಿದರು,

"ಹೌದು ಗೋಪಿ, ನಾಣಿ ಹೇಳಿದ್ದು ಸರಿ. ಭಾವನೆಂದರೆ ಅಣ್ಣನಿಗೆ ಸಮಾನ, ಮೈದುನನೆಂದರೆ ಮಗನಿಗೆ ಸಮಾನ ಸರಸು ನಿನಗೆ ನೀರು ತಂದು ಕೊಡುವುದರಲ್ಲಿ--ಶಾಂತ ನಾಣಿಯೊಡನೆ ಪಗಡೆಯಾಡುವುದರಲ್ಲಿ ಯಾವ ತಪ್ಪಿ ದೆ. ಹೋಗಮ್ಮ ಸರಸು ತಂದುಕೊಡು."

ಏನು ಮಾಡುವುದೆಂದು ತೋಚದೆ ತಬ್ಬಿಬ್ಬಾಗಿ ನಿಂತಿದ್ದ ಸರಸು, ಅತ್ತೆಯ ಮಾತಿನಿಂದ ಧೈರ್ಯ ಹೊಂದಿ, ಒಳಗೆ ಹೋಗಿ ನೀರು ತಂದು

ಗೋಪಿಯ ಹತ್ತಿರ ಇರಿಸಿದಳು. ಗೋಪಿಗೆ ತಡೆಯಲಾರದಷ್ಟು ಸಿಟ್ಟು ಬಂದಿದ್ದರೂ, ವ್ಯಕ್ತಪಡಿಸಲು ದಾರಿಯಿಲ್ಲದೆ ದವಡೆಯಲ್ಲಿ ಹಾಗೇ ಅದನ್ನು ಒತ್ತಿರಿಸಿ ತಂದಿರಿಸಿದ ನೀರನ್ನು ಗಟಗಟ ಕುಡಿದು ಮೌನವಾಗಿ ಕೊಠಡಿಗೆ ನಡೆದ.

ಬಂದ ಸಿಟ್ಟು ಹೊರಗೆ ಹೋಗದೆ ಮೈಯಲ್ಲೆ ವ್ಯಾಪಿಸಿದ್ದುದರಿಂದ ಆ ಭಾರಕ್ಕೆ ಭೂಮಿ ಅವನು ಹೆಜ್ಜೆಯಿರಿಸಿದಂತೆಲ್ಲ ನಡುಗುತ್ತಿತ್ತು.

ಕೊಠಡಿಗೆ ಬಂದವನೆ ಹಚ್ಚಿನ ಬಟ್ಟೆಯನ್ನು ಕಳಚಿಟ್ಟು ಕುಳಿತ. ನೆಲ ಮುಳ್ಳಿನಂತಾಯಿತು. ಎದ್ದು ಬೆನ್ನಹಿಂದೆ ಕೈಕಟ್ಟಿ ಅತ್ತಿತ್ತ ತಿರುಗಾಡಿದ. ಮನಸ್ಸು ಸ್ಥಿಮಿತಕ್ಕೆ ಬರಲಿಲ್ಲ. ಕಿಚ್ಚು ಹಾಲಾಹಲದಂತೆ ಮೈಯನ್ನು ಸುಡುತ್ತಿತ್ತು. ತಾಪವನ್ನು ತಡೆಯಲಾರದೆ ಕೊಠಡಿಯ ಮೇಲ್ಛಾವಣಿ ಕಿತ್ತು ಬೀಳುವಂತೆ ಅರಚಿದ,

"ಶಾಂತ, ನಿನ್ನಾಟ ಸಾಕು, ಇಲ್ಲಿ ಬಾಯಿಲ್ಲಿ!"

ಬರಸಿಡಿಲಿನಂತೆ ಬಂದೆರಗಿದ ಆ ಕೂಗು ಶಾಂತಳನ್ನು ಎತ್ತಿ ದೂರ ಎಸೆದಂತಾಯಿತು. ಆಟವನ್ನು ಅರ್ಧದಲ್ಲೆ ಬಿಟ್ಟು, ಪೆಚ್ಚುಮುಖ ಹಾಕಿ ಕೊಠಡಿಗೆ ಹಾರಿದಳು.

ಅಣ್ಣನ ರುದ್ರಾವತಾರವನ್ನು ಕಂಡು ನಾಣಿಯೂ ಹೆದರಿದ. ಆ ಬಾರಿ ಅತ್ತಿಗೆಯನ್ನು ತಡೆಯಲಿಲ್ಲ. ಅಣ್ಣನ ಕೋಪದಿಂದ ತನ್ನ ಸಂಘ ಅರ್ಧದಲ್ಲೇ ಮುರಿದುದರಿಂದ ತುಂಬಾ ಬೇಸರವಾಯಿತು. ಬಂದ ಬೇಸರವನ್ನು ಸದ್ದು ಮಾಡದೆ ನುಂಗಿದ. ಹಾಸು ಮುದುರಿಟ್ಟು ಎಲ್ಲರೂ ಎದ್ದರು. ಎಲ್ಲರ ಮುಖವೂ ಪೆಚ್ಚಾಯಿತು.

ಶಾಂತ ಭಯದಿಂದ ಗಡಗಡ ನಡುಗುತ್ತಾ ಮೈ ಮುದುರಿಕೊಂಡು ಗೋಪಿಯ ಪಕ್ಕದಲ್ಲಿ ಬಂದು ನಿಂತಳು. ಕರೆದದ್ದು ಯಾಕೆಂದು ಕೇಳಬೇಕಾದರೆ ದನಿಯು ಹೊರಡದು.

ಗೋಪಿ ರೋಷದ ಹುಲಿಯಂತೆ ಕಂಗಳಿಂದ ಅವಳನ್ನೊಮ್ಮೆ ನೋಡಿ ಕಟಕಟ ಹಲ್ಲು ಕಡಿದ, ಉತ್ತರಿಸದೆ, ಹಾವಿನಂತೆ ಬುಸುಗುಟ್ಟುತ್ತಾ ಓಡಾಡಿದ. ಅವನು ನೋಡದಂತಲ್ಲಾ ಶಾಂತಾ ಹೋಗಿ ಹೆದರಿ ಹೆದರಿ ಮತ್ತೆ ಕೇಳಿದಳು,

"ಅಷ್ಟು ಸಿಟ್ಟಾಗುವಷ್ಟು ನಾನೇನು ತಪ್ಪು ಮಾಡಿದೆ?"

"ಹೋಗಿ ನಾಣಿಯನ್ನೇ ಕೇಳು" ಎಂದು ಹೋಗಿ ಮಂಚದ ಮೇಲೆ ದೊಪ್ಪನೆ ಕುಳಿತ ಗೋಪಿ.

ಬಿರುಗಾಳಿಗೆ ಸಿಕ್ಕ ಬಳ್ಳಿಯಂತೆ ಶಾಂತ ನಡುಗಿದಳು. ಇಲ್ಲದ ಸುಳ್ಳು ಕಲ್ಪನೆಗೇ ಜೀವ ತುಂಬುತ್ತಿರುವುದನ್ನು ಕಂಡು ಕಂಗಾಲಾದಳು ಕಣ್ಣು ಹನಿ ಗೂಡಿತು. ಮನಸ್ಸು ಆ ಘಟನೆಗೆ ಕಾರಣನಾದ ನಾಣಿಯ ಕಡೆ ಹಾರಿತು. ಅವನ ನಡವಳಿಕೆಯನ್ನೂ ಗೋಪಿಯ ಸ್ವಭಾವವನ್ನೂ ತೂಗಿ ನೋಡಿದಳು. ಎಷ್ಟು ತೂಗಿದರೂ ನಾಣಿಯ ನಡವಳಿಕೆ ತೂಕವುಳ್ಳದ್ದಾಗಿ ಕಾಣುತ್ತಿದೆ. ಅವನ ಪ್ರೀತಿ ವಿಶ್ವಾಸದಲ್ಲಿ ಹುಡುಕಿದರೂ ಕಲ್ಮಷ ಕಾಣುವುದಿಲ್ಲ. ಎಂಥ ಗುಣವಂತ ನಿಗೆ ಎಂಥ ಮಾತು! ಗಂಡನ ಸಣ್ಣ ಸ್ವಭಾವ ಅವಳ ಮರ್ಮವನ್ನು ಗಾಣದ ತಿರುಗಣೆಯಂತೆ ಗಿರಿಗಿರಿ ತಿರುಗಿಸಿ ಹಿಂಡಿತು. ಆಕ್ಷಣ ಅವನ ಮುಖ ಕಾಣು ವುದೂ ಬೇಡವಾಯಿತು. ಕೈಹಿಡಿದ ಗಂಡ, ಗೌರವ ಸಲ್ಲಿಸಲೇ ಬೇಕು. ಒತ್ತರಿಸಿ ಬಂದ ಜುಗುಪ್ಸೆಯನ್ನು ಒತ್ತಟ್ಟಿಗೆ ತಳ್ಳಿ, ಕಣ್ಣಲ್ಲಿ ಗೌರವ ತುಂಬಿ ಕತ್ತೆತ್ತಿ ಗಂಡನನ್ನು ನೋಡಿದಳು. ಮತ್ತೆ ಅದೇ ನೋಟ, ಅದೇ ಕರುಳು ಕುಯ್ಯುವ ಮಾತು.

"ಅವನೊಡನೆ ಚಕ್ಕಂದಕ್ಕೆ ಕುಳಿತರೆ ನನ್ನ ನೆನಪೂ ಆಗುವುದಿಲ್ಲ ನಿನಗೆ. ನಾನಾಗಿ ಕರೆದರೂ ಬರುವುದು ಕಷ್ಟವಾಗಿದೆ."

ಶಾಂತಳ ಎತ್ತಿದ ಕತ್ತು ಮತ್ತೆ ಬಗ್ಗಿತು. ಹೃದಯದ ಕಟ್ಟೆಯೊಡೆದು ಕಣ್ಣೀರಿನ ಕೋಡಿ ಹುಚ್ಚಾಗಿ ಹರಿಯಿತು. ಆ ಪ್ರವಾಹವನ್ನು ತಡೆಗಟ್ಟಲು ಸಾಧ್ಯವಿಲ್ಲದೆ ಹೋದಂತೆ ಹರಿಯಬಿಟ್ಟು ಗಂಡನನ್ನು ನೋಡುತ್ತಾ ಮೌನ ವಾಗಿ ನಿಂತಳು.

"ನಿನಗೆ ಪ್ರೀತಿ ಒಬ್ಬನಲ್ಲಿ—ವ್ಯವಹಾರ ಒಬ್ಬರಲ್ಲಿ. ಮೊದಲು ನಿನ್ನ ಸ್ವಭಾವದ ಪರಿಚಯವಾಗದೆ ಮೋಸಹೋದೆ."

"ನಿಮ್ಮ ದಮ್ಮಯ್ಯ, ಅಂಥ ಮಾತನ್ನಾಡಿ ನನ್ನ ಕರುಳು ಕುಯ್ಯಬೇಡಿ. ನಿಮಗೆ ನಾನು ಬೇಡವಾದರೆ, ವಿಷ ಕೊಟ್ಟು ಸಾಯಿಸಿಬಿಡಿ, ನಾನು ಬೇಡ ವೆನ್ನುವುದಿಲ್ಲ. ಇಂಥಾ ಮಾತನ್ನು ಮಾತ್ರ ಸೈರಿಸಲಾರೆ."

ಗೋಪಿಯ ಎದೆ ಕರಗಲಿಲ್ಲ. ಕಣ್ಣಿನ ನಂಜು ಕಡಿಮೆಯಾಗಲಿಲ್ಲ.

ಅದಕ್ಕೆ ಬದಲು ಧ್ವನಿಯಲ್ಲಿ ಪುತ್ರನನ್ನು ಗಡುಸು ತುಂಬಿತು.

“ನೀನು ನೋಡಬಹುದು — ನಾನು ಆಡಬಾರದೊ ! ಪಿಶಾಚಿ— ತೊಲಗು ಆಚೆ ಇಲ್ಲಿಂದ ! ನಿನ್ನ ಮುಖ ತೋರಿಸಬೇಡ ನನಗೆ. ಇನ್ನೊಬ್ಬ ನಾಣಿಯ ಸಂಗಡ ಪಗಡೆಯಾಡಲು ಕೂತದ್ದನ್ನು ನೋಡಬೇಕಂತೆ — ಆಗ ನಿನಗೆ........ !” ಎಂದು ಕಟಕಟನೆ ಹಲ್ಲು ಕಚ್ಚಿದ.

ಶಾಂತ ಮರುಮಾತಾಡಲಿಲ್ಲ. ಆಡುವ ಮನಸ್ಸೂ ಆಗಲಿಲ್ಲ. ಬಂದ ದುಃಖವನ್ನು ಬಲಾತ್ಕಾರವಾಗಿ ಒಳಗೆ ತಳ್ಳಿ, ಕಣ್ಣು ಒರೆಸಿಕೊಳ್ಳುತ್ತಾ ಹಜಾರಕ್ಕೆ ಕಾಲೆಳೆದು ನಡೆದಳು. ಅವಳು ಕೋಣೆಯಿಂದ ಹೊರಬೀಳುವುದಕ್ಕೂ ಸೀತಾರಾಮು ಕೊಠಡಿಯ ಬಳಿ ಬರುವುದಕ್ಕೂ ಸಮನಾಯಿತು. ಅವನು ಅವಳನ್ನು ಕೆಕ್ಕರಿಸಿ ನೋಡಿದ ನೋಟ ಅಸಹ್ಯವಾಗಿ, ಹೆಚ್ಚು ಬೆಂಕಿಯಾಯಿತು. ಗಂಡನ ಸ್ವಭಾವವರಿತವಳು ತುಟಿ ಪಿಟಕ್ಕೆನ್ನದೆ ಸರ್ರನೆ ಅಲ್ಲಿಂದ ಜಾರಿದಳು.

ಸೀತಾರಾಮು ಬಂದಾಗ ಗೋಪಿ ಕಿತ್ತಳೆ ಹಣ್ಣು ಸುಲಿದು ತಿನ್ನುತ್ತಿದ್ದ. ತಿನ್ನಬೇಕೆನಿಸಿದುದನ್ನು ತಂದು ಯಾರಿಗೂ ಕೊಡದೆ ತಾನೇ ತಿನ್ನುವ ವಾಡಿಕೆಯಿತ್ತು ಅವನಿಗೆ. ಮೊದಲಿಂದಲೂ ಒಬ್ಬಂಟಿ ಸ್ವಭಾವ ಅವನದು. ಶಾಂತ ಬಂದ ಮೇಲೂ ಬದಲಾವಣೆಯಾಗಲಿಲ್ಲ. ತಿನ್ನುವ ಸಮಯದಲ್ಲಿ ಅವಳು ಎದುರಿಗಿದ್ದರೂ ಕೊಡಬೇಕೆನಿಸುತ್ತಿರಲಿಲ್ಲ. ಎಲ್ಲೋ ಒಮ್ಮೆ ಅಪರೂಪ ಅವನಿಂದ ಅವಳಿಗೆ ತಿಂಡಿ ತೀರ್ಥ ಸಿಗುತ್ತಿದ್ದುದು.

ಮೊದಮೊದಲು ಶಾಂತಳಿಗೆ ಅವನ ಈ ಪ್ರೇಮರಹಿತ ಅಸಭ್ಯ ನಡವಳಿಕೆ ಅಸಹ್ಯವಾಗಿ ಕಂಡರೂ ಕ್ರಮೇಣ ಅದನ್ನು ಒಗ್ಗಿಸಿಕೊಂಡು ಬಿಟ್ಟಳು. ಗೋಪಿಗೂ ತನ್ನ ನಡವಳಿಕೆ ತಪ್ಪೆನಿಸುತ್ತಿರಲಿಲ್ಲ. ಸ್ವಾಭಾವಿಕವಾಗಿ ಒರಟನಾದವನಿಗೆ ಕನಿಕರವೂ ಬರುತ್ತಿರಲಿಲ್ಲ, ನಾಚಿಕೆಯೂ ಆಗುತ್ತಿರಲಿಲ್ಲ.

ಈ ದಿನ ಮಾತ್ರ ಅವನಿಗೆ ಕರುಳು ಚುರುಕ್ಕೆನಿಸಿತು. ಹಣ್ಣು ಸುಲಿದುದು ಶಾಂತಳಿಗೆ ಕೊಡುವುದಕ್ಕೆಂದೇ. ಸುಳ್ಳೊ ಸತ್ಯವೊ ಸರಿಯಾಗಿ ಪರ್ಯಾಲೋಚಿಸದೆ ಗರ್ಭಿಣಿಯನ್ನು ನೋಯಿಸಿದೆನಲ್ಲಾ ಎನ್ನುವ ಮರುಕ ಅವನನ್ನು ತಲೆಯೆತ್ತಿ, ಔದಾರ್ಯದ ಕೊಡೆ ಬಿಚ್ಚಿ, ದುಃಖದ ಕಾವನ್ನು ಹೊತ್ತು ಹೊರಟಿದ್ದ ಶಾಂತಳನ್ನು ಕರೆಯುತ್ತಿಂದು ಒಂದು ಎರಡು ಹೆಜ್ಜೆ ಮುಂದಿರಿಸಿದ. ಆ ಕ್ಷಣ ಅವನಲ್ಲಡಗಿದ್ದ ಪೈಶಾಚಿಕತನ ಸಿಡಿದೆದ್ದು ಅರಚಿತು.

‘ ಸುಳ್ಳಲ್ಲ–ಸತ್ಯ ! ಅವಳು ಹೃದಯದಲ್ಲಿ ನಿನಗರಿಯದಂತೆ ನಾಣಿಗೆ ಎದೆಗೊಡುತ್ತಿದ್ದಾಳೆ. ಅವಳು ಹಾಗೇ ಸಾಯಲಿ, ನೀನು ತಿನ್ನು. ’

ಆ ಅಬ್ಬರಕ್ಕೆ ತಲೆಬಾಗಿ ಬಿಚ್ಚಿದ್ದ ಕೊಡೆ ಮುಚ್ಚಿ, ಯಥಾ ಪ್ರಕಾರ ಸ್ವಸ್ಥಾನದಲ್ಲಿ ಬಂದು ಕುಳಿತು ಸುಲಿದ ಹಣ್ಣನ್ನು ಬಕ ಬಕ ಬಾಯಿಗೆ ತುರುಕಿದ. ಉಳಿದೆರಡು ತೊಳೆಗೆ ಸೀತಾರಾಮು ಕೈನೀಡಿದಾಗಲೆ ಗೋಪಿಗೆ ಅವನು ಬಂದುದರ ಅರಿವಾದುದು. ಕೈಗೆ ಹಣ್ಣನ್ನಿಡುತ್ತಾ ಹೇಳಿದ,

"ಅದೇನು ಇಷ್ಟು ಹೊತ್ತಿನಲ್ಲಿ ಬಂದೆ?"

"ಹ್ಞ ! ಹೇಳುವೆನು ಸ್ವಲ್ಪ ತಡೆ" ಎಂದು ಮೆಲ್ಲನೆ ಬಾಗಿಲ ಬಳಿ ಹೋಗಿ, ಹುಡುಕುವ ಕಣ್ಣಿನಿಂದ ಸುತ್ತಲೂ ನೋಡಿ, ಬಾಗಿಲು ಹಾಕಿಕೊಂಡು ಬಂದು ಪಿಸು ಮಾತಿನಲ್ಲಿ ಹೇಳಿದ, "ನಮ್ಮ ಸಟ್ಟಾ ಆಟದ ವಿಷಯವನ್ನು ಭಟ್ಟರೂ ನಾಣಿ ಇಬ್ಬರೂ ಸೇರಿ ಪೋಲೀಸಿಗೆ ತಿಳಿಸಿದ್ದಾರೆ. ನಾಳೆ ರಾತ್ರೆ ಅಂಗಡಿ ಶೋಧಿಸಲು ಬರುವರೆಂದು ಗೊತ್ತಾಗಿದೆ. ನೀನು ಎಷ್ಟು ಕೆಲಸ ವಿದ್ದರೂ ಬಿಟ್ಟು ಅಂಗಡಿಗೆ ಬರಲೇ ಬೇಕು. ಅವರನ್ನು ಸಾಗ ಹಾಕಲು ನನ್ನೊಬ್ಬನಿಗೆ ಕಷ್ಟವಾಗುತ್ತೆ."

"ಇದನ್ನು ನಿನಗೆ ತಿಳಿಸಿದವರು ಯಾರು ?"

"ಕಾಳಾಚಾರಿ !"

"ಪೋಲೀಸಿನವರಲ್ಲಿ ರಹಸ್ಯವಾಗಿ ಮಾತಾಡಿದ ವಿಷಯ ಅವನಿಗೆ ಹೇಗೆ ತಿಳಿಯಿತು ?"

"ಅವನ ಭಾವ ಅದೇ ಸ್ಟೇಶನ್ನಿನಲ್ಲಿ ದಫೇದಾರನಾಗಿದ್ದಾನೆ. ಅವನಿಂದ ತಿಳಿಯಿತಂತೆ."

"ಹ್ಞಾ ಹ್ಞಾ ! ನಾಣಿ ಇಷ್ಟರ ವರೆಗೆ ಬಂದನೊ ! ಇರಲಿ ವಿಚಾರಿಸಿ ಕೊಳ್ಳುವೆನು. ನಾಳೆ ಎಷ್ಟು ಹೊತ್ತಿಗೆ ಬರಬೇಕು ?"

"ಆದಷ್ಟು ಬೇಗ ಬಂದು ಬಿಡು. ಇದಕ್ಕೆಲ್ಲ ಹೊತ್ತು–ಗೊತ್ತು ಕೊಡು ವುದು ಹೇಗೆ ? ನೆನೆಸಿದಾಗ ಬಂದುಬಿಡುವರು ಆ ರಾಕ್ಷಸರು."

"ಆಗಲಿ, ಬೇಗನೆ ಬರುವೆನು."

ಸ್ವಲ್ಪ ಹೊತ್ತು ಇಬ್ಬರೂ ಮೌನ ತಾಳಿದರು. ಗೋಪಿಯ ತಲೆಯಲ್ಲಿ ನಾಣಿಯ ವಿಷಯವಾಗಿ ಬಿರುಗಾಳಿ ಎದ್ದಿದ್ದರೆ, ಸೀತಾರಾಮುವಿನ ತಲೆಯಲ್ಲಿ

ತಾನು ಬಂದ ಉದ್ದೇಶವನ್ನು ತುಂಬಿಕೊಳ್ಳುವುದರ ಬಗ್ಗೆ ಹಂಚಿಕೆ ನಡೆಯುತಿತ್ತು. ಹಾದಿ ಹೋಗಿದು ಅವನೇ ಮಾತಿಗೆ ಮೊದಲಿಟ್ಟ,

“ಅಂದ ಹಾಗೆ ಒಂದು ಹೊಸ ವರ್ತಮಾನ ಕೇಳಿದೆ. ಹೇಳಿದರೆ ಕೋಪ ಮಾಡುವುದಿಲ್ಲ ತಾನೆ ?”

“ಸತ್ಯ ಸಂಗತಿಯಾದರೆ ಕೋಪವೇಕಯ್ಯ ಮಾಡಿಕೊಳ್ಳಬೇಕು ? ಹೇಳು, ಧೈರ್ಯವಾಗಿ ಹೇಳು !”

“ನಿಮ್ಮ ನಾಣಿ ವಿಷಯ ನಮ್ಮ ತಾಯಿ ಏನೋ ಅಂದಳು--ನಿಜವೆ ?”

ಆ ಮಾತು ಗೋಪ್ಪುವಿನ ಮರ್ಮವನ್ನಿರಿಯಿತು. ಅವನೆದುರಿಗೆ ತನ್ನ ದೌರ್ಬಲ್ಯವನ್ನು ತೋರಿಸಿಕೊಳ್ಳಲಾರದೆ ಮುಚ್ಚಿಟ್ಟು ಕೇಳಿದ,

“ಯಾವ ಮಾತು ? ಏನು ಕಥೆ ? ಸರಿಯಾಗಿ ಬಿಡಿಸಿ ಹೇಳು ಪುಣ್ಯಾತ್ಮ !”

“ಏನೊ, ನಿನ್ನ ಹೆಂಡತಿ ಹತ್ತಿರ ನಾಣಿ ಮೂರು ಹೊತ್ತೂ ಸರಸವಾಡುತ್ತಿರುತ್ತಾನಂತೆ !”

ಅದು ಹೌದೆಂದು ತನ್ನ ಮನಸ್ಸಿಗೆ ಗೊತ್ತಾಗಿದ್ದರೂ ಆ ವಿಷಯದ ಬಗ್ಗೆ ಸೀತಾರಾಮುವಿನ ಅಭಿಪ್ರಾಯ ತಿಳಿಯಲು ಹೇಳಿದ.

“ಅಷ್ಟೆ ತಾನೆ ! ಮನೆಯವರೊಡನೆ ಆಡಿದರೆ ತಪ್ಪೇನು ! ಅವನು ತನ್ನ ಅತ್ತಿಗೆಯನ್ನು ತಾಯಿ ಸಮಾನವೆಂದು ತಿಳಿದಿದ್ದಾನೆ. ಗಾಬರಿಗೆ ಏನೂ ಅವಕಾಶವಿಲ್ಲ.”

“ನಿನ್ನದು ಬರೀ ಎಳೀ ಬುರುಡೆ. ಬೆಳ್ಳಗಿರುವುದೆಲ್ಲ ಹಾಲೆಂದು ತಿಳಿಯುವುದೆ ನಿನ್ನ ಸ್ವಭಾವ. ನಾಣಿಯನ್ನು ನಂಬಬೇಡ. ನಿನ್ನ ತಮ್ಮನಾದರೂ ಅವನನ್ನು ನಿನಗಿಂತ ನಾನು ಚೆನ್ನಾಗಿ ತಿಳಿದಿದ್ದೇನೆ. ಮಹಾ ಕೊರಮ ಅವನು. ಯಾವ ನೀಚ ಕೆಲಸಕ್ಕಿಳಿಯಲೂ ಹೇಸುವುದಿಲ್ಲ–ಹುಷಾರಾಗಿರು!”

“ಇದ್ದರೂ ಇರಬಹುದು. ಯಾವ ಸಮಯದಲ್ಲಿ ಯಾರು ಹೇಗೆ ಆಗುತ್ತಾರೆನ್ನುವುದೆ ಕಷ್ಟ. ನನಗೂ ಯಾಕೊ ಈಗ ಸ್ವಲ್ಪ ದಿನದಿಂದ ಸಂಶಯ ಬಂದಿದೆ; ಅದು ಸುಳ್ಳಿರಬಹುದು. ಆದರೂ ಎಚ್ಚರಿಕೆ ವಹಿಸುವುದರಲ್ಲಿ ತಪ್ಪಿಲ್ಲ ಹುಡುಗಿ ಇನ್ನೂ ಚಿಕ್ಕವಳು. ನಿಗ ತಪ್ಪಿ ಅಪರಾಧವಾದರೆ ಮುಂದೆ ಎಲ್ಲರ ಬಾಳೂ ಹಾಳೆ !”

"ಅದು ಹೌದು. ಕೈಮಿಂಚಿ ಹೋಗುವುದಕ್ಕೆ ಮೊದಲೆ ಎಚ್ಚರಿಕೆ ತೆಗೆದು ಕೊಳ್ಳುವುದೊಳ್ಳೆಯದು."

"ಏನು ಮಾಡಬೇಕೆಂದೆ ನನಗೆ ಹೊಳೆಯುತ್ತಿಲ್ಲ"

"ಅದಕ್ಯಾಕಿಷ್ಟು ಯೋಚನೆ ! ನಾಣಿಯನ್ನು ಬೇರೆ ಮಾಡಿ ಬಿಡು; ಎಲ್ಲ ಸರಿ ಹೋಗುತ್ತೆ."

"ಹೌದು ಹೌದು, ಅದೇ ಸರಿಯಾದ ಶಿಕ್ಷೆ ಅವರಿಗೆ. ಒಬ್ಬರ ಮುಖ ಒಬ್ಬರು ನೋಡುವುದಕ್ಕೂ ಇಲ್ಲದೆ ಸಾಯಲಿ. ಹಾಗೇ ಮಾಡುವೆನು."

ಈ ಮಾತು ಸೀತಾರಾಮುವಿಗೆ ಬಹಳ ಹಿಡಿಸಿತು. ತಾನು ಬಂದ ಕೆಲಸವಾಯಿತೆಂದು ಮನಸ್ಸಿನಲ್ಲೆ ಹಿಗ್ಗಿದ. ಈ ದಿನ ಎರಡು ಉದ್ದೇಶಗಳನ್ನು ಹೊತ್ತು ಬಂದಿದ್ದ. ಒಂದು ಗೋಪಿ–ನಾಣಿಯರಲ್ಲಿ ವೈಷಮ್ಯ ತಂದುಹಾಕು ವುದು, ಮತ್ತೊಂದು ಗೋಪಿಯ ಹಣಕಾಸಿನ ವಿಷಯದಲ್ಲಿ ಸಂಪೂರ್ಣ ಸ್ವಾತಂತ್ರ್ಯ ವಹಿಸುವ ಅವಕಾಶ ಪಡೆಯಲು, ಇಬ್ಬರನ್ನೂ ಪಾಲಾಗುವಂತೆ ಮಾಡಿ ಬೇರೆ ಮಾಡುವುದು. ಗೋಪಿ ಮೊದಲೆ ನಾಣಿಯಲ್ಲಿ ಕಣ್ಣಿಟ್ಟಿದ್ದುದ ರಿಂದ ಸೀತಾರಾಮು ಬಿಟ್ಟ ಬಾಣ ಸರ್ರನೆ ಗುರಿ ಮುಟ್ಟಿತು. ಒಂದೇ ಏಟಿ ನಲ್ಲಿ ಎರಡು ಹಕ್ಕಿ ಹೊಡೆದಿದ್ದ. ತೃಪ್ತಿಯಾಗಿ ಸೀತಾರಾಮು ಮೇಲಕ್ಕೆದ್ದ.

ಥಟ್ಟನೆ ಏನೊ ನೆನಪಾಗಿ ಗೋಪಿ ಹೇಳಿದ,

"ನಿನಗೆ ಮತ್ತೊಂದು ವಿಷಯ ಹೇಳಲು ಮರೆತಿದ್ದೆ. ಈಗ ನಾಲ್ಕು ದಿನ ದಲ್ಲಿ ಇದ್ದಕ್ಕಿದ್ದಂತೆ ನಮ್ಮ ಮಾವ ಬಂದಿಳಿದರು. ಎರಡು ದಿನದ ವರೆಗೆ ಬಂದಿ ದ್ದೇಕೆಂದು ಗೊತ್ತೇ ಆಗಲಿಲ್ಲ. ಆಮೇಲೆ ಆ ಮಾತು, ಈ ಮಾತಾಡಿ ಸಟ್ಟಾ ವ್ಯಾಪಾರದ ವಿಷಯಕ್ಕೆ ಹೊರಳಿದರು. ನಾನು ಸಟ್ಟಾ ಆಡುವುದೂ ನಿನ್ನೊಡನೆ ಭಾಗೀದಾರನಾಗಿ ವ್ಯವಹಾರ ನಡೆಸುತ್ತಿರುವುದೂ ಎಲ್ಲ ಗೊತ್ತಿದೆ ಅವರಿಗೆ."

"ಏನೆಂದರು ?"

"ಅದು ಮನೆಹಾಳು ಕೆಲಸವೆಂದೂ ಅದಕ್ಕೆ ತಿಲಾಂಜಲಿಯಿತ್ತು, ಸಂಗಡ ನಿನ್ನ ಸ್ನೇಹವನ್ನು ಬಿಡಬೇಕೆಂದೂ ಗಂಟೆಗಟ್ಟಲೆ ಉಪದೇಶ ಮಾಡಿ ದರು. ತಾವು ಹೇಳಿದ್ದು ಸಾಲದೆ, ಶಾಂತಳಿಂದಲೂ ಹೇಳಿಸಿದರು. ಇವರದೂ

ಇವರ ಮಗಳದೂ ನಡವಳಿಕೆ ನೋಡಿದರೆ ಹೀಗೆ—ನನಗೆ ಬುದ್ಧಿ ಹೇಳಲು ಬರುತ್ತಾರೆ.”

“ನೀನೇನು ಉತ್ತರವಿತ್ತೆ ಅದಕ್ಕೆ ?”

“ನನ್ನ ಸ್ವಂತ ವಿಷಯದಲ್ಲಿ ಮತ್ತೊಬ್ಬರು ತಲೆ ಹಾಕುವುದು ನನಗಿಷ್ಟವಿಲ್ಲವೆಂದೂ, ಒಳ್ಳೆಯದು ಕೆಟ್ಟುದರ ಪರಿಜ್ಞಾನ ನನಗಿರುವುದೆಂದೂ, ನನಗಾಗಿಯೇ ಬೇಡವೆನಿಸಿದಾಗ ಬಿಡುವೆನೆಂದೂ ಕಟ್ಟುನಿಟ್ಟಾಗಿ ಉತ್ತರವಿತ್ತೆ.”

“ಭೇಷ್ ! ಒಳ್ಳೆಯದು ಮಾಡಿದೆ. ಅಂಥವರಿಗೆ ಹಾಗೇ ಮಾಡಬೇಕು. ಇದೆಲ್ಲಾ ಯಾರ ಚಿತಾವಣೆಯಿಂದ ಗೊತ್ತೇ ?”

“ಗೊತ್ತು ಗೊತ್ತು. ಎಲ್ಲ ಈ [illegible] ಗ್ರಹಗಳು ಸೇರಿಯೇ ಮಾಡುತ್ತಿರುವುದು. ಇರಲಿ; ಅವರಿಗೆ ಸಮಯದಲ್ಲಿ ಬುದ್ಧಿ ಕಲಿಸುವೆನು.”

ಕೈಗಡಿಯಾರ ನೋಡಿ ಕೇಳಿದ, “ನಾನಿನ್ನು ಬರಲೇ ?”

“ಹೌದು, ನೀನು ಹೊರಡು, ಹೊತ್ತಾಗಿದೆ” ಎಂದು ಬಾಗಿಲವರೆಗೂ ಹೋಗಿ ನೋಡಿ ಅವನನ್ನು ಕಳುಹಿಸಿ ಬಂದ.

## ೧೩

ಗೋಪಿಯ ನಿರ್ಜೀವ ಪುಸ್ತಕ್ಕೆ ಬಂದ ರಾಧೆ ತೌರಿನಲ್ಲಿಯೇ ಉಳಿದಳು. ಅವಳ ಯಜಮಾನರು ಡಾಕ್ಟರಾಗಿದ್ದರು. ಡಿ. ಪಿ. ಎಚ್. ಶಿಕ್ಷಣಕ್ಕಾಗಿ ಕಲ್ಕತ್ತೆಗೆ ಹೋಗಬೇಕಾದ ಪ್ರಸಂಗ ಒದಗಿ ಬಂತು. ಶಿಕ್ಷಣ ಮುಗಿಸಿ ಹಿಂತಿರುಗಿ ಬರುವವರೆಗೆ ರಾಧೆ ತೌರಿನಲ್ಲಿ ಇರಬೇಕೆಂದು ತಿಳಿಸಿ ಹೋಗಿದ್ದರು. ತನ್ನತ್ತೆಗೆ ಅಷ್ಟು ದಿನ ತೌರಿನಲ್ಲಿರುವುದು ಒಪ್ಪಿಗೆಯಿಲ್ಲದಿದ್ದರೂ ಗಂಡನ ಮಾತನ್ನು ಮೀರಲಾರದೆ ರಾಧೆ ತೌರಿನಲ್ಲಿ ತಳವೂರಿದಳು.

ಈಗವಳು ತುಂಬಿದ ಗರ್ಭಿಣಿ. ಅವಳೊಬ್ಬಳಿಗೇ ಭಯ–ಬೇಸರವಾಗುವುದೆಂದು ಶಾಂತಳೂ ಅವಳ ಜತೆ ಸೇರಿದ್ದಾಳೆ. ಅವಳಿಗೂ ಆರು ತಿಂಗಳು ತುಂಬಿ ಏಳನೆಯ ತಿಂಗಳು ಕಾಲಿಕ್ಕಿದೆ. ಇಬ್ಬರೂ ಚೊಚ್ಚಿಲು ಬಸುರಿಯರು.

ಬಂಪಕೆಯ ಮೇಲಾಟದಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಿದ್ದರು. ದಿನಕ್ಕೊಂದು ಬಗೆ ತಿಂಡಿ–ತಿನಸು ಮಾಡಿ ಹಾಕುವುದರಲ್ಲಿ ರಂಗಮ್ಮನೂ ಸೋತು ಹೋಗಿದ್ದರು.

ಈ ದಿನ ಕಾಫಿ ತಿಂಡಿಗೆ ಹವಣಿಸಿಕೊಂಡ ತಿಂಡಿಯಂತೂ ಮತ್ತೂ ರೇಜಿಗೆ. ಕಾಯಿ ಹೋಳಿಗೆಯೆಂದರೆ ಕೈತುಂಬ ಕೆಲಸ. ಸಹಾಯಕ್ಕೂ ಯಾರನ್ನೂ ಕರೆಯುವಂತಿಲ್ಲ. ಇದ್ದ ನಾಲ್ವರಲ್ಲಿ ಇಬ್ಬರು ಗರ್ಭಿಣಿಯರು, ಒಬ್ಬಳು ಸಣ್ಣ ಮಗುವಿನ ತಾಯಿ, ಮತ್ತೊಬ್ಬಳು ಅಷ್ಟಾಗಿ ಮಡಿ–ಮೈಲಿಗೆ ತಿಳಿಯದ ಹೊಸದಾಗಿ ಬಂದ ಸೊಸೆ. ಅಲ್ಲದೆ ಅವಳು ಶಾಂತಳಂತೆ ಕೆಲಸದಲ್ಲಿ ಗಟ್ಟಿಗಳೂ ಅಲ್ಲ. ಹಾಗಾಗಿ ಒಬ್ಬರೆ ಒದ್ದಾಡಿ ಮುಗಿಸಿದರು. ಹರದ ತೆಗೆಯುತ್ತಿರುವಾಗ ನೀರು ಕುಡಿಯಲೆಂದು ಬಂದ ರಾಧೆ, ಹೋಳಿಗೆ ಕಂಡು ಮುಖ ಸಿಂಡರಿಸಿ ಹೇಳಿದಳು,

"ಹೋಳಿಗೆ ಯಾಕಮ್ಮ ಮಾಡಿದೆ? ಅದರ ಬದಲು ಬಿಸಿಬೇಳೆಭಾತಾದರೂ ಮಾಡಿದ್ದರೆ?"

"ಅದನ್ನೂ ಮಾಡೋಣ. ಯಾಕೆ, ತಿನ್ನಬೇಕೆನಿಸಿದೆಯೇನು?"

"ಹೌದು, ಯಾಕೊ ಇಂದು ಬೆಳಗಿನಿಂದ ಅದನ್ನೇ ಬಯಸುತ್ತಿದೆ ಮನಸ್ಸು" ಎಂದು ಬಾಯಲ್ಲಿ ಊರಿದ ನೀರನ್ನು ಗುಟುಕರಿಸಿದಳು.

"ಆಗಲೆ ಹೇಳಿದ್ದರೆ ಅದನ್ನೆ ಮಾಡುತ್ತಿದ್ದೆನಲ್ಲ! ಈಗಲಾದರೇನು, ನಾಳೆ ತಿಂಡಿಗೆ ಬಿಸಿಬೇಳೆಭಾತನ್ನೆ ಮಾಡಿದರಾಯಿತು...." ಎಂದು ಸ್ವಲ್ಪ ಹೊತ್ತು ಮಗಳನ್ನೆ ದಿಟ್ಟಿಸಿ ನೋಡಿ "ಪರವಾಯಿಲ್ಲ, ಇನ್ನೂ ನಾಲ್ಕು ದಿನ ತಡೆಯಬಹುದು" ಎಂದು ಸಮಾಧಾನ ಹೊಂದಿದರು.

ಅವರಿಗೆ ಗರ್ಭಿಣಿಯರು ಬಯಸಿದ್ದನ್ನು ಮಾಡಿ ತಿನ್ನಿಸದಿದ್ದರೆ ಮನಸ್ಸಿಗೆ ನೆಮ್ಮದಿಯಿರುತ್ತಿರಲಿಲ್ಲ. ಅವರ ಜೀವನದ ಒಂದು ಅನುಭವ ಆ ವಿಷಯದಲ್ಲಿ ಯಾವಾಗಲೂ ಜಾಗ್ರತರಾಗಿರುವಂತೆ ಮಾಡುತಿತ್ತು.

ನಾಣಿಯ ಹೆರಿಗೆ ರಂಗಮ್ಮನ ಅತ್ತೆಯ ಮನೆಯಲ್ಲೆ ಆಯಿತು. ಅವನು ಗರ್ಭದಲ್ಲಿದ್ದಾಗ ದಿನಕ್ಕೊಂದೊಂದು ಬಗೆ ಬಯಸಿ ಸಾಕು ಮಾಡಿದ್ದ. ಗರ್ಭ ಧರಿಸಿದಾಗ ನಾಲಗೆ ಬಯಸಿದ್ದನ್ನು ತಿನ್ನದಿದ್ದರೆ, ಮಗುವಿಗೆ ಕೆಡುಕಾಗುತ್ತ

ದೆಂದು ಹಿರಿಯರು ಹೇಳುತ್ತಿದ್ದುದು ಅವರ ಮನಸ್ಸಿನಲ್ಲಿ ಅಚ್ಚೊತ್ತಿದಂತಿತ್ತು. ಆ ಮಾತಿನಲ್ಲಿ ಎಷ್ಟು ಸತ್ಯಾಂಶವಿದೆಯೆಂಬುದು ಅವರ ಅನುಭವಕ್ಕೆ ಇನ್ನೂ ಬಂದಿರಲಿಲ್ಲ. ಅವರೂ ಆ ಸಮಯದಲ್ಲಿ ಮಾತ್ರ ಬಯಕೆ ಸಂಕಟವಿರುವುದನ್ನು ಕಂಡು, ಹಿರಿಯರ ಮಾತಿನಲ್ಲಿ ಸತ್ಯಾಂಶವಿದ್ದರೂ ಇರಬಹುದೆಂಬ ನಿರ್ಧಾರಕ್ಕೆ ಬಂದಿದ್ದರು. ಹಾಗಾಗಿ ಮನಸ್ಸಿನಲ್ಲಿ ಏನೋ ಒಂದು ಬಗೆಯ ಭೀತಿ ಬಂದು ಹೊಕ್ಕಿತು.

ಬಂದ ಬಯಕೆಯನ್ನು ತುಂಬಿಕೊಂಡಿದ್ದರೆ ಮನಸ್ಸು ಸ್ವಲ್ಪ ಹಗುರವಾಗುತ್ತಿತ್ತು. ಅತ್ತೆಮನೆಯಲ್ಲಿದ್ದುದರಿಂದ ಅವಕಾಶವಾಗಲಿಲ್ಲ. ಭಯಸಂಕೋಚಕ್ಕೆ ಬಲಿಯಾಗಿ ನಾಲಗೆಯೊಡೆದಲ್ಲೆ ಬತ್ತಿಸಿದ್ದರು. ಅವರತ್ತೆಯಾದರೂ ಸೊಸೆಯ ಮನಸ್ಸನ್ನರಿತು ನಡೆಯಬಹುದಿತ್ತು. ಅವರೂ ಹಾಗೆ ಮಾಡಲಿಲ್ಲ. ತಮಗೆ ತೋರಿದ ಒಂದೆರಡು ಬಗೆ ತಿಂಡಿ--ತಿನಸು ಮಾಡಿ ಸುಮ್ಮನಾದರು.

ಅವರ ಮನೆಯ ವಾತಾವರಣಕ್ಕೆ ತಕ್ಕಂತೆ ಬಂದ ಬಯಕೆಯನ್ನು ಅದುಮಿ ಹಿಡಿದಿದ್ದರೂ ಬಾಳೆಕಾಯಿ ಜಿಲೇಬಿ ಅವರ ಸ್ಥೈರ್ಯವನ್ನು ಹಿಡಿದಲುಗಿಸಿ ಬಿಟ್ಟಿತ್ತು. ಕನಸು ಮನಸಿನಲ್ಲೂ ಅದರದೆ ಯೋಚನೆ. ತಿನ್ನಬೇಕೆಂಬ ಚಪಲ ಬಹಳವಾಯಿತು. ಚಪಲವನ್ನು ಬಗೆ ಹರಿಸಿಕೊಳ್ಳದಿದ್ದರೆ ಮಗುವಿಗೆಲ್ಲಿ ತೊಂದರೆಯಾಗುತ್ತದೊ ಎನ್ನುವ ಹೆದರಿಕೆ ಬೇರೆ. ಉಭಯ ಸಂಕಟಕ್ಕೆ ಸಿಕ್ಕಿ ಕಂಗಾಲಾದರು. ಕಡೆಗೆ ಧೈರ್ಯ ಮಾಡಿ ತಮ್ಮ ಪತಿದೇವರ ಸವಾರಿ ಚಿತ್ತೈಸಿದ ಮೇಲೆ ಬಯಕೆಯ ಭಂಡಾಟವನ್ನು ಬಣ್ಣಿಸಿ ಬಿಡಬೇಕೆಂದು ಗಟ್ಟಿ ಮಾಡಿಕೊಂಡರು.

ಅಂದು ರಂಗರಾಯರು ಎಂದಿಗಿಂತ ಸ್ವಲ್ಪ ತಡವಾಗೆ ಬಂದರು ಮನೆಗೆ. ಕಾದು ಕಾದು ಬೇಸತ್ತಿದ್ದ ರಂಗಮ್ಮ ಸ್ವಲ್ಪ ಸಿಡುಕಿನಿಂದಲೆ ನುಡಿದರು,

"ಎಲ್ಲ ಸಮಯವೂ ಒಂದೆ ನಿಮಗೆ. ಮನೆಗೆ ಬೇಗ ಬರಬೇಕೆನಿಸುವುದೂ ಇಲ್ಲ. ಏನಾದರೂ ಹೆಚ್ಚು ಕಡಿಮೆಯಾದರೆ ಕೇಳುವವರು ಯಾರಿದ್ದಾರೆ?"

"ದಿನವೂ ಬೇಗ ಬರುತ್ತಿರಲಿಲ್ಲವೆ? ಏನೊ ಒಂದು ದಿನ ತಡವಾದದ್ದಕ್ಕೆ ಇಷ್ಟು ಕೋಪ ಮಾಡಬೇಕೇನು? ನನಗೆ ಗೊತ್ತು, ನೀನು ಜಬ್ಬರಿಸುವೆಯೆಂದು! ಅದಕ್ಕೆ ತಿಪ್ಪಾಭಟ್ಟರಿಗೆ ಬರುವುದಿಲ್ಲವೆಂದು ಹೇಳಿದೆ; ಕೇಳದೆ

ಬಲವಂತ ಮಾಡಿ ಎಳೆದೊಯ್ದರು ಪಂಡಿತರ ಮನೆಗೆ. ನಾನೇನು ಮಾಡಲಿ ?"

"ಯಾಕೆ, ಭಟ್ಟರಿಗೆ ಮೈಯಲ್ಲಿ ಹುಷಾರಿಲ್ಲವೇನು ?"

"ಅವರಿಗಲ್ಲ, ಅವರ ನಾಲ್ಕನೆಯ ಮಗುವಿಗೆ ಕಿವಿ ಒಂದೆ ಸಮನೆ ಸೋರುತ್ತಿದೆ. ಯಾವ ಔಷಧಿಯಿಂದಲೂ ಗುಣವಾಗದೆ ಪಂಡಿತರಿಗೆ ಶರಣು ಹೋಗಿದ್ದಾರೆ."

"ಪಾಪ, ಯಾಕೆ ಹಾಗಾಯಿತಂತೆ ?"

"ಆ ಮಗು ಗರ್ಭವಲ್ಲಿದ್ದಾಗ ತಾಯಿ ಬಯಸಿದ್ದನ್ನು ಮಾಡದಿದ್ದುದರಿಂದ ಹಾಗಾಗಿದೆಯೆಂದು ಕಂಡವರೆಲ್ಲ ಹೇಳುತ್ತಾರಂತೆ. ಪಂಡಿತರೂ ಅದೇ ಅಭಿಪ್ರಾಯಪಿತ್ತರು. ಅವರು ಹಾಗೆ ಹೇಳಿದಂದಿನಿಂದ ನನಗೂ ಯಾಕೋ ಗಾಬರಿಯಾಗಿದೆ. ಸದ್ಯ ನೀನೇನಾದರೂ ಬಯಸಿಕೊಂಡಿದ್ದರೆ ಈಗಲೆ ಹೇಳಿಬಿಡು ಪುಣ್ಯಾತಗಿತ್ತಿ. ಆಮೇಲೆ ಮಗುವಿಗೆ ಕಿವಿಸೋರಿ ರಂಪ ಆಗುವುದು ಬೇಡ."

ರಂಗಮ್ಮನ ಬಯಕೆಗೆ ತಕ್ಕಂತೆ ಆ ಮಾತು ಸಂದರ್ಭಕ್ಕೆ ಸರಿಯಾಗಿ ಯಜಮಾನರ ಬಾಯಿಂದಲೆ ಬಂದದ್ದು ಅವರಿಗೆಷ್ಟೋ ಸಮಾಧಾನ ತಂದಿತ್ತು. ಹುಸಿನಗುತ್ತಾ ಹೇಳಿದರು,

"ನಾನೆ ಹೇಳಬೇಕೆಂದಿದ್ದ ಮಾತನ್ನು ನೀವೇ ಕೇಳಿದ್ದೀರಿ. ನಿಜವಾದ ಪ್ರೀತಿಗೆ ಅಂತರ್ಯವನ್ನರಿಯುವ ಶಕ್ತಿಯಿದೆಯೆಂದು ಹಿರಿಯರು ಹೇಳುವುದು ಸುಳ್ಳಲ್ಲ."

"ಸಂದರ್ಭಕ್ಕೆ ತಕ್ಕಂತೆ ಮಾತು ಹೆಣೆದು ಉಬ್ಬಿಸಿ ಕೆಲಸ ತೆಗೆದುಕೊಳ್ಳುವುದರಲ್ಲಿ ನಿನ್ನನ್ನು ಬಿಟ್ಟರಿಲ್ಲ. ಕೊಂಕಣ ಸುತ್ತಿ ಮೈಲಾರಕ್ಕೆ ಬರುವುದು ಬೇಡ. ನೀನು ಮಾತು ಶುರು ಮಾಡಿದ ಧಾಟಿಯಲ್ಲಿ ನಾನರಿತೆ, ನಿನಗೂ ಯಾವುದೊ ಬಯಕೆಯ ಭೂತ ಬೆನ್ನು ಬಿದ್ದಿದೆಯೆಂದು. ಹೇಳಿಬಿಡು, ಚಿಂತೆಯಿಲ್ಲ." ತುಟಿಯಲ್ಲಿ ತಿಳಿನಗೆ ತೇಲಿಸುತ್ತಾ ಹೇಳಿದರು.

"ಏನು ಮಾಡಲಿ, ಅತ್ತೆಗೆ ತೊಂದರೆಯಾಗಬಾರದೆಂದು ಇದುವರೆಗೆ ತಡೆದೆ. ಈಗ ನೊಳೆತಿರುವ ಬಯಕೆ ಮನಸ್ಸನ್ನು ಕಲಕಿಬಿಟ್ಟಿದೆ. ತಿನ್ನಾ

ಭಟ್ಟರ ಮಗುವಿನ ಕಥೆ ಕೇಳಿದ ಮೇಲಂತೂ ತುಂಬಾ ಗಾಬರಿಯಾಗಿ ಹೋಗಿವೆ. ಇನ್ನು ಹೇಳದಿದ್ದರೆ ವಿಧಿಯೆ ಇಲ್ಲ."

"ಅಂತೂ ಯಾವುದಾದರೂ ಒಂದು ನೆವದಿಂದ ರಸಕವಳ ಹೊಡೆದು ಬಿಟ್ಟರೆ ಸರಿ ! ಹೇಳಿ ಬಿಡು, ನಿನ್ನಿಂದ ನಾನೂ ಸ್ವಲ್ಪ ಬಾಯಿ ಚಪ್ಪರಿಸಿ ಬಿಡು ವೆನು."

"ಹೌದು, ನೀವೂ ತಿನ್ನಲೆ ಬೇಕು. ಬಾಳೆಕಾಯಿ ಜಿಲೇಬಿ ಬಹಳ ರುಚಿ. ಇದರಿಂದ ಎರಡು ತೃಪ್ತಿ ನನಗೆ—ನನ್ನ ಬಯಕೆ ತೀರಿಸ್ಕೊಂಡು, ನಿಮಗೆ ಹೊಸ ತಿಂಡಿ ತಿನ್ನಿಸಿದ್ದೊಂದು !"

"ಆಯಿತು—ನಾಳೆಯೆ ಮಾಡಿಸೋಣ. ಏಳು ಊಟಕ್ಕೆ ಹೋಗೋಣ. ಅಮ್ಮ ಕಾದಿದ್ದಾಳೆ." ಎಂದು ರಂಗರಾಯರು ಮಡಿಪಂಚೆ ಹೆಗಲ ಮೇಲೆ ಹೊದ್ದು ನೀರುಮನೆಗೆ ನಡೆದರು. ರಂಗಮ್ಮ ಅಡಿಗೆಮನೆಗೆ ಬಂದರು.

ರಂಗಮ್ಮ ತುಂಬಿದ ಗರ್ಭಿಣಿಯಾದ್ದರಿಂದ ಒಂದು ದಿನವೂ ತಡವಾಗ ಲಿಲ್ಲ. ಮಾರನೆ ದಿನವೆ ಬಾಳೆಕಾಯಿ ಜಿಲೇಬಿಗೆ ಹವಣಿಸಿಕೊಂಡರು. ಸಾಡು ವ್ವಹೊಂದು ಬಾರಿ. ಆ ವೇಳೆಗೆ ರಂಗಮ್ಮನಿಗೆ ನೋವು ತಲೆದೋರಿತು. ಅವ ರತ್ತೆ ಆತುರದಿಂದ ಒಂದು ಒಬ್ಬೆ ಬೇಯಿಸುವುದರಲ್ಲಿ ಹದೇರ ಬಿಟ್ಟರು. ತಿಪ್ಪಾಭಟ್ಟರ ಮಗುವಿನ ನೆನಪಾಗಿ ದಂಪತಿಗಳ ಮನಸ್ಸಿನಲ್ಲಿ ಗಾಬರಿ ಉಂಟು ಹೋಯಿತು. ಅವರೇನೇಕೆ ತಪ್ಪಾಗಲಿಲ್ಲ. ನಾಣಿಗೆ ಇಪ್ಪತ್ತು ವರ್ಷ ತುಂಬುವ ವರೆಗೆ ಕಿಸಿ ನೋಡುತ್ತಲೆ ಇತ್ತು. ಎಡೆಬಿಡದ ಔಷಧಿ, ಹರಕೆಯಿಂದು ಅಂತೂ ಇಂತೂ ಸಾಕಿಮಾಡಿಕೊಂಡರು.

ಇಪ್ಪತ್ತೆಂಟು ವರ್ಷಗಳ ಹಿಂದಿನ ನೆನಪು ಬಿಸಿಬೇಳೆ ಭಾತಿನೊಡನೆ ಮರು ಕಳಿಸಿತು. ಆ ನೆನಪು ಬಂದೆ ಮಗಳನ್ನು ಹಾಗೆ ನೋಡಿದ್ದು: ಮುಖದ ಕಾಂತಿ ಸ್ವಲ್ಪ ಮಾದರಿಯನ್ನು ಅಳೆದು, ಇನ್ನೂ ನಾಲ್ಕು ದಿನ ತಡೆಯಬಹುದೆಂಬ ನೆಮ್ಮದಿ ತಂದುಕೊಂಡದ್ದು. ನೀರು ಕುಡಿದು ಹೊರಟಿದ್ದ ರಾಘುವನ್ನು ಕೇಳಿ ದರು,

"ಗಂಟೆ ಆಗಲೆ ಐದಾಯಿತೆಂದು ಕಾಣುತ್ತೆ. ಇನ್ನೂ ಒಬ್ಬರೂ ಬರ ಲಿಲ್ಲ ಕಾಣ ?"

"ಈವರೆಗೆ ಯಾರೂ ಬಂದಂತೆ ಕಾಣಲಿಲ್ಲ."

"ಒಬ್ಬಟ್ಟೆಂದರೆ ಭಟ್ಟರು ಬಾಯಿ ಬಾಯಿ ಬಿಡುವರಲ್ಲಾ ಎಂದು ಹೇಳಿ ಕಳುಹಿದರೆ, ಇನ್ನೂ ಬರುವುದರಲ್ಲಿದ್ದಾರೆ. ಹೋಗಲಿ, ನೀವು ನಾಲ್ವರು ತಿಂದುಬಿಡಿ. ಎಷ್ಟು ಹೊತ್ತೆಂದು ಕಾಯುವುದು! ಅವರನ್ನೆಲ್ಲ ಕೂಗು" ಎಂದು ನಾಲ್ವರಿಗೂ ಹೋಳಿಗೆ–ತುಪ್ಪವನ್ನು ತಟ್ಟೆಯಲ್ಲಿ ಹಾಕಿಸಿದರು. ರಾಧೆ ಹೋಗಿ ಎಲ್ಲರನ್ನೂ ಕರೆತಂದಳು. ಸೊಸೆಯರು 'ಅವರೆಲ್ಲ ಬರಲಿ' ಯೆಂದು ಹೇಳಿದರೂ ಕೇಳದೆ ಒತ್ತಾಯವಾಗಿ ತಿನ್ನಲು ಕೂರಿಸಿದರು.

ರಂಗಮ್ಮನ ಸ್ವಭಾವ ಬಹಳ ಮೃದು. ಅವರಿಗೆ ಯಾರೂ ನೋಯ ಬಾರದು. ಸಾಮಾನ್ಯವಾಗಿ ಹೆಣ್ಣುಮಕ್ಕಳು-ಸೊಸೆಯರನ್ನು ಊಟ ತಿಂಡಿಹೊತ್ತಿನಲ್ಲಿ ಕಾಯಿಸುತ್ತಿರಲಿಲ್ಲ. ಪ್ರತಿದಿನವೂ ಊಟತಿಂಡಿಗೆ ನಾಣಿ-ಗೋಪಿ ಬರುವುದು ಅನಾಲಿದಲ್ಲಿ. ಮನೆಯಲ್ಲಿ ತಿಂದು ಹೋಗದ್ದರೂ ಹೋಟೆಲಿನಲ್ಲಿ ತಿನ್ನುವ ಪದ್ಧತಿ ಇಬ್ಬರಿಗೂ ಇತ್ತು; ಅವರಿಗಾಗಿ ಹೊತ್ತು–ಹೆತ್ತು ಮಾಡುವ ಹೆಣ್ಣುಮಕ್ಕಳ ಕರುಳನ್ನು ಒಣಗಿಸಲು ಮನಸ್ಸಾಗದೆ, ಸಕಾಲದ ವರೆಗೆ ಕಾದು ನೋಡಿ, ಬರದಿದ್ದರೆ ಬಡಿಸಿಬಿಡುತ್ತಿದ್ದರು. ಅದರಂತೆ ಇಂದೂ ಮಾಡಿದರು.

ಅಂದು ಮಾಡಿದ ಹೋಳಿಗೆ ಬಹಳ ರುಚಿಯಾಗಿತ್ತು. ಕೀಟಲೆ ಸ್ವಭಾವದ ರಾಧೆ ತಾಯಿಗೆ ಚುಚ್ಚಿ ನುಡಿದಳು.

"ಅಮ್ಮನಿಗೆ ಶಾಂತಕ್ಕನ ಮೇಲಿರುವ ಪ್ರೀತಿಯನ್ನಿದು ತೋರಿಸುತ್ತಿದೆ, ಇಂದಿನ ತಿಂಡಿ."

ಶಾಂತಳ ತುಟಿಯ ಮೇಲೆ ಮಂದಹಾಸ ನಲಿಯಿತು. ಶಕುಂತಳೆ ರಾಧೆಯ ಮಾತಿಗೆ ಪ್ರತಿಯಿಟ್ಟು ಹೇಳಿದಳು.

"ನೀ ಹೇಳುವುದೇನು? ಎಲ್ಲರಿಗೂ ಗೊತ್ತಿದ್ದದ್ದೇ ಅದು. ಶಾಂತಳೊಬ್ಬಳನ್ನೇ ಅಲ್ಲ, ಸರಸುವನ್ನೂ ಅಷ್ಟೇ ಪ್ರೀತಿಸುವರು ಅಮ್ಮ. ಒಟ್ಟಿನಲ್ಲಿ ಸೊಸೆಯರೆಂದರೆ ಹೆಣ್ಣುಮಕ್ಕಳಿಗಿಂತ ಹೆಚ್ಚು ತೂಕ ಪ್ರೀತಿ ಹೆಚ್ಚು."

ಸರಸು ಮಾತಿನವಳು. ಸುಮ್ಮನೆ ಕೂತಿರುವುದು ಅವಳಿಂದಾಗಲಿಲ್ಲ. ಅತ್ತೆಯನ್ನು ಹೊತ್ತು ಮಾತಾಡಿದಳು.

"ಏನಿಲ್ಲ, ಅತ್ತೆಗೆ ಎಲ್ಲರೂ ಒಂದೆ. ಒಟ್ಟಿನಲ್ಲಿ ಅವರು ಹೆಣ್ಣುಮಕ್ಕಳನ್ನು ನೋಯಿಸುವುದಿಲ್ಲ, ಅವರು ಯಾರೇ ಆಗಲಿ!"

ಅವರಿಗೆ ಮಕ್ಕಳು ಸೊಸೆಯರ ವಾದ ಕೇಳಿ ಹಿಗ್ಗಿದ್ದ ರಂಗಮ್ಮ ಅಂದರು,

"ಹೌದಮ್ಮ, ನನಗೆಲ್ಲರು ಒಂದೆ. ನೀವಾದರೇನು ಹೆಚ್ಚಲ್ಲ, ಅವರಾದರೇನು ಕಡಿಮೆಯಲ್ಲ. ಈಗ ಆ ಮಾತು ಬಂದದ್ದೇಕೆಂದು ಗೊತ್ತಾಯಿತು. ಶಾಂತ ಇನ್ನೈದಾರು ದಿನಗಳಲ್ಲಿ ಹೊರಟು ಹೋಗುವಳಲ್ಲಾ ಎಂದು ಹೋಳಿಗೆ ಮಾಡಿದೆ. ರಾಧೆಗೆ ದಿನವಾಗಿರುವುದರಿಂದ ನಾಳೆ ಅವಳ ಬಯಕೆ ಪೂರೈಸಿ ಬಿಡುವೆನು. ಆಮೇಲೆ ನಿಮ್ಮಿಬ್ಬರ ಸರದಿ."

ರಾಧೆ–ಶಕುಂತಳ ಇಬ್ಬರೂ ತಾಯಿಯಲ್ಲಿ ತಪ್ಪೆಣಿಸಿ ಆಡಿದ ಮಾತಿಗಾಗಿ ನೊಂದರು. ಸರಸು–ಶಾಂತ ಇಬ್ಬರೂ ಅತ್ತೆಯ ಕಾಲಜ್ಞಾನ, ಕೆಲಸದ ಕ್ರಮ, ತುಂಬು ಮಮತೆಗಳಿಗೆ ಬೆರಗಾದರು. ಎಲ್ಲರ ಮಾತನ್ನೂ ಅರಗಿಸಿಕೊಂಡು ಸುಮ್ಮನೆ ಕೂತಿದ್ದ ಶಾಂತ ಅಂದಳು,

"ನಿಮ್ಮನ್ನು ಬಿಟ್ಟು ಹೋಗಬೇಕಲ್ಲಾ, ಎನ್ನಿಸಿದೆ ಅಮ್ಮ! ನಿಜವಾಗಿ ನೀವು ತಾಯಿಗಿಂತ ಹೆಚ್ಚು ಒಗ್ಗಿಹೋಗಿರುವಿರಿ."

ರಂಗಮ್ಮ ಹಿಗ್ಗಿನಿಂದ ಉಬ್ಬಿ ಹೇಳಿದರು,

"ನೀನೂ ಹಾಗೆ, ಮಗಳಿಗಿಂತ ಹೆಚ್ಚು ಒಗ್ಗಿ ಹೋಗಿದ್ದಿ. ನಿನ್ನನ್ನು ಬಿಟ್ಟಿರಲು ನನಗೂ ಆಗುವುದಿಲ್ಲ. ಏನು ಮಾಡುವುದು? ಚೊಚ್ಚಿಲ ಬಸುರಿ. ಕಳಿಸದಿದ್ದರೆ ವಿಧಿಯಿಲ್ಲ." ಎಂದು ಹೊರಬಾಗಿಲಿಗೆ ಹೋಗಿ, ಮಕ್ಕಳು ಭಟ್ಟರು ಯಾರಾದರೂ ಬರುತ್ತಿದ್ದಾರೇನೊ ಎಂದು ಬಗ್ಗಿ ನೋಡಿದರು.

ಅವರೆಣಿಕೆ ಸರಿಯಿತ್ತು. ನಾಲ್ಕು ಮಾರು ದೂರದಲ್ಲಿ ಭಟ್ಟರು, ನಾಣಿ ಇಬ್ಬರೂ ಬೀಸುಗಾಲು ಹಾಕಿ ಬರುತ್ತಿದ್ದರು. ಅವರನ್ನು ಕಂಡವರೆ ಒಳಗೆ ಬಂದು ಸರಸುವಿನೊಡನೆ ನೆಲ ಸಾರಿಸಲು ಹೇಳಿ, ತಟ್ಟೆ ಬಟ್ಟಲನ್ನು ಅಣಿಮಾಡಿ ಇರಿಸಿಕೊಂಡರು. ಆ ವೇಳೆಗೆ ಇಬ್ಬರೂ ಕೈಕಾಲು ಕೊಡವುತ್ತಾ ಹಜಾರಕ್ಕೆ ಬಂದರು. ಇಬ್ಬರ ಮುಖದಲ್ಲೂ ಗೆಲುವಿರಲಿಲ್ಲ. ಯಾವುದೊ ಚಿಂತೆಯಿಂದ ಕಂತಿದಂತಿತ್ತು ಕಣ್ಣು. ರಂಗಮ್ಮ ಹೆದರಿದರು. ವಿಷಯ ತಿಳಿಯುವ ಆತುರದಿಂದ ತಾನೆ ಮಾತಿಗೆ ಮೊದಲಿಟ್ಟರು,

"ಏಳಿ, ಕೈಕಾಲು ತೊಳೆದುಕೊಳ್ಳಿ. ಯಾಕಿಷ್ಟು ಹೊತ್ತು ಮಾಡಿದಿರಿ? ನಿಮ್ಮನ್ನು ಕಾದು ಸಾಕಾಗಿ ಈಗ ತಾನೆ ಅವರಿಗೆ ಕೊಟ್ಟೆ."

"ಒಳ್ಳೆಯದು ಮಾಡಿದಿರಿ. ಯಾವ ಆತಂಕವೂ ಇಲ್ಲದೆ ಅವರು ಸುಖವಾಗಿ ತಿಂದದ್ದೆ ಒಳ್ಳೆಯದಾಯಿತು. ನಾವು ಬಂದ ನಂತರ ಕೊಟ್ಟಿದ್ದರೆ ಗಂಟಲಿನಲ್ಲಿ ಒಂದು ತುತ್ತೂ ಇಳಿಯುತಿತ್ತೋ ಇಲ್ಲವೊ! "

ಬಿಚ್ಚಿದ್ದ ಕೋಟನ್ನು ಸ್ಟ್ಯಾಂಡಿನಲ್ಲಿರಿಸಿ ಬರುತ್ತಾ ನಾಣಿ ಹೇಳಿದ,

"ತಿಂಡಿ-ತೀರ್ಥ ಯಾರಿಗೆ ಬೇಕಾಗಿದೆ ? ದಿನ ಬೆಳಗಾದರೆ ಒಂದೊಂದು ಗಂಡಾಂತರ ಎದುರಿಸಬೇಕು, ಈ ಮನೆಯಲ್ಲಿ. ಮನೆಗೆ ಬರಬೇಕೆನಿಸುವುದೇ ಇಲ್ಲ !"

ಇಬ್ಬರ ಮಾತೂ ಒಗಟಾಗಿತ್ತು. ಗಾಬರಿಯೊಡನೆ ಕೋಪವೂ ಸೇರಿತು. ಸ್ವಲ್ಪ ಗಡುಸಾಗಿಯೇ ಹೇಳಿದರು ರಂಗಮ್ಮ,

"ಇಬ್ಬರೂ ಒಳ್ಳೇ ಒಗಟಿನ ಹಾಗೆ ಮಾತಾಡುವಿರಲ್ಲಾ ! ಅದೇನು ಬಿಡಿಸಿ ಹೇಳಬಾರದೆ ! ನನಗಂತು ಇಂಥ ದಿನ ಎದುರಿಸಿ ಸಾಕಾಗಿ ಹೋಗಿದೆ."

ಭಟ್ಟರು ನಾಣಿಯ ಮುಖ ನೋಡಿದರು. ಅವರ ಇಂಗಿತವನ್ನರಿತು ನಾಣಿ ಮಾತು ಮುಂದುವರಿಸಿದ,

"ಜವಳಿಗಾಗಿ ಬ್ಯಾಂಕಿನಲ್ಲಿರಿಸಿದ್ದ ಹಣವೆಲ್ಲಾ ಸಟ್ಟಾ ಪಾಲಾಯಿತು. ಒಂದಲ್ಲ, ಎರಡಲ್ಲ; ನಾಲ್ಕು ಸಾವಿರ. ಹೊಟ್ಟೆ ಉರಿದು ಹೋಗುತ್ತೆ. ಹೀಗೆ ಹಾಳು ಮಾಡಲು ನಿಂತರೆ ಮನೆ ಉಳಿಯುತ್ತದೆಯೆ ?"

"ಬ್ಯಾಂಕಿನಲ್ಲಿರಿಸಿದ್ದ ಹಣವನ್ನು ನಿನಗೆ ತಿಳಿಸದೆ ಹ್ಯಾಗೆ ತೆಗೆದುಕೊಂಡ ಅವನು ? ಹಿಂದೆ ಹಾಕಿದ ಹಣವೆಲ್ಲ ಏನಾಯಿತಂತೆ ?"

"ಏನಾಯಿತೊ ಹ್ಯಾಗೆ ತೆಗೆದುಕೊಂಡನೊ, ಅವನನ್ನೆ ಕರೆಸಿ ಕೇಳು."

"ಕೇಳಿದ ಮಾತಿಗೆ ತಕ್ಕ ಉತ್ತರ ಕೊಡುವ ಯೋಗ್ಯತೆ ಅವನಿಗಿದ್ದಿದ್ದರೆ ಇಷ್ಟೇಕೆ ಕಷ್ಟವಿರುತ್ತಿತ್ತೊ ? ಒಟ್ಟಿನಲ್ಲಿ ನನ್ನ ವಿಧಿ ಚೆನ್ನಾಗಿಲ್ಲ. ಒಬ್ಬ ಮಗ ಹಾಗಾದರೆ, ಒಬ್ಬ ಮಗ ಹೀಗೆ. ಮಕ್ಕಳಿಂದ ಸುಖಪಡುವುದನ್ನು ನಾನು ಕೇಳಿಯೆ ಬರಲಿಲ್ಲವೆಂದು ಕಾಣುತ್ತೆ."

ಭಟ್ಟರಿಗೆ ನೋವಾಗಿ ಹೇಳಿದರು,

"ವಿವರವಾಗಿ ಎಲ್ಲ ತಿಳಿಸಿಬಿಡು ನಾಣಿ, ಗೋಪಿ ಮಾಡಿದ ತಪ್ಪಿಗೆ ಅವರ ಮೇಲೆ ಯಾಕೆ ಸಿಡಿಸಿಡಿಯೆನ್ನುತ್ತಿ ! ಪಾಪ, ಆ ಪ್ರಾಣಿ ನಿಮಗಾಗಿ

ಕಷ್ಟ ಪಡುತ್ತಿರುವುದನ್ನು ನೋಡಿದರೆ. ಹೊಟ್ಟೆ ಸುಟ್ಟು ಹೋಗುತ್ತೆ."

ನಾಣಿಯ ಕರುಳು ಚುರಕ್ಕೆನಿಸಿತು. ಕಣ್ಣು ಕರಗಿ ನೀರಾಡಿತು. ಬಂದ ನೀರನ್ನು ಬೆರಳಿನಿಂದ ಸೆಳೆದು ಸಿಡಿಸುತ್ತಾ ಹೇಳಿದನು.

"ನಿನ್ನ ಮೇಲೆ ನನಗೆ ಕೋಪವಿಲ್ಲಮ್ಮ. ಅಣ್ಣ ಹೀಗೆ ಮಾಡುವನಲ್ಲಾ ಎಂದು ಮನಸ್ಸು ಜಿಡುಕಾಗಿ ಹಾಗೆ ಮಾತಾಡಿದೆ. ಅವನ ವ್ಯವಹಾರ ನೆನೆಸಿ ಕೊಂಡರೆ ಮೈ ಬೆಂಕಿಯಾಗುತ್ತೆ. ಒಂದು ವಾರವಾಯಿತು–ಅವರ ಮೊದಲಿನ ಸಟ್ಟಾ ಅಂಗಡಿ ದಿವಾಳಿಯಾಗಿ ಪೀಡೆ ತೊಲಗಿತೆಂದಿದ್ದೆ. ನೆನ್ನೆಯಿಂದ ಪುನಃ ಪ್ರಾರಂಭಿಸಿದ್ದಾರೆ. ಹಿಂದೆ ಹಾಕಿದ ಮೂರು ಸಾವಿರ ದಿಕ್ಕುದಿವಾಣಿಯಿಲ್ಲದೆ ಪಸ್ಟ ಆಯಿತು. ಈಗ ಹಾಕಿದ ಹಣವೂ ಅದೇ ದಾರಿ ಹಿಡಿಯುವುದರಲ್ಲಿ ಸಂದೇಹವಿಲ್ಲ. ನಿಯತ್ತಿರುವವರ ಸಂಗಡವಾದರೂ ವ್ಯವಹರಿಸಿದ್ದರೆ ಅದ ಕ್ಕೊಂದು ಬೆಲೆಯಿರುತಿತ್ತು; ದುಡ್ಡಿಗೂ ಮೋಸವಿರಲಿಲ್ಲ. ಸೀತಾರಾಮು ಮಹಾ ನೀಚ. ಅವನೊಡನೆ ಸೇರಿದವರೆಲ್ಲಾ ಮಣ್ಣು ಮುಕ್ಕಿದ್ದಾರೆ. ಅಂಥ ವನ ಸಹವಾಸ ಮಾಡಿ ತಾನೂ ಹಾಳಾಗುವುದಲ್ಲದೆ ನಮ್ಮನ್ನೂ ಗುಂಡಿಗೆ ಹಾಕುವನಲ್ಲಾ ಎನ್ನುವುದೊಂದೆ ಚಿಂತೆ."

ಇಷ್ಟೆಲ್ಲ ಕೈಸೋತ ಮೇಲೂ ಗೋಪಿಗೆ ಬುದ್ಧಿ ಬರಲಿಲ್ಲವೆಂದರೆ ಪೂರ್ವಾ ರ್ಜಿತ ಕರ್ಮವೆ ಸರಿ. ಸಟ್ಟಾ ಅದೃಷ್ಟದ ಆಟ. ಎಲ್ಲರಿಗೂ ಹೇಳಿಸಿದ್ದಲ್ಲ. ಆದು ಆಗಿ ಬಂದವರು, ಮಾಹಿತಿ ಗೊತ್ತಿದ್ದವರೆ ಆಡಬೇಕು. ಆ ಸುಡು ಗಾಡು ವ್ಯವಹಾರಕ್ಕೆ ಇವನ್ಯಾಕೆ ಕೈಹಚ್ಚಿದನೊ ಏನೊ! ಹೋಗಲಿ, ಒರಿ ಯರ ಮಾತಿಗಾದರೂ ಬೆಲೆ ಕೊಡುವನೆ? ಅದೂ ಇಲ್ಲ! ಏನೊ ಇವನಿಗೆ ಕೇಡುಗಾಲ ಕಾದಿರಬೇಕು."

ಸ್ವಲ್ಪ ಹೊತ್ತು ಮೌನ ಎಲ್ಲರ ಮೇಲೂ ಮುಸುಕೆಳೆಯಿತು. ಉಸಿರು ಕಟ್ಟಿದಂತಾಗಿ ರಂಗಮ್ಮನೆ ಮಾತು ಮುಂದುವರಿಸಿದರು,

"ಸೀತಾರಾಮು ಏನು ಮಾಡಿದ ದುಡ್ಡಿಗೆ?"

"ಅಣ್ಣನಿಗೆ ನಾಮಹಾಕಿ ಅದೇ ಹಣವನ್ನು ತಾನು ಉಪಯೋಗಿಸಿದ."

"ಅದು ಹೇಗೆ?"

"ಅಣ್ಣ ಹಾಕಿದ್ದ ಹಣವೆಲ್ಲಾ ಗುಪ್ತವಾಗಿ ಅವನಿಗೇ ಹೋಗಿ ಸೇರುತ್ತಿದೆ. ಅವನು ಎಲ್ಲರಂತೆ ಸಟ್ಟಾ ಆಡಿಸುವುದಿಲ್ಲ. ಅವನೊಡನೆ ಸಟ್ಟಾ ಆಡಲು

ಹೋಗುವವರು ರೈತರು, ಕೂಲಿಗಾರರೆ ಆಗಬೇಕು; ಓದು–ಬರಹ ಬಂದವರನ್ನು ಹತ್ತಿರ ಸಹ ಸೇರಿಸುವುದಿಲ್ಲ. ಅವರು ಅವರಿವರನ್ನು ಕೇಳಿ ಆಡುವವರು, ಸ್ವಂತ ಬುದ್ಧಿಯಿಂದ ಆಡುವವರಲ್ಲ. ಬಂದರೆ ಬಂತು, ಹೋದರೆ ಹೋಯಿತು, ಎರಡಕ್ಕೂ ಸಿದ್ಧರಾಗಿ ಆಡುವರು ಆ ಜನ! ಅವರಿಂದ ಲಾಭವೆ ಹೊರತು ನಷ್ಟವೆಂದಿಗೂ ಇಲ್ಲ. ಒಂದು ವೇಳೆ ಅವರು ಹಾಕುವ ಅಂಕಿ ಗೆಲ್ಲುವಂತಿದ್ದು ಅದರ ಮೇಲೆ ಹೆಚ್ಚು ಹಣ ಕಟ್ಟಲು ಬಂದರೆ, ಆ ಅಂಕಿಯ ಬಗ್ಗೆ ಇಲ್ಲದ ಸಂಶಯವುಂಟು ಮಾಡಿ–ಹೆಚ್ಚು ಲಾಭ ಪಡೆಯುವಂತೆ ಮಾಡುವನು. ಈ ವ್ಯವಹಾರ ಚಾತುರ್ಯವೆಲ್ಲ ಅವನಲ್ಲಿ ಚೆನ್ನಾಗಿದೆ."

"ಇಷ್ಟೆಲ್ಲ ಮಾಡಿ ನಷ್ಟವಾದದ್ದು ಹೇಗೆ? ಇಬ್ಬರೂ ಪಾಲುದಾರರಾಗಿರುವಾಗ ಲೆಕ್ಕಾಚಾರದಲ್ಲಿ ಮೋಸ ಮಾಡಿದರೆ, ಗೋಪಿ ತಾನೆ ಸುಮ್ಮನಿರುವನೆ? ನನಗೇಕೊ ನಿನ್ನ ಮಾತೆ ಅರ್ಥವಾಗುವುದಿಲ್ಲ."

"ಅವಸರ ಮಾಡಬೇಡ. ಎಲ್ಲ ಅರ್ಥವಾಗುತ್ತೆ. ನಷ್ಟವಾದದ್ದೂ ಹೌದು, ಮೋಸ ಮಾಡಿದ್ದೂ ಹೌದು. ಗೊತ್ತಾಗುವಂತೆ ಮೋಸ ಮಾಡಿದರೆ ಶಿಕ್ಷೆ ಮಾಡಲು ಸಾಧ್ಯವಿದೆ. ಗೊತ್ತಾಗದಂತೆ ಮಾಡಿದರೆ?"

"ಅದು ಹೇಗಪ್ಪ ಗೊತ್ತಾಗದಂತೆ ಮಾಡುವುದು! ಲೆಕ್ಕ–ಪತ್ರ ಏನೂ ಇಲ್ಲವೇ ಹಾಗಾದರೆ?"

"ಎಲ್ಲ ಇದ್ದೂ ಮಾಡಿದ್ದಾನೆ, ಮಾಡಲು ಸಾಧ್ಯವಿದೆ. ಲಿಂಗಾಚಾರಿ ಮಗ ಕಾಳಾಚಾರಿ ಗೊತ್ತಿದೆಯೊ ಇಲ್ಲವೊ ನಿನಗೆ?"

"ಗೊತ್ತಿಲ್ಲದೆ ಏನು! ನನ್ನ ಕಣ್ಣೆದುರಿಗೆ ಬೆಳೆದ ಹುಡುಗ, ನನಗೆ ಗೊತ್ತಿಲ್ಲವೆ? ಅವನಿಗೂ ಇದಕ್ಕೂ ಏನು ಸಂಬಂಧ?"

"ಅವನಿಂದಲೆ ಅಣ್ಣ ಹಾಳಾದದ್ದು. ಹಣದ ಆಶೆಗಾಗಿ ಉಂಡ ಮನೆಗೆ ಎರಡು ಬಗೆಯುವ ದ್ರೋಹಿ ಅವನು. ಸೀತಾರಾಮು ಹಾಕಿದ ಗೆರೆ ದಾಟುವುದಿಲ್ಲ. ಆ ನಂಬಿಕೆಯಿಂದಲೆ ಸೀತಾರಾಮು ಅವನಿಂದ ಅಣ್ಣನ ಹಣವನ್ನು ನೀರಿನಂತೆ ಎತ್ತಿ ಹಾಕಿಕೊಳ್ಳುತ್ತಿದ್ದಾನೆ."

"ನಿನ್ನ ಮಾತು ಒಳ್ಳೆ ಒಗಟಿನಂತಿದೆ."

"ಬಿಡಿಸಿ ಹೇಳುವೆನು ತಡಿ."

"ಅಷ್ಟರಲ್ಲೆ ಅವಸರ ಪಡಿಸಿದರೆ " ಎಂದು ಒಂದು ಗಳಿಗೆ ತಡೆದು ಮತ್ತೆ ಮುಂದುವರಿಸಿದ,

"ತನಗೆ ಖಾತ್ರಿಯಾಗಿ ಬಂದೇ ಬರುವುದೆಂಬ ಅಂಕಿಯ ಮೇಲೆ ನೂರಾರು ರೂಪಾಯಿಗಳನ್ನು ಆ ಖದೀಮನ ಕೈಲಿ ಗುಟ್ಟಾಗಿ ತಾನೆ ಕೊಟ್ಟು ಆಡಿಸುವನು. ಬಂದ ಹಣದಲ್ಲಿ ಕಾಳಾಚಾರಿಗೆ ಶೇಕಡ ಐದರಂತೆ ಕಮಿಶನ್ ಕೊಟ್ಟರಾಯಿತು. ಮಾತೂ ಹೊರಗೆ ಹೋಗುವುದಿಲ್ಲ—ಜೇಬೂ ತುಂಬುತ್ತದೆ."

"ಹಾಗೆ ಮಾಡುವುದರಿಂದ ನಾಲ್ಕು ಜನರೆದುರಿಗೆ ಹಣ ಬೇರೆಯವರಿಗೆ ಸಂದಂತೆ ಕಂಡುಬಂದರೂ ಬಂದು ಸೇರುವುದು ಅವನಿಗೇ!"

"ಹೌದು, ಆ ಹಿಕ್ಮಮತ್ತಿನಿಂದಲೇ ಅವನು ಬೆಂಗಳೂರಿನಲ್ಲಿ ನಾಲ್ಕಾರು ಜನರನ್ನು ಪಲ್ಟಿ ಹೊಡೆಸಿ, ಗಂಟುಕಟ್ಟಿ ಇಲ್ಲಿಗೆ ಬಂದದ್ದು. ಇಲ್ಲಿ ಅಣ್ಣಾಸನ್ನು ಮುಗಿಸಿ ಬೇರೆ ಊರಿಗೆ ಗಂಟುಕಟ್ಟಿದರೆ ಸರಿ!"

"ಈ ವಿಷಯ ನಿನಗೆ ತಿಳಿದದ್ದು ಹೇಗೆ?"

"ಸೀತಾರಾಮುವಿನ ರಹಸ್ಯ ತಿಳಿಯಲು ಅವನ ಬೆನ್ನಹಿಂದೆ ನಾನೊಂದು ಜನವನ್ನು ಬಿಟ್ಟಿದ್ದೇನೆ, ಅದರಿಂದ ತಿಳಿಯಿತು."

"ಹಿಂದೊಮ್ಮೆ ಪೋಲೀಸಿಗೆ ತಿಳಿಸಿರುವೆನೆಂದಿದ್ದೆಯಲ್ಲಾ, ಅದೇನಾಯಿತು?"

"ಇಂಥಾ ಕೊರಮನಿಗೆ ಸರಿಯಾಗಿದ್ದಾರವರು. ನಿನಗೊಂದು ಹುಚ್ಚು - ಈ ಕಾಲದಲ್ಲಿ ನ್ಯಾಯವೆಲ್ಲಿದೆ? ಹಸಿರು ನೋಟನ್ನು ಕವರಿನಲ್ಲಿ ಮುಚ್ಚಿರಿಸಿ ಕೊಟ್ಟರೆ ಎಂಥ ಗಂಡಾಂತರದಿಂದ ಬೇಕಾದರೂ ಪಾರಾಗಬಹುದು. ನ್ಯಾಯ-ನೀತಿ, ಧರ್ಮ-ಕರ್ಮ, ಒಳ್ಳೆತನ-ಕೆಟ್ಟತನವೆಲ್ಲ ದುಡ್ಡಿನಲ್ಲಿದೆ."

"ಲಂಚ ತೆಗೆದುಕೊಂಡು ದೇಶ ಹಾಳು ಮಾಡಿದರೆ ಸರಕಾರ ಸುಮ್ಮನಿರುತ್ತದೆಯೆ?"

"ಸುಮ್ಮನಿರದೆ ಏನು ಮಾಡುತ್ತದೆ! ತಾಕತ್ತಿದ್ದರೆ ತಾನೆ ಆಳಲು! ಯೋಗ್ಯತೆಯಿಲ್ಲದವರನ್ನೆಲ್ಲ ದೇಶ ಆಳಲು ಬಿಟ್ಟರೆ ಹೀಗೆ ಆಗುವುದು."

"ಹೋಗಲಿ ಆ ಮಾತು, ನಿಮ್ಮಣ್ಣ ಲಂಚಕ್ಕೆಷ್ಟು ಸುರಿದ?"

"ಅಂದಿನ ಯಜ್ಞಕ್ಕೆ ಮೂರು ಹಸಿರು ನೋಟುಗಳ ಆಹುತಿಯಾಯಿತು. ಸಂಜೆ ಐದು ಘಂಟೆಗೆ ಹೋದವನು ರಾತ್ರಿ ಹತ್ತರ ವರೆಗೆ ಸೀತಾರಾಮುವಿನೊಡನೆ ಅಂಗಡಿಯನ್ನು ಹೆಣ ಕಾದಂತೆ ಕಾದು, ಬೇಕಾದ ಕರಾಮತ್ತೆಲ್ಲ ಉಪಯೋಗಿಸಿ, ಅಂತೂ ಇಂತೂ ಅಂದಿನ ಗಂಡಾಂತರದಿಂದ ಪಾರಾಗಿ ಬಂದ."

"ನೀವು ಗುಟ್ಟಿನಲ್ಲಿ ಮಾಡಿದ ಆ ಕೆಲಸ, ಅವರಿಗೆ ತಿಳಿದದ್ದಾದರೂ ಹೇಗೆ ?"

"ಕಾಳಾಚಾರಿಯಿಂದ ಪತ್ತೆ ಮಾಡಿಕೊಂಡರು. ಅತ್ತಿಗೆಯೊಡನೆ ಪಗಡೆಯಾಡಿದ ದಿನ ರಾತ್ರೆ ಒಂಬತ್ತು ಗಂಟೆಯ ನಂತರ ಸೀತಾರಾಮು ಬರಲಿಲ್ಲವೆ? ಇದೇ ಸುದ್ದಿ ಮುಟ್ಟಿಸಲು !"

"ಹಾಳಾಗಿ ಹೋಗಲಿ, ಈ ತಾಪತ್ರಯವೆ ಬೇಡ; ಅಣ್ಣ ತಮ್ಮಂದಿರು ಪಾಲಾಗಿ ಬಿಡಿ. ನಿಮ್ಮ ನಿಮ್ಮ ಹಣೆಯಲ್ಲಿ ಬರೆದಂತಾಗಲಿ !"

"ನಾನೂ ಅದನ್ನೆ ಹೇಳಬೇಕೆಂದಿದ್ದೆ—ನಿಮ್ಮ ಬಾಯಲ್ಲೆ ಬಂದುದು ಒಳ್ಳೆಯದಾಯಿತು. ಆದಷ್ಟು ಬೇಗ ಆ ಕೆಲಸ ಮಾಡು. ಇಲ್ಲದಿದ್ದರೆ ಅಣ್ಣನೊಡನೆ ನಾವೂ ಬೀದಿಗೆ ಬರಬೇಕಾಗುತ್ತೆ !"

ಅವರಿಗೆ ತಾಯಿ ಮಕ್ಕಳ ಮಾತನ್ನು ಬಿಟ್ಟ ಕಣ್ಣು ಬಿಟ್ಟ ಬಾಯಂತೆ ಆಲೈಸುತ್ತ ನಿಂತಿದ್ದ ಭಟ್ಟರೆಂದರು,

"ನನಗೂ ಅದೇ ಸರಿಯೆಂದು ಕಾಣುತ್ತೆ ರಂಗಮ್ಮ. ಅವರವರ ದುಡ್ಡಿನ ಜವಾಬ್ದಾರಿ ಅವರವರು ಹೊತ್ತರೆ ತಾನೆ ಸರಿಹೋಗುತ್ತದೆ; ಯಾರೂ ಬುದ್ಧಿ ಕಲಿಸುವುದು ಬೇಡ. ಇಷ್ಟರ ಮೇಲೆ ದುಂದು ವೆಚ್ಚ ಮಾಡಿದರೆ, ಅವರೇ ಅನುಭವಿಸುತ್ತಾರೆ."

"ಹಾಗೆಂದು ಹೇಳಿ ನನ್ನ ಜೀವವಿರುವ ವರೆಗೆ ಕಣ್ಣುಮುಚ್ಚಿ ಕೂರಲು ಬರುವುದಿಲ್ಲ, ಭಟ್ಟರೆ. ಒಂದು ವೇಳೆ ಏನಾದರೂ ಹೆಚ್ಚು ಕಡಿಮೆಯಾದರೆ ತಲೆ ಕೊಡಲೇ ಬೇಕಾಗುತ್ತೆ. ಗಂಡಸರು—ಅವರಿಗೇನು ಹೇಳಿ, ದುಡಿಯುತ್ತೇವೆಂಬ ಕಿಚ್ಚಿನಿಂದ ಹಿರಿಯರ ಮಾತನ್ನು ಕಸಕ್ಕೆ ಸಮ ಮಾಡಿ, ಹೆಂಡಿರು ಮಕ್ಕಳನ್ನು ಮರೆತು, ಮುಂದಿನ ಯೋಚನೆಯಿಲ್ಲದೆ ಮನಸ್ಸು ಹಾರಿ ಹೋದ ಕಡೆ ಜಾರಿ ಹೋಗುವರು. ಹೆಂಗಸಿಗೆ ಇರುವುದು ಕಷ್ಟ; ಗಂಡ ಕಳೆದ ಜೀವನವನ್ನು, ಮಾನವನ್ನು ಬಾಳು ಬಲಿಯಿತ್ತು ಆಕೆ ತುಂಬಿಕೊಳ್ಳಬೇಕು. ಪಾಲಾಗಿ

ಬೇರೆಯಾದರೆ ನಮ್ಮ ಶಾಂತಳ ಬಾಳೂ ಹಾಗೇ ಆಗಬಹುದೇನೋ ಎಂದು ಹೆದರಿಕೆಯಾಗುತ್ತೆ."

ಶಾಂತಳ ಹೊಣೆ ಹೊತ್ತ ಭಟ್ಟರು ಆ ಮಾತು ಸರಿಯೆನಿಸಿ ಹೇಳಿದರು,

"ಹೌದು, ಅದೂ ಯೋಚಿಸಬೇಕಾದ್ದೆ. ಉಭಯಸಂಕಟಕ್ಕೆ ಸಿಕ್ಕಿದೆ ನಿಮ್ಮ ಬಾಳು. ದೇವರೇ ದಾರಿ ತೋರಬೇಕು!"

ಒಮ್ಮೆ ಪಕ್ವವಾದ ಅಭಿಪ್ರಾಯ ವ್ಯಾಮೋಹದ ಸೆಳವಿಗೆ ಸಿಕ್ಕಿ ಬುಡ ಮೇಲಾಗುತ್ತಿರುವುದನ್ನು ಕಂಡು ಹೆದರಿ ಹೇಳಿದ ನಾಣಿ,

"ಅಮ್ಮ, ಪಾಲಾಗುವುದನ್ನು ಮಾತ್ರ ನಿಲ್ಲಿಸುವುದು ಬೇಡ. ಮುಂದೆ ಅಣ್ಣನ ಸಂಸಾರದಲ್ಲಿ ಏನಾದರೂ ಹೆಚ್ಚುಕಡಿಮೆಯಾದರೆ ನಾನು ನೋಡಿ ಕೊಳ್ಳುವೆನು. ನೀನೇನೂ ಹೆದರಬೇಡ."

"ಅದು ಹೌದು, ನಾಣಿ ಗೋಪಿಯಂತಲ್ಲ; ನಿಯತ್ತುವಂತ. ಆ ವಿಷಯ ದಲ್ಲಿ ನೀವು ನಿಶ್ಚಿಂತೆಯಿಂದಿರಬಹುದು. ಆದದ್ದು ಆಗಿಹೋಗಲಿ, ಪಾಲು ಮಾಡಿಸಿ ಬಿಡಿ."

"ಶಾಂತಳನ್ನು ಒಂದು ಮಾತು ಕೇಳಿದರೆ ಒಳ್ಳೆಯದೆಂದು ನನಗನಿಸು ತ್ತದೆ."

"ನಿನ್ನ ಮನಸ್ಸಿಗ್ಯಾಕೊಂದು ಕೊರತೆ! ಅತ್ತಿಗೆಯನ್ನು ಕರೆಸಿ ಕೇಳಿ ಬಿಡು."

ರಂಗಮ್ಮ ಶಾಂತ–ರಾಧೆಯರಿಬ್ಬರನ್ನೂ ಕರೆದರು. ರಾಧೆಗೆ ದೂರದಲ್ಲಿ ಗೋಪಿ ಬರುವ ಸುಳಿವು ತಿಳಿದ ಕೂಡಲೆ ತಿಳಿಸಬೇಕೆಂದು ಹೇಳಿ, ಅವಳನ್ನು ಹೊರಬಾಗಿಲ ಕಾವಲಿಗೆ ಕಳುಹಿಸಿ ಶಾಂತಳಿಗೆಂದರು,

"ಗೋಪಿ ತನ್ನ ವ್ಯವಹಾರದ ವಿಷಯವನ್ನು ನಿನ್ನಲ್ಲೇನಾದರೂ ತಿಳಿಸು ತ್ತಾನೇನು?"

"ಇಲ್ಲವಲ್ಲ! ನನ್ನ ಹತ್ತಿರ ಯಾವ ಮಾತನ್ನೂ ಹೇಳುವುದಿಲ್ಲ. ಅವರ ಬಳಿ ನೀವು ತಿಳಿದುಕೊಂಡಷ್ಟು ಬೆಲೆ ನನಗಿಲ್ಲವೂ ಇಲ್ಲ. ಯಾಕೆ? ಏನಾ ಯಿತು?"

ರಂಗಮ್ಮ ನಡೆದ ವಿಷಯವನ್ನೆಲ್ಲ ತಿಳಿಸಿ ಹೇಳಿದರು,

"ಲಂಗು–ಲಗಾಮಿಲ್ಲದ ಗೋಪಿಯ ನಡವಳಿಕೆಯಿಂದ ನಾಣಿಗೆ ಬೇಸರ ಬಂದಿದೆ. ಪಾಲಾಗಬೇಕೆಂದಿದ್ದಾನೆ. ನಿನ್ನ ಅಭಿಪ್ರಾಯ ಹೇಗೆ ಇದರಲ್ಲಿ?"

ಅತ್ತೆ–ವೈದುನ–ನಾದಿನಿಯರಲ್ಲಿ ಅಪಾರ ಪ್ರೀತಿಯನ್ನಿರಿಸಿದ್ದ ಶಾಂತಳಿಗೆ ಆ ಮಾತು ದುಃಖ ತರುವ ಬದಲು ಸಂತೋಷವನ್ನುಂಟು ಮಾಡಿತು. ನಾಣಿ ಪಾಲಾಗಿ ಬೇರೆಯಾದರೆ ತನ್ನ ಬಾಳಿಗೆ ನೆಮ್ಮದಿ ಸಿಗಬಹುದೆಂಬ ಸಮಾಧಾನ ಬಂದು ಹೇಳಿದಳು,

"ಮನೆ ಒಡೆದು ಹೋಗುತ್ತಿದ್ದರೂ ಹಿರಿಯ ಸೊಸೆಯಾದ ನಾನು ಬೇಡ ವೆನ್ನದೆ ಒಪ್ಪಿಕೊಳ್ಳುತ್ತಿರುವುದನ್ನು ಕಂಡು ನಿಮಗೆಲ್ಲ ಆಶ್ಚರ್ಯವಾಗಬಹುದು. ಏನು ಮಾಡಲಿ? ಪರಿಸ್ಥಿತಿ ನನ್ನನ್ನು ಹಾಗೆ ಮಾಡಿಸಿದೆ. ಇವರ ಸಣ್ಣ ಸ್ವಭಾವಕ್ಕೆ ಹೆದರಿ ಒಪ್ಪಲಾರದೆ ಒಪ್ಪಿದ್ದೇನೆ. ಮನೆಯೊಡೆಯದೆ ಗತ್ಯಂತರ ವಿಲ್ಲ."

"ಮನೆ ಒಡೆದರೂ ಚಿಂತೆಯಿಲ್ಲ, ವಂಶದ ಎರಡು ಮರಗಳೂ ಒಣಗದೆ ಜೀವ ತುಂಬಿ ಬಳುಕುತ್ತಿದ್ದರೆ ಸಂತೋಷ. ಪರಿಸ್ಥಿತಿ ನೋಡಿದರೆ ಆ ಭಾಗ್ಯ ನಾನು ಕೇಳಿಬರಲಿಲ್ಲವೆಂದೆನಿಸುತ್ತೆ. ನಿನ್ನನ್ನು ನೋಡಿದರೆ ಹೊಟ್ಟೆ ಸುಟ್ಟು ಹೋಗುತ್ತದೆ. ಗೋಪಿ ದಿನೇ ದಿನೇ ಕೈಬಿಟ್ಟು ಹೋಗುತ್ತಿದ್ದಾನೆ. ಈ ಹಾಳು ಕಣ್ಣಿನಿಂದ ಇನ್ನೂ ಏನೇನು ಕಾಣುವುದು ಕಾದಿದೆಯೊ!' ಎಂದು ರಂಗಮ್ಮ ಕಣ್ಣೀರಿಡತೊಡಗಿದರು.

ಶಾಂತ ಬಂದ ದುಃಖವನ್ನು ತಡೆದು ಹೇಳಿದಳು,

"ಸುಮ್ಮನೆ ಯಾಕೆ ಕಣ್ಣೀರಿಟ್ಟು ಕಂಗಾಲಾಗುತ್ತೀರಿ ಅಮ್ಮ! ಪಡೆದು ಬಂದದ್ದನ್ನು ಅನುಭವಿಸಲೇ ಬೇಕು. ನೀವು ಚಿಂತೆ ಪಡಬೇಡಿ. ನಿಮ್ಮ ಪ್ರೀತಿಯ ಹರಕೆ ನನ್ನನ್ನು ಎಂತಹ ಗಂಡಾಂತರದಿಂದಲಾದರೂ ಪಾರುಮಾಡು ವುದೆಂಬ ನಂಬಿಕೆ ನನಗಿದೆ. ಎಲ್ಲಿದ್ದರೂ ನೀವು ಹರಸುತ್ತೀರಿ, ಅಷ್ಟೇ ನನಗೆ ಸಾಕು."

"ಆಗಲಿ ಶಾಂತ, ನಿನಗಾಗಿ ದೇವರಲ್ಲಿ ಯಾವಾಗಲೂ ಎಲ್ಲಿದ್ದರೂ ಮೊರೆಯಿಡುವೆನು. ಗೋಪಿಗೆ ಸದ್ಬುದ್ಧಿಯಿತ್ತು ನಿನ್ನನ್ನು ಸುಖದಲ್ಲಿ ತೇಲಿ ಬಿಡಲಿ ಆ ಭಗವಂತ. ಏಳಿ, ಕೈಕಾಲು ತೊಳೆದುಕೊಳ್ಳಿ. ಮಾಡಿಟ್ಟ ಕಾಫಿ

ತಿಂಡಿಯೆಲ್ಲ ತಣಿದುಹೋಯಿತು" ಎಂದು ರಂಗಮ್ಮ ಕಣ್ಣೊರೆಸುತ್ತಾ ಒಳಗೆ ಹೋದರು.

ಅತ್ತೆ–ಸೊಸೆಯರ ಪವಿತ್ರ ಪ್ರೀತಿಯ ಕಡಲಿನಲ್ಲಿ ವೈಮರೆತು ಮೂಕರಂತೆ ತೇಲುತ್ತಿದ್ದ ನಾಣಿ–ಭಟ್ಟರಿಬ್ಬರೂ ರಂಗಮ್ಮನ ಕರೆಯಿಂದೆಚ್ಚತ್ತು ಕಣ್ಣಲ್ಲಿ ತುಂಬಿದ ನೀರನ್ನು ಕೊಡವಿ ಕೈಕಾಲು ತೊಳೆಯಲು ನೀರುಮನೆಗೆ ನಡೆದರು.

## ೧೪

"ಯಾಕೊ? ಮಿಟಮಿಟ ನೋಡುತ್ತ ನಿಂತಿರುವೆ! ಮಾಡಲು ಕೆಲಸವಿಲ್ಲವೇನು? ನಡಿ, ಆ ಬೀರುಗಳ ಗಾಜನ್ನೆಲ್ಲ ತಿಕ್ಕಿ ಒರೆಸು."

"ಬಂದವನೆ ಉಜ್ಜಿದ್ದೀನಿ ಸ್ವಾಮಿ."

"ಏನು ಉಜ್ಜಿರುವುದು ನಿನ್ನ ಮುಖ! ಕೊಳೆಯೆಲ್ಲ ಹಾಗೆ ಇದೆ. ನಡಿ ನಡಿ, ಇನ್ನೊಂದು ಬಾರಿ ತಿಕ್ಕಿ ಒರೆಸು, ಕೈಯೇನು ಸವೆಯುವುದಿಲ್ಲ."

ರಾಮು ಮುಖ ಸೋಲುಬಿಟ್ಟು ಗಾಜನ್ನು ಮತ್ತೆ ಒರೆಸಲು ಹೋದ.

ಲೆಕ್ಕದ ಹಾಳೆ ತಿರುವುತ್ತಿದ್ದ ಗೋಪಿ ಮುಖ ಗಂಟು ಹಾಕಿದ. ಅದು ಬಿಚ್ಚಿದ್ದು ರಾಮರಾಯರಿಗೆ ಮುಖಪ್ರಕ್ಷಾಲನ ಮಾಡಿದ ಮೇಲೆ.

"ಏನ್ರಿ ರಾಮರಾಯರೆ! ಮೂವತ್ತು ರೂಪಾಯಿ ಜವಳಿಗೆ ಎರಡು ರೂಪಾಯಿ ಬಿಟ್ಟಿರುವಿರಲ್ಲಾ—ಇದು ಯಾವ ನ್ಯಾಯ! ನಾವೇನು ಅಂಗಡಿಯಿರಿಸಿ ಬಾಳಬೇಕೋ, ದಿವಾಳಿಯೆದ್ದು ಬೀದಿಗೆ ಬರಬೇಕೊ!"

ತಲೆ ಕೆರೆಯುತ್ತಾ ಹೇಳಿದರು ರಾಮರಾಯರು,

"ಬಡವರಿಗೆ ಸ್ವಲ್ಪ ರಿಯಾಯಿತಿ ತೋರಿಸಬೇಕೆಂದು ಅಂದು ನೀವೇ ಹೇಳಿದ್ದಿರಲ್ಲಾ, ಸಾರ್!"

"ಅಂದೆಲ್ಲೊ ಯಾವುದೊ ಜ್ಞಾನದಲ್ಲಿ ಹೇಳಿದ್ದರೆ ಯಾವತ್ತೂ ಹಾಗೇ ಮಾಡಬೇಕೆ? ನಾಲ್ಕಾಣೆ ಎಂಟಾಣೆಯಾದರೆ ಸರಿ; ರೂಪಾಯಿಗಟ್ಟಲೆ ಬಿಟ್ಟರೆ ನಾವೆಲ್ಲಿ ಹೋಗಬೇಕು! ಆ ದುಡ್ಡನ್ನು ನಿಮ್ಮ ಲೆಕ್ಕಕ್ಕೆ ಹಾಕಿದ್ದೇನೆ."

ಗೋಪಿ ಸಿಡಿಸಿಡಿ, ಎನ್ನುತ್ತಿದ್ದುದರಿಂದ ತಮಗೆ ವಿಧಿಸಿದ ಶಿಕ್ಷೆಯನ್ನ ವಿರೋಧಿಸಲು ಹೆದರಿ ರಾಮರಾಯರು ಪೆಚ್ಚಾಗಿ ಕುಳಿತರು.

ಅಂದು ಗೋಪಿಗೆ ಎಲ್ಲಿಲ್ಲದ ಸಿಟ್ಟು ಬಂದಿತ್ತು. ಬೆಂಕಿಯ ಉಂಡೆಯಾಗಿ ಕಾವು ಕಾರುತ್ತಾ ಕುಳಿತಿದ್ದ. ಆ ಕಾವು ಅವನನ್ನು ಮಾತ್ರ ಸುಡದೆ ಸುತ್ತಲಿದ್ದವರನ್ನೆಲ್ಲ ಕಂಗಾಲು ಮಾಡುತಿತ್ತು. ಬೆಳಿಗ್ಗೆ ಅಂಗಡಿಗೆ ಬಂದಲಾಗಾಯಿತು ಹೀಗೆ ಯಾವುದಾದರೊಂದು ನೆವದಲ್ಲಿ ಕೆಲಸಗಾರರನ್ನು ಬೈದು ಬೆಂಡು ಮಾಡುತಿದ್ದ. ಅದನ್ನು ಕಂಡು ನಾಣಿಗೆ ಹೊಟ್ಟೆಯಲ್ಲಿ ಬೆಂಕಿ ಚೆಲ್ಲಿದಂತಾಗುತಿತ್ತು. ಎದೆಯಲ್ಲಿ ಅಣ್ಣನ ಸರ್ವಾಧಿಕಾರವನ್ನು ತಡೆಯುವ ಇಚ್ಛೆಯುಂಟಾದರೂ, ಕಲಹಕ್ಕೆ ಆಹ್ವಾನ ಕೊಡಲು ಮನಸ್ಸಾಗದೆ ಬಂದ ಬೇಸರವನ್ನು ಹಾಗೆ ನುಂಗಿಕೊಂಡನು. ಅಣ್ಣನ ಅಂದಿನ ನಡವಳಿಕೆ ಅವನಿಗೂ ಅರ್ಥವಾಗಲಿಲ್ಲ. ಕಾರಣ ಹುಡುಕತೊಡಗಿದ.

'ಇವತ್ತು ಅಣ್ಣ ಯಾಕೆ ಹೀಗಿದ್ದಾನೆ ?'

'ತನ್ನದೇನಾದರೂ ತಪ್ಪಿರಬಹುದೆ ?'

'ಸಟ್ಟಾ ವ್ಯಾಪಾರಕ್ಕೆ ಬೆಂಬಲವೀಯುವುದಿಲ್ಲವೆಂದು ಬೇಸರವೇನಾದರೂ ಬಂದಿರಬಹುದೇ ?'

'ಇದ್ದರೂ ಇರಬಹುದು ! ಒಳ್ಳೆಯದಿರಲಿ ಕೆಟ್ಟದಿರಲಿ, ಅವರವರು ಮಾಡಿದ ಕೆಲಸಕ್ಕೆ ಮನೆಯವರಿಂದ ಸಾಕಷ್ಟು ಬೆಂಬಲ ಸಿಗದಿದ್ದರೆ, ಪ್ರತಿಯೊಬ್ಬರೂ ಸೆಡೆದುಕೊಳ್ಳುವುದು ಸ್ವಾಭಾವಿಕ.'

'ಹಾಗೇ ಏನೋ ಆಗಿರಬೇಕು ! ಅಷ್ಟೇ ಆದರೆ ಚಿಂತೆಯಿಲ್ಲ—ಹೆದರುವುದಿಲ್ಲ. ಮತ್ತೇನಾದರೂ ಆಗಿದ್ದರೆ.........?'

'ಎಷ್ಟು ಯೋಚಿಸಿದರೂ ಹೊಳೆಯುವುದಿಲ್ಲ. ಆದದ್ದಾದರೂ ಏನು ನನಿಂದ ?'

'ಹ್ಞಾ ಮರೆತಿದ್ದೆ. ಅಣ್ಣ–ಸೀತಾರಾಮು ಇವರಿಬ್ಬರ ಸ್ನೇಹಲತೆಗೆ ಬೆಂಕಿಯಿಡುತ್ತಿರುವೆನು. ಅವನ ದೃಷ್ಟಿಯಲ್ಲಿ ಅದೂ ಒಂದು ಅಪರಾಧವೆ. ಅದಕ್ಕೂ ನನ್ನ ಮೇಲೆ ಕೋಪವಿರಬಹುದು. ಆ ಕೋಪಕ್ಕೂ ನಾನು ಹೆದರುವುದಿಲ್ಲ !'

‘ ಅದಕ್ಕೂ ವಿೂರಿ, ನನಗರಿಯದಂತೆ ಅವನ ಹಿತಕ್ಕೇನಾದರೂ ಧಕ್ಕೆ ಯುಂಟು ಮಾಡುತ್ತಿರುವೆನೆ ? ’

‘ ಇಲ್ಲ ಇಲ್ಲ, ಹೇಗೆ ಯೋಚಿಸಿದರೂ ನಾನು ಅವನ ಹಿತಕ್ಕೆ ಕಲ್ಲೆಸೆ ದಂತೆ ಕಂಡುಬರುವುದಿಲ್ಲ. ಇನೆರಡರ ವಿನಹ ಮತ್ತೆ ಯಾವ ವಿಷಯದಲ್ಲೂ ಅವನಿಗೆ ವ್ಯತಿರಿಕ್ತವಾಗಿ ನಡೆದದ್ದಿಲ್ಲ. ’

‘ ಆದಾದರೂ ಅವನ ಹಿತಕ್ಕಾಗಿಯೇ ಅಲ್ಲವೇ ಮಾಡುತ್ತಿರುವುದು ? ಹಾಳಾಗದೆ ಎಲ್ಲರಂತೆ ಬಾಳಿ ಬದುಕಲಿ ಎಂದಲ್ಲವೆ ಇಷ್ಟೆಲ್ಲ ಕಷ್ಟ ಸಹಿಸುತ್ತಿರು ವುದು ? ನನಗಾದರೂ ಸಂತೋಷವಿದೆಯೇ ! ಅವನಿಗೆ ಯಾಕೆ ತಿಳಿಯ ಬಾರದು ? ’

‘ ತಿಳಿಯದಿದ್ದರೆ ಹೋಗಲಿ—ನೋಡುನೋಡುತ್ತಾ ಹಾಳಾಗಲು ಬಿಡು ವುದಿಲ್ಲ. ನನ್ನನ್ನು ತಪ್ಪಾಗಿ ತಿಳಿದರೂ ಚಿಂತೆಯಿಲ್ಲ. ನನ್ನ ಕರ್ತವ್ಯ ಮಾಡಿಯೆ ಮಾಡುವೆನು; ಅದರಿಂದ ಪ್ರಾಣ ಹೋದರೂ ಸರಿಯೆ ! ’

‘ ಅದು ಸರಿ. ನನ್ನ ಮೇಲಿನ ಕೋಪ-ಬೇಸರವನ್ನು ಆಳು-ಕಾಳುಗಳ ಮೇಲೆ ಯಾಕೆ ತೋರಿಸಬೇಕು ? ’

‘ ನನ್ನೊಡನೆ ಕಾದಾಡಬೇಕೆನಿಸಿರಬಹುದು ! ಮಾಡಿದ ಕೆಲಸದಲ್ಲೆಲ್ಲ ಕಾದಾಟಕ್ಕೆ ಅವಕಾಶವೀಯದೆ ಯಾರೋ ಮಾಡಿದಂತೆ ಮಾಡಿಬಿಟ್ಟಿರುವೆನು. ಅಥವಾ ಅದರ ಸುಳಿವು ಹತ್ತಿದರೂ ಕೆಲಸವಾಗಿ ಹಳಸಿಕೊಂಡ ಮೇಲೆ. ಹಾಗಾಗಿ, ಕೈಮಾಡಲು ಸಾಧ್ಯವಾಗದೆ ಮತ್ತೊಬ್ಬರ ಮನಸ್ಸನ್ನು ನೋಯಿಸು ವುದರ ಮುಖಾಂತರ ಕೆಣಕಲು ಪ್ರಯತ್ನಿಸುತ್ತಿರಬಹುದು. ’

‘ ಇಷ್ಟು ಸಣ್ಣ ವಿಷಯಕ್ಕೆಲ್ಲ ಯಾಕೆ ಕಾಲು ಕೆರೆದು ಕಾದಾಟಕ್ಕೆ ಹೋಗಲಿ ! ನಾಲಗೆ ನೋಯುವಷ್ಟು ಹೊತ್ತು ಅಂದು ತಾನೆ ತೆಪ್ಪಗಾಗು ವನು !

ಹೀಗೆಂದು ತನ್ನ ಮನಸ್ಸನ್ನು ತಾನೆ ಕೆದಕಿ, ತಾನೆ ಸಮಾಧಾನ ಪಡಿಸಿ ಕೊಂಡ.

ಗಂಟೆ ಹನ್ನೆರಡಾಯಿತು. ಹಣದ ಪೆಟ್ಟಿಗೆಗೆ ಬೀಗ ಹಾಕಿ ಗೋಪಿ ಮೇಲೆದ್ದು ನಿಂತ. ಸೂಚನೆ ತಿಳಿದು ರಾಮರಾಯರು ರಾಮನೊಡನೆ ಅಂಗ ಡಿಯ ಕದವಿಕ್ಕಲು ಹೇಳಿದರು. ಎಲ್ಲರೂ ಹೊರಬಂದು ನಿಲ್ಲಲು, ಅಂಗಡಿ–

ಮುಖದ ಮೇಲೆ ತೆರೆಯೆಳೆದು ನಿಂತಿತು. ಕಾರಕೂನರಿತ್ತ ಬೀಗದ ಕೈಯನ್ನು ಗೋಪಿ ಜೇಬಿಗೆ ತುಂಬಿ ಮನೆಕಡೆ ಸರಸರ ಹೆಜ್ಜೆಹಾಕಿದ. ನಾಣಿಯೂ ಮೌನ ವಾಗಿ ಅಣ್ಣನನ್ನು ಅನುಸರಿಸಿದ.

ಆ ಮೌನ ಅವರಿಬ್ಬರೊಡನೂ ಸ್ನೇಹ ಬೆಳಸಿ ಆಗಲೆ ವರ್ಷವಾಗಿ ಹೋಗಿತ್ತು. ಮೊದಲು ಅಣ್ಣ-ತಮ್ಮ ಬೀದಿಗಿಳಿದರೆ ಮನೆ ಮುಟ್ಟುವ ವರೆಗೆ ಕುಟುಂಬದ ಕಷ್ಟ ಸುಖದ ಮಾತಾಡಿಕೊಂಡು ಹೋಗುತ್ತಿದ್ದರು. ಅದರಿಂದ ಅವರಿಗೂ ನೆಮ್ಮದಿಯಿರುತ್ತಿತ್ತು. ನೋಡಿದವರಿಗೂ ಸಂತೋಷವಾಗುತಿತ್ತು. ಆದರೆ ಅಣ್ಣ-ತಮ್ಮಂದಿರ ಆ ಅನ್ಯೋನ್ಯತೆ ಬಹಳ ದಿನ ಬದುಕಲಿಲ್ಲ. ಅದಕ್ಕೆ ಕಾರಣ ಸೀತಾರಾಮು. ಅವನ ಸ್ನೇಹವಾದದ್ದೆ ಆದದ್ದು–ಗೋಪಿ ತೀರ ಬದ ಲಾಯಿಸಿ ಬಿಟ್ಟ. ಸಂಗಡ ವಯೋಮಾನಕ್ಕೆ ತಕ್ಕಂತೆ ಜಾಗೃತವಾದ ಸಣ್ಣ ಸ್ವಭಾವವೂ ಕಾರಣವಾಯಿತು. ಆದರೂ ಮಾತುಕತೆ ಸಂಪೂರ್ಣ ನಿಂತದ್ದು, ಶಾಂತಳೊಡನೆ ನಾಣಿ ಪಗಡೆಯಾಡಿದಂದಿನಿಂದ. ಅವರೆಗೆ ತಮ್ಮನ ಬಗ್ಗೆ ತಾನು ತಳೆದಿದ್ದ ಯಾವುದೊ ಅಸ್ಪಷ್ಟ ಭಾವನೆಗೆ ಅಂದು ತನ್ನದೆ ಆದ ಒಂದು ರೂಪವಿತ್ತು ದ್ವೇಷ ಸಾಧಿಸತೊಡಗಿದ.

ಗೋಪಿ ನಾಣಿಯಲ್ಲಿ ಕೆಡುಕನ್ನೆಣಿಸಿ ಮಾತು ಬಿಟ್ಟಿದ್ದರೂ, ಅಣ್ಣನ ಸಟ್ಟಾ ಆಟ, ಸೀತಾರಾಮುವಿನ ಸ್ನೇಹಕ್ಕೆ ತಾನು ಅಡ್ಡಿಪಡಿಸುತ್ತಿರುವುದರಿಂದ ದ್ವೇಷ ಕಳೆದು ಮೌನ ಹೊಂದಿರಬಹುದೆಂದೆ ನಾಣಿ ತಿಳಿದಿದ್ದ. ಶಾಂತಳ ವಿಷಯವಾಗಿ ತನ್ನ ಬಗ್ಗೆ ಸಂಶಯವುಂಟಾಗಿದೆಯೆಂದು ಕನಸು–ಮನಸಿನಲ್ಲೂ ಹೊಳೆಯಲಿಲ್ಲ. ಮಾತು ಬಿಟ್ಟದ್ದೇಕೆಂದು ಅವನು ಕೇಳಲೂ ಇಲ್ಲ; ಇಬ್ಬರೂ ಹಾಗೇ ದಿನದಬ್ಬುತ್ತಾ ಬಂದಿದ್ದಾರೆ. ಈಗ ಅದೇ ಅಭ್ಯಾಸವಾಗಿ ಹೋಗಿದೆ. ಆ ಅಭ್ಯಾಸ ಬಲದ ಮೇಲೆ ಇಂದೂ ಮೌನವಾಗಿ ಕಾಲೆಳೆದು ಹೋಗುತ್ತಿ ದ್ದಾರೆ; ದಾರಿಯೂ ಹಾಗೇ ಸಾಗುತ್ತಿದೆ.

ಹನ್ನೆರಡು ಗಂಟೆ ಹೊಡೆದದ್ದನ್ನು ಕೇಳಿ ರಂಗಮ್ಮ ಕಂಗಾಲಾದರು. ಅಡಿಗೆ ಇನ್ನೂ ಸ್ವಲ್ಪ ಬಾಕಿಯಿತ್ತು. ಮಕ್ಕಳೆಲ್ಲ ಮನೆಗೆ ಬಂದಾಯಿತು. ದಿನ ಕ್ಕಿಂತ ಬೇಗ ಬಂದಿದ್ದಾರೆ. ಎಷ್ಟೇ ಹೊತ್ತಿಗೆ ಬರಲಿ, ಬಂದ ಹೊತ್ತಿಗೆ ಊಟ ಉಣಿಸದಿದ್ದರೆ ಕೈಕಾಲು ಬಿಡಿಸಿಬಿಡುವರು. ಅದರಲ್ಲೂ ಗೋಪಿಗೆ ಬುದ್ಧಿ ಬಂದಲಾಗಾಯಿತು ಹೆದರಿ ನಡೆಯುವುದೆ ರಂಗಮ್ಮನ ಹಣೆಬರಹವಾಯಿತು.

ಅಡಿಗೆ ಬೇಗ ಮುಗಿಸುವ ಉದ್ದೇಶದಿಂದಲೆ, ಮನಸ್ಸಿಗೆ ತೊಂದರೆಯಾದರೂ ಭಟ್ಟರು, ವಿಶಾಲಾಕ್ಷಮ್ಮ, ಶಕುಂತಳ ಇವರೆಲ್ಲರ ಸಹಾಯ ತೆಗೆದುಕೊಂಡಿದ್ದರು. ಆದರೂ ಸಮಯಕ್ಕೆ ಸರಿಯಾಗಿ ಮುಗಿಯಲಿಲ್ಲ. ಅಷ್ಟೊಂದು ಬಗೆಯ ಭಕ್ಷ್ಯ–ಭೋಜ್ಯಗಳನ್ನು ಹಚ್ಚಿಕೊಳ್ಳಬಾರದಿತ್ತೆಂದೆನಿಸಿತು. ಮಾಡದಿದ್ದರೆ ವಿಧಿಯಿಲ್ಲ. ಅಂದು ಮಗಳನ್ನು ಊರಿಗೆ ಕರೆದುಕೊಂಡು ಹೋಗಬೇಕೆಂದು ಬಂದ ಸೂರಪ್ಪನಿಗೆ ಔತಣದ ಸಮಾರಂಭವೇರ್ಪಡಿಸಿಕೊಂಡಿದ್ದರು. ತೂಕಿಗೆ ತಕ್ಕಂತೆ ಮಾಡದಿದ್ದರೆ ಮರ್ಯಾದೆ ಹೋಗುತ್ತದೆಂದು ರಂಗಮ್ಮನ ಅಭಿಪ್ರಾಯ. ಆ ಗೌರವ ಉಳಿಸಿಕೊಳ್ಳಲು ಶಕ್ತಿಮೀರಿ ಹವಣಿಸಿಕೊಂಡಿದ್ದರು.

ಅವರ ಮನೆಗೆ ಯಾರೆ ಊಟಕ್ಕೆ ಬರಲಿ, ಭಟ್ಟರು ಗಂಡ–ಹೆಂಡತಿ ತಪ್ಪುತ್ತಿರಲಿಲ್ಲ. ಹಿರಿಯರಿಲ್ಲದ ಆ ಮನೆಗೆ ಅವರೆ ಹಿರಿಯರಾಗಿ ನಿಂತಿದ್ದರು. ಸಾಲದಿದ್ದದ್ದಕ್ಕೆ ಸೂರಪ್ಪ ಭಟ್ಟರ ಬಾಲ್ಯಸ್ನೇಹಿತ ಬೇರೆ. ಆ ಸದವಕಾಶವನ್ನು ಎಂದೂ ಕಳೆದುಕೊಳ್ಳುವವರಲ್ಲ. ನಸುಕಿನಲ್ಲೆ ಎದ್ದು ಬಂದಿದ್ದರು ದಂಪತಿಗಳು. ಸೂರಪ್ಪ ಇರುವವರೆಗೆ ಭಟ್ಟರು ಅವರೊಡನೆ ಹರಟೆಹೊಡೆದು ಪೇಟೆಗೆ ಹೋದ ನಂತರ ಅಡಿಗೆಮನೆ ಕಡೆ ಹೊರಳಿದರು. ಬಂದವರೆ ರಂಗಮ್ಮ ಬೇಡವೆಂದರೂ ಕೇಳದೆ ಸಣ್ಣಪುಟ್ಟ ಕೆಲಸಕ್ಕೆ ಕೈಹಚ್ಚಿದರು. ಹೊತ್ತಾಗಿದ್ದುದರಿಂದ ರಂಗಮ್ಮನೂ ತಡೆಯಲಿಲ್ಲ.

ರಂಗಮ್ಮ ಒಳ್ಳೆ ರಾಟೆಯಂತೆ ತಿರುಗಿ ಕೆಲಸ ಮಾಡುತ್ತಿದ್ದರು. ಯಾರು ಎಷ್ಟೇ ಕೆಲಸ ಮಾಡಿಕೊಟ್ಟರೂ ಉಪ್ಪು ಹುಳಿ ಹಾಕುವುದು, ಹದ ನೋಡುವುದು ಮೊದಲಾದ ಜವಾಬ್ದಾರಿ ಕೆಲಸ ಅವರ ಪಾಲಿಗೇ ಬಂದಿತ್ತು. ಹಾಗಾಗಲು ಕಾರಣವೂ ಇಲ್ಲದೆ ಇಲ್ಲ.

ಅವರ ಕೈ-ಅಡಿಗೆ ಬಲು ರುಚಿ. ಸಮರಸ ಅವರ ಅಡಿಗೆಯ ವೈಶಿಷ್ಟ್ಯವಾಗಿತ್ತು. ಒಮ್ಮೆ ಉಂಡು ಹೋದವರು ಎಂದೆಂದೂ ನೆನೆಯುತ್ತಿದ್ದರು. ಈ ದಿನದ ಮಸಾಲೆಯಂತೂ ಕೇಳುವುದೆ ಬೇಡ–ಬೀದಿಯಲ್ಲಿ ಹೋಗುವವರನ್ನೂ ಎಳೆತರುವಂತಿತ್ತು.

ನಾಣಿ ಬಂದವನೆ ಕೈಕಾಲು ತೊಳೆದು, ಕಣ್ಣರಳಿಸಿ ಹುಡುಕುತ್ತಾ, ಮೂಗುದ್ದ ಮಾಡಿ ವಾಸನೆ ಎಳೆದು ಅಡಿಗೆಮನೆ ಬಾಗಿಲ ಬಳಿ ಬಂದುನಿಂತನು,

ಅವನ ಬಳಿ ಎಲ್ಲರಿಗಿಂತ ಮೊದಲು ಓಡಿದುದು ಭಟ್ಟರ ಕಣ್ಣು. ಕುಚೇಷ್ಟೆಯಲ್ಲಿ ಭಟ್ಟರು ನಾಣಿಗಿಂತ ಕಡಿಮೆಯೇನಿರಲಿಲ್ಲ. ಒಂದು ತೂಕ ಹೆಚ್ಚೆಂದೆ ಹೇಳಬಹುದು. ವಯಸ್ಸಾಗಿದ್ದರೂ ಆಯಾ ವಯಸ್ಸಿಗೆ ತಕ್ಕಂತೆ ನಡೆಯುವ ಜಾಣ್ಮೆ ಅವರಲ್ಲಿ ತುಂಬಿತ್ತು. ಸಮಯ ನೋಡಿ ಕುಚೇಷ್ಟೆಯ ಬಾಣ ಬಿಡುತ್ತಿದ್ದರು. ಇಂದು ನಾಣಿಯನ್ನು ಕಂಡು ಏನನ್ನಿಸಿತೋ, ಕೀಟಲೆ ದನಿಯಲ್ಲಿ ಕೇಳಿದರು,

"ಎಲ್ಲಯ್ಯ, ನಿಮ್ಮ ರಾಣಿಸಾಹೇಬರು? ತರಹ ನೋಡಿದರೆ ಕೂರಿಸಿ ಪೂಜಿಸುವಂತೆ ಕಾಣುತ್ತೆ?"

"ಸಮಯ ಬಂದರೆ ಅದೂ ಮಾಡಬೇಕಾಗುತ್ತೆನ್ನಿ."

"ಹಾಗಾದರೆ ನೀನು ಯಾತಕ್ಕೂ ಬಂದವನಲ್ಲ. ಹೆಂಡತಿಯನ್ನಾಳುವ ತಾಕತ್ತು ನಿನ್ನಲ್ಲಿ ಸ್ವಲ್ಪವೂ ಇಲ್ಲವೆಂದಾಯಿತು."

"ಸಭ್ಯತನದಲ್ಲಿ ಬಾಳಿಸುವ ಯೋಗ್ಯತೆಯಿಲ್ಲದವರು ಹಾಗೆ ಹೇಳಬೇಕಷ್ಟೆ. ಅರ್ಥವಿಲ್ಲದ ದರ್ಪ ಮಾಡುವುದು, ತಮ್ಮಲ್ಲೆ ತಪ್ಪಿರಿಸಿ ಹೆಂಡತಿಯನ್ನು ದನ ಬಡಿಯುವಂತೆ ಬಡಿಯುವುದು, ಅವರ ಕಷ್ಟ-ಸುಖ, ಹೊಟ್ಟೆ-ಬಟ್ಟೆಯ ಕಡೆ ಗಮನ ಕೊಡದೆ ತನ್ನ ಸುಖದಲ್ಲಿ ತಾನು ನಿರತನಾಗಿರುವುದು—ಇವೆಲ್ಲ ಪುರುಷ ಲಕ್ಷಣವೆಂದು ನಿಮ್ಮಭಿಪ್ರಾಯವೊ?"

"ಹೌದು, ಇಂದಿನ ಸಮಾಜಕ್ಕೆ ಅದೇ ಪುರುಷ ಲಕ್ಷಣ. ಅದಕ್ಕೆ ಹೊರತಾದವರು ಹೆಣ್ಣಿಗರೆಂದಾಗುವರು."

"ಅಂಥಾ ಹೃದಯಹೀನ ಗುಂಪಿಗೆ ದೂರಕ್ಕೆ ನಮಸ್ಕಾರ. ನನಗೆ ಬೇಡವೇ ಬೇಡ ನಿಮ್ಮ 'ಆ' ಸಮಾಜ. ನಾನು ನನ್ನದೆ ಆದ ರೀತಿಯಲ್ಲಿ ಬಾಳುವವನು. ನನ್ನ ಬಾಳಿಗೆಷ್ಟು ಬೆಲೆಯಿದೆಯೊ, ನನ್ನವಳ ಬಾಳಿಗೂ ಅಷ್ಟೆ ಬೆಲೆ ಕಟ್ಟುವೆನು; ಅದೇ ಸ್ಥಾನ, ಅದೇ ಮರ್ಯಾದೆ ಕೊಡುವೆನು. ಲೋಕಕ್ಕೆ ಅದು ಅಸಹ್ಯವಾಗಿ ಕಂಡರೂ, ನನಗದು ಪೂಜ್ಯ."

"ಶಾಬ್ಬಾಷ್! ಹುಡುಗ ಪರವಾಯಿಲ್ಲ. ನಾನು ಏನೊ ಎಂದು ತಿಳಿದಿದ್ದೆ. ಚಿಂತೆಯಿಲ್ಲ, ಉಪನಿಷತ್ತಿನ ಗೌರವವುಳಿಸುವೆ. ಬಾಳಿನ ಬಗ್ಗೆ ನಿನ್ನ ತತ್ವ ಯಾವ ಬಣ್ಣದ್ದೆಂದು ತಿಳಿಯಲು ಹಾಗೆ ಕೆಣಕಿ ಕೇಳಿದೆ. ಕೇಳಿದ್ದು ಒಳ್ಳೆಯದಾಯಿತು; ಮನಸ್ಸು ಹಗುರವಾಯಿತು. ನನಗೆ ತುಂಬ ಹಿಡಿಸಿತು,

ನಿನ್ನ ಜೀವನದ ತತ್ವ. ಹೀಗೇ ಇರಬೇಕು ಕಣಯ್ಯಾ ! ಹೆಣ್ಣನ್ನು ಯಾವಾಗಲೂ ಅಲ್ಲಗಳೆಯಬಾರದು. ಧರ್ಮ–ಕರ್ಮ, ಸತ್ಯ–ಸಹೃದಯತೆ, ನ್ಯಾಯ-ನೀತಿ ಉಳಿದಿರುವುದೆ ಅವರಿಂದ. ಅವರು ದೇವತೆಗೆ ಸಮಾನ. ಮನೆತನ–ಮನೆ–ಮನಗಳನ್ನು ಬೆಳಗಲು ಬಂದ ಅವರನ್ನು ಸತ್ಯ–ಧರ್ಮಕ್ಕನುಸಾರವಾಗಿ ಗೌರವದಿಂದ ಬಾಳಿಸುವುದೆ ಪುರುಷನ ಧರ್ಮ. ಅನಾದಿ ಕಾಲದಿಂದ ವೇದ–ಉಪನಿಷತ್ತು ಸಾರುತ್ತಿರುವುದೂ ಅದನ್ನೆ. ಆದರೆ ಅವರಂತೆ ನಡೆಯುವವರು ಮಾತ್ರ ಬಹಳ ವಿರಳ. ಅದಕ್ಕೆ ವ್ಯಸನವಾಗುತ್ತೆ."

"ವ್ಯಸನ ಪಡಬೇಡಿ, ಆ ಬಾಳನ್ನು ನಾನು ಬಾಳಿ ತೋರಿಸುವೆನು" ಎಂದು ಪಕ್ಕಕ್ಕೆ ಹೊರಳಿ, ಸ್ವಲ್ಪ ಸರಿದು ತುಟಿಯಲ್ಲಿ ತೆಳುನಗೆ ತಂದು ಹೇಳಿದನು "ನೋಡಿ, ನೀವು ವಿಚಾರಿಸಿದ ಅಮ್ಮಾವರು ಕೈಲಿ ವೀಳ್ಯದೆಲೆ ತಟ್ಟೆಹಿಡಿದು ನಿಮ್ಮನ್ನೆಲ್ಲಾ ಎದುರುಗೊಳ್ಳಲು ಬರುತ್ತಿದ್ದಾರೆ. ಸ್ವಲ್ಪ ಹುಷಾರಾಗಿರಿ. ವೀಳ್ಯವಿತ್ತು ಮುಖಕ್ಕೆ ಮಂಗಳಾರತಿ ಎತ್ತಿ ಕಳುಹಿಸಿಯಾರು ಆಮೇಲೆ!"

"ಅದಕ್ಕೂ ಪುಣ್ಯ ಬೇಕು ಕಣಯ್ಯಾ! ಸುಮ್ಮನೆ ಅಲ್ಲ, ಮಂಗಳಾರತಿ ಮಾಡಿಸಿಕೊಳ್ಳುವುದು !"

"ಸದ್ಯ ಬೇಡಿ ಮಾರಾಯರೆ! ಮಂಗಳಾರತಿ ಮಾಡಿಸಿಕೊಳ್ಳುವ ಪುಣ್ಯ ಮಾತ್ರ ಯಾರಿಗೂ ಬೇಡ. ಅದಕ್ಕಿಂತ ಬಾಯಿ ಕೆಂಜಗೆ ಮಾಡಿಕೊಳ್ಳುವುದೆ ನಮ್ಮ ಪಾಲಿಗೆ ಮೇಲು. ಆದರೆ ಈ ಅಮ್ಮಾವರ ಅರ್ಥವೇನಿದೆಯೊ! ವೀಳ್ಯವಿತ್ತು ನಿಂತ ಮೆಟ್ಟಿನಲ್ಲಿ ಹೊರಗಟ್ಟುವುದೆಂದಿದ್ದರೆ ಮಾತ್ರ ಕಷ್ಟ...." ಎಂದು ನಾಣಿ ಹೆಂಡತಿಯ ಕಡೆ ಕಣ್ಣಿಕ್ಕಿ ನೋಡಿದನು.

ಆ ಮಾತಿಗೆ ಗಂಡನ ಸ್ವಭಾವದ ಪೂರ್ಣ ಪರಿಚಯವಿದ್ದ ಸರಸು ಮುನಿಸುಗೊಳ್ಳನೆ ಹುಸಿ ನಕ್ಕಳು. ಎಲ್ಲರೂ ಆ ನಗೆಯಲ್ಲಿ ಭಾಗ ವಹಿಸಿದರು.

ಹೊರಗಿನ ಸಣ್ಣಪುಟ್ಟ ಕೆಲಸವೆಲ್ಲ ಸರಸುವಿನ ಪಾಲಿಗೆ ಬಂದಿತ್ತು. ಅದರಲ್ಲಿ ಊಟವಾದ ನಂತರ ಹಾಕಿಕೊಳ್ಳುವ ವೀಳ್ಯವನ್ನು ಅಣಿ ಮಾಡುವುದೂ ಸೇರಿತ್ತು. ಹಾಗೆ ಅಣಿ ಮಾಡಿದ ತಟ್ಟೆ ತಂದಾಗಲೆ ನಾಣಿ ಕೀಟಲೆ ಮಾಡಿದ್ದು. ಅದನ್ನು ಅಷ್ಟೆ ಹಗುರವಾಗಿ ಸವರಿಕೊಂಡು ಅವಳು ತಟ್ಟೆಯನ್ನು ಅಡಿಗೆಮನೆಯಲ್ಲಿರಿಸಿ ಸೆರಗೆಳೆದು ಕತ್ತು ಬಗ್ಗಿಸಿ ಗಂಡನ ಕಣ್ಣು ತಪ್ಪಿಸಿ ಹೊರಡಲನುವಾದಳು.

ಸುಳಿವು ತಿಳಿದ ನಾಣಿ ಬಾಗಿಲಿಗೆ ಬೇಕೆಂದೆ ಅಡ್ಡವಾಗಿ ನಿಂತು ಅವ ಳನ್ನು ತಡೆದನು. ಸರಸು ಹೊರಗೂ ಬರಲಾರದೆ, ಒಳಗೂ ಇರಲಾರದೆ, ಹಾರಾಟ ತಡೆದ ಚಿಟ್ಟೆಯಂತೆ ಮಿಲಿಮಿಲಿ ಒದ್ದಾಡಿದಳು. ಅವಳ ಒದ್ದಾಟ ಕಂಡು ನಾಣಿ ಎದ್ದೂಬಿದ್ದೂ ನಕ್ಕನು. ಭಟ್ಟರಿಗೆ ಕರುಳು ಚುರುಕ್ಕೆನಿಸಿ ಹೇಳಿ ದರು,

"ಪಾಪ ! ಹೊರಗೆ ಹೋಗಬೇಕೊ ಏನೋ, ಬಿಟ್ಟುಬಿಡು ಅವಳನ್ನು. ಕೆಲಸದ ಹೊತ್ತಿನಲ್ಲಿ ಏಕೆ ಹಿಂಸಿಸುವೆ ?"

"ನೀವೇನೂ ಅವಳ ಪರ ಲಾಯರಾಗುವುದು ಬೇಡ. ಅವಳಿಗೆ ಬಾಯಿಲ್ಲ ವೇನು ? ಬೇಕಾದರೆ ಕೇಳಿ ಹೋಗಲಿ !"

ಮತ್ತೆ ಎಲ್ಲರ ಮುಖದ ಮೇಲೆ ಮೆಲುನಗೆಯಾಡಿತು. ಭಟ್ಟರು ಸರಸು ವಿಗೆ ಧೈರ್ಯ ತುಂಬಿದರು.

"ನಾಚಿಕೆ ಯಾಕೆ ಕೇಳಿ ಬಿಡಮ್ಮ. ಹೇಗೂ ಹಳಬನಾದನಲ್ಲಾ !"

"ಸುಮ್ಮನೆ ದಾರಿ ಬಿಡಿಯೆಂದರೆ ಸಾಲದು, ನನ್ನ ಹೆಸರು ಹೇಳಿ ' ನೀವು ಹೇಳಿದಂತೆ ಕೇಳುವೆನು, ತಂಟೆ ಮಾಡುವುದಿಲ್ಲ, ದಾರಿ ಬಿಡಿ ಎನ್ನರಸ ! '— ಎನ್ನಬೇಕು. "

"ಸಾಕೇನು ಅಷ್ಟೆ ! ಅತ್ತೆಯ ಮಗನೆ, ಮುತ್ತಿನ ಚೆಂಡೆ, ಮೆಲ್ಲನೆ ಮೆಲ್ಲೊ ಚಕ್ಕುಲಿ ಉಂಡೆ—ಇವೆಲ್ಲ ಬೇಡವೊ !"

"ಅದೆಲ್ಲ ಬೇಡಿ ಸದ್ಯಕ್ಕೆ; ಹಲ್ಲು ಗಟ್ಟಿಯಾಗಿದೆ."

"ಸರಿ ಸರಿ ಗೊತ್ತಾಯಿತು—ಮನಸ್ಸು ಮಾತ್ರ ಗಟ್ಟಿಯಿಲ್ಲವೆಂದ ಹಾಗಾ ಯಿತು ಅಲ್ಲಿಗೆ. ಹೋಗಲಿ, ಬೇಗನೆ ಹೋಳಿಗೆ ತುಪ್ಪವಾದರೂ ಹಾಕಿಸಿ ಬಿಡು; ಈ ಹಲ್ಲು-ಬಾಯಿ ಗಿಂಜುವ ಕಷ್ಟವಾದರೂ ತಪ್ಪುತ್ತೆ."

"ನೀವೆಲ್ಲ ಮನಸ್ಸು ಮಾಡಬೇಕು , ನನ್ನದೇನು ಹೇಳಿ "

"ರಂಗಮ್ಮ, ಮತ್ತೊಂದು ಅರ್ಜಿಗೆ ಪಾರಿಯಾಯಿತು— ಸಿದ್ಧವಾಗಿರಿ. ನನ್ನ ಪೆಚ್ಚನಾದರೂ ಚಿಂತೆಯಿಲ್ಲ, ಬೇಗ ಮಾಡಿಸಿ ಬಿಡಿ. ಇಲ್ಲದಿದ್ದರೆ ಆಭಾಸ ವಾದೀತು."

"ಆಗಲಿ ಅದಕ್ಕೇನು, ಮಾಡೋಣವಂತೆ !" ಎಂದು ಮಗನ ಮುಖ ನೋಡಿ ತೆಳುವಾಗಿ ನಕ್ಕರು ರಂಗಮ್ಮ.

ಆ ನಗೆಯ ಮಿಂಚು ಸರಸುವಿನ ಮುಖವನ್ನು ಬೆಳಗಿತು. ಅವಳ ಮೈ ನಾಚಿಕೆಯಿಂದ ಕೆಂಜಾಯಿತು. ಆ ಬಣ್ಣದ ಬೆಡಗನ್ನು ತಾಳಲಾರದೆ ಹೇಳಿದಳು,

"ಥೂ, ನೋಡಿ ಅತ್ತೆ, ಹೋಗುವೆನೆಂದರೆ ದಾರಿಯನ್ನೆ ಬಿಡುವುದಿಲ್ಲ."

"ನಾನು ಹೇಳಿದಂತೆ ಮಾಡಿದರೆ ನಿನ್ನನ್ನು ಯಾರು ತಡೆಯುವರು ?"

ಸಾರಿಗೆ ಒಗ್ಗರಣೆಯಿಡುತ್ತಾ ರಂಗಮ್ಮ ಅಂದರು,

"ಹೋಗಲಿ ಅಂದು ಬಿಡಮ್ಮ, ಮದುವೆಯಲ್ಲಿ ಕೇಳಿದ್ದು ನಮಗೂ ಮರೆತು ಹೋಗಿದೆ."

ಅಂತೂ ಸರಸು ಎಲ್ಲರ ಒತ್ತಾಯಕ್ಕೆ ಸಿಕ್ಕಿ 'ಎನ್ನರಸ' ಎನ್ನುವುದನ್ನು ಳಿದು ಉಳಿದದ್ದನ್ನು ಹೇಳಿದಳು. ಅದಕ್ಕೆ ನಾಣಿ ಒಪ್ಪಲಿಲ್ಲ. ಎಲ್ಲರ ಮುಂದೆ 'ಎನ್ನರಸ' ಎನ್ನಲು ಕಷ್ಟವಾಗಿದ್ದರೂ, ಆದಷ್ಟು ಬೇಗ ಅಲ್ಲಿಂದ ಪಾರಾಗುವ ಇಚ್ಛೆಯಿಂದ ಒದ್ದಾಡಿಕೊಂಡು, ನಾಚಿಕೆಯಿಂದ ದೇಹ ಒಂದು ಹಿಡಿ ಮಾಡಿ ಹೇಗೋ ಹೇಳಿಯೆ ಬಿಟ್ಟಳು.

"ಸದ್ಯ ಬೆವರಿನ ಹೊಳೆ ಹರಿದು, ಮಾಡಿರಿಸಿದ್ದೆಲ್ಲಾ ಕೊಚ್ಚಿಹೋದೀತು ಆಮೇಲೆ. ಹೋಗು ಪುಣ್ಯಾತಗಿತ್ತಿ—" ಎಂದು ನಗುತ್ತಾ ನಾಣಿ ದಾರಿ ಬಿಟ್ಟನು.

ಅಷ್ಟರಲ್ಲಿ ಅಲ್ಲಿ ಎದ್ದ ಮತ್ತೊಂದು ಮುದ್ದಳೆಯ ಧ್ವನಿ ಹೊರಗೆ ಹೊರಟಿದ್ದ ಸರಸುವನ್ನು ಜಗ್ಗಿ ನಿಲ್ಲಿಸಿತು. ಧ್ವನಿ ಬಂದೆಡೆ ಹೆಜ್ಜೆಯಿರಿಸಿ ಹೋದಳು. ಆ ಮುದ್ದಳೆ ಎಲ್ಲರಿಗಿಂತ ಮೊದಲು ತನ್ನೆಡೆಗೆ ಸೆಳೆದುದು ನಾಣಿಯನ್ನು. ಧ್ವನಿ ಬಂದ ಎಡೆ ಹಿಡಿದು ಮೊದಲು ಆ ಸ್ಥಳವನ್ನು ಮುಟ್ಟಿದವನೂ ಅವನೆ. ಶಕುಂತಳೆಯೊಡನೆ ಕಚಗುಳಿಯಿರಿಸಿ ನಗಿಸುತ್ತಿದ್ದ. ಆ ವಿಚಿತ್ರ ನರ್ತನ ಕಂಡು ತಾನೂ ಮುದ್ದಳೆ ಬಡಿಯುತ್ತ ನಿಂತ. ಅಷ್ಟಕ್ಕೇ ಅವನಿಗೆ ತೃಪ್ತಿಯಾಗಲಿಲ್ಲ. ಎಲ್ಲರಿಗೂ ಕೈಸನ್ನೆ ಮಾಡಿ ತೋರಿಸಿ ಅದರಲ್ಲೂ ಧ್ವನಿಯೆಬ್ಬಿಸಿದ. ಎಲ್ಲರಿಂದ ಹೊರಟ ಆ ನಾದದಿಂದ ಅಡಿಗೆಮನೆ ಮೇಲ್ಛಾವಣಿ ಹಾರಿ ಬೀಳುವಂತಾಯಿತು. ಇಷ್ಟು ದೊಡ್ಡ ನಗೆಯ ಸಮಾರಂಭವನ್ನುಂಟು ಮಾಡಿದ್ದು ಭಟ್ಟರ ಜುಟ್ಟು. ಕಾಯಿ ತುರಿಯಲು ಕೈಯಾಡಿಸಿದಂತೆಲ್ಲ ಬಿಚ್ಚಿದ ಜುಟ್ಟು ಕುಣಿಯುತ್ತು. ಆ ನೋಟ ನೋಡಲು ಬಲು ಸೊಗಸಾಗಿತ್ತು.

ಆ ಸಮಾರಂಭದಲ್ಲಿ ಭಾಗ ವಹಿಸದೆ ಇದ್ದವರೆಂದರೆ ಭಟ್ಟರೊಬ್ಬರೆ ! ಎಲ್ಲರ ನಗು ಕಂಡು ಪೆಚ್ಚಾದರು. ಏನೆಂದೇ ಹೊಳೆಯಲಿಲ್ಲ. ಕೇಳಿದರೆ ಯಾರು ಹೇಳಲೂ ಇಲ್ಲ. ಸಿಟ್ಟಾಗಿ ಮತ್ತೆ ತುರಿಯತೊಡಗಿದರು. ನಾಣಿಗೆ ಹೆಚ್ಚು ಕಾಡಲು ಇಚ್ಛೆಯಾಗದೆ, ಆ ಸಂದರ್ಭಕ್ಕನುಸರಿಸಿ ಒಂದು ಪುಟ್ಟ ಪದ್ಯ ಕಟ್ಟಿ ಭಟ್ಟರಿಗೆ ವಿಷಯ ಮುಟ್ಟಿಸಿದ.

ತೆಂಗಿನ ಜುಟ್ಟು ನಿಂತಿತು ಕಚ್ಚಿ
ಭಟ್ಟರ ಜುಟ್ಟು ನೆಗೆಯಿತು ಬಿಚ್ಚಿ
ಮಾಡಿತು ಹಬ್ಬವ ನಗೆಯನು ಹಂಚಿ
ಜಗದೊಳಗದುವೇ ತೋಷದ ಸಂಚಿ.

ಆ ಹಿತವಾದ ಪದ್ಯ ಮತ್ತೊಮ್ಮೆ ಎಲ್ಲರನ್ನೂ ಕಚಗುಳಿಯಿರಿಸಿತು. ಭಟ್ಟರು ಅರ್ಥ ಮಾಡಿಕೊಂಡರು. ಮಾನ ಹೋದಂತಾಯಿತು. ಆ ಪೇಚಿಗೆ ಗುರಿಪಡಿಸಿದ ಜುಟ್ಟಿನ ಮೇಲೆ ಎಲ್ಲಿಲ್ಲದ ಸಿಟ್ಟು ಬಂತು. ಆದರೇನು ಮಾಡುವುದು ? ಜುಟ್ಟು ಅವರದೆ. ಬಂದ ಸಿಟ್ಟು ನುಂಗಿದರು. ಕಟ್ಟಿಕೊಳ್ಳಲು ಕೈ ಬರಿ ಹೊಲಸು. ಕಾಯಿತುರಿ, ಮಾವಿನ ಸೊನೆ ಎಲ್ಲ ತುಂಬಿತ್ತು ಅದರಲ್ಲಿ. ವಿಧಿಯಿಲ್ಲದೆ ಹೆಂಡತಿಯ ಸಹಾಯ ಬೇಡಿದರು. ಕೈ ತೊಳೆದು ಬಂದ ವಿಶಾಲಾಕ್ಷಮ್ಮನನ್ನು ತಡೆದು ನಾಣಿ ಹೇಳಿದ,

"ಏಯ್ ಅನ್ನಲು ನೀವೇನು ದನವಲ್ಲ ವಿಶಾಲಾಕ್ಷಮ್ಮ. ನಿಮ್ಮ ಹೆಸರು ಹಿಡಿದು ಮರ್ಯಾದೆಯಿಂದ ಹೇಳಿದರೆ ಮಾತ್ರ ಕಟ್ಟಿ, ಇಲ್ಲದಿದ್ದರೆ ಕಟ್ಟಬೇಡಿ."

ಸ್ವಾಭಾವಿಕವಾಗಿ ವಿಶಾಲಾಕ್ಷಮ್ಮ ಯಜಮಾನರಂತೆ ರಸಪ್ರಿಯರು. ಅಲ್ಲದೆ ನಾಣಿ ಅವರ ಕಣ್ಣ ಮುಂದೆ ಬೆಳೆದ ಹುಡುಗ. ಹಾಗಾಗಿ, ವಯಸ್ಸಿನಲ್ಲಿ ದೊಡ್ಡವರಾಗಿದ್ದರೂ ಆ ಮಧುರ ವಾತಾವರಣಕ್ಕೆ ಬೆಲೆಯಿತ್ತು ಕಲ್ಲು ಬೊಂಬೆಯಂತೆ ಅವರು ನಿಂತಲ್ಲೆ ನಿಂತುಬಿಟ್ಟರು. ಭಟ್ಟರು ತಬ್ಬಿಬ್ಬಾಗಿ ನುಡಿದರು,

"ಸರಸು ನಿನ್ನನ್ನು ಒದ್ದಾಡಿಸಿದ ಹೊಟ್ಟೆಯುರಿಯನ್ನು ನನ್ನ ಮೇಲೆ ಕಾರಲು ಬಂದೆಯಾಪ್ಪ !"

"ನಾನು ಯಾರ ಹೊಟ್ಟೆಯುರಿಯನ್ನು ಯಾರ ಮೇಲೂ ಕಾರಲು ಬಂದಿಲ್ಲ. ನನಗೆ ಹೊಟ್ಟೆ ಉರಿದೇ ಹೇಳಿಧೆ. ತಿಳಿದವರಾದ ನೀವು ಹೆಂಡತಿ

ಯನ್ನು ದನ ಕೂಗುವಂತೆ ಕೂಗುವುದೇ ? ಶುದ್ಧ ಅವಮಾನ !"

"ಏನು ಮಾಡುವುದು ಪುಣ್ಯಾತ್ಮ, ಹಿರಿಯರ ಪದ್ಧತಿ ನನ್ನಲ್ಲೂ ಉಳಿದು ಹೋಗಿದೆ. ಮೊದಲಿನಿಂದಲೂ ಹೆಸರು ಹಿಡಿದು ಕೂಗಿ ಅಭ್ಯಾಸವಿಲ್ಲ."

"ಅಭ್ಯಾಸ ಮಾಡಿಕೊಂಡರಾಯಿತು. ಮನಸ್ಸಿಗಿಂತ ದೊಡ್ಡದು ಯಾವದಿದೆ ಹೇಳಿ ! ಹೇಳಿ ಬಿಡಿ, ನಿಮ್ಮ ಮದುವೆಯಲ್ಲಿ ನಾನಂತೂ ಹುಟ್ಟಿರಲಿಲ್ಲ—ಈಗಲಾದರೂ ಕೇಳಿ ಸಂತೋಷಪಡುವೆನು."

ಭಟ್ಟರು ನಿಜವಾಗಿಯೂ ವಿಶಾಲಾಕ್ಷಮ್ಮನನ್ನು ಗೌರವದಿಂದ ಕಾಣುತ್ತಿದ್ದರು. ಎಲ್ಲರಂತವರು ತತ್ವವನ್ನಾಡುವವರು ಮಾತ್ರವಲ್ಲ; ಆಚರಣೆಗೆ ತರುವವರೂ ಆಗಿದ್ದರು. ಅವರಲ್ಲಿದ್ದ ಕೊರತೆಯೆಂದರೆ ಹೆಂಡತಿಯನ್ನು 'ಎಯ್' ಎಂದು ಕರೆಯುವದೊಂದೆ ! ಆ ಎರಡು ಅಕ್ಷರದಲ್ಲಿ ತಮ್ಮೆಲ್ಲ ಪ್ರೀತಿಯನ್ನು ತುಂಬಿದರೂ ಕೇಳುವವರಿಗದು ಕರ್ಕಶವಾಗಿರುತಿತ್ತು. ಪೂರ್ವದಿಂದ ಬಂದ ಪದ್ಧತಿಯಾದ್ದರಿಂದ ಅದಕ್ಕೆ ತಲೆಬಾಗಿದ್ದರು.

ಸ್ವಾಭಾವಿಕವಾಗಿ ರಸಪ್ರಿಯನಾದ ನಾಣಿಗೆ ಆ ಅವಕಾಶ ಸ್ಫೂರ್ತಿಯಿತ್ತಿತು. ಮತ್ತೊಂದು ನಗೆಯ ಹೊಳೆಯನ್ನು ಹರಿಸಲು ಅದನ್ನು ಬಿಡದೆ ಉಪಯೋಗಿಸಿಕೊಂಡ. ಅಲ್ಲದೆ, ನಾಗರಿಕತೆಯ ರಂಗಿಗೆ ಮಾರುಹೋಗಿದವನಿಗೆ ಅದು ಸರಿಬರಲೂ ಇಲ್ಲ. ಹಾಗಾಗಿ, ಭಟ್ಟರಿಂದ ಹೆಸರು ಹೇಳಿಸಲೆ ಬೇಕೆಂದು ಗಟ್ಟಿಮಾಡಿ ನಿಂತನು. ಎಷ್ಟು ಹೊತ್ತಾದರೂ ಭಟ್ಟರು ಬಾಯಿ ಬಿಡಲಿಲ್ಲ. ಬಾಯಲ್ಲಿ ನಾಚಿಕೆಯಿಲ್ಲವೆಂದು ಹೇಳಿದ್ದರೂ ಸಣ್ಣ ಸಣ್ಣ ಪ್ರಾಯದ ಹುಡುಗರ ಮುಂದೆ ಹೇಳಲು ನಾಚಿದ್ದರು. ಅಭ್ಯಾಸವಿಲ್ಲದ್ದರಿಂದ ಗಂಟಲೂ ಹಿಡಿಯುತಿತ್ತು. ಅವರ ಒದ್ದಾಟ ಕಂಡು ನಾಣಿ ಹೇಳಿದ,

"ನಾಲ್ಕು ಮಕ್ಕಳ ತಂದೆಯಾಗಿ ಇಷ್ಟು ನಾಚಿಕೊಳ್ಳುವುದೆ ? ನಾನಾಗಿದ್ದರೆ ಈ ವೇಳೆಗೆ ನೂರು ಬಾರಿ ಹೇಳಿಬಿಡುತ್ತಿದ್ದೆ. ನೀವು ಯಾತಕ್ಕೂ ಬಂದವರಲ್ಲ ಬಿಡಿ. ಹಾಗೇ ಜುಟ್ಟು ಕುಣಿಸುತ್ತಾ ಕೂತಿರಿ. ವಿಶಾಲಾಕ್ಷಮ್ಮ, ನೀವು ನಿಮ್ಮ ಕೆಲಸಕ್ಕೆ ಹೋಗಿ !"

ಹಿಂದಿರುಗುವುದರಲ್ಲಿದ್ದ ಹೆಂಡತಿಯನ್ನು ಕಂಡು ಕಂಗಾಲಾಗಿ ಹೇಳಿದರು ಭಟ್ಟರು,

"ಕಡೆಗೂ ನಿನ್ನ ಹಠವನ್ನೆ ಗೆಲ್ಲಿಸಿ ಬಿಟ್ಟೆ. ಹೋಗಲಿ, ಏನು ಹೇಳ ಬೇಕೊ ಹೇಳಿಬಿಡು. ನನ್ನಿಚ್ಛೆಯಂತೆ ಹೇಳಿದ್ದರೆ ನಿನಗದು ಒಪ್ಪಿಗೆಯಾಗುತ್ತೊ ಇಲ್ಲವೊ ? ಯಾಕಾ ಪಂಚಾಯಿತಿ !"

"ಹಾಗೊ ? ಅದೂ ಆಗಬಹುದು ಹೇಳಿ— 'ವಿಶಾಲಾಕ್ಷಿ,' 'ವಿಶಾಲಾಕ್ಷಿ......"

"ಸ್ವಲ್ಪ ಬಂದು ಜುಟ್ಟು ಕಟ್ಟಿ ಹೋಗು...."

"ಸ್ವಲ್ಪ ಬಂದು ಜುಟ್ಟು ಕಟ್ಟಿ ಹೋಗು...."

"ನಿನಗೆ ಪುಣ್ಯ ಬರುತ್ತೆ...."

"ಸತಿಪತಿಯರು ಪರಸ್ಪರ ಮಾಡಿವ ಕೆಲಸಕ್ಕೆಲ್ಲ ಪುಣ್ಯವಿದ್ದೇ ಇರುವಾಗ ಬಾಯಿಬಿಟ್ಟು ಯಾಕೆ ಹೇಳಬೇಕು ಪುಣ್ಯಾತ್ಮಾ !"

"ಅದು ನಾಗರಿಕತೆಯ ಲಕ್ಷಣ, ಹೇಳಲೆ ಬೇಕು ಸ್ವಾಮಿ !"

"ಒಳ್ಳೆಯ ನಾಗರಿಕತೆಯಾಯಿತು ನಿಮ್ಮದು. ಅಂತೂ ನನಗೂ ಚಳ್ಳೆ ಹಣ್ಣು ತಿನ್ನಿಸಿಬಿಟ್ಟೆ. ಹೋಗಲಿ, ನಿನಗ್ಯಾಕೆ ಒದ್ದಾಟ ! ಹೇಳಿಬಿಡುವೆನು" ಎಂದು ವಿಶಾಲಾಕ್ಷಮ್ಮನ ಕಡೆ ತಿರುಗಿ "ಪುಣ್ಯ ಬರುತ್ತೆ ಪುಣ್ಯಾತಗಿತ್ತಿ—ಬೇಗ ಕಟ್ಟಿಬಿಡು" ಎಂದು ನೆಟ್ಟಗೆ ಕುಳಿತರು.

ಭಟ್ಟರ ಅವಸ್ಥೆ ಕಂಡು ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಕ್ಕರು. ಜುಟ್ಟು ಕಟ್ಟುತ್ತಿದ್ದ ವಿಶಾಲಾಕ್ಷಮ್ಮನೂ ಅದರಲ್ಲಿ ಭಾಗಿಯಾದರು.

ನಾಣಿ ಹಜಾರದಲ್ಲಿ ಕಾಲಿಡುವುದಕ್ಕೂ ಗೋಪಿಯ ಕೊಠಡಿಯಲ್ಲಿ ಗದ್ದಲ ಕೇಳಿಬರುವುದಕ್ಕೂ ಸಮನಾಯಿತು. ಗಾಬರಿಯಾಗಿ ಕೊಠಡಿಯ ಕಡೆ ಹೆಜ್ಜೆ ಹಾಕಿದ. ಕದವಿಕ್ಕಿತ್ತು. ಬೆಳಗಿನ ಪ್ರಕರಣ ನೆನಪು ಬಂದು ಅತ್ತಿಗೆಗೇನಾದರೂ ಆಪತ್ತಾದೀತೆಂದು ತಿಳಿದು, ಸಮಯ ಬಿದ್ದರೆ ರಕ್ಷಣೆಗೆ ಹೋಗುವ ಮನಸ್ಸು ಮಾಡಿ ಅಲ್ಲಲ್ಲೆ ಸುಳಿದಾಡತೊಡಗಿದ.

ಗೋಪಿ ಮೈಮೇಲಿನ ಎಚ್ಚರತಪ್ಪಿ ಕೂಗುತ್ತಿದ್ದ. ಕೋಪದಿಂದ ಭಾರವಾದ ಅವನ ಹೆಜ್ಜೆ, ಆಗಾಗ ನೆಲವನ್ನು ನಡುಗಿಸುತಿತ್ತು. ಆ ಕಾವಿಗೆ ಅವಳ ಕೋಮಲ ಕಣ್ಣು ಕರಗಿತು. ನಿಂತ ನೆಲವನ್ನು ತೊಳೆಯುತ್ತ ನಿಂತಳು.

ಅವಳ ಕಣ್ಣು ಮುಂದೆ ಸುಶೀಲಮ್ಮ, ಸರಸು, ಶಕುಂತಳ, ರಾಧೆ ಎಲ್ಲರೂ ಹಾದು ಹೋದರು. ಯಾರೂ ಅವಳಂತೆ ಹೀಗೆ ಕಣ್ಣೀರಿಡುತ್ತಿರ

ಲಿಲ್ಲ. ಆದರಲ್ಲೂ ಅವಳ ತಾಯಿ, ಸರಸು ಇಬ್ಬರೂ ದೈವಿಕವಾದ ಪ್ರೀತಿಪಡೆದು ಬದುಕಿನಲ್ಲಿ ಆನಂದದ ಬುಗ್ಗೆ ಹರಿಸುತ್ತಿದ್ದಾರೆ. ಅವಳ ಪಾಲಿಗೆ ಆ ಶುದ್ಧ ಪ್ರೇಮವೆನ್ನುವುದು ಕನಸಿನ ಮಾತಾಗಿದೆ. ಪ್ರೀತಿಯಿಂದ ಬಯಸಿ ಬಂದ ಹೊಸ ಬಾಳಿನ ಹಾಸಿಗೆ ಹೂವಾಗದೆ, ಮುಳ್ಳಾಗಿ ಮೈಯ ನೆತ್ತರನ್ನೆಲ್ಲ ಹೀರುತ್ತಿದೆ.

'ನಾನಂತೂ ಚಿಕ್ಕವಳು. ಇದು ಮುಳ್ಳಿನ ಮನೆಯೆಂದು ನನ್ನ ತಂದೆ-ತಾಯಿಗೂ ತಿಳಿಯಲಿಲ್ಲವೆ ?'

'ಅಥವಾ ಕಾಟ ತಪ್ಪಿದರೆ ಸಾಕೆಂದು ಗೊತ್ತಿದ್ದೂ ದಬ್ಬಿದರೊ!'

'ಛೀ, ಯಾವ ತಂದೆ-ತಾಯಿಯೂ ಹಾಗೆ ಮಾಡಲಾರರು. ಅಪರಿಚಿತ ವ್ಯಕ್ತಿಯ ಪರಿಚಯ ಅವರಿಗೆ ಮೊದಲೆ ಹೇಗಾಗಬೇಕು ? ಹೀಗಾಗುವುದೆಂದು ಗೊತ್ತಿದ್ದರೆ ನನ್ನನ್ನು ಖಂಡಿತ ಈ ನರಕಕ್ಕೆ ನೂಕುತ್ತಿರಲಿಲ್ಲ. ನನ್ನ ವಿಧಿ ಹೀಗಿರುವಾಗ ಯಾರೇನು ಮಾಡುವರು ? ಹಣೆಯಲ್ಲಿ ಬರೆದದ್ದನ್ನು ಅನುಭವಿಸಲೇ ಬೇಕು.'

'ಬಾಳಿನಲ್ಲಿ ಕಷ್ಟ-ಸುಖ ಸಮನಾಗಿರುತ್ತವೆಂದು ಎಲ್ಲರೂ ಹೇಳುವರು. ಆ ಮಾತು ಸತ್ಯವಾಗಿದ್ದರೆ ಒಂದಲ್ಲ ಒಂದು ದಿನ ನನಗೂ ಸುಖ ಸಿಗಲೆ ಬೇಕು. ಸಿಕ್ಕೀತು ! ಕ್ರಮೇಣ ಅವರ ಮನಸ್ಸಿನಿಂದ ಈ ಹೊಲಸು ಭಾವನೆ ತೊಲಗಿ ಪಶ್ಚಾತ್ತಾಪಪಟ್ಟು, ಉಳಿದ ಬಾಳನ್ನು ಹರುಷದಲ್ಲಿ ತೇಲಿ ಬಿಟ್ಟಾರು ! ಭಗವಂತನ ದಯೆಯಿಂದ ಹಾಗಾಗಲಿ !'

'ಒಂದು ವೇಳೆ ಇವರು ದಾರಿಗೆ ಬರದಿದ್ದರೆ ಈ ನರಕದ ಅಗ್ನಿಕುಂಡದಲ್ಲಿ ಕಡೆವರೆಗೂ ನಾನು ಹೇಗೆ ಬೇಯಲಿ ?'

'ಸಹಿಸಲು ಸಾಧ್ಯವಿಲ್ಲದಾಗ ಗೊತ್ತೇ ಇದೆ ಆ....ತ್ಮ....ಹ....ತ್ಯೆ !'

ಆ ಭಾವನೆ ಅವಳಿಗೆ ಹೊಳೆಯುವುದಕ್ಕೂ ಗೋಪಿ ಮತ್ತೆ ಚುಚ್ಚಿ ಮಾತಾಡಿದುದಕ್ಕೂ ಸಮನಾಯಿತು.

"ಕಣ್ಣೀರು ಕರೆದರೆ ಇಲ್ಲಿ ಯಾರೂ ಕರಗುವುದಿಲ್ಲ, ತಿಳಿಯಿತೇನು !"

ಸ್ವಲ್ಪ ಹೊತ್ತು ಅತ್ತಿತ್ತ ಓಡಾಡಿ ಹೇಳಿದ,

"ಚಂಡಾಲಿ ! ನಿನಗೆ ನಾನು ಹೇಳಲಿಲ್ಲವೇ--ನಾಣಿ ಏನು ಕೊಟ್ಟರೂ

ಮುಟ್ಟಕೂಡದೆಂದು ! ನನ್ನ ಮಾತು ಕಸಕ್ಕೆ ಸಮಮಾಡಿ ಬೂಟಾಟಿಕೆ ಮಾಡು ತ್ತಿರುವೆಯಾ ರಂ.... !"

ಉಕ್ಕಿ ಬರುತ್ತಿದ್ದ ದುಃಖವನ್ನು ಒತ್ತಿ ಹಿಡಿದು ಕತ್ತು ಬಗ್ಗಿಸಿಕೊಂಡೆ ಉತ್ತರವಿತ್ತಳು,

"ಇಲ್ಲ. ನಿಮಗೆ ಸುಳ್ಳು ಹೇಳಿ ಯಾವ ನರಕಕ್ಕೆ ಹೋಗಲಿ? ಹಿಂದಿ ರುಗಿ ಕೊಡದಿದ್ದುದು ಅದೇ ಉದ್ದೇಶದಿಂದ. ಬೇಕಾದರೆ ಪ್ರಮಾಣ ಮಾಡಿ ಹೇಳುವೆನು."

"ನಿನಗೆ ಪ್ರಮಾಣವೊಂದು ಕೇಡು ! ನಾಣಿಯ ಪ್ರೀತಿ ತಪ್ಪಿಹೋದೀ ತೆಂಬ ಭೀತಿಯಿಂದ ಬಾಯಿ ಮುಚ್ಚಿ ತೆಗೆದುಕೊಂಡು, ಈಗ ಹಿಂದಿರುಗಿಸಿದರೆ ಅಮ್ಮನಿಗೆ ದುಃಖವಾದೀತೆನ್ನುವ ಆಟ ಹೂಡುವೆಯಾ ?"

ಕಿವಿಮುಚ್ಚಿ ಹೇಳಿದಳು,

"ನಿಮ್ಮ ದಮ್ಮಯ್ಯ, ಆ ಒಂದು ಮಾತನ್ನು ಮಾತ್ರ ಆಡಬೇಡಿ; ನನ್ನ ಕರುಳು ಕುಯ್ಯುತ್ತದೆ."

"ನಿನ್ನ ಬೂಟಾಟಿಕೆ ವಿದ್ಯೆ ಬಿಚ್ಚಬೇಡ, ನಾನದಕ್ಕೆ ಸೋಲುವನಲ್ಲ"— ಎಂದು ಅಲ್ಲಿ ಮೇಜಿನ ಮೇಲಿರಿಸಿದ್ದ, ಗರ್ಭಿಣಿಯಾದ ಶಾಂತಳಿಗೆ ಆರತಕ್ಷತೆಯ ಸಮಯದಲ್ಲಿ ನಾಣಿ ಉಡುಗೊರೆ ಮಾಡಿದ್ದ, ಹಸಿರು ಮೈಸೂರು ಸಿಲ್ಕು ಸೀರೆ ಯನ್ನು ತಂದು ಶಾಂತಳ ಮುಖದ ಮೇಲೆ ರೊಯ್ಯನೆಸೆದು ಹೇಳಿದ "ಮೊದಲು ತೆಗೆದುಕೊಂಡು ಹೋಗಿ ಅದನ್ನು ಆ ಚಾಂಡಾಲನ ಮುಖದ ಮೇಲೆಸೆದು ಬಾ."

ಸೀರೆಯನ್ನು ಕೈಲಿ ಹಿಡಿದು ಗಂಡನ ಕಡೆ ನೀಡಿ ಹೇಳಿದಳು,

"ಆ ಕೆಲಸ ನೀವೆ ಮಾಡಿ ಬನ್ನಿ—ನಾನು ಹೆಂಗಸೆನ್ನುವುದನ್ನು ಮರೆಯ ಬೇಡಿ. ಹಾಗೆ ಮಾಡಿದರೆ ಅತ್ತೆ ತಾನೆ ಏನೆಂದುಕೊಳ್ಳುವರು !"

"ನಾಣಿಯೊಡನೆ ನಕ್ಕು ನಲಿಯುವಾಗಲೆ ನಿನ್ನ ಗಂಡುಬೀರಿತನವೆಷ್ಟಿದೆ ಯೆನ್ನುವುದನ್ನು ನಿಮ್ಮತ್ತೆ ಅಳೆದು ನೋಡಿದ್ದಾಳೆ. ಅದಕ್ಕಾಗಿ ಏನೂ ಹೆದರು ವುದು ಬೇಡ. ನಿರ್ಭೀತಿಯಿಂದ, ನಿರ್ಲಜ್ಜೆಯಿಂದ ಮಾಡಿ ಬಾ ಆ ಕೆಲಸ ವನ್ನು."

"ಆ ಗಂಡುಬೀರಿ ಗುಣಗಳು ಹುಟ್ಟಿನಲ್ಲೆ ಬಂದಿಲ್ಲ, ಈಗ ಬಾ ಅಂದರೆ

ಬರುವುದೂ ಇಲ್ಲ."

ಗೋಪಿ ಅವಳ ಕೆನ್ನೆಗೆ ತಟ್ಟನೆ ಹೊಡೆದು ಹೇಳಿದ,

"ಪಿಶಾಚಿ! ಹೆಚ್ಚು ಹರಟಿದರೆ ಹೂವಿನಂತೆ ಹಿಸುಕಿ ಹಾಕಿಬಿಟ್ಟೇನು, ಹುಷ್ಸಾರ್! •ಹೊರಡು, ಮೊದಲು ಹೇಳಿದಷ್ಟು ಕೆಲಸ ಮಾಡಿ ಬಾ! ಹುಂ........!"

ಶಾಂತಳಿಂದ ಇನ್ನು ಅಂಥಾ ಮಾತು ಕೇಳಲಾಗಲಿಲ್ಲ. ಕೈಲಿ ಸೀರೆ ಹಿಡಿದು, ಹಿಡಿತ ತಪ್ಪಿದ ಕಾರಿನಂತೆ ಸರ್ರನೆ ಬಾಗಿಲ ಕಡೆ ಹೊರಳಿದಳು. ಕದ ತೆರೆದ ಹೊಡೆತಕ್ಕೆ ಕೊಠಡಿಯೆಲ್ಲ ನಡುಗಿತು. ಗೋಪಿ ಗುಡುಗಿದ. ಲಕ್ಷ್ಯ ಮಾಡಲಿಲ್ಲ. ತಿರುಗಿ ಸಹ ನೋಡಲಿಲ್ಲ.

ಹೊಸ್ತಿಲ ಹೊರಗೆ ಕಾಲಿಡುತ್ತಲೆ, ಅಲ್ಲೆ ನಿಂತಿದ್ದ ನಾಣಿ ಅವಳನ್ನು ತಡೆದು ಹೇಳಿದ,

"ಒಳಗೆ ನಡೆಯಿರಿ ಅತ್ತಿಗೆ, ವಿಷಯವೇನೆಂದು ನನಗೆಲ್ಲ ಗೊತ್ತಾಯಿತು. ಅವನೆದುರಿಗೆ ತೆಗೆದುಕೊಳ್ಳುವೆನು."

ಶಾಂತ ನಡುಗಿದಳು. ತನ್ನಿಂದ ಅಣ್ಣತಮ್ಮಂದಿರಿಗೆ ಕಾದಾಟವಾಗಿ ಯಾವ ಸಮಯದಲ್ಲಿ ಏನು ಅನಾಹುತದಾಗುತ್ತದೊ ಎನ್ನುವ ಚಿಂತೆ, ಹುಚ್ಚೆದ್ದ ಪ್ರವಾಹದಂತೆ ತಲೆಯಲ್ಲಿ ಮೊದಲೆ ನೊರೆಯುತಿತ್ತು. ನಾಣಿಯ ಮಾತಿನಿಂದ ಆ ಮೊರೆತ ಇಮ್ಮಡಿಯಾಯಿತು. ಅವನನ್ನು ಆ ಸಮಯದಲ್ಲಿ ಒಳಗೆ ಬಿಟ್ಟರೆ ಅನಾಹುತವಾಗುವುದೆಂದು ತಿಳಿದು, ತಡೆದು ಹೇಳಿದಳು,

"ಬೇಡಿ, ನಿಮ್ಮ ದಮ್ಮಯ್ಯ, ಒಳಗೆ ಹೋಗಬೇಡಿ. ನಿಮ್ಮಣ್ಣ ಕೋಪ ದಲ್ಲಿದ್ದಾರೆ. ಏನಾದರೂ ಅನಾಹುತವಾದೀತು! ಈ ಸೀರೆ ತೆಗೆದುಕೊಳ್ಳಿ, ಬೇಸರ ಮಾಡಿಕೊಳ್ಳಬೇಡಿ. ಅವರು ಸಮಾಧಾನಕ್ಕೆ ಬಂದು ಒಪ್ಪಿಗೆ ಕೊಟ್ಟಲ್ಲಿ ಮತ್ತೆ ತೆಗೆದುಕೊಳ್ಳುವೆನು" ಎಂದು ಸೀರೆಯನ್ನು ನಾಣಿಯ ಬಳಿ ಹಿಡಿದಳು.

ನಾಣಿ ಅದನ್ನು ಕೈಲಿ ಸಹ ಮುಟ್ಟದೆ, ಬೇಡವೆಂದರೂ ಕೇಳದೆ ಜಾಗ ಮಾಡಿಕೊಂಡು ಅಣ್ಣನ ಬಳಿಗೆ ಬಾಣದಂತೆ ನುಗ್ಗಿದ. ಗೋಪಿ ಅವನನ್ನೊಮ್ಮೆ ಕೆಂಗಣ್ಣಿನಿಂದ ನುಂಗಿಬಿಡುವಂತೆ ನೋಡಿ, ಮುಖ ತಿರುಗಿಸಿಕೊಂಡು ಕಿಟಕಿಯ ಬಳಿ ಹೋಗಿ ರಸ್ತೆಯನ್ನು ನೋಡುತ್ತಾ ನಿಂತ.

ಹಿಂದಿರುಗಿ ಹೊರಟಿದ್ದ ಶಾಂತ, ಅಣ್ಣತಮ್ಮಂದಿರಿಗೆ ಜಗಳ ಹೆಚ್ಚಿ ಕೈಕೈ ಆದೀತೆಂಬ ಭಯದಿಂದ ಒಳಗೆ ಹೋಗದೆ ಹಿಂದಿರುಗಿ ಬಂದು ಬಟ್ಟೆಸ್ಟ್ಯಾಂಡಿನ ಬಳಿ ಮೈ ಮುದುರಿ ನಿಂತಳು. ಕಣ್ಣಲ್ಲಿ ಭಯ ತುಂಬಿತ್ತು. ಅನಾಹುತವೇನಾದರೂ ಆದೀತೆನ್ನುವ ಶಂಕೆಯಿಂದ ಮೈಯೆಲ್ಲ ಕಣ್ಣಾಗಿ ನಿಂತಳು.

ನಾಣಿ ಬಿರುಸಾಗಿ ಹೆಜ್ಜೆ ಹಾಕುತ್ತಾ ಅಣ್ಣನ ಬಳಿ ಬಂದು ಹೇಳಿದ,

"ಅಣ್ಣ, ನಾನಿತ್ತ ಸೀರೆಯನ್ನು ಹಿಂತಿರುಗಿಸಲು ಯಾಕೆ ಹೇಳಿದೆ ?"

"ಅವಳನ್ನೆ ಹೋಗಿ ಕೇಳು !"

ಅವನ ಚುಚ್ಚು ನುಡಿಗೆ ಅಂಜದೆ ನಾಣಿ ಹೇಳಿದನು,

"ಅತ್ತಿಗೆ ಹೇಳಲಿಲ್ಲ, ಅದಕ್ಕೆ ನಿನ್ನನ್ನು ಕೇಳಿದ್ದು."

"ಹೇಳುವ ಕಾಲ ಬಂದಾಗ ಹೇಳುವೆನು."

"ನಿನ್ನ ಮಾತೆ ಅರ್ಥವಾಗುವುದಿಲ್ಲ."

"ಇನ್ನು ಸ್ವಲ್ಪ ದಿನ ಹೋಗಲಿ, ಎಲ್ಲ ಅರ್ಥವಾಗುತ್ತೆ."

ನಾಣಿಯಲ್ಲೂ ಕೋಪ ಮೈತುಂಬುತ್ತಾ ಬಂದಿತ್ತು. ಸ್ವಲ್ಪ ಗಡುಸಾಗಿಯೆ ಹೇಳಿದ,

"ಈ ಒಗಟಿನ ಮಾತೆಲ್ಲಾ ನನಗೆ ಬೇಡ, ಮನಸ್ಸು ಬಿಚ್ಚಿ ಮಾತಾಡು!"

"ಆಗಲಿ, ಮನಸ್ಸು ಬಿಚ್ಚಿಯೆ ಮಾತಾಡುವೆನು, ಗಟ್ಟಿ ಎದೆ ಮಾಡಿ ಕೇಳು. ಈವರೆಗೆ ನೀನು ಮಾಡಿದ ಉಪಕಾರವೆ ಸಾಕು; ಇನ್ನು ನನಗೆ ನಿನ್ನ ಪ್ರೀತಿ–ವಿಶ್ವಾಸ ಬೇಡ. ನನ್ನ ವ್ಯವಹಾರದಲ್ಲಿ ನೀನು ತಲೆಯಿಕ್ಕುವುದು ಬೇಡ; ನಿನ್ನ ವ್ಯವಹಾರದಲ್ಲಿ ನಾನು ತಲೆಯಿರಿಸುವುದಿಲ್ಲ. ನಮ್ಮಿಬ್ಬರ ಋಣ ಇಂದೆ ಹರಿದು ಹೋಗಲಿ. ನೀನಿತ್ತ ಸೀರೆಯನ್ನು ನಿನ್ನ ಹೆಂಡತಿಗೇ ತೆಗೆದುಕೊಂಡು ಹೋಗಿ ಉಡಿಸು. ಅದು ಅವಳಿಗೇ ಹೆಚ್ಚು ಒಪ್ಪುತ್ತದೆ." ಶಾಂತಳ ಕಡೆ ತಿರುಗಿ ಮತ್ತೆ ಹೇಳಿದ, "ಅವನ ಮುಖದ ಮೇಲೆ ಎಸಿ ಶಾಂತ ಅದನ್ನು, ಆ ಪಾಪ ಅವನ ಕಣ್ಣಿಗೇ ಹೋಗಿ ಬಡಿಯಲಿ."

ಶಾಂತ ಕಣ್ಣಲ್ಲಿ ದುಃಖ ತುಂಬಿ, ಮೌನವಾಗಿ ಮೈದುನನ ಬಳಿ ಬಂದು ಅವನ ಕಾಲ ಬಳಿ ಸೀರೆಯನ್ನಿರಿಸಿ, ಅವನಿಗೆ ಸ್ವಲ್ಪ ದೂರದಲ್ಲಿ ಕತ್ತು ಬಗ್ಗಿಸಿ ನಿಂತಳು.

ನಾಣಿ ಅತ್ತಿಗೆ ತಂದಿಟ್ಟ ಸೀರೆಯನ್ನು ಕೈಗೆತ್ತಿ ಅಣ್ಣನ ಕಡೆ ರೊಯ್ಯನೆ ಸೆದು ಹೇಳಿದ,

"ನಿಮಗೆ ಬೇಡದಿದ್ದರೆ ಬೀದಿಗೆಸೆಯಿರಿ; ದತ್ತಾಪಹಾರ ಮಾಡಲು ನಾನೇನು ಚಂಡಾಲನಲ್ಲ."

ಗೋಪಿಯೂ ತನ್ನ ಕಾಲು ಬಳಿ ಬಿದ್ದಿದ್ದ ಸೀರೆಯನ್ನು ಕೈಗೆತ್ತಿ ತಮ್ಮನ ಕಡೆ ರೊಯ್ಯನೆಸೆದು ಹೇಳಿದ,

"ಯಾರಿಗೆ ಹೇಳುವೆ ಇಲ್ಲಿ ಅದನ್ನು ! ನಿನಗೆ ಬೇಡದಿದ್ದರೆ ಯಾರಿಗಾದರೂ ದಾನ ಮಾಡು ಹೋಗು. ಬಂದ ಇಲ್ಲಿ ಭೂಪತಿ, ದೊಡ್ಡದಾಗಿ ತನ್ನ ನಡವಳಿಕೆಯನ್ನು ಪ್ರದರ್ಶಿಸಲು. " ಶಾಂತ–ನಾಣಿ ಇಬ್ಬರ ಕಡೆಗೂ ತಿರು ತಿರುಗಿ ಹೇಳಿದ "ಇಲ್ಲಿಗೇ ಆಯಿತು—ಇನ್ನು ಮುಂದೆ ಅವಳು ನಿನ್ನಿಂದ ಯಾವುದಾದರೂ ಪ್ರಯೋಜನ ಪಡೆಯಲಿ, ಕೈ ಕತ್ತರಿಸಿ ತೌರಿಗೆ ತಳ್ಳಿ ಬಿಡುವೆನು; ಹಿಂದುಮುಂದು ನೋಡುವುದಿಲ್ಲ " ಎಂದು ಔಡುಕಚ್ಚಿದನು.

ಶಾಂತ ನಡುಗಿದಳು. ತಲೆ ಗಿರ್ರನೆ ತಿರುಗಿ ಕಣ್ಣುಕಟ್ಟಿ ಬೀಳುವಂತಾಯಿತು. ಬೀರು ಹಿಡಿದು ಸವರಿಸಿ ನಿಂತಳು. ಆ ಮಾತು ಅವಳ ಅಭಿಮಾನವನ್ನು ಚೂರು ಚೂರು ಮಾಡಿದ್ದರೂ ನಿಂತ ಸ್ಥಳ ಬಿಟ್ಟು ಕದಲಲಿಲ್ಲ. ಆಗ ಅವಳಿಗೆ ತನ್ನ ಗೌರವದ ರಕ್ಷಣೆಗಿಂತ ಆ ಸಮಯದ ಅಪಾಯ ತಪ್ಪುವುದೆ ಹೆಚ್ಚಿನದಾಗಿ ಕಂಡುಬಂದಿತು. ತನ್ನಿಂದಾಗಿ ಅವರಿಬ್ಬರ ನಡುವೆ ಹತ್ತಿದ್ದ ಬೆಂಕಿಯಿಂದ ಅವರಿಬ್ಬರಿಗೂ ಯಾವ ತೊಂದರೆಯೂ ಉಂಟಾಗದಂತೆ ರಕ್ಷಿಸಲು ತನ್ನೆಲ್ಲ ನೋವನ್ನೂ ಮೆಟ್ಟಿ ಪ್ರಾಣದ ಹಂಗು ತೊರೆದು ಎದೆ ಗಟ್ಟಿ ಮಾಡಿ ನಿಂತಳು.

ಅಣ್ಣನ ಮಾತು ಕೇಳಿ ನಾಣಿಯೂ ಬೆಚ್ಚಿ ಬಿದ್ದ. ಅವನ ಕಣ್ಣು ಅತ್ತಿಗೆಯ ಕಡೆಗೊಮ್ಮೆ ಹೊರಳಿ ನೋಡಿತು. ಕರುಳು ಚುಚ್ಚುವ ಮಾತು ಕೇಳಿದ್ದರೂ ಕಣ್ಣಲ್ಲಿ ತೊಟ್ಟು ನೀರು ತಾರದೆ, ತಮ್ಮಿಬ್ಬರ ಪ್ರಾಣರಕ್ಷಣೆಗಾಗಿ ಮೈ-ಯೆಲ್ಲ ಕಣ್ಣಾಗಿ ನಿಂತಿರುವ ಆ ದೈವೀ ಮೂರ್ತಿಯನ್ನು ಕಂಡು ಅವನ ತಲೆ ಗೌರವದಿಂದ ಬಾಗಿತು.

ಅವನಿಗೆ ಅತ್ತಿಗೆಯೆಂದರೆ ಬಹಳ ಗೌರವ. ತಾಯಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದ. ಅವಳಲ್ಲಿ ತಾನಿಟ್ಟ ಪ್ರೇಮ ನಿರ್ಮಲವಾಗಿತ್ತು. ಆದರೂ

ಅಣ್ಣ ಹೊಲಸು ಮಾತಾಡಿದ್ದ. ತನ್ನ ಮೇಲೆ ಕಡುವೈರತ್ವವಿದ್ದುದರಿಂದ ಹಾಗೆ ಆಡಿದ್ದರೂ ಆಡಿರಬಹುದೆಂದೆನ್ನಿಸಿತು. ಹೇಗೇ ಆಗಲಿ, ಅವನಿಂದ ದೂರವಿರುವುದೆ ಲೇಸೆಂದರಿತು ಹೇಳಿದ,

"ನೀನು ಏನೂ ಮಾಡುವವನೆ; ಯಾವುದಕ್ಕೂ ಹೇಸುವವನಲ್ಲ. ಸದ್ಯ ನಾನು ಕೊಡುವುದೂ ಬೇಡ, ನೀನು ಕೈ ಕತ್ತರಿಸುವುದೂ ಬೇಡ. ನನ್ನಿಂದ ಆ ಹೆಣ್ಣುಮಗಳು ನೋಯುವುದನ್ನು ಕಣ್ಣಿಂದ ನೋಡಲಾರೆ."

"ನನಗಿಲ್ಲದ ಪ್ರೀತಿ, ಮರುಕ ನಿನಗಾದರೂ ಇದೆಯಲ್ಲಾ—ಅದು ಅವಳ ಭಾಗ್ಯ" ಎಂದು ಶಾಂತಳನ್ನು ಚುಚ್ಚಿ ನೋಡಿದ.

ಆ ನೋಟದ ತಿವಿತವನ್ನು ಕಲ್ಲಾಗಿ ತಡೆದು, ಪ್ರತಿಯಾಗಿ ತಿರಸ್ಕಾರದ ನಗೆಯ ಬಾಣ ಬಿಟ್ಟಳು.

"ನಮ್ಮ ನಮ್ಮ ಕಚ್ಚಾಟದಲ್ಲಿ ಇಲ್ಲದ ಹೇಸಿಕೆ ಮಾತಾಡಿ ನಿರಪರಾಧಿನಿಯಾದವಳನ್ನು ಅಪಮಾನಪಡಿಸುವುದು ಬೇಡ."

"ಅವಳು ನನ್ನ ಹೆಂಡತಿ, ಬೇಕಾದಂತೆ ಮಾಡುವೆನು. ನೀನು ಯಾರು ಕೇಳಲು?"

"ನಿನ್ನ ಹತ್ತಿರ ಮಾತಾಡುವವನಿಗೆ ಬುದ್ಧಿಯಿಲ್ಲ. ಇರುವುದು ನಾವಿಬ್ಬರು. ನೋಡಿದವರು ನಗುವಂತೆ ನಮ್ಮಲ್ಲೆ ಕಚ್ಚಾಟ. ಎಷ್ಟು ಚೆನ್ನಾಗಿದೆಯೊ ಬಾಳು!"

"ಮುಚ್ಚು ಸಾಕು, ನಿನ್ನ ಸಭ್ಯತನ ನನಗೆ ಗೊತ್ತಿದೆ! ನಿನ್ನ ಹತ್ತಿರ ಹೇಳಿಸಿಕೊಂಡು ನಾನು ನಡತೆ ಕಲಿಯಬೇಕಿಲ್ಲ."

"ಇನ್ನು ಸ್ವಲ್ಪ ದಿನ ಹೋದರೆ ಅದೂ ಮಾಡಬೇಕಾಗುತ್ತೆ."

ಗೋಪಿ ಎರಡು ಹೆಜ್ಜೆ ಮುಂದಿರಿಸಿ ಕಣ್ಣಲ್ಲಿ ಕೆಂಡ ಕಾರುತ್ತಾ ಕೈಯೆತ್ತಿ ಹೇಳಿದ,

"ಯಾರಿಗೊ ನೀನನ್ನುವುದು ಹಾಗೆ? ಹಲ್ಲುದುರಿಸಿ ಬಿಟ್ಟೇನು, ಸುವ್ವರ್!"

"ನಾನೇನು ಎಳೆಯ ಮಗುವಲ್ಲ, ಮುದುರಿ ನಿಂತು ಹಲ್ಲುದುರಿಸಿಕೊಳ್ಳಲು! ಅಂಥ ಸಮಯದಲ್ಲಿ ಬುದ್ಧಿ ಕಲಿಸಲು ನನಗೂ ಬರುತ್ತೆ."

"ಸೂಳೆಮಗನೆ... ............!" ಎಂದು ಔಡುಕಚ್ಚಿ, ಪಕ್ಕದ ಮೇಜಿನ

ಮೇಲಿದ್ದ ಗಾಜಿನ ಪೇಪರ್‌ವೆಯಿಟನ್ನು ಕೈಗೆತ್ತಿದ. ತಡೆಯಲೆಂದು ಓಡಿ ಬಂದಿದ್ದ ಶಾಂತಳನ್ನು ಹಿಡಿದು ಪಕ್ಕಕ್ಕೆ ಧಸ್ತನೆ ದಬ್ಬಿ, ತಮ್ಮನ ಮುಖಕ್ಕೆ ಗುರಿಯಿಟ್ಟು ರೊಯ್ಯನೆಸೆದನು.

ಅವನು ದಬ್ಬಿದ ಹೊಡೆತಕ್ಕೆ ಅಲ್ಲಿದ್ದ ಬೀರುವೊಂದಕ್ಕೆ ಅವಳ ತಲೆ ಹೋಗಿ ಫಟ್ಟನೆ ಬಡಿಯಿತು. ಹಣೆಗೆ ಪೆಟ್ಟಾಗಿ ರಕ್ತ ಸೋರಿತು. ಸೆರಗಿನ ತುದಿಯಿಂದ ತಿಕ್ಕಿ ಸವರಿಸಿಕೊಂಡೆದ್ದು ನಿಂತಳು. ಅಪಾಯದ ರಕ್ಷಣೆಯ ಜವಾಬ್ದಾರಿ ಹೊತ್ತು ನಿಂತಿದ್ದವಳಿಗೆ ಆ ನೋವು ಗಮನಕ್ಕೆ ಬರಲಿಲ್ಲ.

ಇತ್ತ ಗೋಪಿಯೆಸೆದ ಗಾಜಿನ ಭಾರದ ಕಲ್ಲು ನಾಣಿಯ ಹಣೆಗೆ ಸರಿಯಾಗಿ ಹೋಗಿ ಬಿತ್ತು. ಹಣೆ ತೂತಾಗಿ ದಳದಳನೆ ರಕ್ತ ಸುರಿಯಿತು. ಅಣ್ಣನ ಕ್ರೂರತನ ಅವನ ಮನಸ್ಸನ್ನು ಕಲ್ಲು ಮಾಡಿತು. ಆ ಕ್ಷಣಕ್ಕೆ ಅವನು ಹಿರಿಯನೆಂಬುದನ್ನು ಮರೆತುಬಿಟ್ಟ. ಅದಕ್ಕೆ ಸರಿಯಾಗಿ, ತನ್ನಿಂದಾಗಿ ಅತ್ತಿಗೆ ಪಟ್ಟ ಬಾಧೆಯು ಕಣ್ಣಿಗೆ ಕಟ್ಟಿ ನಿಂತಿತು. ಅಣ್ಣನ ಈ ಎರಡೂ ಕ್ರಿಯೆಗಳಿಂದ ಅವನಲ್ಲಿ ಎಲ್ಲಿಲ್ಲದ ರಾಕ್ಷಸಶಕ್ತಿ ತುಂಬಿ ಬಂತು. ಅಬ್ಬರಿಸಿದ,

"ಯಾರಿಗೊ ನೀನು ಹೊಡೆಯುವುದು ರ್ಯಾಸ್ಕಲ್! ಏನೊ ಹಿರಿಯನೆಂದು ಮರ್ಯಾದೆಯಿತ್ತು ಮಾತಾಡಿದರೆ ಅಟ್ಟಕ್ಕೇರುವೆಯಾ? ನಿನಗೆ ಬುದ್ಧಿ ಕಲಿಸಲು ನನ್ನಿಂದಾಗುವುದೊ ಇಲ್ಲವೊ ನೋಡಿಯೆ ಬಿಡುವೆನು." ಎಂದು ಸಿಟ್ಟಿನಿಂದ ಮೈಮರೆತು ಓಡಿಬಂದು ಅಣ್ಣನನ್ನು ಗೋಡೆಗೆ ದಬ್ಬಿ ಹಿಡಿದ.

ಗೋಪಿ ಒದ್ದಾಡಿ ಕೈಬಿಡಿಸಿಕೊಂಡು, ತನ್ನ ರಾಕ್ಷಸೀ ಬಲವನ್ನೆಲ್ಲಾ ಹಾಕಿ ನಾಣಿಯನ್ನು ದೂರ ಉರುಳಿ ಬೀಳುವಂತೆ ದಬ್ಬಿದನು.

ಅವನು ದಬ್ಬಿದ ಹೊಡೆತಕ್ಕೆ ನಾಣಿಯ ತಲೆಗೆ ತುಂಬಾ ಪೆಟ್ಟಾಯಿತು. ಅದನ್ನು ಲಕ್ಷ್ಯಕ್ಕೆ ತರದೆ, ಚೇತರಿಸಿ ಮತ್ತೆ ಹೊಡೆದಾಟಕ್ಕೆ ನಿಂತ. ಇಬ್ಬರೂ ಕೈಗೆ ಸಿಕ್ಕಿದ್ದರಲ್ಲಿ ಹೊಡೆದಾಡತೊಡಗಿದರು. ಶಾಂತಳಿಂದ ಏನೂ ಸಾಧ್ಯವಾಗದೆ ಚಿಟ್ಟನೆ ಚೀರಿದಳು.

ಆ ವೇಳೆಗಾಗಲೆ ಹೊಡೆದಾಟದ ಶಬ್ದ ಕೇಳಿ ಎಲ್ಲರೂ ಹಿಡಿದಿದ್ದ ಕೆಲಸ ಹಾಗೇ ಬಿಟ್ಟು ಕೊಠಡಿಯ ಬಳಿ ಓಡಿಬಂದಿದ್ದರು. ಶಾಂತ ಚೀರಿದ ಧ್ವನಿ ಅವರ ರಕ್ತವನ್ನೆಲ್ಲ ಒಣಗಿಸಿ ಬಿಟ್ಟಿತು ಮಡಿ–ಮೈಲಿಗೆ, ಮನೆಯವರು–

ಹೊರಗಿನವರೆಂಬ ಭೇದವನ್ನೆಲ್ಲ ಮರೆತು ಒಬ್ಬರನ್ನೊಬ್ಬರು ದಬ್ಬಿಕೊಂಡು ಕೊಠಡಿಗೆ ನುಗ್ಗಿದರು. ಒಳಗೆ ಬಂದವರಿಗೆ ಅಲ್ಲಿನ ದೃಶ್ಯ ಕಂಡು ಎದೆ ಒಡೆದು ಹೋಯಿತು. ಬಿರುಗಾಳಿಗೆ ಸಿಕ್ಕ ಬಳ್ಳಿಯಂತೆ ನಡುಗುತ್ತ ನಿಂತರು.

ಇಬ್ಬರ ಮೈಮೇಲೂ ರಕ್ತ ತೊಟ್ಟಿಕ್ಕುತ್ತಿದೆ, ಬಟ್ಟೆ ಹರಿದು ನೇತಾಡು ತ್ತಿದೆ, ತಲೆಗೂದಲು ಅಸ್ತವ್ಯಸ್ತದಾಗಿ ಹಾರಾಡುತ್ತಿದೆ. ಆದರೂ ಮೈಮೇಲೆ ಎಚ್ಚರವಿಲ್ಲದೆ ಹೊಡೆದಾಡುತ್ತಿದ್ದಾರೆ.

ಭಟ್ಟರಿಗಿದು ಅಸಹನೀಯವಾಯಿತು. ನಡುಗುತ್ತಿದ್ದ ದೇಹವನ್ನು ಹಿಡಿ ತಕ್ಕೆ ತಂದು, ಹಿಂದುಮುಂದು ನೋಡದೆ ಸಮಾಧಾನ ಪಡಿಸಲು ಮುಂದೆ ನುಗ್ಗಿದರು. ಅಣ್ಣತಮ್ಮಂದಿರನ್ನು ಬೇರೆ ಮಾಡಿ ಜಗಳ ನಿಲ್ಲಿಸಬೇಕಾದರೆ ಅವ ರಿಗೆ ಸಾಕುಸಾಕಾಗಿ ಹೋಯಿತು. ಬೆವರು ಒರೆಸುತ್ತಾ ಹೇಳಿದರು,

"ಇಷ್ಟು ದೊಡ್ಡವರಾಗಿ ಹೊಡೆದಾಡುವುದೆ? ಪರಸ್ಪರ ಏನಾದರೂ ಮನಸ್ತಾಪವಿದ್ದರೆ ಹಿರಿಯರನ್ನು ಎದುರಿಗಿರಿಸಿಕೊಂಡು ಬಗೆಹರಿಸಿಕೊಳ್ಳುವು ದನ್ನು ನೋಡಿದ್ದೇನೆ; ಹೀಗೆ ಕಾದಾಡುವುದನ್ನು ನಾನೆಲ್ಲೂ ನೋಡಿಲ್ಲ. ನನ ಗೇನೋ ಈ ನಡವಳಿಕೆ ಸರಿಬೀಳಲಿಲ್ಲ. ಸೂರಪ್ಪ ಬಂದಿದ್ದಾರೆ, ಸ್ವಲ್ಪವಾದರೂ ಮರ್ಯಾದೆಯ ಮೇಲೆ ಗಮನ ಬೇಡವೆ? ಥೂ ಥೂ ಶುದ್ಧ ಅವಮಾನ!"

ಒಣಗಿದ್ದ ತುಟಿಯನ್ನು ಒರೆಸಿಕೊಳ್ಳುತ್ತಾ ರಂಗಮ್ಮ ಹೇಳಿದರು,

"ಅಲ್ಲ, ಇದ್ದಕ್ಕಿದ್ದಂತೆ ಇವರಿಗೇನು ಬಂತು! ಈಗ ತಾನೆ ನೆಮ್ಮದಿ ಯಾಗಿ ಓಡಾಡಿಕೊಂಡಿದ್ದರು. ಅಷ್ಟರಲ್ಲೆ ಇಷ್ಟು ರಂಪ ಮಾಡಿಕೊಂಡಿರುವ ರಲ್ಲಾ! ಯಾಕಪ್ಪ ಗೋಪಿ, ನಾಣಿ ಏನು ಮಾಡಿದ ನಿನಗೆ? ಅವನ ಮೇಲೆ ಯಾಕಿಷ್ಟು ವಿಷ ಕಾರುತ್ತಿರುವೆ? ನನಗೇನೂ ಅವನಲ್ಲಿ ಅಂಥಾ ಅವ ಗುಣ ಕಂಡುಬರಲಿಲ್ಲ. ನಾನು ಕಂಡಂತೆ ಅವನು ನಿನ್ನಲ್ಲಿ ಎಷ್ಟೋ ಗೌರವ ವಿರಿಸಿದ್ದಾನೆ. ಹಾಗೆ ಉಪ್ಪು-ಹುಳಿ ತಿನ್ನುವ ದೇಹ; ಪ್ರತಿಯೊಬ್ಬರಿಂದಲೂ ಏನಾದರೂ ತಪ್ಪಾಗೆ ಆಗುತ್ತೆ. ಒಂದು ಸಮಯ ತಪ್ಪು ಮಾಡಿದ್ದರೂ ಒಳ್ಳೇ ಮಾತಿನಲ್ಲಿ ಹೇಳದೆ, ಬೆಳೆದವನ ಮೇಲೆ ಹೀಗೆ ಕೈಮಾಡುವರೆ? ಏನೋಪ್ಪ- ನನಗೇನೂ ಅದು ಸರಿ ಕಾಣಲಿಲ್ಲ" ಎಂದು ನಾಣಿಯ ಕಡೆ ತಿರುಗಿ ಹೇಳಿ ದರು, "ಅಲ್ಲ ನಾಣಿ, ನೀನಾದರೂ ಆಯಿತು. ಅಣ್ಣನ ಮೇಲೆ ಹೀಗೆ ಕೈ ಮಾಡಬಹುದೆ? ದೊಡ್ಡವರು ಚಿಕ್ಕವರೆನ್ನುವ ಗೌರವ ನಿನಗೂ ಬೇಡ

ಪಾಯಿತೆ? ಅಥವಾ ಅವನೊಂದೆರಡು ಮಾತು ಅಂದ, ಸಹಿಸಿಕೊಂಡಿದ್ದರೆ ನಿನ್ನ ಗಂಟೇನು ಹೋಗುತ್ತಿತ್ತು! ಯಾಕೊ ಬರಬರುತ್ತಾ ನಿನ್ನ ನಡವಳಿಕೆಯೂ ಕೆಟ್ಟುಹೋಯಿತು. ನನಗಂತೂ ಇದನ್ನೆಲ್ಲಾ ನೋಡಿದರೆ ಇರುವುದಕ್ಕಿಂತ ಸಾಯುವುದೆ ಲೇಸೆನ್ನಿಸುತ್ತೆ. ನೀವು ಹೀಗೇ ಇದ್ದರೆ ನಾನೇನು ಹೆಚ್ಚು ದಿನ ಬದುಕಲಾರೆ. ನೀವು ಅಣ್ಣ-ತಮ್ಮ ಹಾರೈಸುವುದೂ ನನ್ನ ಸಾವನ್ನೆ. ಅದಕ್ಕೆ ಹೀಗೆಲ್ಲ ಮಾಡುತ್ತಿರುವಿರಿ. ಹೀಗೆ ಚೂರುಚೂರಾಗಿ ಸಾಯಿಸುವುದಕ್ಕಿಂತ ಒಂದೇ ಬಾರಿ ವಿಷಕೊಟ್ಟು ಬಿಡಿ, ರಗಳೆಯೆ ಇಲ್ಲ."

ತಾಯಿಯ ಆ ಮಾತಿನಿಂದ ಇಬ್ಬರೂ ಸತ್ತ್ರಂತಾದರು. ಕೊಂಚ ಹೊತ್ತು ಕೆಳಹಾಕಿದ ಕತ್ತನ್ನು ಮೇಲೆತ್ತಲಿಲ್ಲ. ಕೋಪ-ತಿರಸ್ಕಾರದ ಕಾವಿನಿಂದ ಉಸಿರು ಕಟ್ಟಿದ್ದ ಆ ಸನ್ನಿವೇಶದಲ್ಲಿ ಹೆಚ್ಚು ಹೊತ್ತು ಮೌನ ಅಸಹನೀಯವಾಗಿ ನಾಣಿ ಬಗ್ಗಿಸಿದ ಕತ್ತನ್ನು ಮೇಲೆತ್ತಿ ನಡೆದದ್ದನ್ನೆಲ್ಲ ಚಾಚೂ ತಪ್ಪದಂತೆ ತಾಯಿಗೆ ತಿಳಿಸಿ, ಹೇಳಿದ,

"ನಾನಿನ್ನೊಂದು ಗಳಿಗೆಯೂ ಈ ಮನೆಯಲ್ಲಿರುವುದಿಲ್ಲ. ದಿನಬೆಳಗಾದರೆ ಯಾರಿಗೆ ಬೇಕು ಈ ರಾಮಾಯಣ! ಈಗಲೆ ಲಾಯರನ್ನು ಕರೆಸಿ ಪಾಲು-ಪಟ್ಟಿ ಮಾಡಿಸಿ ಬಿಡು. ಹೇಗೂ ಹಿರಿಯರಾಗಿ ಭಟ್ಟರು-ಸೂರಪ್ಪನವರಿದ್ದಾರೆ. ಅವರೆದುರಿಗೇ ಆಗಿಹೋಗಲಿ!"

ಮುಖದಲ್ಲಿ ಹರಿಯುತ್ತಿದ್ದ ಬೆವರನ್ನು ಒರೆಸಿಕೊಳ್ಳುತ್ತ ಗೋಪಿ ಹೇಳಿದ,

"ನಾನೆ ನಿನಗೆ ಆ ಮಾತನ್ನು ಹೇಳಬೇಕೆಂದಿದ್ದೆ. ನಿನ್ನ ಬಾಯಲ್ಲೆ ಬಂದದ್ದು ಒಳ್ಳೆಯದಾಯಿತು. ನಿನ್ನಂಥ ವಿಶ್ವಾಸಘಾತುಕನೊಡನೆ ಬದುಕಲು ನನಗೂ ಇಷ್ಟವಿಲ್ಲ. ಆದಷ್ಟು ಬೇಗ ಬಿಡುಗಡೆಯಾಗಿ ಹೋಗಲಿ. ಯಾವುದೂ ಒಂದು ಇತ್ಯರ್ಥಕ್ಕೆ ಬಂದ ಹೊರತು, ನಾನೂ ಈ ಮನೆಯಲ್ಲಿ ಅನ್ನ ನೀರು ಮುಟ್ಟುವುದಿಲ್ಲ. ನಿನ್ನ ಹಿಡಿತ ತಪ್ಪಿದ ನಡವಳಿಕೆಯಿಂದ ನನಗೂ ಬೇಸರ ಬಂದುಹೋಗಿದೆ. ದೂರಕ್ಕೆ ನಮಸ್ಕಾರ. ಇಷ್ಟು ದಿನ ನಿನ್ನ ಪ್ರೀತಿ ಉಂಡದ್ದೆ ಸಾಕು; ಇನ್ನು ಜನ್ಮಜನ್ಮಾಂತರಕ್ಕೂ ನನಗೆ ಬೇಡ."

"ಈಗ ಊಟದ ಹೊತ್ತು, ಯಾವ ಮಾತಾಡುವುದೂ ಬೇಡ. ಸಂಜೆಗೆ ಎಲ್ಲರೂ ಬಿಡುವಾಗಿ ಕೂತು ವಿಚಾರ ಮಾಡಿ ಒಂದು ನಿರ್ಧಾರಕ್ಕೆ ಬರೋಣ. ಮನಸ್ಸು ಮುರಿದ ಮೇಲೆ ಒಟ್ಟಿಗಿರುವುದು ಸರಿಯೂ ಅಲ್ಲ" ಎಂದು ರಂಗಮ್ಮ

ನಾಣಿಯ ಕಡೆ ತಿರುಗಿ ಹೇಳಿದರು, "ನಡಿ ನಾಣಿ ಒಳಗೆ, ಬಹಳ ಚೆನ್ನಾಗಿದೆ. ಬರಬರುತ್ತಾ ಅಣ್ಣತಮ್ಮಂದಿರು ದಾಯಾದಿಗಳಾಗುತ್ತಿದ್ದೀರಿ. ಮಾನಮರ್ಯಾದೆ ಯೆಲ್ಲ ತೊಳೆದೇ ಹೋಯಿತೆಂದು ಕಾಣುತ್ತೆ. ಥೂ, ಯಾಕೊ ಅನಾಗರಿಕರ ಸಂಸಾರದಂತಾಯಿತು. ಮಾತಿಗೆ ಮೊದಲು ಹೊಡೆತ-ಬಡೆತ. ಬ್ರಾಹ್ಮಣ ಸಮಾಜಕ್ಕೆ ಅಪಮಾನ ಇದು. ಇನ್ನೂ ಏನೇನು ಕಾಣಬೇಕೊ ಈ ಕಣ್ಣಲ್ಲಿ !" ಎಂದು ಬಲಸತ್ತಿದ್ದ ಕಾಲನ್ನು ನಿಧಾನವಾಗೆಳೆದು ರಂಗಮ್ಮ ಒಳಗೆ ನಡೆದರು.

ಅವರನ್ನನುಸರಿಸಿ ಭಟ್ಟರನ್ನುಳಿದು ಎಲ್ಲರೂ ಒಬ್ಬೊಬ್ಬರಾಗಿ ಕೊಠಡಿ ಯಿಂದ ಕರಗಿದರು.

ಗೋಪಿ ಬೆನ್ನ ಹಿಂದೆ ಕೈಕಟ್ಟಿ ಬುಸುಗುಟ್ಟುತ್ತಾ ಅತ್ತಿತ್ತ ಓಡಾಡತೊಡ ಗಿದ. ನೆತ್ತಿಗೇರಿದ ಸಿಟ್ಟು ಇಳಿಯಲೊ ಬೇಡವೊ ಎಂದು ಮೀನಮೇಷ ಮಾಡು ತ್ತಿತ್ತು. ಅಷ್ಟರಲ್ಲಿ ಭಟ್ಟರ ಮಾತು ಅದನ್ನಲ್ಲೆ ತಡೆಹಿಡಿದು ನಿಲ್ಲಿಸಿತು.

"ಅಲ್ಲ ಕಣಯ್ಯ ! ನಿನಗ್ಯಾಕೆ ಬುದ್ಧಿಯಿಲ್ಲ ? ಏನೊ ಲೋಕರೂಢಿ ಯಂತೆ ಶುಭಸಮಯದಲ್ಲಿ ಮರ್ಯಾದೆಗಾಗಿ ನಾಣಿ ಸೀರೆಯಿತ್ತರೆ, ಅದನ್ನಿಷ್ಟು ದೊಡ್ಡದು ಮಾಡಿಕೊಳ್ಳುವುದೆ ! ನಮ್ಮವರು ತಮ್ಮವರೆಂದರೆ ಮತ್ತೇನೆಂದು ತಿಳಿದೆ ! ಒಳ್ಳೆಯದು—ಕೆಟ್ಟದ್ದರಲ್ಲಿ ಒಬ್ಬರಿಗೊಬ್ಬರು ಕೊಟ್ಟು-ತೆಗೆದುಕೊಳ್ಳ ಬೇಕು, ಅದು ವ್ಯವಹಾರ ಧರ್ಮ !"

"ನನ್ನ ಸ್ವಂತ ವಿಷಯದಲ್ಲಿ ನೀವು ತಲೆ ಹಾಕಿ ಬರಬೇಡಿ ಭಟ್ಟರೆ, ನನಗೆ ಯಾರ ಹಿತೋಪದೇಶವೂ ಬೇಕಾಗಿಲ್ಲ. ಎಲ್ಲಿ ಹೇಗೆ ನಡೆದುಕೊಳ್ಳಬೇಕೆನ್ನು ವುದು ನನಗೂ ಗೊತ್ತಿದೆ. ಯಾರೂ ಹೇಳಿಕೊಡುವುದು ಬೇಡ."

"ಹೋಗಲಿ ಬಿಡಪ್ಪ, ಕೋಪ ಮಾಡಿಕೊಳ್ಳಬೇಡ. ಏನೊ ನನ್ನ ಕಣ್ಣ ಮುಂದೆ ಬೆಳೆದ ಹುಡುಗನಲ್ಲ ನೀನು ಎಂದು ನಾಲ್ಕು ಹಿತವಚನ ಹೇಳಿದೆ; ಬೇಡದಿದ್ದರೆ ಬಿಟ್ಟುಬಿಡು. ರಂಗಮ್ಮ ಇರುವಷ್ಟು ದಿನವಾದರೂ ನೀವು ಅಣ್ಣ ತಮ್ಮಂದಿರು ಅನ್ಯೋನ್ಯವಾಗಿದ್ದಿದ್ದರೆ ಏನೊ ಆ ಪ್ರಾಣಿ ಸುಖವಾಗಿ ಕಣ್ಣು ಮುಚ್ಚುತ್ತಿದ್ದರು. ಹೊತ್ತು, ಹೆತ್ತು ಇಷ್ಟು ದಿನ ಸಾಕಿ ಸಲಹಿದ್ದಕ್ಕೆ ಅಷ್ಟಾ ದರೂ ಮಾಡಿ ಪುಣ್ಯ ಕಟ್ಟಿಕೊಳ್ಳಿ— " ಎಂದು ಉತ್ತರಕ್ಕೆ ಕಾಯದೆ ಹೊರಟು ಹೋದರು.

ಅಷ್ಟರಲ್ಲಿ ಊರಿಗೆ ತರಕಾರಿ–ಹಣ್ಣು–ಹೂವು ತರಲು ಮಾರುಕಟ್ಟೆಗೆ ಹೋಗಿದ್ದ ಸೂರಪ್ಪನವರು ಕೈಲಿ ದೊಡ್ಡದೊಂದು ಬುಟ್ಟಿ ಹಿಡಿದು ಏದುತ್ತಾ ಒಳಗೆ ಬಂದರು. ಅವರ ಸಹಾಯಕ್ಕೆ ಭಟ್ಟರೂ ಹೋಗಿ, ಅಲ್ಲೆ ಒಂದು ಪಕ್ಕದಲ್ಲಿ ಬುಟ್ಟಿಯಿರಿಸಿ, ಊಟದ ವೇಳೆಯಾದ್ದರಿಂದ ಆಗ ತಾನೆ ನಡೆದ ವಿರಸ ಘಟನೆಯ ಸುಳಿವುಗೊಡದೆ ನಗುತ್ತಾ ಹೇಳಿದರು,

"ಎಷ್ಟು ಹೊತ್ತು ಮಾರಾಯರೆ ಬರುವುದು ? ನಾನೇನೊ ಮಾರುಕಟ್ಟೆಯನ್ನೆ ಹೊತ್ತು ತರುವಿರಿಯೆಂದಿದ್ದೆ. ಅಡಿಗೆಯೆಲ್ಲ ಆರಿ ಅಕ್ಷತೆಯಾಯಿತು. ಏಳಿ, ಕೈಕಾಲು ತೊಳೆದುಕೊಳ್ಳಿ."

"ಛೆ, ಎಂಥ ಕೆಲಸವಾಯಿತು, ನನ್ನಿಂದ ಎಲ್ಲರೂ ಕಾಯುವಂತಾಯಿತಲ್ಲ ! "

"ಹಾಗೇನೂ ಇಲ್ಲ, ಆತಂಕಪಡಬೇಡಿ. ನಾಣಿ–ಗೋಪಿಯೂ ಈಗ ತಾನೆ ಬಂದರು."

"ಒಳ್ಳೆಯದಾಯಿತು. ನನ್ನೊಬ್ಬನಿಂದಲೆ ತೊಂದರೆ ಆಗಲಿಲ್ಲವಲ್ಲ ! ಬಂದೆ, ಈ ಜವಳಿಯನ್ನು ಶಾಂತಳ ಕೈಲಿ ಕೊಟ್ಟು ಬರುವೆನು" ಎಂದು ಹೆಜ್ಜೆ ಮುಂದಿಟ್ಟರು."

ಭಟ್ಟರಿಗೆ ಗಾಬರಿಯಾಯಿತು.

'ಈ ಸಮಯದಲ್ಲಿ ಶಾಂತಳನ್ನು ನೋಡಿದರೆ ಸೂರಪ್ಪ ಖಂಡಿತ ಕಂಗಾಲಾಗುವುದರಲ್ಲಿ ಸಂದೇಹವಿಲ್ಲ. ಊಟದ ಸಮಯ. ಮನಸ್ಸಿಗೆ ಬೇಸರವಾದರೆ ಆಹಾರವೂ ಇಳಿಯುವುದಿಲ್ಲ. ಅದರಿಂದ ಉಳಿದವರಿಗೂ ನೋವಾಗುತ್ತದೆ. ಹಾಗಾಗುವುದನ್ನು ತಡೆಯಲೆ ಬೇಕು' ಎಂದು ಹೊಳೆದು ಹೇಳಿದರು.

"ಇಲ್ಲಿ ಕೊಡಿ ಅದನ್ನು, ನಾನು ತೆಗೆದಿರಿಸುವೆನು ಭದ್ರವಾಗಿ."

"ಅವಳನ್ನು ಸ್ವಲ್ಪ ಕಾಣಲೆ ಬೇಕು ನಾನು. ಇಲ್ಲದಿದ್ದರೆ ನೀವೇ ಇರಿಸಿದ್ದರೂ ತೊಂದರೆಯಿರಲಿಲ್ಲ. ಆಗಲಿ, ಎಲೆ ಹಾಕಿ, ಈಗ ಬಂದೆ. " ಎಂದು ಶಾಂತಳನ್ನು ಹುಡುಕಿಕೊಂಡು ಹೊರಟೆ ಬಿಟ್ಟರು.

ಶಾಂತಳ ಕಣ್ಣು ಅತ್ತು ಅತ್ತು ಊದಿತ್ತು. ಇದ್ದಕಿದ್ದಂತೆ ತಂದೆ ಬಂದುದನ್ನು ಕಂಡು ಬೆಚ್ಚಿದಳು. ಅವಸರವಸರವಾಗಿ ಕಣ್ಣೊರಸಿ ಮೇಲೆದಳು,

ದುಃಖದಿಂದ ವಿಕಾರವಾದ ಮುಖ ತೋರಿಸಬಾರದೆಂದು ಮಾಡಿದ ಪ್ರಯತ್ನ ವೆಲ್ಲ ವ್ಯರ್ಥವಾಯಿತು.

ಭಟ್ಟರೆಣಿಕೆ ಸುಳ್ಳಾಗಲಿಲ್ಲ. ಸೂರಪ್ಪ ಮಗಳನ್ನು ಕಂಡು ಗರಬಡಿದಂ ತಾದರು. ಗಾಬರಿ ತುಂಬಿ ಕಣ್ಣಾಲಿ ಕೊಂಚ ಹೊತ್ತು ಚಲಿಸದೆ ಕಲ್ಲಿನಂತೆ ನಿಂತಿತು. ಮಗಳಿಂದಲೆ ಸುದ್ದಿ ತಿಳಿಯಬಹುದೇನೊ ಎಂದು ಕಾದಿದ್ದರು. ಕಡೆಗೆ ನಿರಾಶರಾಗಿ ಕೇಳಿದರು,

"ಯಾಕೆ ಶಾಂತ, ಏನಾಯಿತು? ಬೆಳಿಗ್ಗೆ ನಾನು ಹೋಗುವಾಗ ಚೆನ್ನಾಗಿದ್ದೆ! ಆರೋಗ್ಯವೇನಾದರೂ ಹೆಚ್ಚುಕಡಿಮೆಯಾಯಿತೇನು?"

ಕುಸುಕುಸು ಅಳುವೆ ಅದಕ್ಕುತ್ತರವಾಯಿತು.

"ಹೇಳು ಶಾಂತ, ಏನಾಯಿತು? ಮಾತಾಡದೆ ಹೀಗೆ ಸುಮ್ಮನೆ ಅತ್ತರೆ ನಾನೇನೆಂದು ತಿಳಿಯಲಿ! ಸಂಕೋಚ ಮಾಡಿಕೊಳ್ಳಬೇಡ, ಹೇಳು" ಎಂದು ತಲೆ ನೇವರಿಸಿದರು.

ಶಾಂತ ದುಃಖವನ್ನು ಹತೋಟಿಗೆ ತಂದು ನುಡಿದಳು,

"ಬೇಡಪ್ಪ, ನನ್ನನ್ನು ಒತ್ತಾಯಪಡಿಸಬೇಡ. ಆ ಬೆಂಕಿಯಿಂದ ನಾನೊ ಬ್ಬಳೇ ಸುಡುತ್ತಿರುವುದು ಸಾಕು; ನೀವು ಬಲಿಯಾಗುವುದು ಬೇಡ."

"ಹಾಗಂದರೇನು! ನಿನಗಾದ ಕಷ್ಟ–ಸುಖಕ್ಕೆ ನಾವೂ ಭಾಗಿಗಳೇ. ಮುಚ್ಚುಮರೆ ಮಾಡಬೇಡ. ಏನಿದ್ದರೂ ಹೇಳಿಬಿಡು."

"ಆ ಕೆಟ್ಟ ಮಾತು ಕೇಳಿದರೆ ನಿಮ್ಮೆದೆ ಒಡೆದುಹೋದೀತು! ನಾನು ಖಂಡಿತ ಹೇಳುವುದಿಲ್ಲ."

"ನಿನ್ನಿಂದ ವಿಷಯ ತಿಳಿದ ಹೊರತು ನಾನೊಂದು ತೊಟ್ಟು ನೀರು ಸಹ ಮುಟ್ಟುವುದಿಲ್ಲ. ಹಠ ಮಾಡಬೇಡ ಹೇಳು; ಎಂಥ ಕೆಟ್ಟ ಮಾತಾದರೂ ಅರ ಗಿಸಿಕೊಳ್ಳುವ ಚೈತನ್ಯ ನನಗಿದೆ; ಹೆದರಬೇಡ, ಧೈರ್ಯವಾಗಿ ಹೇಳು; ಎದೆ ಗಟ್ಟಿ ಮಾಡಿ ಕೇಳುವೆನು."

ತಂದೆಯ ನಿರ್ಧಾರದ ಮುಂದೆ ಅವಳ ನಿರ್ಧಾರ ಬಿಸಿಗಿಟ್ಟ ಬೆಣ್ಣೆಯಂತೆ ಕರಗಿ ನೀರಾಯಿತು. ಆದರೂ ಕೂಡಲೆ ವಿಷಯ ತಿಳಿಸುವ ಧೈರ್ಯವುಂಟಾಗ ಲಿಲ್ಲ. ಗಂಡನಂತೆ ತಂದೆ ಎಲ್ಲಿ ತಪ್ಪಾಗಿ ತಿಳಿಯುವರೊ ಎನ್ನುವ ಭೀತಿ ಬಂದು, ತನ್ನ ನಡವಳಿಕೆಯ ಬಗ್ಗೆ ವಿಶ್ವಾಸದ ಯಾಚನೆ ಮಾಡಿದಳು.

"ಅಪ್ಪಾ, ನೀವು ಮಾತ್ರ ನನ್ನಲ್ಲಿ ಸಂಶಯವಿಡಬೇಡಿ. ನಿಮ್ಮ ಪಾದ ದಾಣೆಗೂ ಧರ್ಮ ಕೆಟ್ಟಿಲ್ಲ! ನಿಮ್ಮ ಮನೆತನಕ್ಕೆ, ನಿಮ್ಮ ಪರಿಶುದ್ಧ ಬಾಳಿಗೆ ತಕ್ಕಂತೆ ನಡೆಯುತ್ತ ಬಂದಿದ್ದೇನೆ. ನನ್ನನ್ನು ತಪ್ಪಾಗಿ ತಿಳಿಯಬೇಡೀಪ್ಪ" ಎಂದು ಕಾಲು ಹಿಡಿದು ಬಿಕ್ಕಿ ಬಿಕ್ಕಿ ಅತ್ತಳು.

ಸೂರಪ್ಪ ಆ ಮಾತಿನಿಂದ ನಿಜವಾಗಿಯೂ ಗಾಬರಿಯಾದರು. ಕನಸು-ಮನಸಿನಲ್ಲೂ ಮಗಳಲ್ಲಿ ಸಂಶಯವಿಟ್ಟವರಲ್ಲ. ಅವಳ ಇಂದಿನ ವರ್ತನೆ ಅವರಿಗರ್ಥವಾಗಲಿಲ್ಲ. ಕೈಹಿಡಿದೆಬ್ಬಿಸಿ ಕಂಗಾಲಾಗಿ ಕೇಳಿದರು,

"ಯಾಕಮ್ಮ ಶಾಂತ, ಹೀಗೆಲ್ಲ ಮಾತಾಡುವೆ? ನಿನ್ನನ್ನು ನಾನೆಂದೂ ತಪ್ಪಾಗಿ ತಿಳಿಯಲಿಲ್ಲವಲ್ಲಮ್ಮಾ! ನಿನ್ನ ಮೇಲೆ ಅಪರಾಧ ಹೊರಿಸಿ ನಾನು ಯಾವ ನರಕಕ್ಕೆ ಹೋಗಲಿ ಹೇಳು. ಹುಟ್ಟಿದಂದಿನಿಂದ ನಿನ್ನ ಪರಿಚಯವಾಗಿಲ್ಲವೆ ನನಗೆ! ಸುಮ್ಮನೆ ಹುಚ್ಚುಚ್ಚಾಗಿ ಮಾತಾಡಬೇಡ. ವಿಷಯ ನಡೆದದಾದರೂ ಏನು, ಸರಿಯಾಗಿ ಬಿಡಿಸಿ ಹೇಳು."

"ಅವರು ಮನಸ್ಸನ್ನು ಇಲ್ಲದ ಸಂಶಯ ಭೂತಕ್ಕೆ ಬಲಿಗೊಟ್ಟಿದ್ದಾರೆ. ಅದರ 'ಬಲಿ' ನಾನಾಗುವ ವರೆಗೆ ಬಿಡುಗಡೆ ಕಾಣಲಿಲ್ಲ."

'ಬಲಿ' ಎನ್ನುವ ಶಬ್ದ ಸೂರಪ್ಪನ ಸಮಾಧಾನವನ್ನು ಮೆಟ್ಟಿ ಕಿಡಿ ಕಾರುವಂತೆ ಮಾಡಿತು. ಕಿವಿ ಮುಚ್ಚಿ ಅಬ್ಬರಿಸಿ ಕೇಳಿದರು,

"ಶಾಂತ, ಆ 'ಬಲಿ' ಎನ್ನುವ ಶಬ್ದ ಮಾತ್ರ ನನ್ನ ಮುಂದೆ ಎತ್ತಬೇಡ; ನನ್ನ ತಲೆ ಕೆಟ್ಟು ಹಾಳಾದೀತು! ಹೇಳು. ಅವನಿಗೆ ಹಿಡಿದಿರುವ ಭೂತವಾದರೂ ಯಾವುದು? ಅದನ್ನೋಡಿಸಲು ನನ್ನಲ್ಲಿ ಶಕ್ತಿ ಇದೆಯೋ ಇಲ್ಲವೋ ನೋಡುವೆನು!"

"ನನ್ನ ನಡವಳಿಕೆಯಲ್ಲಿ ಅವಿಶ್ವಾಸವುಂಟಾಗಿದೆ ಅವರಿಗೆ. ಸ್ವಂತ ತಮ್ಮನ ಮೇಲೆಯೆ ಸಂಶಯಪಟ್ಟಿದ್ದಾರೆ."

"ಮುಠ್ಠಾಳ ಅವನು, ಕಣ್ಣಿಂದ ನೋಡಿದ್ದಾನಂತೊ?"

"ಎಲ್ಲೊ ಕನಸಿನಲ್ಲಿ ಕಂಡಿರಬೇಕು; ಏನಾದರೂ ಇದ್ದರೆ ತಾನೆ ನೋಡಲು! ಒಟ್ಟಿನಲ್ಲಿ ನನ್ನ ವಿಧಿ ಚೆನ್ನಾಗಿಲ್ಲ. ಈ ಹೊಲಸು ಮಾತು ಕೇಳಿ ಬದುಕಲು ಜೀವ ಹೇಸುತ್ತದೆ. ಏನು ಮಾಡುವುದೆಂದೆ ತೋಚುತ್ತಿಲ್ಲ ನನಗೆ."

ಅವರ ಮನಸ್ಸು ಇಪ್ಪತ್ತೈದು ವರ್ಷಗಳ ಹಿಂದಿನ ಬಾಳನ್ನು ಬೆದಕಿ ನೋಡಿತು. ಅಂದು ನಡೆದ ವಿಷಯ ಕಣ್ಣ ಮುಂದೆ ಕಟ್ಟಿ ನಿಂತಿತು. ಕೃಷ್ಣಪ್ಪನ ವಿಷಯವಾಗಿ ಸುಶೀಲಮ್ಮನಲ್ಲಿ ತಾವೂ ಹೀಗೆ ಸಂಶಯಪಟ್ಟಿದ್ದರು.

ಸ್ವಲ್ಪ ದಿನದಲ್ಲೆ ತಮ್ಮ ತಪ್ಪು ತಿಳಿದು, ಪಶ್ಚಾತ್ತಾಪದ ಪರಿಶುದ್ಧ ಜಲದಿಂದ ಹೆಂಡತಿಗೆ ಅಭಿಷೇಕ ಮಾಡಿ, ಶುದ್ಧ ಪ್ರೀತಿಯ ನೈವೇದ್ಯ ಸಮರ್ಪಿಸಿದ್ದರು. ತಮ್ಮ ಬಾಳಿನ ಆ ಘಟನೆ ನೆನಪಾಗಿ ಮನಸ್ಸಿಗೆ ಸ್ವಲ್ಪ ನೆಮ್ಮದಿ ಬಂತು. ತಮ್ಮಂತೆ ಗೋಪಿಯೂ ಒಂದೆರಡು ದಿನ ಹಾರಾಡಿ ಅನಂತರ ಮೆತ್ತಗಾಗುವನೆಂದು ತಿಳಿದು ಮಗಳ ಬೆನ್ನುತಟ್ಟಿ ಹೇಳಿದರು,

"ಹೆದರಬೇಡ ಸುಮ್ಮನಿರು. ಸಮಯ ನೋಡಿ ಗೋಪಿಗೆ ಬುದ್ಧಿ ಹೇಳುವೆನು. ಹುಡುಗುತನ, ಒಂದೆರಡು ದಿನ ಹಾಗೆ, ಆಮೇಲೆಲ್ಲ ಸರಿಹೋಗುತ್ತೆ. ಹಿಡಿ, ಈ ಜವಳಿಯನ್ನು ಪೆಟ್ಟಿಗೆಯಲ್ಲಿರಿಸು. ಇದು ನಿನಗೆ ತಂದ ಪದಕ. ಮಾದರಿ ಒಪ್ಪದಿದ್ದರೆ ಬೇರೆ ತರುವೆನು." ಎಂದು ಜವಳಿ ಗಂಟನ್ನೂ ಪದಕದ ಪೆಟ್ಟಿಗೆಯನ್ನೂ ಮಗಳ ಕೈಗಿತ್ತು ಒಂದೆರಡು ಹೆಜ್ಜೆ ಮುಂದಿಟ್ಟವರು ಮತ್ತೆ ನಿಂತು ಹೇಳಿದರು, "ಈ ಸುದ್ದಿಯನ್ನು ಮರೆತೂ ಸುಶೀಲನಿಗೆ ತಿಳಿಸಬೇಡ! ಮೊದಲೆ ಅವಳು ದುರ್ಬಲ ಮನಸ್ಸಿನವಳು. ಗಾಬರಿಯಾಗಿ ಪ್ರಾಣಕ್ಕೇನಾದರೂ ಅಪಾಯ ಮಾಡಿಕೊಂಡರೆ ಸಂಸಾರ ತಬ್ಬಲಿಯಾದೀತು!"

ಶಾಂತ ಹೇಳುವುದಿಲ್ಲವೆಂದು ಭರವಸೆಯಿತ್ತಳು. ಅವಳಿಂದ ಖಚಿತವಾಗಿ ಮಾತು ತೆಗೆದುಕೊಂಡ ಮೇಲೆಯೆ ಅವರು ಅಲ್ಲಿಂದ ಹೆಜ್ಜೆ ಕಿತ್ತದ್ದು.

## ೧೫

ತಂದೆ ಹೇಳಿದ ಮಾತು ಶಾಂತಳ ಹೃದಯದಲ್ಲಿ ನೆಲೆಯೂರಿ ನಿಂತಿತು. ಆಗಾಗ್ಗೆ ತನ್ನ ತಾಯಿಯ ಸ್ವಭಾವ ಯಾವ ಕಾರಣದಿಂದಲೊ ವಿಚಿತ್ರವಾಗುತ್ತಿದ್ದುದನ್ನು ತಾನೂ ಕಣ್ಣಾರೆ ಕಂಡು ನೊಂದಿದ್ದಳು. ಹಾಗಾಗಿ, ಮರೆತೂ ತಾಯಿಯ ಹತ್ತಿರ ತನ್ನ ಬಾಳ ನೋವನ್ನು ತೋಡಿಕೊಳ್ಳಲಿಲ್ಲ. ಹೃದಯ

ವನದಲ್ಲಿ ಚಿಂತೆಯ ಕಿಚ್ಚಿದ್ದು ಬದುಕಿನ ಆಶೆಯ ನಾನಾ ರೂಪದ ಮರಮುಟ್ಟು ಗಳನ್ನು ದಹಿಸುತ್ತಿದ್ದರೂ, ಅವರಿಗದನ್ನು ತೋರಗೊಡದೆ ಸದಾ ಮುಖದ ಮೇಲೆ ಕೃತಕ ನಗೆಯನ್ನು ಅರಳಿಸುತ್ತಿದ್ದಳು. ಆದರೂ ಅವಳ ಹಿಡಿತ ತಪ್ಪಿ ಆಗಾಗ ಮುಖ ಚಿಂತೆಯಿಂದ ಬಾಡಿ ಮುದುಡುತ್ತಿತ್ತು. ಹಾಗಾದಾಗ ಹೆದರಿ ತಾಯ ಕಡೆಗೊಮ್ಮೆ ನೋಡುವಳು. ಅವರ ಗಮನ ಬೇರೆಲ್ಲೊ ಇರುವುದನ್ನು ಕಂಡು ನೆಮ್ಮದಿ ತಂದುಕೊಳ್ಳುತ್ತಿದ್ದಳು.

ಬಿಡುವಿಲ್ಲದ ಕೆಲಸದಿಂದ ಹಣ್ಣಾಗುತ್ತಿದ್ದ ಸುಶೀಲಮ್ಮ ಆ ಬಾರಿ ಮಗಳ ಕಡೆ ಹೆಚ್ಚು ಗಮನ ಕೊಡಲಿಲ್ಲ. ಎಂದಿನಂತಾಗಿದ್ದರೆ, ಇಷ್ಟು ಹೊತ್ತಿಗೆ ಹೇಗಾದರೂ ಮಾಡಿ ಮಗಳ ಬಾಯಿ ಬಿಡಿಸಿ, ಅತ್ತೆಮನೆ ಸುದ್ದಿ ತಿಳಿಯುತ್ತಿದ್ದರು. ಶಾಂತಳ ಪುಣ್ಯದಿಂದಲೊ ಏನೊ, ಆಗ ಅವರ ಮೈತುಂಬ ಕೆಲಸ ಬಿದ್ದಿತ್ತು. ಮನೆತುಂಬ ಜನ. ಬೆಳಗಿನಿಂದ ರಾತ್ರಿವರೆಗೆ ಉಸಿರುಕಟ್ಟಿ ದುಡಿಯುತ್ತಿದ್ದರೂ ಕೆಲಸ ಮುಗಿಯುತ್ತಿರಲಿಲ್ಲ.

ಶಾಂತ ಬಂದ ಮಾರನೆ ದಿನವೆ, ಸೂರಪ್ಪನ ಅಕ್ಕ ಶಾರದಮ್ಮ ಮಕ್ಕಳ ಸಮೇತ ಬಂದಿಳಿದರು. ಅಣ್ಣನ ಮನೆಗೆ ಬರದೆ ಬಹಳ ದಿನವಾಗಿದ್ದುದರಿಂದ ಎರಡು ತಿಂಗಳು ನಿಲ್ಲುವ ಉದ್ದೇಶ ಹೊತ್ತು ಬಂದಿದ್ದರು. ತನ್ನ ಸಂಸಾರದಲ್ಲಿ ಅಶಾಂತಿ ಕದಡುತ್ತಿದ್ದ ಸಮಯದಲ್ಲಿ ತನ್ನ ಅಕ್ಕ ಮಕ್ಕಳ ಸಮೇತ ಬಂದದ್ದು ಸೂರಪ್ಪನಿಗೆಷ್ಟೋ ಸಮಾಧಾನ ತಂದಿತ್ತು. ಮಕ್ಕಳು ಮರಿಯಿಂದ ಮನೆ ಯಾವಾಗಲೂ ಕುಲುಕುಲು ನಗುತ್ತಿತ್ತು. ಸ್ವಲ್ಪ ದಿನ ಎಲ್ಲರೂ ತಮ್ಮ ತಮ್ಮ ನೋವನ್ನು ಮರೆತು ನೆಮ್ಮದಿಯಿಂದಿದ್ದರು.

ಒಂಬತ್ತನೆಯ ತಿಂಗಳಲ್ಲಿ ಆರತಿ ಶಾಸ್ತ್ರವಾಯಿತು. ಸೂರಪ್ಪ ತನ್ನ ಯೋಗ್ಯತೆಗೆ ತಕ್ಕಂತೆ ಸಂಭ್ರಮದಿಂದಲೆ ಆ ಉತ್ಸವವನ್ನು ನೆರವೇರಿಸಿದ್ದರು. ಆ ದಿನದ ಕುರುಹಾಗಿ ಒಂದು ಜತೆ ಚಿನ್ನದ ಬಳೆ ಶಾಂತಳ ಕೈತುಂಬಿ ನಿಂತಿತು. ಅದಾದ ನಾಲ್ಕೈದು ದಿನದಲ್ಲೆ ಶಾಂತ ಗಂಡುಮಗುವಿನ ತಾಯಾದಳು. ಅವಳು ಗಂಡು ಹಡೆದದ್ದು ಸುಶೀಲಮ್ಮನಿಗೆ ನಿಧಿ ತುಂಬಿ ತಂದಂತಾಯಿತು. ಹಿಗ್ಗಿನಿಂದ ಉಬ್ಬಿಹೋದರು. ನಾಮಕರಣವಾದ ನಂತರ ಊರಿಗೆ ಹೊರಟು ನಿಂತಿದ್ದ ಅತ್ತಿಗೆ-ಮಕ್ಕಳನ್ನು, ಹರುಷರಸದಲ್ಲಿ ಮೀಯುತ್ತಿದ್ದ ಸುಶೀಲಮ್ಮ

ಹೋಗಗೊಡಲಿಲ್ಲ. ಕಡ್ಡಾಯ ಮಾಡಿ ಮತ್ತೊಂದು ತಿಂಗಳು ನಿಲ್ಲಿಸಿ ಕೊಂಡರು ಮೊಮ್ಮಗ ಹುಟ್ಟಿದುದರಿಂದ ಅವರಿಗೆ ನಾಲ್ಕಾಳು ಬಲ ಬಂದಂತಿತ್ತು. ಚೆನ್ನಾಗಿ ಉಪಚರಿಸಿದರು. ಶಾರದಮ್ಮನೂ ಸುಶೀಲಮ್ಮನಿಗೆ ಕೈಲಾದ ಕೆಲಸ ಮಾಡಿಕೊಟ್ಟು ನಗುನಗುತ್ತಲೆ ಕಾಲ ಹಾಕಿದರು. ಅವರು ಹೊರಟು ಹೋದ ಒಂದೆರಡು ದಿನ ಮನೆ ತುಂಬಾ ಬಣಗುಡುತ್ತಿತ್ತು. ಆ ಬಣಗುಟ್ಟಾಟವನ್ನಟ್ಟಿ ಶಾಂತಳ ಮುದ್ದುಮಗು ತನ್ನಳು ನಗುವಿನಿಂದ ಮನೆಯನ್ನು ತುಂಬಿ ಬೆಳೆಯಿತು.

ಬಾಡುತ್ತಿದ್ದ ಶಾಂತಳ ಜೀವನದಲ್ಲಿ ಹೊಸ ಚೇತನ ಮೂಡುತ್ತಿದೆ. ಮಡಿಲ ತುಂಬಾ ಮಲಗಿದ ಮಗು ಅವಳ ಆಶೆಯನ್ನು ಅರಳಿಸುತ್ತಿದೆ. ಅದರ ಬಣ್ಣ–ಕಣ್ಣು–ಮೂಗು ಅವಳಲ್ಲಿ ಸುಪ್ತವಾಗಿದ್ದ ಪ್ರೀತಿಯನ್ನು ಕೆರಳಿಸುತ್ತಿದೆ. ಕಣ್ಣು ನಿದ್ದೆಗೆ ಸೋತು, ಅದರ ಅಮಲಿನಲ್ಲಿ ಮಗು ತನ್ನ ಪುಟ್ಟ ಚೆಂದುಟಿಯ ಮೇಲೆ ನಗೆಯ ಹೂಮಿಂಚನ್ನು ಬೆಳಗಿಸಿದಾಗ ಮೈಮರೆತು ಮನದಣಿಯುವಂತೆ ಮುದ್ದಿಡುವಳು. ಆಗ ಅವಳ ಹೃದಯ ಎಲ್ಲ ನೋವನ್ನು ಮರೆತು, ಶುಭ್ರವಾದ ಆಕಾಶದಂತೆ ಹಗುರವಾಗಿ ಸಂತಸದ ಬಿಳಿಮೋಡಗಳನ್ನು ತೇಲಿ ಬಿಡುತ್ತದೆ. ದಿನಕ್ಕೆ ನಾಲ್ಕಾರು ಬಾರಿ ಆ ಬಗೆಯ ಹರುಷದ ಹೊಳೆಯಲ್ಲಿ ಮಿಂದು ನಲಿಯುತ್ತಿದ್ದಳು. ಒಂದು ದಿನದ ಸೂಕ್ಷ್ಮನೋಟ ಅದನ್ನು ತಡೆಗಟ್ಟಿತು.

ಮಗುವಿಗೆ ನಾಲ್ಕು ತಿಂಗಳು ತುಂಬಿ ಐದನೆಯ ತಿಂಗಳು ಕಾಲಿಕ್ಕಿತ್ತು. ಅವರೆಗೆ ಅಸ್ಫುಟವಾಗಿದ್ದ ರೂಪು ಸ್ಫುಟಗೊಳ್ಳುತ್ತಿತ್ತು. ಕಣ್ಣು–ಮೂಗು ಸಾಕಷ್ಟು ಬೆಳೆದು ರೂಪದ ಒಂದು ಅಂದಾಜು ಮಾಡಿಕೊಡುತ್ತಿತ್ತು. ಹಾಗೆ ಆಗದಿದ್ದರೆ ಚೆನ್ನಾಗಿತ್ತೊ ಏನೊ, ಆಗಿಬಿಟ್ಟಿದೆ. ಈಗ ಏನೂ ಮಾಡುವಂತಿಲ್ಲ. ಅವಳ ವಿಧಿ ಇಲ್ಲೂ ತನ್ನ ಕೈವಾಡವನ್ನು ತೋರಿದೆ. ಕೂಸಿನಿಂದ ಅವಳೆದೆಯಲ್ಲಿ ಉಂಟಾಗುತ್ತಿದ್ದ ದೈವಿಕವಾದ ಪ್ರೀತಿಗೆ ನೋವು ತುಂಬಿ, ಕೈಚಪ್ಪಳೆ ತಟ್ಟಿ ನಗುತ್ತಿದೆ ವಿಧಿ. ಬಾಳಿನ ಸುತ್ತ ಅಟ್ಟಿಬರುತ್ತಿದ್ದ ಆದರ ಕೆನ್ನಾಲಗೆಯ ನಾನಾ ಬಣ್ಣಗಳನ್ನು ಕಂಡು ಬೆದರಿದ್ದಾಳೆ.

ಹಾಲು ಕುಡಿಸಲೆಂದು ಮಗುವನ್ನು ತೊಡೆಯಲ್ಲಿ ಮಲಗಿಸಿಕೊಂಡ ಶಾಂತ, ಹಾಗೆ ಮಾಡದೆ ಒಂದೆ ಸಮನೆ ಅದರ ಮುಖವನ್ನು ದಿಟ್ಟಿಸುತ್ತಿದ್ದಳು.

ನೋಡುತ್ತಿದ್ದಂತೆ ಅವಳ ಮುಖ ಗಾಬರಿಯಿಂದ ಬಿಳಿಚಿಕೊಂಡಿತು. ಥಟ್ಟನೆ ನಾಣಿಯ ನೆನಪಾಗಿ ಕಣ್ಣು ಮುಚ್ಚಿಕೊಂಡಳು. ಅವಳಿಂದ ಆ ರೂಪನ್ನು ನೋಡಲಾಗಲಿಲ್ಲ. ಆವರೆಗೆ ಅಂತರ್ಗತವಾಗಿದ್ದ ರೂಪ ಈಗ ಸ್ಫುಟವಾಗಿ ಕಣ್ಣಿಗೆ ರಾಚಿ ಬಡಿಯುತ್ತಿದೆ. ಅದು ಅವಳ ಮಗುವಾದರೂ ಆ ರೂಪನ್ನು ಕಾಣಲು ಕಣ್ಣು ಹೆದರುತ್ತಿದೆ. ಯಾವುದು ಆಗಬಾರದೊ ಅದೆ ಆಗಿ ಅವಳ ಹೊಟ್ಟೆ ಸುಡುತ್ತಿದೆ. ತೊಡೆಯಲ್ಲಿ ಏನೂ ಅರಿಯದೆ ಮಲಗಿರುವ ಆ ಹಾಲುಗೂಸು, ತನ್ನದೆ ಆದ ಆ ಮುದ್ದುಮಗು, ನಾಣಿಯ ತದ್ರೂಪಾಗಿದೆ. ಬಣ್ಣ-ಕಣ್ಣು, ಕಿವಿ-ಕೆನ್ನೆ, ಮೂಗು ಎಲ್ಲದರಲ್ಲೂ ಅವನ ಪಡಿಯಚ್ಚೆ. ಆ ಹೆಸರೆ ಅವಳ ಬದುಕಿಗೆ ವಿನಾಶದ ಕಿಡಿಯಂತಿರುವಾಗ, ಇದು ಬೆಂಕಿಯಂತೆ ಹರಡಿ ಬದುಕು ಬೂದಿಯಾಗುವುದರಲ್ಲಿ ಸಂದೇಹವಿಲ್ಲ.

ಬೆಳಗಾದರೆ ತನ್ನವರ ಮನೆಗೆ ಹೋಗಬೇಕು. ಅಲ್ಲಿ ತನ್ನ ಪಾಲಿಗೆ ಈಗ ಮರುಗುವವರು ಯಾರೂ ಇಲ್ಲ. ಅತ್ತೆಯಾದರೂ ಜತೆಗಿದ್ದಿದ್ದರೆ ಹೆಚ್ಚು ಕಷ್ಟವೂ ಆಗುತ್ತಿರಲಿಲ್ಲ. ಬಂದ ಕಷ್ಟವನ್ನು ಮರೆತೂ ಬಿಡುತ್ತಿದ್ದಳು. ಅವಳ ವಿಧಿ ಅವರನ್ನೂ ಮನೆಯಿಂದಟ್ಟಿತ್ತು. ಪಾಲಿನ ಸಮಯದಲ್ಲಿ ನಡೆದುಕೊಂಡ ತನ್ನ ಗಂಡನ ನಡವಳಿಕೆ, ಅಂದ ಅವಾಚ್ಯ ಶಬ್ದಗಳು ತನ್ನತ್ತೆಯನ್ನು ತನ್ನಿಂದ ದೂರ ಮಾಡಿದ್ದವು. ತನ್ನ ಮೇಲೆ ಅಪಾರ ಮಮತೆಯಿದ್ದರೂ ವಿಧಿಯಿಲ್ಲದೆ ಬಿಟ್ಟುಹೋಗಿದ್ದರು. ಈಗ ಆ ಗೋಳಿನ ಮನೆಯಲ್ಲಿ ನಾನೊಬ್ಬಳೆ ಹೋಗಿ ಬಾಳಬೇಕು. ಅದನ್ನು ನೆನೆದಷ್ಟೂ ಭಯವಾಗುತ್ತಿದೆ.

'ಮೊದಲೆ ಚೆನ್ನ, ಈಗ ಇದ್ದದ್ದೂ ನೇರವಾಯಿತು. ಅವರಾಡುತ್ತಿದ್ದ ಮಾತಿಗೂ, ಹುಟ್ಟಿದ ಮಗುವಿಗೂ. ಅವರ ದೃಷ್ಟಿಯಲ್ಲಿ ಅಕ್ಷರಶಃ ತಾಳೆಯುವೆ.'

'ಸಾಮಾನ್ಯವಾಗಿ ಮಕ್ಕಳು ಮನೆತನದಲ್ಲಿ ಯಾರನ್ನಾದರೂ ಹೋತು ಹುಟ್ಟುವುದು ಸೃಷ್ಟಿಧರ್ಮವಾದರೆ, ನತದೃಷ್ಟಳಾದ ನನ್ನ ಭಾಗಕ್ಕೆ ಅದು ವ್ಯಭಿಚಾರ ಧರ್ಮ; ಅವರ ದೃಷ್ಟಿ, ಮನಸ್ಸು, ಮಾತು ಎಲ್ಲ ಅದನ್ನೆ ಹೇಳುವುದು.'

'ಮಗು ಬೆಳೆದಂತೆ ಅವರ ಹೃದಯದಲ್ಲಿ ಆ ಭಾವನೆಯೂ ಬೆಳೆಯುತ್ತ ಹೋಗುತ್ತದೆ. ಆ ಸಂದಿಗ್ಧ-ಭೀಕರ ನೋವಿನ ಪರಿಸ್ಥಿತಿಯನ್ನು ಒಬ್ಬಳೆ ಹೇಗೆ ಎದುರಿಸಲಿ ?'

'ಮುಂದೆ ಬರಲಿರುವ ಆ ರೌರವ ನರಕಕ್ಕಿಂತ ಸಾವೆ ಒಳ್ಳೆಯದಲ್ಲವೆ ?'

'ಹೌದು—ನನಗೆ ಅದೇ ಸರಿಯಾದ ಮಾರ್ಗ. ನಿರಪರಾಧಿನಿಯಾಗಿದ್ದು ನಾನೇಕೆ ಆ ನರಕ ಕುಂಡದಲ್ಲಿ ಬೇಯಲಿ! ಅದಕ್ಕಿಂತ ಸಾವನ್ನಪ್ಪುವುದು ಸರ್ವ ಪಾಲಿಗೆ ಸುಖ. ಆತ್ಮಗೌರವವಾದರೂ ಉಳಿಯುತ್ತದೆ—ಅದೇ ಸರಿ."

ಬದುಕಿನ ಬೆಂಕಿಯ ಬೇಗೆಯನ್ನು ತಾಳಲಾರದೆ ಆತ್ಮಹತ್ಯೆಯ ನಿರ್ಧಾರ ಮಾಡಿ, ಮುಚ್ಚಿದ್ದ ಕಣ್ಣನ್ನೊಮ್ಮೆ ತೆರೆದು ಮಗುವನ್ನು ದಿಟ್ಟಿಸಿದಳು. ಮಗು ಹಸಿವಿನಿಂದ ತೊಡೆಯ ಮೇಲೆ ಮಿಲಿಮಿಲಿ ಒದ್ದಾಡುತಿತ್ತು. ಮನಸ್ಸು ಕರಗಿ ಹಾಲೂಡಿಸತೊಡಗಿದಳು. ಮಗು ದೊಡ್ಡದಾಗಿ ಕಣ್ಣರಳಿಸಿ, ಅದರಲ್ಲಿ ತನ್ನೆಲ್ಲ ಪ್ರೀತಿ ತುಂಬಿ ತಾಯನ್ನೆ ನೋಡುತ್ತಾ ಹಾಲು ಹೀರುತಿತ್ತು. ತನ್ನ ಹೃದಯದ ಪ್ರೀತಿಯೆ ಮೈವೆತ್ತಿ ಬಂದು, ತನ್ನಲ್ಲೆ ಐಕ್ಯವಾಗಲು ಬಯಸುವ ಆ ಮುಗ್ಧ ನೋಟ ಅವಳನ್ನು ಮರುಳುಗೊಳಿಸಿತು; ಕಲ್ಲಾಗಿದ್ದ ಮನಸ್ಸನ್ನು ಮಂಜಿನಂತೆ ಕರಗಿಸಿತು. ಹೊಟ್ಟೆ ತುಂಬಿದ ತೃಪ್ತಿಯಿಂದ ಕೈಕಾಲು ಬಡಿಯುತ್ತ, ಮುದ್ದು ಮುದ್ದಾಗಿ ತಾಯನ್ನು ನೋಡುತ್ತಾ ಮಲಗಿದ್ದ ಮಗುವನ್ನು ಶಾಂತ ಆವೇಶ ಬಂದವಳಂತೆ ತಟ್ಟಿ ಮುದ್ದಿಟ್ಟಳು.

'ನನ್ನದೆ ಆದ ಈ ಹಸುಗೂಸಿಗೆ ದ್ರೋಹ ಬಗೆಯಬಾರದು. ನೋವಿರಲಿ ನಲವಿರಲಿ, ನನ್ನ ಕರ್ತವ್ಯ ನಾನು ಪಾಲನೆ ಮಾಡಲೇ ಬೇಕು; ಇಲ್ಲದಿದ್ದರೆ ದೈವದ್ರೋಹಿಯಾಗುವೆನು.'

'ಅಲ್ಲದೆ ನನ್ನದು ದೇವರಿತ್ತ ಬದುಕು. ಹಾಳು ಮಾಡಲು ನಾನು ಯಾರೂ ಅಲ್ಲ.'

'ಹಣೆಯಲ್ಲಿ ಸುಖ ಬರೆದಿದ್ದರೆ ಅವರ ಮನಸ್ಸೆ ಪರಿವರ್ತನೆಯಾಗಿ ಬಾಳು ಬೆಳಗುತ್ತದೆ; ಅಥವಾ ಕಡೆವರೆಗೆ ದುಃಖವಿದ್ದರೂ ಅವನ್ನೆ ಅನುಭವಿಸಬೇಕು.'

'ಸಾವು ತಾನಾಗಿ ಬರಲಿ—ನಾನಾಗಿ ಬಯಸುವುದು ಬೇಡ.'

'ದೇವರು ಆಯುಷ್ಯ ಹೆಚ್ಚಿಸಲಿ. ಹಿಂದೆ ಮಾಡಿದ ಪಾಪಶೇಷವೇನಾದರೂ ಇದ್ದರೆ ಈ ಜನ್ಮದಲ್ಲೆ ಕಳೆದು, ಮುಂದಿನ ಜನ್ಮವಾದರೂ ಯಾವ ಕಷ್ಟ—ಕಷ್ಟವೂ ಇಲ್ಲದೆ ಸಂತೋಷದಿಂದ ಆರಳಲಿ.'

ಹೀಗೆಂದು ಮನಸ್ಸು ಸಾವಿನಂಚಿನವರೆಗೂ ಹೋಗಿ, ಬದುಕಿನ ವ್ಯಾಮೋಹದ ಸೆಳೆತವೆ ಹೆಚ್ಚಾಗಿ, ಹಿಂದಿರುಗಿ ಬಂದು ಒಂದು ಹದಕ್ಕೆ ಬಂದಿತು.

ತೊಟ್ಟಿಲು ಹಾಸಿ, ಮಗುವನ್ನು ಹೂವಂತೆ ಎತ್ತಿ ಮಲಗಿಸಿ ಬೆಚ್ಚಗೆ ಹೊದಿಸಿದಳು.

"ನಿನ್ನ ಸುಪುತ್ರ ಏನನ್ನುತ್ತಿದ್ದಾನೆ" ಎಂದು ಆಗ ತಾನೆ ತೊಳೆದ ಕೈ ಕಾಲುಗಳನ್ನೊರೆಸುತ್ತ ಸೂರಪ್ಪ ತೊಟ್ಟಿಲ ಬಳಿ ಬಂದರು.

"ಈಗ ತಾನೆ ಹಾಲುಂಡು ಮಲಗಿದ್ದಾನೆ."

ಆ ಮಾತನ್ನುವಾಗ ನಾಚಿಕೆ ಮುಖದ ತುಂಬಾ ಕೆಂಪು ರಂಗಿನ ಓಕುಳಿಯಾಡಿತ್ತು.

ಸೂರಪ್ಪ ಮಗುವಿನ ಗಲ್ಲವನ್ನಲುಗಿಸುತ್ತಾ ಹೇಳಿದರು,

"ಮಗು ತುಂಬಾ ಮುದ್ದಾಗಿದೆ ಶಾಂತ—ನಿನ್ನ ಮೈದುನನ ಹಾಗೇ ಇದೆ; ಅದೇ ಪಡಿಯಚ್ಚು. ನಿಮ್ಮ ಮನೆಯಲ್ಲೆಲ್ಲ ನಾಣಿಯ ರೂಪು ನೋಡಲು ಬಲು ಚೆಂದ. ನಡವಳಿಕೆಯೂ ಮನಸ್ಸಿಗೆ ಹಿತವಾಗುವಂತಿದೆ. ರೂಪಿನಂತೆ ನಡವಳಿಕೆಯಲ್ಲೂ ಈ ಮಗು ಅವನನ್ನೆ ಹೋತರೆ ನನಗೇನೋ ತುಂಬಾ ಸಂತೋಷ."

"ನಿಮಗೆ ತಿಳುವಳಿಕೆಯಿದೆ, ಅದಕ್ಕೆ ಹಾಗೆನ್ನುವಿರಿ ಅಪ್ಪ. ನಿಮ್ಮಂತೆ ಎಲ್ಲರೂ ಇರಬೇಕಲ್ಲ! ಅವಿವೇಕಿಗಳು ನೋಡುವ ನೋಟವೇ ಬೇರೆ. ಈ ಮಗು ನನ್ನನ್ನೆಲ್ಲಿ ಬಡಿದು ಬಾಯಿಗೆ ಹಾಕಿಕೊಳ್ಳುವುದೊ ಎಂದು ನನಗೆ ಚಿಂತೆ!"

ಮಗಳ ಇಂಗಿತವನ್ನು ಅರ್ಥ ಮಾಡಿಕೊಂಡು ಅವರು ಹೇಳಿದರು,

"ನಿನಗೊಂದು ಹುಚ್ಚು. ಮಕ್ಕಳು ರಕ್ತಸಂಬಂಧಿಗಳನ್ನು ಹೋಲದೆ ಮತ್ತೆ ಯಾರನ್ನು ಹೋಲುತ್ತವೆ? ಅದು ತಿಳಿಯದಷ್ಟು ಮೂಢನಲ್ಲ ನಿನ್ನ ಗಂಡ. ನಾಣಿಯ ಸರಳತನ, ಅವನಲ್ಲಿ ನಿನ್ನ ಸಲುಗೆ ಇವು ಅವನ ಮನಸನ್ನು ಕೆರಳಿಸಿವೆ. ಆ ನೋಟ ನೋಡಲಾರನೆ ಎಲ್ಲೋ ಒಂದೆರಡು ಬಾರಿ ಚುಚ್ಚಿ ಅಂದಿರಬೇಕು. ಅದು ಗಂಡಸರ ಸ್ವಭಾವ. ರತ್ನ ಮಗುವಾಗಿದ್ದಾಗ ನಾನೂ ನಿಮ್ಮ ತಾಯಲ್ಲಿ ತಪ್ಪೆಣಿಸಿದ್ದೆ. ನನ್ನ ಆಗಿನ ವರ್ತನೆಯನ್ನು ನಿನ್ನ ತಾಯಿ ಎಷ್ಟೋ ಕಷ್ಟದಿಂದ ಸಹಿಸಿದ್ದಾಳೆ. ಆದರೆ ಆ ಕೊಳಕು ಭಾವನೆ ಬಹಳ ದಿನ ನನ್ನಲ್ಲುಳಿಯಲಿಲ್ಲ. ನಿನ್ನ ತಾಯಿಯ ಶುದ್ಧ ನಡವಳಿಕೆ, ದಿಟ್ಟತನ

ನನ್ನ ಮನಸ್ಸನ್ನು ಹೊಕ್ಕಿದ್ದ ಆ ಭೂತವನ್ನು ಹೇಳಹೆಸರಿಲ್ಲದಂತೆ ಒಡಿದೋಡಿಸಿ ಬಿಟ್ಟಿತು. ಈಗ ನೋಡು, ನಾವೆಷ್ಟು ಅನ್ಯೋನ್ಯವಾಗಿದ್ದೇವೆ! ನಮ್ಮಿಬ್ಬರಲ್ಲಿ ಒಬ್ಬರನ್ನೊಬ್ಬರುಳಿದು ಒಂದು ಕ್ಷಣ ಬದುಕಲಾರೆವು. ಗೋಪಿಯೂ ಹಾಗೆ ದಾರಿಗೆ ಬಂದೇ ಬರುವನು. ಹೇಗೂ ನಾಣಿ ಬೇರೆಯಾದನಲ್ಲಾ, ಇನ್ನೇಕೆ ಚಿಂತೆ? ಹೆದರಬೇಡ, ಮಕ್ಕಳಾದ ಮೇಲೆ ಎಂಥವರೂ ತಮ್ಮ ತಪ್ಪನ್ನು ತಿದ್ದಿ ಸರಿಹೋಗುವರು. ನಿನ್ನ ಕಷ್ಟದ ದಿನ ಕಳೆಯಿತೆಂದೇ ತಿಳಿ" ಎಂದು ತೊಟ್ಟಿಲ ಬಳಿ ಬಾಗಿ ಮಗುವಿನ ಕೆನ್ನೆ ಹಿಂಡುತ್ತಾ, "ಏನೊ ಘಟಿಂಗ, ನಿಮ್ಮಪ್ಪನನ್ನು ದಾರಿಗೆ ತರುತ್ತಿ ತಾನೆ? ಇಲ್ಲದಿದ್ದರೆ ನೋಡು, ನಿನ್ನನ್ನು ನಮ್ಮ ಕುಲದಿಂದ ಹೊರಗೆ ಹಾಕಿ ಬಿಡುವೆವು, ಹುಷ್ಯಾರು!" ಎಂದು ಹುಸಿನಕ್ಕು ಮತ್ತೊಮ್ಮೆ ಮಗುವನ್ನು ಮುದ್ದಿಟ್ಟು ಹೋದರು.

ತಂದೆಯ ಅನುಭವದ ಮಾತಿನಿಂದ ಶಾಂತಳಿಗೂ ಸ್ವಲ್ಪ ಮನಸ್ಸು ಹಗುರವಾಯಿತು. ಬದುಕಿನಲ್ಲಿ ಆಸಕ್ತಿಯೂ ಉಂಟಾಯಿತು. ಭವಿಷ್ಯವನ್ನು ಸುಂದರವಾಗಿ ಚಿತ್ರಿಸಿ ತನ್ನಲ್ಲೆ ತಾನು ಹಿಗ್ಗಿದಳು. ಆ ಹಿಗ್ಗು ವಿದ್ಯುಚ್ಛಕ್ತಿ ಯಂತೆ ಮಗುವನ್ನು ತಾಕಿತು. ಅದೂ ತನ್ನ ಬಚ್ಚುಬಾಯಿ ಬಿಚ್ಚಿತು. ಕಿಲ ಕಿಲ ನಕ್ಕ ಮಗುವನ್ನು ತಿಕ್ಕಿತಿಕ್ಕಿ ಮುದ್ದಿಟ್ಟಳು.

ಸೂರಪ್ಪ ತಮ್ಮ ಅನುಭವದ ಆಧಾರದ ಮೇಲೆ ಮಗಳಿಗೆ ಧೈರ್ಯ ತುಂಬಿ ಬಂದಿದ್ದರೂ ಮನಸ್ಸಿನಲ್ಲಿ ಅಳುಕು ಇದ್ದೇ ಇತ್ತು. ಅವರ ಜೀವನದಲ್ಲಿ ಹಲವು ಬಗೆಯ ವ್ಯಕ್ತಿಗಳ ಪರಿಚಯವಾಗಿತ್ತು. ಒಬ್ಬೊಬ್ಬರದು ಒಂದೊಂದು ಬಗೆಯ ವ್ಯಕ್ತಿತ್ವ. ಯಾರಲ್ಲೂ ಪರಿಪೂರ್ಣತೆ ಕಂಡುಬರದಿದ್ದರೂ, ತಂತಮ್ಮ ಪಾಲಿನ ಬದುಕನ್ನು ರಸಾಭಾಸವಾಗದಂತೆ ಸವಿದಿದ್ದರು. ಒಬ್ಬರಿಗೆ ಸುಖ ಹೆಚ್ಚಾದರೆ ಒಬ್ಬರಿಗೆ ದುಃಖ ಹೆಚ್ಚು. ಅಂತೂ ಸುಖ–ದುಃಖ ಸಮ್ಮಿಶ್ರವಾ ಗಿತ್ತು, ಅವರೆಲ್ಲರ ಬಾಳಿನಲ್ಲಿ. ಆ ಅಳತೆಗೋಲಿನಿಂದ ತಮ್ಮ ಮಗಳ ಬಾಳ ನ್ನಳೆದು ನೋಡಿದರು. ಎಲ್ಲರ ಬಾಳಿಗಿಂತ ತೀರ ವಿಚಿತ್ರವಾಗಿದೆ. ಸುಖವೆನ್ನು ವುದು ಹೆಸರಿಗೂ ಕಾಣಲಿಲ್ಲ. ಮುಂದೆ ಉಂಟಾಗಬಹುದೆಂಬ ಊಹೆಯೂ ಸಂಶಯದ ಗಾಳಿಯಲ್ಲಿ ತೂಗಾಡುತ್ತಿದೆ. ಅದಕ್ಕೊಂದು ನಿಶ್ಚಿತ ರೂಪು ಕೊಡಲೂ ಹೆದರಿದ್ದಾರೆ. ಗೋಪಿ ಎಲ್ಲರಂತಲ್ಲ, ಒಗಟಿನ ಗೂಡಾಗಿದ್ದಾನೆ. ಒಳಹೊಕ್ಕು ಹೋದಂತೆಲ್ಲ ನೈಜಸ್ವರೂಪ ದೂರ ದೂರವಾಗುತ್ತಿದೆ. ತಾವೆಣಿಸಿ

ದಷ್ಟು ಸುಲಭವಾಗಿ ಬದುಕಿನಲ್ಲಿ ಬೆರೆತು ಹೋಗುವಂತೆ ಕಂಡುಬರಲಿಲ್ಲ.

ಗೋಪಿಯ ಸ್ವಭಾವ ಬಹಳ ವಿಚಿತ್ರ. ಅದರ ಪರಿಚಯವಾದುದು ನಾಲ್ಕಾರು ಸಂದರ್ಭಗಳಲ್ಲಿ ಮಾತ್ರ—

ಮದುವೆಗೆ ಮುಂಚೆ ಅಂಗಡಿಯಲ್ಲಿ ನಡೆದ ಪ್ರಸಂಗದಿಂದ; ನಾಣಿಯ ಲಗ್ನದ ಸಮಯದಲ್ಲಿ ಜ್ವರಕ್ಕೆ ತುತ್ತಾಗಿ ನರಳುತ್ತಿದ್ದ ಶಾಂತಳ ಸಂಗ ಬಯಸಿದಾಗ; ಸಟ್ಟಾ ಆಟದ ಪ್ರಸ್ತಾಪವೆತ್ತಿ ತಿಳುವಳಿಕೆ ಕೊಡಲು ಹೋದಾಗ—ಹೀಗೆ ಕೇವಲ ಮೂರು-ನಾಲ್ಕು ಬಾರಿ ಮಾತ್ರ ಸೂರಪ್ಪ ಅಳಿಯನನ್ನು ಸಮೀಪದಲ್ಲಿ ಕಂಡಿದ್ದರು ಶಾಂತ ಎಲ್ಲೊ ಒಂದೆರಡು ಬಾರಿ ಪ್ರಸಂಗವಶಾತ್ ತನ್ನ ಗಂಡನ ಪರಿಚಯ ಮಾಡಿಕೊಟ್ಟಿದ್ದಳು. ಕೇವಲ ಅಷ್ಟರಿಂದ ಬದುಕನ್ನು ತೂಗಿ ನೋಡಲು ಸಾಧ್ಯವಿಲ್ಲ.

ತಪ್ಪು ಮಾಡುವುದು ಮನುಷ್ಯನ ಸ್ವಭಾವ; ಹಾಗೆ ತಿದ್ದಿ ನಡೆಯುವುದೂ ಅವನ ಧರ್ಮ. ಅದನ್ನು ಪಾಲಿಸುವುದರಲ್ಲಿ ಹಿಂದೆಮುಂದೆ ನೋಡಿದರೆ ಸೃಷ್ಟಿ ಸುಮ್ಮನಿರುವುದಿಲ್ಲ, ಒದ್ದು ಮಾಡಿಸುತ್ತದೆ. ಒಂದು ದಿನ ಹೆಚ್ಚುಕಡಿಮೆಯಾಗಬಹುದಷ್ಟೆ.

ಸೃಷ್ಟಿಯ ಆ ಧರ್ಮಕ್ಕೆ ಗೋಪಿ ಎಂದಿಗೂ ಹೊರತಾಗಲಾರ. ಆದಷ್ಟು ಬೇಗ ತನ್ನ ತಪ್ಪನ್ನು ತಿದ್ದಿಕೊಂಡು ಪಶ್ಚಾತ್ತಾಪ ಹೊಂದಿ ಶಾಂತಳನ್ನು ಸುಖದಿಂದ ಬಾಳಿಸ್ಯಾನು! ಇನ್ನೂ ಸ್ವಲ್ಪ ದಿನ ಕಾದು ನೋಡುವುದೆ ಒಳ್ಳೆಯದು, ಅದೇ ಸರಿ. ಎಂದು ಸೂರಪ್ಪ ಸುತ್ತಿ ಸುತ್ತಿ ಅಲ್ಲಿಗೇ ಬಂದು ಮುಟ್ಟಿದರು. ಅವರ ಬಾಳಿನ ಅನುಭವ ಗೋಪಿಯ ವಿಷಯದಲ್ಲಿ ಅದೇ ನಿರ್ಧಾರವನ್ನುಂಟು ಮಾಡುತಿತ್ತು.

ಥಟ್ಟನೆ ಮನಸ್ಸಿನಲ್ಲಿ ರತ್ನ ಮೂಡಿ ಕೇಳಿದಳು,

'ನನ್ನವರನ್ನು ನೀವು ಮರತೇ ಬಿಟ್ಟಿರಿ. ನೀವು ನೋಡಿದ ವ್ಯಕ್ತಿಗಳ ಸಂಗಡ ನನ್ನವರನ್ನೇಕೆ ತೂಗಿ ನೋಡಲಿಲ್ಲ? ಹಾಗೆ ಮಾಡುವುದರಿಂದ ಶಾಂತಳ ಸಾವು ಕಣ್ಣಿಗೆ ಕಟ್ಟಿ ನಿಲ್ಲುತ್ತದೆಂಬ ಹೆದರಿಕೆಯೆ? ಆ ಭೀತಿಯಿದ್ದರೆ ಪುರುಷತ್ವ ತೋರಿ ಪರಿಹಾರ ಮಾಡಿಕೊಳ್ಳಬೇಕು. ನಿಮ್ಮ ದೌರ್ಬಲ್ಯಕ್ಕೆ ಧರ್ಮವನ್ನೇಕೆ ಗುರಿ ಮಾಡುವಿರಿ! ತಪ್ಪು ಮಾಡಿದವರನ್ನು ತಿದ್ದುವುದು

ಸೃಷ್ಟಿಧರ್ಮವಾದರೆ ನನ್ನವರನ್ನೇಕೆ ತಿದ್ದಲಿಲ್ಲ? ಅವರೇಕೆ ಆ ಧರ್ಮಕ್ಕೆ ಹೊರತಾದರು? ನಿಮ್ಮ ವಿಚಾರದೃಷ್ಟಿಯೆ ತಪ್ಪು! ತಪ್ಪು ಮಾಡುವುದು ಕರ್ಮದಿಂದಲ್ಲ, ಮೈಯಲ್ಲಿ ಕೊಬ್ಬು ಹೆಚ್ಚಾಗಿ; ಹಿರಿಯರು ಕೊಡುವ ಸಲಿಗೆ ಯಿಂದ. ಸಂಬಂಧಪಟ್ಟವರು ತಕ್ಕ ಬೆಜ್ಜರಿಕೆಯಿಟ್ಟರೆ ಯಾರೂ ತಪ್ಪುಮಾಡು ವುದಿಲ್ಲ. ನಮ್ಮವರಂತೆ ಶಾಂತಳ ಗಂಡನನ್ನೂ ಅಲಕ್ಷಿಸಬೇಡಿ. ಅನಾಹುತ ವಾಗುವುದಕ್ಕೆ ಮುಂಚೆ ಸರಿಪಡಿಸಿಕೊಳ್ಳಿ.'

ಪುನಃ ಸೂರಪ್ಪನವರ ತಲೆ ಕೆಟ್ಟಿತು. ತಮ್ಮಿಬ್ಬರ ಮಾತನ್ನೂ ತೂಗಿ ನೋಡಿದರು. ವಿಚಾರಿಸಿದಂತೆಲ್ಲ ವಿಷಯ ಗಹನವಾಗುತಿತ್ತೆ ವಿನಾ ನಿಲು ಗಡೆಯೆ ಕಂಡುಬರಲಿಲ್ಲ. ಸರಿಯಾದ ಉತ್ತರವೂ ಹೊಳೆಯಲಿಲ್ಲ. ಚಿಂತೆಯ ಕಾವೇರಿ ತಲೆ ಸಿಡಿದುಬೀಳುವಂತಾಯಿತು. ಹೆಗಲಿಗೆ ವಸ್ತ್ರ ಹೊದ್ದು ಹೊರಗೆ ಹೊರಟು ನಿಂತರು. ಯಾವುದೊ ಭೀತಿ ಅವರನ್ನು ಜಗ್ಗಿ ನಿಲ್ಲಿಸಿತು ಮನಸ್ಸು ಮತ್ತೆ ಗೊಂದಲಕ್ಕೆ ಬಿತ್ತು.

'ನಾನೀಗ ಶಾಂತಳೊಬ್ಬಳನ್ನೆ ಬಿಟ್ಟು ಹೊರಗೆ ಹೋಗುವುದು ಸರಿ ಯಲ್ಲ. ಇಷ್ಟು ದಿನ ಕಷ್ಟಪಟ್ಟು ಕಾದದ್ದೆಲ್ಲ ನೀರಿನಲ್ಲಿ ಹೋಮ ಮಾಡಿದಂತಾ ದೀತು!'

'ಯಾಕಷ್ಟು ಗಾಬರಿ? ಕೊಟ್ಟ ಮಾತನ್ನು ಮರೆಯುವಷ್ಟು ಶಾಂತ ಮೂಢಳಲ್ಲ, ಹೇಳುವುದಿದ್ದರೆ ಇಷ್ಟರಲ್ಲೆ ಹೇಳುತ್ತಿದ್ದಳು.'

'ಅದಕ್ಕೆ ವ್ಯವಧಾನವೆಲ್ಲಿತ್ತು? ನಮ್ಮಕ್ಕ ಇರುವವರೆಗೆ ಅವಳಿಗೆ ಕೇಳಲೂ ಆಗಲಿಲ್ಲ, ಇವಳಿಗೆ ಹೇಳಲೂ ಆಗಲಿಲ್ಲ. ಅನಂತರ ನಾನೊಂದು ಗಳಿಗೆ ಎಡೆ ಬಿಡದೆ ಕಾದಿದ್ದೇನೆ.'

'ಕಾಯುವುದು ಎಲ್ಲಿವರೆಗೆ ಸಾಧ್ಯ? ಕೊಟ್ಟ ಮಾತಿನಲ್ಲಿ ಭರವಸೆ ಯಿರಿಸಬೇಕು.'

'ಶಾಂತಳಲ್ಲಿ ಭರವಸೆಯಿದ್ದರೂ ಸುಶೀಲನಲ್ಲಿ ಭರವಸೆಯಿಲ್ಲ. ಅವಳು ಹೇಗಾದರೂ ಮಾಡಿ ಮಗಳ ಬಾಯಿ ಬಿಡಿಸಿಯಾಳು! ಮುಗ್ಧೆ ಚಿಕ್ಕವಳು; ಕೊಟ್ಟ ಮಾತನ್ನು ಮರೆತು, ತಾಯಿ ಮೇಲಿನ ಮಮತೆಯಿಂದ ಕಷ್ಟ-ಸುಖ ಹೇಳಿಕೊಂಡರೂ ಹೇಳಿಕೊಳ್ಳಬಹುದು.'

'ಹೇಳಿಕೊಳ್ಳಲಿ—ಅದು ಲೋಕರೂಢಿ. ಅಷ್ಟರಿಂದೇನೂ ಅನಾಹುತ ವಾಗುವುದಿಲ್ಲ. ಅಂಥ ಸೂಚನೆ ಬಂದಾಗ ಆ ಮಾತನ್ನು ಕಟ್ಟಿ ಹಾರಿಸಿದರಾ ಯಿತು. ತಾಯಿ–ಮಗಳ ನಡುವೆ ಅಡ್ಡಗಟ್ಟಿ ಹಾಕಿ ದ್ರೋಹಿಯಾಗಬೇಡ.'

'ದ್ರೋಹಿಯಾದರೂ ಚಿಂತೆಯಿಲ್ಲ, ಸುಶೀಲಳಲ್ಲಿ ಆ ಪರೀಕ್ಷೆ ಬೇಡ. ಅವಳು ತುಂಬಾ ದುರ್ಬಲ ಮನಸ್ಸಿನವಳು. ಆ ಧರ್ಮಸೂಕ್ಷ್ಮಕ್ಕೆಲ್ಲಾ ಬೆಲೆ ಯಿತ್ತರೆ ಸಂಸಾರ ಸ್ಮಶಾನವಾದೀತು!'

ಹಾಗೆಂದು ಹೊಳೆದದ್ದೆ ತಡ, ಹೊರಟಿದ್ದವರು ಮತ್ತೆ ಬಂದು ಸ್ವಸ್ಥಾನ ದಲ್ಲಿ ಮಂಡಿಸಿದರು. ರತ್ನ ಅಲ್ಲೂ ಬಂದು ಕೆಣಕಿದಳು. ಮನಸ್ಸು ಮತ್ತೆ ಬೆಂಕಿ ಹತ್ತಿ ಉರಿಯಿತು. ಕೂತ ನೆಲ ಮುಳ್ಳಾಗಿ, ಆದದ್ದಾಗಲಿ ಎಂದು ಮೇಲೆದ್ದರು. ಒಳಗಡೆ ಗಡಬಡ ಆಡಿಸುವ ಶಬ್ದ ಕೇಳಿಬರುತಿತ್ತು. ಸುಶೀಲ ಮ್ಮನ ಕೆಲಸ ಮುಗಿಯುವುದರಲ್ಲಿ ಬರುವ ಉದ್ದೇಶ ಹೊತ್ತು, ಹೋಗುವ ಸುಳಿವು ಕೂಡ ಕೊಡದೆ ಮೆಲ್ಲನೆ ಹೊರಬಿದ್ದರು.

ಶಾಂತ ಈಗ ಮೊದಲಿನಂತಿಲ್ಲ. ಆ ಮಂದಹಾಸ, ಚಟುವಟಿಕೆ, ಉತ್ಸಾಹ ಇವು ಮರೆತೂ ತಲೆಯಿಕ್ಕುತ್ತಿರಲಿಲ್ಲ. ಹತ್ತೊಂಬತ್ತು ವರ್ಷದ ಎಳೇ ಪ್ರಾಯದ ಹುಡುಗಿಯಾದರೂ ವಯಸ್ಸು ಕಳೆದವಳಂತಿದ್ದಾಳೆ. ಕಣ್ಣು ಗುಳಿಬಿದ್ದು ಹೋಗಿದೆ, ಕೆನ್ನೆ ದವಡೆಗೆ ಹತ್ತಿದೆ, ಮೈ ಕಡ್ಡಿಯಾಗುತ್ತಿದೆ. ಈಗ ತಾನೆ ತಂದೆ ತಮ್ಮ ಅನುಭವಾಮೃತವೆರೆದು ಬದುಕಿನಲ್ಲಿ ಮತ್ತೆ ಆಸಕ್ತಿ ತುಂಬಿ ಹೋಗಿದ್ದಾರೆ. ಅವರಿತ್ತ ಪ್ರೋತ್ಸಾಹದಿಂದ ಜೀವ ತುಂಬಿಕೊಳ್ಳಲು ಪ್ರಯತ್ನಿ ಸಿದಂತೆಲ್ಲಾ ಗೋಪಿಯ ಕ್ರೂರ ಸ್ವಭಾವ ಪೆಡಂಭೂತವಾಗಿ ನಿಂತು, ತಿಳಿಯಾದ ಮನಸ್ಸನ್ನು ರಾಡಿ ಮಾಡುತ್ತಿದೆ.

ಯಥಾ ಪ್ರಕಾರ ಮುಖದ ಮೇಲೆ ಚಿಂತೆಯ ಮೋಡ ಕವಿದು ನೋಡಿದ ವರನ್ನು ಬೆದರಿಸುವಂತಿದೆ. ಕನ್ನಡಿಯಲ್ಲಿ ಮುಖ ಕಂಡಾಗಲೆಲ್ಲ ತಾಯ ನೆನ ಪಾಗಿ ಎದೆ ನಡುಗುತ್ತದೆ.

ತನ್ನ ಬದುಕಿನ ಚಿಂತೆಯನ್ನು ಮುಖ ನೋಡೆ ತಾಯಿ ತಿಳಿದುಕೊಂಡಿರ ಬಹುದು! ತಂದೆ ಮೂರು ಹೊತ್ತೂ ಮನೆಯಲ್ಲಿರುವುದರಿಂದ ಕೇಳಲು ಆಸ್ಪದ ವಾಗದೆ ಸುಮ್ಮನಿರಬಹುದು! ಆ ನೆನಪು ಬಂದಾಗ ಹಗಲಿರುಳೂ ತನ್ನ ಟೆನ್ನುಬಿಡದೆ ಕಾಯುತ್ತಿರುವ ತಂದೆಗೆ ಮನಸ್ಸಿನಲ್ಲೆ ಕೃತಜ್ಞತೆ ಸಮರ್ಪಿಸಿದಳು.-

ಸುಶೀಲಮ್ಮ ಮಗಳಲ್ಲಾದ ಬದಲಾವಣೆಯನ್ನು ಗಮನಿಸಿದ್ದರು. ಕೇಳಿ ತಿಳಿಯಬೇಕೆನ್ನುವ ಕುತೂಹಲ ಹೆಜ್ಜೆಹೆಜ್ಜೆಗೂ ಮಿಡಿಯುತಿತ್ತು. ಅತ್ತಿಗೆ ಯಿದ್ದಷ್ಟು ದಿನ ಕೆಲಸದ ಅಗಚಾಟಲಿನಲ್ಲಿ ಏನೂ ಬೇಡವಾಗಿತ್ತು; ಬಿಡುವೂ ಆಗುತ್ತಿರಲಿಲ್ಲ. ಆಮೇಲೆ ಮೂರು ಹೊತ್ತು ಮನೆಯಲ್ಲೆ ಇರುತ್ತಿದ್ದ ಸೂರಪ್ಪ ಅದಕ್ಕೆ ಅಡ್ಡಿ ಬಂದರು. ಎಂದಿನಂತಾಗಿದ್ದಿದ್ದರೆ ಹೆದರುತ್ತಿರಲಿಲ್ಲ, ಕೇಳಿಬಿಡು ತ್ತಿದ್ದರು. ಅಸ್ವಸ್ಥತೆಯನ್ನು ಮುಂದು ಮಾಡಿ, ಎಲ್ಲ ವಹಿವಾಟನ್ನೂ ಕೃಷ್ಣ ಮೂರ್ತಿಗೆ ವಹಿಸಿ, ಕೈಕಟ್ಟಿ ಸಪ್ಪೆ ಮುಖ ಹಾಕಿ ಕುಳಿತ ಗಂಡನಿಗೆ ತೊಂದರೆ ಕೊಡಲು ಜೀವ ಒಪ್ಪುತ್ತಿರಲಿಲ್ಲ. ಸುಮ್ಮನೆ ಮನೆಯಲ್ಲಿದ್ದರೆ ಸಂಶಯಬರುವು ದೆಂದು ಹಾಗೆ ಮಾಡಿದ್ದರು ಸೂರಪ್ಪ. ಅವರು ಕಟ್ಟಿದ್ದ ವೇಷ ಸುಶೀಲಮ್ಮ ನನ್ನು ನಿಜವಾಗಿಯೂ ಚಿಂತೆಗೆ ಗುರಿ ಮಾಡಿತ್ತು. ಮರೆತೂ ಅವರ ಮನಸನ್ನು ನೋಯಿಸುತ್ತಿರಲಿಲ್ಲ.

ಇಂದು ಅಪಾರ ಚಿಂತೆಯಿಂದ ಬಾಡಿ ಮುದುಡಿದ ಮಗಳ ಮುಖ ಅವರ ನಿರ್ಧಾರವನ್ನು ಹಿಡಿದಲುಗಿಸಿತು. ಯಜಮಾನರು ಮಲಗಿದ ವೇಳೆ ನೋಡಿ ಕಾರಣ ತಿಳಿಯಬೇಕೆಂದು ಗಟ್ಟಿ ಮಾಡಿಕೊಂಡರು. ಬಹಳ ಹೊತ್ತಿನವರೆಗೂ ಸೂರಪ್ಪನ ಕೆಮ್ಮು ಕೇಳಿಬರಲಿಲ್ಲ. ಕೆಲಸವನ್ನು ಅರ್ಧದಲ್ಲೆ ಬಿಟ್ಟು ಕೊಠಡಿಯ ಬಳಿ ಹೋಗಿ ಬಗ್ಗಿ ನೋಡಿದರು. ಸೂರಪ್ಪ ಇರಲಿಲ್ಲ. ಮನೆಯೆಲ್ಲ ಒಂದು ಸುತ್ತು ಹೊಡೆದು ನೋಡಿದರು. ಎಲ್ಲೂ ಅವರ ಸುಳಿವಿಲ್ಲ. ಎಲ್ಲೊ ಬೇಸರ ಕಳೆಯಲು ಹೋಗಿರಬಹುದೆಂದೂಹಿಸಿ, ಧೈರ್ಯ ಮಾಡಿ ಮಗಳ ಬಳಿ ಬಂದು ಕುಳಿತರು. ನೇರವಾಗಿ ಕೇಳಲು ಅವರಿಗೂ ಹೆದರಿಕೆ—ಕಡೆಗೆ ತಮ್ಮ ತಿಳುವ ಳಿಕೆ ತಪ್ಪಾಗಿದ್ದರೆ ? ಸ್ವಲ್ಪ ಹೊತ್ತು ಮಗಳ ತೊಡೆಯಲ್ಲಿ ಮಲಗಿದ್ದ ಮಗು ವನ್ನೆತ್ತಿ ಮುದ್ದಾಡಿದರು. ಅಷ್ಟರಲ್ಲಿ ಶಾಂತ ತಾನಾಗಿಯೆ ಬಾಯಿ ಬಿಡುವ ಮಾರ್ಗ ಹೊಳೆದು ಹೇಳಿದರು,

"ಹ್ಞಾ ! ನಿನಗೊಂದು ವಿಷಯ ತಿಳಿಸಲು ಮರತೇ ಹೋಗಿದ್ದೆ ಶಾಂತ. ಸುಬ್ಬಮ್ಮ ಗೊತ್ತೋ ಇಲ್ಲವೊ ನಿನಗೆ ?"

"ಅದೇ ಅವಲಕ್ಕಿ ಸುಬ್ಬಮ್ಮ ತಾನೆ ?"

"ಹೌದು ಅವರೆ !"

"ಗೊತ್ತು— ಯಾಕೆ ?"

"ಅವರ ಮಗಳ ಮೈದುನ, ತನ್ನ ಸೋದರತ್ತೆಮಗಳನ್ನು ಮೆಚ್ಚಿ ಲಗ್ನವಾಗಿ, ಕಡೆಗೆ ಹುಡುಗಿಯ ನಡತೆಯಲ್ಲಿ ಇಲ್ಲದ ಸಂಶಯಪಟ್ಟು ಅನ್ನ-ನೀರು ಸಹ ಕೊಡದೆ, ತೌರಿಗೂ ಕಳುಹಿಸದೆ ಚಿತ್ರಹಿಂಸೆ ಕೊಡುತ್ತಿದ್ದನಂತೆ. ಹುಡುಗಿ ಹಿಂಸೆ ತಾಳಲಾರದೆ ವಿಷ ಕುಡಿದಳಂತೆ."

"ಪಾಪ-ಮತ್ತೇನು ಮಾಡುವಳು! ಕಡೆಗೇನಾಯಿತೊ ?"

"ತೆಗೆದುಕೊಂಡ ವಿಷದ ಪ್ರಮಾಣ ಕಮ್ಮಿ ಬಂದೋ ಏನೊ ಅಂತೂ ಸಾಯದೆ ಬದುಕಿಕೊಂಡಳು. ತೌರಿಗೆ ಕಾಗದ ಹಾಕಿ ವಿಷಯ ತಿಳಿಸುವಂತೆಯೂ ಇರಲಿಲ್ಲ; ಅಷ್ಟು ಬಂಧನ. ಕಡೆಗೆ ಅಕ್ಕಪಕ್ಕದವರಿಂದ ವಿಷಯ ತಿಳಿದು ತೌರಿನವರು ಕರೆದುಕೊಂಡು ಹೋಗಲು ಬಂದರು. ಆ ವೇಳೆಗೆ ಹುಡುಗಿ ಸಾವಿನ ಸ್ಥಿತಿಯಲ್ಲಿದ್ದಳಂತೆ."

"ಹುಡುಗಿಯನ್ನು ಕಳುಹಿಸಲೊಪ್ಪಿದರೇನು ?"

"ಇಲ್ಲ! ಆದರೆ ಅವರು ಸಗ್ಗಲಿಲ್ಲ. ರಕ್ಷಣ ಶಾಖೆಯವರ ಸಹಾಯ ತೆಗೆದುಕೊಂಡು ಕರೆದುಕೊಂಡು ಹೋದರಂತೆ! ಕೇಳಿದೆಯಾ ಎಷ್ಟು ಚೆನ್ನಾಗಿದೆ! ತಂದೆ-ತಾಯಿ ಮಕ್ಕಳನ್ನು ಸಾಕಿ ಸಲುಹಿ ಲಗ್ನ ಮಾಡುವುದು, ಸತಿ ಪತಿಗಳಿಬ್ಬರೂ ಸುಖ ಹೊಂದಿ ಸಂಸಾರ ಬೆಳೆಸಿಕೊಂಡು ಹೋಗಲಿ ಎಂದಲ್ಲ; ಅವಳ ಮೇಲೆ ಇಲ್ಲದ ಆರೋಪಣೆ ತಂದು ಸಾವಿನ ಗಾಣಕ್ಕೆ ಬಲಿ ಕೊಡಲೆಂದು!"

ಇದ್ದಕ್ಕಿದ್ದಂತೆ ಬಂದ ಆ ಪ್ರಸ್ತಾಪದಿಂದ ಕೋಟೆ ಹೊತ್ತು ಶಾಂತ ಬೆದರಿ ತಬ್ಬಿಬ್ಬಾದಳು. ಆ ಪ್ರಸಂಗದ ಒಂದೊಂದು ಮಾತೂ ತನ್ನ ಬಾಳಿನಲ್ಲಿ ನಡೆದು ಸತ್ಯ ಮಾಡಿ ತೋರಿಸಿತ್ತು. ಎದೆಯಲ್ಲಿ ಒತ್ತಿ ಬರುತ್ತಿದ್ದ ನೋವನ್ನ ದುಮಿ ಹೇಳಿದಳು,

"ಎಲ್ಲರೂ ಹಾಗೆಲ್ಲವಮ್ಮ ಇರುವರು ? ಎಲ್ಲೋ ಒಬ್ಬಿಬ್ಬರು ಕಟುಕರಂತೆ ನಡೆದುಕೊಂಡರೆ ಯಾರೇನು ಮಾಡಲು ಸಾಧ್ಯ! ಹಾಗೆಂದು ಆ ಒಬ್ಬಿಬ್ಬರ ಉದಾಹರಣೆಯಿಂದ ಮಿಕ್ಕವರನ್ನನ್ನುವುದೂ ತಪ್ಪು."

"ತಪ್ಪು ಮಾಡಿದವರಿಗೇ ಹೇಳಿದ್ದು, ಮಿಕ್ಕವರಿಗಲ್ಲ. ಕಂಡವರ ಮನೆ ಹೆಣ್ಣುಮಕ್ಕಳನ್ನು ತೆಗೆದುಕೊಂಡು ಹೋಗಿ ಹೊಟ್ಟೆ ಉರಿಸಿದರೆ ಅವರ ಮನೆ ಬೆಳಗುತ್ತದೆಯೆ ?"

ಆ ಮಾತು-ತನ್ನ ಕಡೆ ಹೊರಳಬಹುದೆಂದು ಹೆದರಿ ಶಾಂತ ಹೇಳಿದಳು,

"ಯಾರಿಗೆ ಗೊತ್ತು–ಪುಡುಗಿಯಲ್ಲಿ ತಪ್ಪಿದ್ದರೂ ಇರಬಹುದು!"

"ತಪ್ಪಿದ್ದರೆ ಶಿಕ್ಷೆ ಕೊಡಬೇಕಾದ್ದೆ ನ್ಯಾಯ, ಯಾರೂ ಅಲ್ಲ ಎಂದು ಹೇಳುವುದಿಲ್ಲ. ಆದರೆ ಹುಡುಗಿ ಏನೂ ತಿಳಿಯದವಳು. ನೆಟ್ಟಗೆ ಗಟ್ಟಿಯಾಗಿ ಎರಡು ಮಾತೂ ಸಹ ಆಡಲಾರಳು. ಅಂಥವಳಲ್ಲಿ ಗಂಡ ವಿದ್ಯಾವಂತನಾಗಿದ್ದೂ ಅನಾಗರಿಕನಂತೆ ನಡೆದುಕೊಂಡುದು ಅಕ್ಷಮ್ಯ ಅಪರಾಧವೆ ಸರಿ. ಅಂಥಾ ದುಷ್ಟರಿಗೆ ಬುದ್ಧಿ ಕಲಿಸಬೇಕಾದುದು ತಂದೆ-ತಾಯಿಗಳ ಕರ್ತವ್ಯ. ಹುಡುಗಿಯ ತಂದೆ ಮಾಡಿದ ಕ್ರಮ ನನಗೇನೊ ಹಿಡಿಸಿತು."

"ಎಲ್ಲರಿಗೂ ಅದೆಲ್ಲಿ ಸಾಧ್ಯವಮ್ಮ! ಅದಕ್ಕೆ ದುಡ್ಡಿನ ಸಹಾಯ ಬೇಕು, ಎದೆಗಾರಿಕೆ ಬೇಕು, ಸಮಾಜವನ್ನೆದುರಿಸುವ ತಾಳ್ಮೆ ಬೇಕು—ಹಾಗಿದ್ದರೆ ಮಾತ್ರ ಆ ಕೆಲಸಕ್ಕೆ ಕೈಹಚ್ಚಬಹುದು."

ಅಷ್ಟರಲ್ಲಿ ಹೊರಗಿನಿಂದ ಬಂದ ಸೂರಪ್ಪ ಧನಿಗೂಡಿಸಿದರು,

"ಆ ಮಾತು ಯಾಕೆ ಬಂತು? ಯಾರು ಈಗ ಅಂಥಾ ಆಪತ್ತಿಗೆ ಗುರಿಯಾಗಿರುವವರು?"

ಇದ್ದಕ್ಕಿದ್ದಂತೆ ಮಾತಿನ ನಡುವೆ ಬಂದ ಸೂರಪ್ಪನನ್ನು ಕಂಡು ಶಾಂತ ಬೆದರಿದರೂ ಸುಶೀಲಮ್ಮ ಅಂಜಲಿಲ್ಲ. ಗಂಡನೆದುರಿಗೇ ಆ ಪ್ರಸ್ತಾಪವನ್ನೆತ್ತುವ ಅವಕಾಶ, ಸಂದರ್ಭಕ್ಕೆ ಹೊಂದಿಕೊಂಡು ತಾನಾಗಿ ಒದಗಿ ಬಂದುದಕ್ಕೆ ಸಮಾಧಾನ ಹೊಂದಿ, ಧೈರ್ಯ ಮಾಡಿ— ಅವರಿಗೆ ಶಾಂತಳಿಗಂದ ಮಾತನ್ನೆಲ್ಲ ತಿಳಿಸಿ, ಹೇಳಿದರು,

"ನಾ ಹೇಳಿದ್ದು ಸರಿಯೊ ಶಾಂತ ಹೇಳಿದ್ದು ಸರಿಯೊ! ನೀವೇ ತೀರ್ಮಾನ ಮಾಡಿ."

"ಇಬ್ಬರು ಹೇಳಿದ್ದೂ ಸರಿ. ತಪ್ಪು ಮಾಡಿದವನಿಗೆ ಶಿಕ್ಷೆ ಕೊಡಬೇಕಾದುದೂ ಧರ್ಮ, ಶಿಕ್ಷೆ ಕೊಡುವವನಿಗೆ ಶಾಂತ ಹೇಳಿದ ಗುಣಗಳು ಅನುಕೂಲ ಇರಬೇಕಾದುದೂ ಅವಶ್ಯಕ. ಅದಿರಲಿ, ಈಗ ಆ ಪ್ರಸ್ತಾಪ ಬಂದದ್ದು ಯಾಕೆ?"

ಸೂರಪ್ಪನೂ ಹೆಂಡತಿಗಿರುವ ಸಂಶಯವನ್ನು ತಳೆದು, ಮನಸ್ಸನ್ನು ತಿಳಿ

ಮಾಡಬೇಕೆನ್ನುವ ನಿರ್ಧಾರಕ್ಕೆ ಬಂದು ವಿಷಯ ಗೊತ್ತಿದ್ದರೂ ಕೆದಕಿ ಕೇಳಿದ್ದರು.

"ಶಾಂತಳಿಗೆ ಗಂಡನ ಮನೆಯಲ್ಲಿ ಏನೊ ಕಿರುಕುಳವಿರಬೇಕು. ಬರ ಬರುತ್ತಾ ಕಡ್ಡಿಯಾಗುತ್ತಿದ್ದಾಳೆ. ವಯಸ್ಸಿಗೆ ತಕ್ಕಂತೆ ಗೆಲುವಿಲ್ಲ, ಲವಲವಿಕೆಯಿಲ್ಲ. ಮುಖದಲ್ಲಿ ಆಗಲೆ ಮುದಿಕಳೆ ಬಿದ್ದಿದೆ. ಸುಮ್ಮನೇ ಎಂದಿಗೂ ದೇಹ ಹೀಗಾಗುವುದಿಲ್ಲ. ಅವಳೆ ಏನಾದರೂ ಕಷ್ಟ-ಸುಖ ಹೇಳಿಕೊಳ್ಳುವಳೇನೊ ಎಂದು ಇದುವರೆಗೂ ಕಾದೆ; ಚಕಾರವೆತ್ತಲಿಲ್ಲ. ಮನಸ್ಸು ಕೇಳದೆ ಅವಳ ಬಾಯಿ ಬಿಡಿಸಲು ಮೊನ್ನೆ ನಡೆದ ಆ ಪ್ರಸಂಗ ಹೇಳಿದೆ. ಮಾತು ಮುಗಿಯುವಷ್ಟರಲ್ಲಿ ನೀವು ಬಂದೇ ಬಿಟ್ಟಿರಿ."

"ಬಂದದ್ದು ಒಳ್ಳೆಯದೆ ಆಯಿತು; ಇಲ್ಲದಿದ್ದರೆ ಹುಡುಗಿಗೂ ಗಾಬರಿ ಮಾಡಿ, ನೀನೂ ಮನಸ್ಸು ಕೆಡಿಸಿಕೊಳ್ಳುತ್ತಿದ್ದೆ. ಗೋಪಿಯಂತೆ ನಿನಗೂ ಎಲ್ಲೋ ಸಂಶಯದ ಭೂತ ಹೊಕ್ಕಿದೆ. ಅವನೇನೊ ಹುಡುಗ ಅನ್ನಿಸಿಕೊಂಡ. ನೀನ್ಯಾಕೆ ಹೀಗೆ ಮಾಡುವೆ ಹೇಳು?"

"ಹಾಗಾದರೆ ಮಗಳು ಸಾಯುತ್ತಿದ್ದರೂ ಕಣ್ಣುಮುಚ್ಚಿ ಸುಮ್ಮನೆ ಕೂತಿರಲೇನು?"

"ಸಾಯಲು ಅವಳಿಗೇನಾಗಿದೆ! ಅವಳೆ ಬೇಕೆಂದು ಮಾಡಿಕೊಂಡಿರುವುದು. ಚಿಕ್ಕ ವಯಸ್ಸಿನವಳಾದ ತನ್ನ ಹೆಂಡತಿ ಮೈದುನನೊಂದಿಗೆ ಸಲುಗೆಯಿಂದಿರುವುದನ್ನು ನೋಡಲಾರದೆ ಎಲ್ಲೊ ಒಂದೆರಡು ಕೆಣಕು ಮಾತಾಡಿರಬಹುದು, ಗೋಪಿ—ಅಷ್ಟೆ. ಅವಳು ಅದಕ್ಕೆ ಜೊಡ್ಡದು ಮಾಡಿಕೊಂಡು, ಅನ್ನ–ನೀರು ಬಿಟ್ಟು ಕೊರಗುತ್ತಿದ್ದಾಳೆ. ಎಷ್ಟಾದರೂ ನಿನ್ನ ಮಗಳಲ್ಲವೆ? ಸಾಸಿವೆ ಕಾಳಷ್ಟನ್ನು ಬೆಟ್ಟದ ಗಾತ್ರ ಮಾಡಿ ಬದುಕು ಹಾಳು ಮಾಡಿಕೊಳ್ಳುವುದರಲ್ಲಿ ಇಬ್ಬರೂ ಸಮನಾಗಿದ್ದೀರಿ."

ಅವರೆಗೆ ಹೆಂಡತಿಗೆ ತಿಳಿಸಬಾರದೆಂದಿದ್ದ ವಿಷಯ ಸಂದರ್ಭಕ್ಕೆ ಹೊಂದಿಕೊಂಡು ಸೂರಪ್ಪನ ಬಾಯಲ್ಲಿ ತಾನಾಗಿ ಬಂತು. ಪ್ರಮಾದವಾಗದಿರಲೆಂದು ವಿಷಯವನ್ನು ತೇಲಿಸಿ ಮಾತಾಡಿದ್ದರು.

"ಬದುಕು ಹಾಳಾಗಲು ಇನ್ನೆಷ್ಟಾಗಬೇಕು! ಯಾವ ಆಧಾರದಿಂದ ನೀವು ಹಾಗೆ ಧೈರ್ಯವಿತ್ತು ಮಾತಾಡುವಿರೊ! ನನಗಂತೂ ಅರ್ಥವೇ ಆಗು

ವುದಿಲ್ಲ ನಿಮ್ಮ ಮಾತು."

"ನನ್ನ ಆಧಾರದಿಂದಲೆ. ಯಾಕರ್ಥವಾಗುವುದಿಲ್ಲ? ನಿನಗೆ ಮರೆತು ಹೋಯಿತೇನು, ಕೃಷ್ಣಪ್ಪ ಮನೆಯಲ್ಲಿದ್ದಾಗ ನಡೆದ ಪ್ರಸಂಗ! ಎಲ್ಲ ಎರಡು ದಿನದ ನೋವು. ಸ್ವಲ್ಪ ದಿನ ಸಹಿಸಿಕೊಳ್ಳಬೇಕು, ಆಮೇಲೆ ತಾನೆ ಸರಿ ಹೋಗುತ್ತೆ."

"ನನಗೆ ಇದಕ್ಕೆ ಸಿಟ್ಟು ಬರುವುದು ನೋಡಿ—ಯಾವುದಕ್ಕೆ ನೋಡಿದರೂ ನಿಮ್ಮನ್ನು ಹೋಲಿಸಿ ಮಾತಾಡುವಿರಿ. ನಿಮ್ಮಂತೆ ಎಲ್ಲರೂ ಸಭ್ಯರಿರುತ್ತಾರೆಂದು ಮಾತ್ರ ತಿಳಿಯಬೇಡಿ. ಅಷ್ಟು ಹಗುರವಾಗಿ ತೆಗೆದುಕೊಳ್ಳುವ ವಿಷಯವೂ ಅಲ್ಲ ಅದು. ಮೊದಲೇ ನಿಮ್ಮಳಿಯನದು ಬಹಳ ಸಣ್ಣ ಸ್ವಭಾವ. ಹಾಗೇ ಬಿಟ್ಟರೆ ಮುಂದೆ ಬೆಳೆದು ಹೆಮ್ಮರವಾದರೂ ಆಗಬಹುದು. ಉದಾಸೀನ ಮಾಡುವುದರಲ್ಲಿ ನನಗರ್ಥ ಕಾಣಲಿಲ್ಲ."

"ಹುಡುಗಿ ಇನ್ನೂ ಚಿಕ್ಕವಳು. ಗಂಡನನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದಾಳೊ ಇಲ್ಲವೊ! ಆ ವಿಷಯಕ್ಕೆ ಈಗಲೆ ಕೈಹಚ್ಚುವುದೂ ನನಗೆ ಸರಿ ಕಾಣಲಿಲ್ಲ."

"ನಿಮ್ಮಭಿಪ್ರಾಯ ನಾನೊಪ್ಪುವುದಿಲ್ಲ. ಅತ್ತೆ–ಮೈದುನ–ನಾದಿನಿಯರಲ್ಲಿ ಒಳ್ಳೆ ಹೆಸರು ತೆಗೆದುಕೊಂಡ ಹುಡುಗಿ ಅರ್ಥ ಮಾಡಿಕೊಳ್ಳದೆ ಇರುವಳೆ! ಸುಮ್ಮನೆ ಇಲ್ಲದ್ದೆಲ್ಲ ಕೊಕ್ಕೆ ಹಾಕಿ ಹುಡುಗಿಯನ್ನು ಹಾಳು ಮಾಡಬೇಡಿ."

"ಹಾಗಾದರೆ ನಾನೇನು ಮಾಡಬೇಕೆಂದು ನಿನ್ನ ಅಭಿಪ್ರಾಯ? ಸ್ಪಷ್ಟವಾಗಿ ಹೇಳಿಬಿಡು."

"ನಿಮ್ಮ ದಾಕ್ಷಿಣ್ಯವನ್ನೆಲ್ಲ ಒಂದು ಕಡೆ ಕಟ್ಟಿಟ್ಟು ಹುಡುಗನಿಗೆ ಸ್ವಲ್ಪ ಬೆಜ್ಜರಿಕೆಯಿಡಿ, ಎಲ್ಲ ಸರಿಹೋಗುತ್ತೆ."

"ಅದು ಮಾತ್ರ ಸುಳ್ಳು. ನನ್ನ ಮನಸ್ಸಿಗೆ ಅವನ ನಡವಳಿಕೆ ತಪ್ಪೆಂದು ತಿಳಿಯುವವರೆಗೆ ನಾನು ಏನೂ ಮಾಡುವುದಿಲ್ಲ—ಆದದ್ದಾಗಲಿ."

ಇತ್ತೀಚೆಗೆ ಗೋಪಿಯ ನಡವಳಿಕೆ ಸೂರಪ್ಪನಲ್ಲೂ ಅದೇ ಅಭಿಪ್ರಾಯವನ್ನು ಮೂಡಿಸಿದ್ದರೂ, ಶತಮೂರ್ಖನಾದವನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ದುಡುಕಿದರೆ, ಆ ಹೊರೆಯೂ ಮಗಳ ಮೇಲೆಯೇ ಬೀಳುವುದೆಂದು ತಿಳಿದು ಹಾಗೆ ಮಾಡಲು ಹಿಂಜರಿದರು. ಅಲ್ಲದೆ ಮಗುವಿನ ತಂದೆಯಾದ

ಗೋಪಿ ಮುಂದೆ ಸರಿಹೋದರೂ ಹೋದಾನೆಂಬ ಭಾವನೆಯೂ ಅವರಿಂದ ಆ ಮಾತಾಡಿಸಿತ್ತು.

"ಮಾಡದಿದ್ದರೆ ಬಿಡಿ—ಸ್ವಲ್ಪ ದಿನದಲ್ಲೆ ಹಿರಿಯ ಮಗಳಂತೆ ಇವಳದೂ ಹೆಣ ಕಂಡರೆ ಸರಿ."

ಸೂರಪ್ಪ ಪಟಪಟನೆ ಹಣೆಚಚ್ಚಿ ಹೇಳಿದರು,

"ಅಯ್ಯೋ! ಆ ಮಾತನ್ನು ಕೇಳಲಾರೆನಲ್ಲಪ್ಪಾ! ಆ ಮಾತಾಡಿ ಆಡಿ ನನ್ನ ಕೊಲೆ ಮಾಡಿಬಿಡುವೆ, ಗೊತ್ತು!"

"ಹಾಳಾಗಿ ಹೋಗಲಿ, ಯಾರಿಗೆ ಬೇಕು ಈ ಹೊಡಬಾಳು! ನನ್ನಿಂದ ಸಾಧ್ಯವಿದ್ದಷ್ಟು ದಿನ ಅನುಭವಿಸುವೆನು. ಆಮೇಲೆ ಗೊತ್ತೇ ಇದೆ." ಎಂದು ಗಂಡನ ಕಡೆ ತಿರುಗಿಯೂ ನೋಡದೆ ಕಣ್ಣೀರಿಡುತ್ತಾ ಸುಶೀಲಮ್ಮ ಸರಸರ ಒಳಗೆ ನಡೆದರು.

ಸೂರಪ್ಪನಿಗೆ ತಲೆಯ ಮೇಲೆ ಹೊಡೆದಂತಾಗಿತ್ತು. ಮಗಳ ಮುಂದೆ ಎಂದೂ ಗಂಡ-ಹೆಂಡತಿ ಇಷ್ಟು ರಂಪ ಮಾಡಿಕೊಂಡಿರಲಿಲ್ಲ. ಅದೂ ಅವಳ ಬಗ್ಗೆ ಅವಳ ಮುಂದೆಯೆ ಮಾತು ಕತೆ ನಡೆದದ್ದು ತುಂಬಾ ತಪ್ಪಾಗಿ ಕಂಡಿತು. ಸಾಲದಿದ್ದಕ್ಕೆ ಮಾತಿನ ಮಧ್ಯದಲ್ಲಿ ಸುಶೀಲಮ್ಮ ರತ್ನಳ ಸಾವಿನ ಸುದ್ದಿ ಬೇರೆ ಆಡಿಬಿಟ್ಟಿದ್ದರು—ಅದೂ ಶಾಂತಳ ಬಾಳಿಗೆ ಹೋಲಿಸಿ. ಅದೆಲ್ಲಿ ಶಾಂತಳ ಮನಸ್ಸನ್ನು ಕಲಕುತ್ತದೊ ಎನ್ನುವ ಭೀತಿ ಬೇರೆ ತಲೆದೋರಿತು. ಏನು ಮಾಡಲೂ ತೋಚದೆ, ಯಾವ ಮಾತೂ ಆಡದೆ ಅಪರಾಧಿಯಂತೆ ಕತ್ತುಬಗ್ಗಿಸಿ ಕಾಲೆಳೆದು ಅಲ್ಲಿಂದ ನಿಧಾನವಾಗಿ ಮರೆಯಾದರು.

ಶಾಂತ ಪೆಚ್ಚಾದಳು. ತಾಯಿ ತನ್ನ ಬಗ್ಗೆ ಅಕ್ಕನ ಸಾವಿನ ಹೋಲಿಕೆಯಿತ್ತು ಮಾತಾಡಿದುದು, ಬಿಡಿಸಲಾರದ ಸಮಸ್ಯೆಯಾಯಿತು. ಆವರೆಗೆ ತನ್ನಕ್ಕನ ಸಾವು ಎಲ್ಲರಂತೆ ಆದುದೆಂದೂ ಆ ಸಾವಿನ ನೋವನ್ನು ಮರೆಯಲಾರದೆ ತಂದೆ-ತಾಯಿ ಆಗಾಗ ಚಿಂತೆಗೀಡಾಗುತ್ತಿದ್ದರೆಂದೂ ಭಾವಿಸಿದ್ದಳು. ಇಂದು ತಾಯಿ ಆಡಿದ ಮಾತಿನಿಂದ ತನ್ನ ತಿಳುವಳಿಕೆ ತಪ್ಪೆಂದೂ, ಅಕ್ಕನ ಸಾವಿನಲ್ಲಿ ಏನೊ ರಹಸ್ಯವಿದೆಯೆಂದೂ, ಆ ಸಾವಿಗೂ ತನ್ನ ಬಾಳಿಗೂ ಯಾವುದೊ ಸಂಬಂಧವಿರಬೇಕೆಂದೂ ಅರಿತಳು. ತಿಳಿಯಬೇಕೆಂಬ ಕುತೂಹಲ ಮೂಡಿತು. ಆದರೆ ಕೇಳುವುದು ಯಾರಲ್ಲಿ? ತಂದೆ ತಾಯಿಯನ್ನು ಕೇಳುವ

ಧೈರ್ಯವೂ ಇಲ್ಲ, ಮನಸ್ಸೂ ಇಲ್ಲ. ಥಟ್ಟನೆ ಸುಂದರಿಯ ನೆನಪು ಬಂತು. ಅವಳನ್ನು ಬಿಟ್ಟು ಕೇಳಿಸಿ, ಹೋಗುವುದರಲ್ಲಿ ತಿಳಿದುಕೊಂಡು ಹೋಗ ಬೇಕೆಂದು ನಿರ್ಧರಿಸಿದಳು.

ಅಪ್ಪನರಲ್ಲಿ ಒಳಗೆ ಗಟ್ಟಿಯಾಗಿ ಮಾತಾಡಿದಂತೆ ಕೇಳಿಬಂತು. ಎದ್ದು ಹೋಗಿ ಆಲೈಸಿದಳು. ತನ್ನನ್ನೆ ಕುರಿತು ಆಡುತ್ತಿದ್ದರು. ತಾಯಿ ಗಟ್ಟಿಯಾಗಿ ಅಳುತ್ತಿದ್ದರು, ತಂದೆ ಸಮಾಧಾನ ಪಡಿಸುತ್ತಿದ್ದರು. ತನ್ನ ಜೀವನ, ಅವರ ಮನಸ್ಸಿನ ಶಾಂತಿ ಕದಡಿದ್ದನ್ನು ಕಂಡು ಶಾಂತ ಹೆದರಿದಳು. ಮುಂದೆ ತನ ಗೇನೆ ಆದರೂ ಅವರಿಗೆ ತಿಳಿಸಕೂಡದೆಂದು ಗಟ್ಟಿಮಾಡಿ ಹೋಗಿ ಮಲಗಿ ಕೊಂಡಳು. ಕಲಕಿದ ಮನಸ್ಸು ತಿಳಿಯಾಗಲೆ ಇಲ್ಲ, ಮತ್ತಷ್ಟು ರಾಡಿಯಾ ಯಿತು. ತಂದೆ ತಾಯಾಡಿದ ಮಾತನ್ನು ಪುನಃ ಮೊದಲಿಂದ ಕೆದಕಿ ನೋಡಿ ದಳು. ಕೆದಕಿದಷ್ಟೂ ಆಳವಾಗುತಿತ್ತೆ ವಿನಹ ಅಡಗಿದ ಅರ್ಥ ಕಾಣಲಿಲ್ಲ. ಹಾಗೆಂದು ಕೆದಕಿ ನೋಡುವುದನ್ನು ಬಿಡಲೂ ಇಲ್ಲ. ಬಿಡುವಿದ್ದ ಸಮಯ ವನ್ನು ಅದಕ್ಕೆ ಮೀಸಲಿಟ್ಟಳು.

## ೧೬

ಮಗು ಬಾಣಂತಿಯನ್ನು ಬಹಳ ಕಷ್ಟದಿಂದ ಕಳುಹಿಸಿ ಕೊಟ್ಟಿದ್ದರು ಸುಶೀಲಮ್ಮ. ಇನ್ನು ಸ್ವಲ್ಪ ದಿನವಿರಲು ಶಾಂತ ಒಪ್ಪಿದ್ದಿದ್ದರೆ, ಅವರ ಮನಸ್ಸಿ ಗೆಷ್ಟೋ ಸಮಾಧಾನವಿರುತಿತ್ತು. ಗಂಡನ ಸ್ವಭಾವಕ್ಕೆ ಹೆದರಿ, ತಾಯ ಬೇಡಿಕೆಯನ್ನು ನಿರಾಕರಿಸಿ, ಮಗುವಿಗೆ ಐದು ತಿಂಗಳು ತುಂಬುವುದರಲ್ಲೆ ಹಠ ಮಾಡಿ ಅವಳು ಹೊರಟು ಹೋಗಿದ್ದಳು. ಈಗ ಮನೆಯಲ್ಲಿ ಅವರು ಮೂವರೆ ಆಗಿದ್ದರು. ಇಷ್ಟು ದಿನ ತುಂಬಿದಂತಿದ್ದ ಮನೆ 'ಬಿಕೋ' ಎನ್ನು ತ್ತಿತ್ತು. ಏಕೊ ಏನೊ ಈ ಬಾರಿ ಮಗಳು ಹೋದಂದಿನಿಂದ ಅವರ ಮನ ಸ್ಸಿಗೂ ನೆಮ್ಮದಿಯಿರಲಿಲ್ಲ. ಶಾಂತ ಇನ್ನು ತವರಿನ ಮುಖ ನೋಡಲಾರ ಳೆಂದೆ ಅವರ ಭಾವನೆಯಾಗಿತ್ತು. ಅವಳು ಗಂಡನಿಂದ ಪಡುತ್ತಿರುವ ಯಮ

ಯಾತನೆಯನ್ನು ಸುಂದರಿಯಿಂದ ತಿಳಿದು ಹೃದಯ ಹುಣ್ಣು ಮಾಡಿಕೊಂಡಿದ್ದರು. ಮಗಳು ಹೋಗುವುದಕ್ಕೆ ಮೊದಲೆ ಆ ಕರುಳು ಸುಡುವ ಕಥೆಯ ವಿವರ ತಿಳಿದಿದ್ದರೆ, ಏನಾದರೊಂದು ವ್ಯವಸ್ಥೆ ಮಾಡಿದ ಹೊರತು, ಖಂಡಿತ ಅವಳನ್ನು ಹೋಗಗೊಡುತ್ತಿರಲಿಲ್ಲ. ಈಗ ಸಮಯ ಕೈ ಮಿಂಚಿ ಹೋಗಿತ್ತು. ಏನು ಮಾಡುವಂತೆಯೂ ಇರಲಿಲ್ಲ. ಗಂಡನ ಬಗ್ಗೆ ಎಲ್ಲಿಲ್ಲದ ಸಿಟ್ಟು ಬಂತು, ಅವರಿಗೆ.

'ಇಷ್ಟೆಲ್ಲ ಮಗಳು ಯಾತನೆ ಪಟ್ಟಿದ್ದರೂ ಅವಳಿಗೆ ರಕ್ಷಣೆ ಕೊಡದೆ, ನಡೆದ ವಿಷಯ ಮುಚ್ಚಿರಿಸಿ ಅಳಿಯನನ್ನೆ ಹೊತ್ತು ಮಾತಾಡಿದ್ದಾರೆ. ಗಂಡಸರ ಜಾತಿಯೆಲ್ಲ ಒಂದೆ; ಹೆಣ್ಣು ಮಕ್ಕಳ ಕಷ್ಟ-ಸುಖ ಪಟ್ಟರೂ ಗೊತ್ತಾಗುವುದಿಲ್ಲ. ತಾವು ಮಾಡಿದ ತಪ್ಪನ್ನು ಸರಿಯೆಂದು ಸಾಧಿಸಿ ಕಣ್ಣೀರು ಕುಡಿಸುವವರ ಹೊರತು, ತಪ್ಪೆಂದು ವಿಚಾರ ಮಾಡಿ ತಿದ್ದಿಕೊಳ್ಳುವವರೆಷ್ಟು ಮಂದಿ ಇದ್ದಾರೆ? ಇದ್ದರೂ ಅವರನ್ನನುಸರಿಸುವವರು ವಿರಳ. ಹೀಗಿರುವಲ್ಲಿ ಗೋಪಿಯನ್ನು ತಮಗೆ ಹೋಲಿಸಿಕೊಂಡು ದಿನ ದಬ್ಬುತ್ತಿರುವರಲ್ಲಾ, ಇವರ ಬುದ್ಧಿಗೇನು ಹೇಳುವುದು? ಒರಟು ಅಳಿಯನೊಡನೆ ಇವರ ಪರೀಕ್ಷೆಯೆ? ಬೇಕೆಂದು ಸಡಿಲ ಬಿಟ್ಟು ತಾವೇ ಗುಂಡಿಗೆ ಹಾಕುತ್ತಿರುವರಲ್ಲಾ! ಮಾತುಕತೆಗೆ ಬಾಯಿ ಬಡಿಯುವುದೊಂದು ಗೊತ್ತು. ಹಾಳಾಗಿ ಹೋಗಲಿ—ನನಗಿನ್ನು ಈ ಸಂಸಾರದ ಗೊಡವೆಯೆ ಬೇಕಿಲ್ಲ. ಎಲ್ಲ ಮಮತೆಯನ್ನೂ ತೊರೆದು ಬಿಡುವೆನು—ಇದ್ದರೆ ತಾನೆ ಕಷ್ಟ!'

ದಿನಕ್ಕೆ ಹಲವಾರು ಬಾರಿ ಈ ಬಗೆಯ ಭಾವನೆಗಳುಂಟಾಗಿ ಸುಶೀಲಮ್ಮನ ಮನಸ್ಸು ಕಲ್ಲಾಗುತಿತ್ತು. ಮಮತೆಯ ಬಳ್ಳಿ ಮುರುಟಿಕೊಳ್ಳುತಿತ್ತು. ಪ್ರೀತಿಯ ಜ್ಯೋತಿ ಮಂದವಾಗುತಿತ್ತು. ಸ್ವಭಾವದಲ್ಲಿ ಸಿಡುಕು ಮೈತುಂಬಿ ಬಂತು. ಕಷ್ಟಪಟ್ಟು ಕಾದಿರಿಸಿದ್ದ ಸೌಜನ್ಯವೂ ಕಣ್ಮರೆಯಾಗತೊಡಗಿತು. ನಗು ಮರೆತೂ ಮುಖದಲ್ಲಿ ಮೂಡುತ್ತಿರಲಿಲ್ಲ. ಮೊದಲಿನ ಸುಶೀಲಮ್ಮನಲ್ಲವೆನ್ನುವಷ್ಟು ಬದಲಾಯಿಸಿಬಿಟ್ಟರು.

ಹೆಂಡತಿಯ ಬದಲಾವಣೆ ಸೂರಪ್ಪನಿಗೂ ಹೊಳೆಯದೆ ಹೋಗಲಿಲ್ಲ. ಹಿಂದು-ಮುಂದು ಓಡಾಡಿ ತಮ್ಮ ಬುದ್ಧಿಯ ಬತ್ತಳಿಕೆಯಲ್ಲಿದ್ದ ಬಾಣಗಳನ್ನೆಲ್ಲ ಬಿಟ್ಟು ನೋಡಿದರು. ಯಾವುದೂ ಸುಶೀಲಮ್ಮನ ತಲೆಯಲ್ಲಿ ಹೊಕ್ಕಿದ್ದ ಭೂತ

ವನ್ನು ಬಿಡಿದೋಡಿಸಲು ಶಕ್ತವಾಗಲಿಲ್ಲ. ಕಡೆಗೆ ನಿರಾಶರಾಗಿ ಅವರು ಹೋದಂತೆ ಬಿಟ್ಟು ಸುಮ್ಮನಾದರು. ಮನಸ್ಸಿನಲ್ಲಿದ್ದ ಅಳುಕು ಮಾತ್ರ ಹೋಗಲಿಲ್ಲ. ಜೀವಕ್ಕೇನಾದರೂ ಅಪಾಯ ಮಾಡಿಕೊಂಡಾರೆಂದು ಹೆದರಿ, ತಮ್ಮ ವಹಿವಾಟನ್ನು ಪುನಃ ಕೃಷ್ಣಮೂರ್ತಿಗೆ ವಹಿಸಿ ಮನೆಯಲ್ಲಿಯೆ ನಿಂತರು.

ಆ ಗಾಬರಿ ಬರುವಂತೆಯೆ ಇದ್ದರು ಸುಶೀಲಮ್ಮ. ಸಿಟ್ಟಿನ ಸಂಗಡ ವ್ಯಸನವೂ ಕಾಲಿಕ್ಕಿ ಬಂತು. ಆಗಾಗ ಅದು ಬಾಳಿನ ನೋವನ್ನು ಕೆದಕಿ ತೋರಿ ಕರುಳು ಹಿಂಡುತ್ತಿತ್ತು. ಎಲ್ಲ ಸೌಕರ್ಯವಿದ್ದೂ ಸುಖವಿದ್ದೂ ಕಣ್ಣೀರಿಡುತ್ತಿದ್ದರು. ಅವರ ಸಂತಾನವೊಂದು ಸಂತೋಷದಲ್ಲಿ ಅರಳಿದ್ದಿದ್ದರೆ, ಅವರನ್ನು ಹಿಡಿಯುವವರೆ ಇರುತ್ತಿರಲಿಲ್ಲ. ಆ ಕೊರಗೊಂದೆ ಅವರನ್ನು ಕರಗಿಸಿತ್ತು. ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಇಬ್ಬರು ಹೆಣ್ಣುಮಕ್ಕಳೂ ಹೊಕ್ಕ ಮನೆಯಲ್ಲಿ ಯಾವ ಸುಖವನ್ನೂ ಕಾಣಲಿಲ್ಲ. ಒಬ್ಬಳು, ಗಂಡನಿಂದಲೆ ಸಂಜುಂಡು, ಬಾಳ ಬೆಳಗಿನಲ್ಲೆ ಕ್ರೂರ ಸಾವಿಗೆ ತುತ್ತಾಗಿ ಹೊಟ್ಟೆ ಸುಟ್ಟು ಹೋಗಿದ್ದಳು. ಮತ್ತೊಬ್ಬಳು, ಅದೇ ನೆನಪು ಕೊಡುವ ನರಕದ ಹಾದಿಯಲ್ಲಿ ಜೀವದ ಹಂಗು ತೊರೆದು ಹೊರಟಿದ್ದಾಳೆ. ಸಾವೂ ಹುಡುಕಿ ಹತ್ತಿರ ಬರುತ್ತಿದೆ.

'ಯಾಕೆ ಹೀಗೆ?'

'ನನ್ನ ಸಂತಾನವೆ ಸುಟ್ಟು ಹೋಗಬೇಕೆಂದು ದೇವರ ಇಚ್ಛೆಯೆ!'

'ಹಾಗಿದ್ದರೆ ಮಕ್ಕಳನ್ನು ಕೊಟ್ಟದ್ದಾದರೂ ಯಾಕೆ?'

'ನನ್ನ ಹೊಟ್ಟೆ ಸುಡುತ್ತಿರುವ ದೇವರಿಗೆ ಸಂಕಟವಾಗುವುದಿಲ್ಲವೆ!'

'ಯಾವ ಅಪರಾಧಕ್ಕಾಗಿ ನನಗೀ ಶಿಕ್ಷೆ ಕೊಡುತ್ತಿರುವನು?'

'ಬುದ್ಧಿ ತಿಳಿದಂದಿನಿಂದ ಯಾರಿಗೆ ಯಾವ ಅನ್ಯಾಯವನ್ನೂ ಮಾಡಿಲ್ಲವಲ್ಲ.'

'ಮತ್ತೇಕೆ ನನಗೀ ಸಂಕಟ?'

'ಏಕೆ?'

'ನನ್ನ ಪ್ರಶ್ನೆಗೆ ಯಾರೂ ಉತ್ತರಿಸುವರಿಲ್ಲವೆ?'

'ಇಲ್ಲ—ಹಾಗಿದ್ದಿದ್ದರೆ ನನಗೀ ಸಂಕಟ ಬರುತ್ತಲೆ ಇರಲಿಲ್ಲ.'

'ಇದು ಯಮಯಾತನೆಯ ಸಂಕಟ—ಯಮ ಯಾತನೆಯ ಸಂಕಟ!'

'ಅಯ್ಯೋ, ಇದನ್ನು ಹೇಗೆ ಸಹಿಸಲಿ!'

'ಮೈ ಕೈಯೆಲ್ಲ ಉರಿಹತ್ತಿ ಸುಡುತ್ತಿದೆಯಲ್ಲ—ಈ ವೇದನೆ ಹೇಗೆ ಸಹಿಸಲಿ ! ದೇವಾ ಹೇಗೆ ಸಹಿಸಲಿ !"

ಸಂಕಟ ಹಿಡಿತಕ್ಕೆ ಸಿಕ್ಕಲಿಲ್ಲ. ಅರ್ಧರ್ಧ ಆಗಿದ್ದ ಅಡಿಗೆಯನ್ನು ಹಾಗೇ ಬಿಟ್ಟು ಸುಶೀಲಮ್ಮ ನೆಲಕ್ಕೆ ತಲೆ ಕುಟ್ಟಿಕುಟ್ಟಿ ಹೊರಳಾಡತೊಡಗಿದರು ಅಳುವಿನ ಧ್ವನಿ ಕೇಳಿ ಒಳಗೆ ಬಂದ ಸೂರಪ್ಪ, ಮಗುವನ್ನು ಸಂತೈಸುವಂತೆ ಹೆಂಡತಿಯನ್ನು ಸಂತೈಸಿ, ಕುಡಿಯಲು ಬಿಸಿಬಿಸಿ ಕಾಫಿ ಮಾಡಿಕೊಟ್ಟರು. ಸಮಾಧಾನಕ್ಕೆ ಬಂದ ನಂತರ, ಅವರು ಬೇಡವೆಂದರೂ ಕೇಳದೆ, ಅರ್ಧವಾಗಿದ್ದ ಅಡಿಗೆಯನ್ನು ಪೂರ್ತಿ ಮಾಡಿ, ಸುಶೀಲಮ್ಮನನ್ನು ಒತ್ತಾಯವಾಗಿ ಊಟಕ್ಕೆ ಕೂರಿಸಿ ಬಡಿಸಿ ಉಪಚರಿಸಿದರು. ಗಂಡನ ಅಮರ ಪ್ರೇಮ ಅವರಾತ್ಮದಲ್ಲಿ ನೆಮ್ಮದಿ ತಂದರೂ ಶಾಂತಳ ನೋವಿನ ಬಾಳು ಕೂಡಲೆ ರಾಡಿ ಮಾಡಿ ಬಿಡುತಿತ್ತು. ಆ ಸಮಯದಲ್ಲಿ ಪತಿಯ ಮೇಲೆ ಎಲ್ಲಿಲ್ಲದ ಸಿಟ್ಟು ಬರುತಿತ್ತು.

ಹೆಂಡತಿಗೆ ಸಿಟ್ಟು ಮೈತುಂಬಿದ್ದ ಒಂದು ಮಧ್ಯಾಹ್ನ ಸೂರಪ್ಪ ಊಟಕ್ಕೆ ಬಂದರು. ಮಣೆ–ಲೋಟವೆಲ್ಲ ದಡಬಡ ಶಬ್ದ ಮಾಡಿಕೊಂಡು ಸ್ವಾಗತಿಸಿದವು. ಸ್ವಾಗತದ ಆ ಆರ್ಭಟದಲ್ಲೇ ಹೆಂಡತಿಗೆ ಆವೇಶ ಬಂದಿದೆಯೆಂದು ತಿಳಿದು, ಸದ್ದು ಗದ್ದಲ ಮಾಡದೆ, ಕತ್ತು ಬಗ್ಗಿಸಿ ತಟ್ಟೆಯ ಮುಂದೆ ಬಂದು ಕೂತರು. ಸಿಟ್ಟಿನ ರಭಸದಲ್ಲಿ ಬಡಿಸುವಾಗ ಊರೆಲ್ಲ ಚೆಲ್ಲಿಬಿದ್ದ ಅನ್ನವನ್ನು ಮಾತಾಡದೆ ಹೆರಿಕಿ ಹಾಕಿಕೊಂಡರು. ಬಿಸಿಬಿಸಿ ಹುಳಿ ಮೈತುಂಬಾ ಹಾರಿ ಚುರುಗುಟ್ಟಿಸಿತು. ಬಟ್ಟೆಗೂ ದೃಷ್ಟಿ ಬೊಟ್ಟಿಟ್ಟವು. ಸೂರಪ್ಪನ ಸಮಾಧಾನ ಸ್ವಲ್ಪ ಕಲಕಿತು. ಹೆಂಡತಿಗೆ ನೋವಾಗದಂತೆ ತಪ್ಪನ್ನು ತಿಳಿಸಿ ಹೇಳಿದರು,

"ಬೆಳಿಗ್ಗೆ ತಾನೆ ಉಟ್ಟ ಪಂಚೆ. ಸ್ವಲ್ಪ ನೋಡಿ ಬಡಿಸಬಾರದಿತ್ತೆ ? ಹೋಗಲಿ ಬಿಡು, ಒಗೆದರೆ ಹೋಗುತ್ತೆ."

ಸುಶೀಲಮ್ಮನ ಮನಸ್ಸಿನಮೇಲೆ ಆ ಮಾತು, ಕ್ರಿಯೆ ಯಾವುದೂ ಕೆಲಸ ಮಾಡಲಿಲ್ಲ. ಸುಮ್ಮನೆ ಎಲ್ಲೋ ನೋಡುತ್ತ ಕಲ್ಲಿನಂತೆ ನಿಂತು ಬಿಟ್ಟಿದ್ದರು. ಆ ನೋಟ ಸೂರಪ್ಪನ ಅಸಮಾಧಾನವನ್ನು ಕರಗಿಸಿತು. ಕಣ್ಣಲ್ಲಿ ಕರುಣೆ ತುಂಬಿ ಸ್ವಲ್ಪ ಹೊತ್ತು ಹೆಂಡತಿಯನ್ನು ದಿಟ್ಟಿಸಿ ನೋಡುತ್ತಿದ್ದು ಮತ್ತೆ ಕತ್ತು ಬಗ್ಗಿಸಿ ಅನ್ನವನ್ನು ಬಾಯಿಗಿಟ್ಟರು. ನಾಲಗೆ ಚುರಗುಟ್ಟಿತು. ಹುಳಿಗೆ ಹಾಕಿದ

ಖಾರ ನೆತ್ತಿಗೇರಿ ಕಣ್ಣು ಮೂಗಿನಲ್ಲಿ ನೀರಾಡಿಸಿತು. ಊಟ ಮಾಡದೆ ಬಿಟ್ಟರೆ ಹೆಂಡತಿಗೆಲ್ಲಿ ನೋವಾಗುವುದೊ ಎಂದು ಹೆದರಿ ತುತ್ತು ತುತ್ತಿಗೂ ನೀರು ಕುಡಿದು, ಅಂತೂ ಅಂದಿನ ಕಾಟಾಚಾರದ ಊಟದಿಂದ ಪಾರಾದರು. ಹೆಂಡತಿ ಸಿಟ್ಟಿನಿಂದ ರುದ್ರಾವತಾರ ತಾಳಿದಾಗ ಇಂಥಾ ಸಣ್ಣ ಪುಟ್ಟ ತೊಂದರೆಗಳನ್ನು ಎದುರಿಸಬೇಕಾಗುತಿತ್ತು. ಮನಸ್ಸು ಗಟ್ಟಿಮಾಡಿ ಉಂಟಾದ ತೊಂದರೆಗಳನ್ನು ಸಮಾಧಾನದಿಂದಲೆ ತೇಲಿಸಿ ಬಿಡುತ್ತಿದ್ದರು. ಒಮ್ಮೆ ನಡೆದ ಅಪಘಾತ ಮಾತ್ರ ಅವರ ಸೌಜನ್ಯದ ಮೇಲೆ ಬಲವಾದ ಪೆಟ್ಟು ಕೊಟ್ಟಿತು.

ಅದೃಷ್ಟ ಕೆಟ್ಟ ಶಾರದೆ ಆ ಸಮಯದಲ್ಲೆ ಅನುಶಂಕೆಗೆ ತುತ್ತಾದಳು. ಮೊದಲೆ ಹಠಮಾರಿಯಾಗಿದ್ದವಳು, ಆಗ ಬಿಚ್ಚಿದ ಬಾಯಿ ಮುಚ್ಚುತ್ತಿರಲಿಲ್ಲ. ಔಷಧ ಕುಡಿಸುವಾಗಲಂತೂ ಸಾಕು ಸಾಕು ಮಾಡುತ್ತಿದ್ದಳು. ಕೈಕಾಲು ಒತ್ತಿ ಮೂಗು ಹಿಡಿದು ಬಾಯಿಗೆ ಹುಯ್ಯಬೇಕಿತ್ತು. ಅನಾರೋಗ್ಯದಲ್ಲಿದ್ದ ಆ ಚಂಡಿ ಮಗುವಿನ ಆರೈಕೆಗೆ ತುಂಬಾ ತಾಳ್ಮೆ ಬೇಕಿತ್ತು. ಮನಸ್ಸಿಗೆ ನೆಮ್ಮದಿ ಯಿಲ್ಲದಿದ್ದ ಹೆಂಡತಿಯ ಮೇಲೆ ಆ ಗುರುತರ ಜವಾಬ್ದಾರಿಯನ್ನು ಹೊರಿಸಲು ಹೆದರಿ, ಸೂರಪ್ಪನೆ ವಹಿಸಿಕೊಂಡರು. ಶಾರದೆಯ ಹಠ ತಡೆಯಲು ಒಮ್ಮೊಮ್ಮೆ ಅವರಿಗೂ ಕಷ್ಟವಾಗುತ್ತಿತ್ತು.

ಒಂದು ದಿನ ರಾತ್ರೆ ಒಂಬತ್ತು ಗಂಟೆಯ ನಂತರ, ಮಲಗಿದ್ದ ಮಗುವ ನ್ನೆಬ್ಬಿಸಿ ತೊಡೆಯಲ್ಲಿ ಮಲಗಿಸಿಕೊಂಡು, ಔಷಧ ಹಾಕಿದ್ದ ಒಳಲೆಯನ್ನು ಕೈಗೆ ತೆಗೆದುಕೊಂಡರು. ಅಷ್ಟರಲ್ಲೆ ರಾಗ ಪ್ರಾರಂಭವಾಯಿತು,

"ನಂಗೋಚಿ ಬ್ಯಾಲಾ........ಅಪ್ಪಯ್ಯಾ....... ನಂಗೋಚಿ ಬ್ಯಾಲಾ...."

"ನಿಂಗೆ ಚೀ ಪೆಪ್ಪೆಂತು ಕೊತ್ತೀನಿ—ಕುಯಿ ಬಿಡು ಮುದ್ದು !"

ಸಾಮಾನ್ಯವಾಗಿ ಸೂರಪ್ಪ ಮಕ್ಕಳೊಡನೆ ಮಾತಾಡಲು ಅವರ ಭಾಷೆ ಯನ್ನೇ ಉಪಯೋಗಿಸುತ್ತಿದ್ದರು.

"ನಂಗೋಚಿ ಬ್ಯಾ........ಲಾ........! " ಎಂದು ಮಗು ಬಾಯನ್ನು ಗಟ್ಟಿಯಾಗಿ ಅದುಮಿ ಹಿಡಿಯಿತು.

"ಪೆಪ್ಪೆಂತು ಬೇಕೊ—ಬ್ಯಾಲೊ ?"

"ಪೆಪ್ಪೆಂತು ಬೇ........ಕು........!"

"ಹಂಗಾಯೆ ಓಚಿ ಕುಯಿ ಬಿಡು, ಪೆಪ್ಪೆಂತು ತುಂಬಾ ಕೊತ್ತೀನಿ."

"ನಂಗೆ ಬ್ಯಾ........ಲಾ........! ಓಚೀನೂ........ಬ್ಯಾ........ಲಾ....; ಪೆಪ್ಪಂತೂ........ನೂ........ಬ್ಯಾ ........ಲಾ........!" ಎಂದು ರಾಗ ಜೋರು ಮಾಡಿತು. ಸೂರಪ್ಪನಿಗೆ ಸಿಟ್ಟುಬಂತು. ಕೈಕಾಲು ಒತ್ತಿ ಹಿಡಿದು ಒಳಲೆ ಬಾಯಿಗೆ ಹಿಡಿದರು. ಹಲ್ಲನ್ನು ಗಟ್ಟಿಯಾಗಿ ಕಚ್ಚಿ ಹಿಡಿಯಿತು. ಕುಡಿಸಲಾ ಗದೆ ಫಟ್ಟನೆ ಒಂದೇಟು ಬಿಟ್ಟರು. ಕೈಕಾಲು ಒದರಾಡಿ, ತಲೆ ಅತ್ತಿತ್ತ ಉರು ಳಿಸಿಕೊಂಡು ಉಸಿರು ಕಟ್ಟುವಂತೆ ಅತ್ತಿತು. ಅಳುವಿನಲ್ಲೆ ಗಂಟಲಿಗೆ ಹೊಯ್ದರು. ನೆತ್ತಿಹತ್ತಿ ಉಸಿರು ಕಟ್ಟಿತು. ಮೈ ಕೈ ನೀಲಿಯಾಯಿತು. ಕಣ್ಣು ತೇಲಿ ಬಿಟ್ಟಿತು. ಸೂರಪ್ಪ ಗಾಬರಿಯಾಗಿ ಹೆಂಡತಿಯನ್ನು ಕರೆದರು. ಎಷ್ಟೋ ಹೊತ್ತಿನ ಮೇಲೆ ಸುಶೀಲಮ್ಮ ನಿಧಾನವಾಗಿ ಹೆಜ್ಜೆಯಿರಿಸುತ್ತ ಬಂದು ಗಂಡನಿಗೆ ಮಾರು ದೂರದಲ್ಲಿ ನಿಂತರು. ಆ ವೇಳೆಗಾಗಲೆ ಮಗು ಉಸಿರಾಡು ತಿತ್ತು. ತಾಯನ್ನು ಕಂಡೊಡನೆ ತಂದೆಯ ತೊಡೆಯಲ್ಲಿ ಮುಖ ಮುಚ್ಚಿ ಸುಮ್ಮನೆ ಮಲಗಿತು. ಗಂಡನ ಬಾಯಿಂದ ನಡೆದ ವಿಷಯವನ್ನು ಕೇಳಿದರೂ ಯಾವ ವಿಕಾರವನ್ನೂ ವ್ಯಕ್ತಪಡಿಸದೆ ಕಲ್ಲಿನಂತೆ ನಿಂತಿದ್ದರು. ಅವರ ನಿಲುಮೆ ಸೂರಪ್ಪನಲ್ಲಿ ದುಃಖ ಉಕ್ಕಿಸಿತು. ಒತ್ತಿ ಬರುತ್ತಿದ್ದ ದುಃಖವನ್ನು ತಡೆದು ಗದ್ಗದ ಧ್ವನಿಯಿಂದ ಹೇಳಿದರು.

"ನೀನ್ಯಾಕೆ ಹೀಗಾದೆ ಸುಶೀಲ? ಮಗು ಸಾಯುತ್ತ ಬಿದ್ದಿದ್ದರೂ ಕಲ್ಲಾಗಿ ನಿಂತಿರುವೆಯಲ್ಲಾ! ನಿನ್ನ ಹೃದಯ ತುಂಬಿ ನಿಂತಿದ್ದ ಆ ವಾತ್ಸಲ್ಯ ಮಮತೆ, ಕರುಣೆ, ಸೇವಾನಿಷ್ಠೆಯೆಲ್ಲ ಎಲ್ಲಿ ಹೋಯಿತು? ಮನಸ್ಸನ್ನು ಹೀಗೆ ಕೊಲ್ಲುತ್ತಾ ಬಂದರೆ ಸಂಸಾರ ಸ್ಮಶಾನವಾಗುವುದಿಲ್ಲವೆ? ಅಯ್ಯೋ, ನನ್ನ ಕಣ್ಣಾದರೂ ಕುರುಡಾಗಿದ್ದರೆ, ಈ ಯಾತನೆ ತಪ್ಪುತ್ತಿತ್ತಲ್ಲಾ! ಈ ವೇದನೆ ಹೇಗೆ ಅನುಭವಿಸಲಿ! ನಿನ್ನ ಮೈ ಹೊಕ್ಕಿರುವ ಆ ಭೂತ ರಕ್ತವನ್ನೆಲ್ಲ ಹೀರು ತ್ತಿದೆ; ನಾನು ತಾಳಲಾರೆನಲ್ಲಾ! ಕಣ್ಣಿಂದ ನಿನ್ನೀ ಕರಾಳ ರೂಪವನ್ನು ನೋಡಲಾರೆನಲ್ಲಾ! ಹೋಗು ಸುಶೀಲಾ, ಒಳಗೆ ಹೋಗು, ಈಗಲೆ ಮೈ ರಕ್ತವನ್ನೆಲ್ಲ ಒಣಗಿಸಬೇಡ! ಆಯುಸ್ಸಿದ್ದಷ್ಟು ದಿನ ಬರುವ ತೊಡಕನ್ನು ಎದು ರಿಸುವ ಚೈತನ್ಯ ನನ್ನಲ್ಲೀಗಲಿ! ಹೋಗು, ಒಳಗೆ ಹೋಗು.... !"

ಕರುಳು ಕೊಯ್ಯುವ ಮಾತಾಡಿದ್ದರೂ ಕದಲದೆ, ಎತ್ತಲೊ ಶೂನ್ಯ ದೃಷ್ಟಿ ಬೀರುತ್ತಾ ಕಲ್ಲಾಗಿ ನಿಂತಿದ್ದ ಹೆಂಡತಿಯನ್ನು ಕಂಡು ಅಲ್ಲಿರಲು ಮನಸ್ಸಾಗದೆ

ಮಗುವನ್ನು ಹೆಗಲಿಗೆ ಹಾಕಿ ಆ ಸ್ಥಳ ಬಿಟ್ಟು ತಾವೆ ಹಜಾರಕ್ಕೆ ಬಂದರು. ಶಾರದೆಗೆ ಉಸಿರು ಕಟ್ಟಿದಂದಿನಿಂದ ಔಷಧ-ಪಥ್ಯದ ಹೊತ್ತಿಗೆ ಬಹಳ ಎಚ್ಚರಿಕೆ ಯಾಗಿರುತ್ತಿದ್ದರು. ಮೈಯೆಲ್ಲ ಕಣ್ಣಾಗಿ ಆದರಿಸಿದ್ದರೂ ಆಮಶಂಕೆ ಇಳಿ ಮುಖವಾಗಿರಲಿಲ್ಲ. ದಿನೇದಿನೇ ಮೈಯ ತ್ರಾಣವೆಲ್ಲ ಬತ್ತುತಿತ್ತು. ಮಾಂಸ ಕರಗಿದ ಮೈ ಬರಿಯ ಮೂಳೆ ಚಕ್ಕಳದಿಂದ ವಿಕಾರವಾಗಿ ಕಾಣುತಿತ್ತು. ಕಣ್ಣಿನ ತೇಜಸ್ಸು ಮಾತ್ರ ಹಿಂಗಿರಲಿಲ್ಲ. 'ಹೆದರಬೇಡಿ, ಏನೂ ಆಗುವುದಿಲ್ಲ' ವೆನ್ನುವ ಭರವಸೆ ಕೊಡುತ್ತಿತ್ತು. ಆ ಕಾಹಿಲೆಯೆ ಹಾಗೆ—ಮೈಯ ಮಾಂಸವನ್ನೆಲ್ಲ ಪೂರ್ತಿ ಕರಗಿಸಿ, ಗಂಟಲ ವರೆಗೆ ಜೀವ ತಂದು ಹೆದರಿಸಿ, ಅನಂತರ ಚೈತನ್ಯ ತುಂಬುತ್ತದೆ. ಅದರ ಪರಿಚಯವಿದ್ದ ಸೂರಪ್ಪ ಆಶೆ ಬಿಡದೆ ವೈದ್ಯರ ಸಲ ಹೆಯಂತೆ ಆರೈಕೆ ಮಾಡಿ, ಹಗಲಿರುಳೂ ಮಗುವನ್ನು ಮೈಯೆಲ್ಲ ಕಣ್ಣಾಗಿ ಕಾಯುತ್ತಿದ್ದರು.

ಕ್ರೂರ ವಿಧಿ ಅಲ್ಲೂ ತನ್ನ ಬಲೆ ಬೀಸಿತು. ಒಂದು ದಿನ ಮಧ್ಯಾಹ್ನ ಹನ್ನೊಂದು ಗಂಟೆಯ ಸಮಯದಲ್ಲಿ, ಹಸಿವೆಂದು ಬೊಬ್ಬೆಯಿಡುತ್ತಿದ್ದ ಶಾರದೆಗೆ ಗಂಜಿ ಕುಡಿಸುತ್ತಿದ್ದರು ಸೂರಪ್ಪ. ಆಗ ಹೋಟೇಲಿನ ಕ್ಲೀನರ್ ನಂಜಿ ಓಡುತ್ತ ಬಂದು, ಯಾವುದೊ ಗಿರಾಕಿಗೂ ಕೃಷ್ಣಮೂರ್ತಿಗೂ ಹಣದ ವಿಷಯದಲ್ಲಿ ಕಲಹ ಪ್ರಾರಂಭವಾಗಿ ಮಾರಾಮಾರಿಯಾಗುತ್ತಿದೆಯೆಂದೂ, ತಮ್ಮನ್ನು ಈಗಲೇ ಕರೆದುಕೊಂಡು ಬರುವಂತೆ ಮ್ಯಾನೇಜರ್ ಹೇಳಿದ್ದಾರೆಂದೂ ಏದು ಸಿರು ಬಿಡುತ್ತಾ ಹೇಳಿದ.

ಆಗ ತಾನೆ ಗಂಜಿ ಕುಡಿಸಲು ಕೂತಿದ್ದರು. ಮೈಯಲ್ಲಿ ತುಂಬಾ ನಿತ್ರಾಣವಿದ್ದುದರಿಂದ ತೊಟ್ಟು ತೊಟ್ಟ ಬಾಯಿಗೆ ಹಾಕಬೇಕಾಗಿತ್ತು. ಕುಡಿದು ಮುಗಿಯುವುದೂ ಸುಮಾರು ಅರ್ಧ ಗಂಟೆ ಮೇಲಾಗುತಿತ್ತು. ಅಲ್ಲಿವರೆಗೆ ತಾಳುವಂತೆಯೂ ಇರಲಿಲ್ಲ. ಸುಶೀಲಮ್ಮನ ಮೇಲೆ ಬಿಟ್ಟು ಹೋಗಲೂ ಹೆದ ರಿಕೆ. ಹೋಗದೆ ಇರಲೂ ಮನಸ್ಸೊಪ್ಪಲಿಲ್ಲ. ಉಭಯ ಸಂಕಟಕ್ಕೆ ಸಿಕ್ಕಿದ ಸೂರಪ್ಪ ದೇವರ ಮೇಲೆ ಭಾರ ಹಾಕಿ ಗಟ್ಟಿ ಮನಸ್ಸು ಮಾಡಿ ಗಂಜಿಯ ಬಟ್ಟ ಲನ್ನು ಹೆಂಡತಿಯ ಕೈಗಿತ್ತು, ಸಮಾಧಾನದಿಂದ ಕುಡಿಸಬೇಕೆಂದು ತಿಳುವಳಿಕೆ ಹೇಳಿ, ತಮ್ಮ ಮೈಯನ್ನು ಕಚ್ಚಿಹಿಡಿದಿದ್ದ ಶಾರದೆಯನ್ನು ಬಲವಂತವಾಗಿ ಅವರ ಮಡಿಲಲ್ಲಿ ಮಲಗಿಸಿ, ಅಂಗವಸ್ತ್ರ ಹೊದ್ದು ಹೊರಗೆ ಹೊರಟರು.

ಅವರು ಹೋದದ್ದೇ ತಡ—ಮಗು ಹಠವನ್ನು ಜೋರು ಮಾಡಿತು. ಕಚ್ಚಿ ಹಿಡಿದಿದ್ದ ಬಾಯನ್ನು ಬಿಚ್ಚಲೆ ಇಲ್ಲ. ತಾಯಿ ತನ್ನನ್ನು ತಿರಸ್ಕಾರವಾಗಿ ಕಂಡಂದಿನಿಂದ ತಂದೆಯನ್ನೇ ಹೆಚ್ಚು ಹಚ್ಚಿಕೊಂಡಿತ್ತು. ತನ್ನ ಆರೈಕೆಯನ್ನು ತಂದೆಯೆ ಮಾಡಬೇಕಿತ್ತು. ಕಡೆಕಡೆಗೆ ಎದುರಿಗೆ ತಾಯಿ ಸುಮ್ಮನೆ ಹಾದು ಹೋದರೂ ಹೆದರುತ್ತಿತ್ತು. ಈ ದಿನ ಅರ್ಧ ಗಂಜಿ ಕುಡಿಸಿ, ಬಲವಂತವಾಗಿ ತಂದೆ ತನ್ನನ್ನು ತಾಯಿ ಮಡಲಿಗೆ ಹಾಕಿ ಹೋದದ್ದು ತುಂಬಾ ಸಿಟ್ಟುತಂದಿತ್ತು. ತಾಯಿಯ ಹಿಡಿತಕ್ಕೆ ಸಿಕ್ಕಿ ಒದರಾಡಿತು.

ಸುಶೀಲಮ್ಮನಿಗೆ ಸಿಟ್ಟು ನೆತ್ತಿಗೇರಿತು. ಮಡಲಿಂದ ಮಗುವನ್ನು ಎತ್ತಿ ರೊಯ್ಯನೆ ಬಿಸಾಡಿದರು. ಬಿದ್ದ ಹೊಡೆತಕ್ಕೆ ಕಣ್ಣಿನಿಂದ ಸುರಿಯುತ್ತಿದ್ದ ನೀರು ನಿಂತು, ಹಣೆ–ಬಾಯಿ–ಮೂಗಿನಿಂದ ರಕ್ತ ಸೋರಿತು. ಗಳು ಕಿತ್ತು ಬರುವಂತೆ ಕೂಗುತ್ತಿದ್ದ ಮಗು ತೆಪ್ಪಗಾಯಿತು. ಇನ್ನೆಂದೂ ಸಮಾಧಾನ ಪಡಿಸುವ ತೊಂದರೆಯೇ ಕೊಡದಂಥ ಉಪಕಾರ ಮಾಡಿತು. ಬಿದ್ದಲ್ಲಿಂದ ಮಿಸುಕಾಡಲಿಲ್ಲ. ನೆಲ ಕಚ್ಚಿ ಹಿಡಿಯಿತು.

ಹಾಗಾಗಬಹುದೆಂದು ಯೋಚಿಸಿಯೆ ಮನೆ ಬಿಟ್ಟಿದ್ದರು ಸೂರಪ್ಪ. ಹೋಟೇಲಿನಲ್ಲಿದ್ದರೂ ಅವರ ಜೀವವೆಲ್ಲ ಮನೆಯಲ್ಲೇ ಇತ್ತು. ಆದಷ್ಟು ಬೇಗ ಅಲ್ಲಿಯ ಪರಿಸ್ಥಿತಿಯನ್ನು ಸಮಾಧಾನಕ್ಕೆ ತಂದು ಮನೆಗೆ ಬಂದರು. ನೆನೆಸಿದಂತೆ ನಡೆದು ಹೋಗಿತ್ತು. ಮಗು ತನ್ನೆಲ್ಲ ಹಠವನ್ನೂ ಮರೆತು ಮಲಗಿತ್ತು. ಮೈ–ಮುಖ, ಬಟ್ಟೆ–ಬರೆಯೆಲ್ಲ ರಕ್ತಮಯವಾಗಿತ್ತು. ಕಂಗಾಲಾಗಿ ಮಗುವಿನ ಬಳಿ ಹಾರಿದರು. ಗಾಬರಿ ಮೈತುಂಬಿ ನಡುಕವುಂಟು ಮಾಡಿತ್ತು. ನಡುಗುತ್ತಿರುವ ಕೈಯಲ್ಲಿ, ಕಟ್ಟಿಗೆಯಂತೆ ಸೆಟೆದು ಮಲಗಿದ್ದ ಮಗುವನ್ನು ಮುಟ್ಟಿ ನೋಡಿದರು. ಕೈಗೆ ತಾಕಿದ ಥಂಡಿಯಿಂದ ಜೀವ ಬೆಂಡಾಯಿತು. ಯಾವುದನ್ನು ಆಗಬಾರದೆಂದು ಹಗಲಿರುಳೂ ಹರಪ್ರಯತ್ನ ಮಾಡಿ ತಡೆಯುತ್ತಿದ್ದರೋ ಅದು, ಒಂದು ಕ್ಷಣದ ತಮ್ಮ ಅನುಪಸ್ಥಿತಿಯಲ್ಲಿ ಆಗಿಹೋಗಿತ್ತು. ಅವರಿಗೆ ತಡೆದಿದ್ದ ಸಿಟ್ಟು ಕಟ್ಟೆಯೊಡೆದು ಹಾರಿತು. ಕುಳಿತಲ್ಲಿಂದ ಎದ್ದು ನಿಂತರು. ಮೈಯಲ್ಲಿ ರುದ್ರಕೋಪ ತುಂಬಿ ಬಂತು. ದುರುಗುಟ್ಟಿ ಹೆಂಡತಿಯ ಕಡೆ ನುಂಗುವಂತೆ ನೋಡಿದರು. ಮಗುವಿಗಾದ ಅಪಘಾತದಿಂದ ಸ್ವಲ್ಪವೂ ವಿಚಲಿತಗೊಳ್ಳದೆ, ಗಲ್ಲದ ಮೇಲೆ ಕೈಯಿರಿಸಿ, ಶೂನ್ಯತೆ ತುಂಬಿದ ದೃಷ್ಟಿಯನ್ನು

ಎತ್ತಲೊ ಹರಿಯ ಬಿಟ್ಟು ಕಲ್ಲುಬಂಡೆಯಂತೆ ಕೂತಿದ್ದ ಅವರ ಉದಾಸೀನ ಮೂರ್ತಿ, ಎಂದಿನಂತೆ ಸೂರಪ್ಪನಲ್ಲಿ ಅನುಕಂಪನವನ್ನುಕ್ಕಿಸಲಿಲ್ಲ; ಅದರ ಬದಲು ವೈಯಲ್ಲಿ ಮತ್ತಷ್ಟು ರುದ್ರತೆಯನ್ನು ತುಂಬುತಿತ್ತು. ಕಣ್ಣಿನಿಂದ ಕಿಡಿ ಹಾರಿಸುತ್ತ ಹೇಳಿದರು,

"ಕಡೆಗೂ ನಿನ್ನ ಮಾರಿಹಠ ಮಗುವನ್ನು ಮುರಿದುಕೊಂಡೆ ಹೋಯಿತು. ನೀನು ಹೆಣ್ಣಲ್ಲ, ಹೆಮ್ಮಾರಿ!"

"ನಾನು ಹೆಮ್ಮಾರಿಯಾದರೂ ಚಿಂತೆಯಿಲ್ಲ, ನನ್ನ ಮಗು ಯಾವ ಕಷ್ಟವನ್ನೂ ಕಾಣದೆ ನನ್ನ ಕಣ್ಣುಮುಂದೆಯೆ ಕಣ್ಣು ಮುಚ್ಚಿತಲ್ಲ, ಅದೇ ನನಗೆ ತೃಪ್ತಿ. ಬಾಳಿನುದ್ದಕ್ಕೂ ಕಷ್ಟಪಟ್ಟು ಪ್ರೀತಿಯಿಂದ ಸಾಕಿ ಸಲುಹಿ, ಕಂಡವರ ಕೈಲಿ ಕತ್ತು ಮುರಿಯಲು ಕೊಡುವುದಕ್ಕಿಂತ, ಇದು ಸರ್ವಪಾಲಿಗೆ ಶ್ರೇಷ್ಠ."

ಬಹಳ ದಿನಗಳಿಂದ ಮಾತಿಗೆ ಕಟ್ಟಿ ಹಾಕಿದ್ದ ಸುಶೀಲಮ್ಮ ಅದನ್ನೊಡೆದು ಹೇಳಿದರು.

ಕೋಪ ದುಃಖವಾಗಿ ಹೇಳಿದರು ಸೂರಪ್ಪ,

"ನಿನ್ನ ಬುದ್ಧಿಗೆ ನಾನು ಏನು ಹೇಳಲಿ ಸುಶೀಲ? ಅದೃಷ್ಟ ಕೆಟ್ಟ ರತ್ನಳೊಬ್ಬಳು ಸಾವಿಗೆ ತುತ್ತಾದಳೆಂದರೆ ಎಲ್ಲರೂ ಹಾಗೇ ಆಗುತ್ತಾರೆಯೆ? ನಿನ್ನ ಆ ಭ್ರಮೆಯಿಂದ ಸಂಸಾರವನ್ನೆ ಸ್ಮಶಾನ ಮಾಡುತ್ತಿರುವೆಯಲ್ಲ—ನಿನ್ನ ಹೊಟ್ಟೆ ಸುಡುವುದಿಲ್ಲವೆ? ಮಮತೆಯಿಂದ ಅನ್ನ ಉಣಿಸುವ ಕೈಯಲ್ಲಿ ಈ ಹಸುಗೂಸನ್ನು ಕೊಂದಿರುವೆಯಲ್ಲ—ನಿನ್ನ ಕೈ ಸಿಡಿದು ಬೀಳಲಿಲ್ಲವೆ? ಕಣ್ಣು ಕುರುಡಾಗಲಿಲ್ಲವೆ? ಕರುಳು ಕತ್ತರಿಸಲಿಲ್ಲವೆ? ಅಯ್ಯೋ ಸುಶೀಲಾ........ ಸುಶೀಲಾ........!"

ದುಃಖವನ್ನು ತಡೆಯಲಾರದೆ ಗೋಡೆಗೆ ತಲೆಯನ್ನು ಆನಿಸಿ ನಿಂತರು.

"ನನ್ನಾತ್ಮದಲ್ಲಿ ಆ ನೋವುನಲಿವಿನ ಅನುಭವದ ಚೇತನ ಸತ್ತು ಎಷ್ಟೋ ದಿನಗಳಾದುವು. ಈಗಲ್ಲಿರುವುದು ಬರಿಯ ಬರಡು ಹೃದಯ ಮಾತ್ರ. ಸುಮ್ಮನೆ ಮಾತಾಡಿ ಯಾಕೆ ಗಂಟಲು ನೋಯಿಸಿಕೊಳ್ಳುವಿರಿ?"

"ನನ್ನೆಲ್ಲ ಜೀವ ತುಂಬಿ ಹರಿಸುವ ನಿತ್ಯ ನೂತನ ಪ್ರೀತಿಯೂ ಒಣಗಿದ ನಿನ್ನೆದೆಯನ್ನು ಹಸಿರು ಮಾಡುತ್ತಿಲ್ಲವೆ?"

"ಇಲ್ಲ, ಶಾಂತಳ ನರಕದ ಬಾಳು ಆ ಶಕ್ತಿಯನ್ನೂ ನುಂಗಿಬಿಟ್ಟಿವೆ."

"ಅವಳಿಗಾದದ್ದಾದರೂ ಏನು ? ಎಲ್ಲರ ಸಂಸಾರದಲ್ಲೂ ಬರುವಂಥಾದ್ದೆ ಅದು! ಆ ಸಣ್ಣ-ಪುಟ್ಟ ಘಟನೆಗಳಿಗೆಲ್ಲ ತಲೆ ಕೆಡಿಸಿಕೊಂಡರೆ ಎಲ್ಲರ ಬಾಳೂ ಹಾಳಲ್ಲವೆ ?"

"ನಿಮ್ಮಾ ಉದಾಸೀನವೆ ಶಾರದೆಯನ್ನು ಬಲಿ ತೆಗೆದುಕೊಂಡಿತು."

ಗೋಡೆಗೆ ಪಟಪಟನೆ ತಲೆ ಹೊಡೆಯುತ್ತ ಹೇಳಿದರು ಸೂರಪ್ಪ,

"ಅಯ್ಯೋ—ಅಯ್ಯೋ—ನನ್ನ ತಲೆ ಸಿಡಿದು ಹೋಗಬಾರದೆ ? ಕಿವಿ ಕಿವುಡಾಗಬಾರದೆ ? ಎಲ್ಲಿ ವರೆಗೆ ಈ ಅಪಶಬ್ದವನ್ನುಂಡು ಬದುಕಲಿ ! ಎಲ್ಲಿ ವರೆಗೆ ಈ ಕಿಚ್ಚುಂಡು ಉಸಿರಾಡಲಿ ! ಆಯ್ಯೋ—ನನ್ನ ಹೊಟ್ಟೆಯಲ್ಲಿದ್ದ ಈ ಕಿಚ್ಚು ನನ್ನ ದೇಹವನ್ನು ಯಾಕೆ ಸುಡುತ್ತಿಲ್ಲ? ಯಾಕೆ ಸುಡುತ್ತಿಲ್ಲ? ಯಾಕೆ........?"

ದುಃಖವನ್ನು ಸಮಾಧಾನಕ್ಕೆ ತಂದು ಮತ್ತೆ ಹೇಳಿದರು,

"ಆಗಲಿ ಸುಶೀಲ, ಇಂದಿನಿಂದ ನಾನು ಮೊದಲಿನ ಸೂರಪ್ಪನಲ್ಲ; ಕೆರಳಿದ ಭೈರವನಾಗುತ್ತೇನೆ. ಶಾರದೆ ಸತ್ತು ನನ್ನಾತ್ಮದಲ್ಲಿ ಕಿಚ್ಚೆಬ್ಬಿಸಿದ್ದಾಳೆ. ಆ ಕಾವು ಸುಟ್ಟವರನ್ನು ಸುಡಲಿ. ನಾನಿನ್ನು ಯಾರನ್ನೂ ಸುಮ್ಮನೆ ಬಿಡುವುದಿಲ್ಲ. ನನ್ನ ಸಂಸಾರವನ್ನು ಸ್ಮಶಾನ ಮಾಡುತ್ತಿರುವ ಗೋಪಿಯನ್ನಂತೂ ತಪ್ಪದೆ ವಿಚಾರಿಸಿಕೊಳ್ಳುವೆನು—ಇರಲಿ !" ಎಂದು ಮಗುವನ್ನು ನೋಡಿದವರಿಗೆ ಸಂಶಯ ಬರದಂತೆ, ತೊಳೆದು ಒರೆಸಿ ಮಲಗಿಸಿದರು.

ಅಕ್ಕಪಕ್ಕದವರಿಗೆ ಈ ವಿಷಯ ಮುಟ್ಟಿಸಿ ಅಂತ್ಯಕ್ರಿಯೆಗೆ ಅವರ ಸಹಾಯ ಪಡೆಯಲೆಂದು ಹೊರಗೆ ಹೊರಟರು. ತಲೆಬಾಗಿಲಿಗ ಬರುವಷ್ಟರಲ್ಲಿ ಕಂಬನಿ ಸುರಿಸುತ್ತಾ ಸುಂದರಿ ಬಂದಳು. ಸೂರಪ್ಪನನ್ನು ಕಂಡು ಗಂಟಲು ಕಟ್ಟಿತು. ಮೂಕ ರೋದನದಲ್ಲಿ ನೆಲ ತೊಳೆಯುತ್ತ ನಿಂತಳು. ಸುಂದರಿಯ ಆ ಅಸೀಮ ಆಕ್ರಂದನ ಸೂರಪ್ಪನಿಗೆ ಅಚ್ಚರಿಯನ್ನುಂಟು ಮಾಡಲಿಲ್ಲ. ಅವಳ ರೋದನಕ್ಕೆ ತಮ್ಮ ಸಂಸಾರದ ನೋವೆ ಕಾರಣವೆಂದು ಭ್ರಮಿಸಿ, ತಮ್ಮ ಹೃದಯದ ನೋವನ್ನೂ ಕಣ್ಣಲ್ಲಿ ಹರಿಯ ಬಿಟ್ಟು, 'ಒಳಗೆ ಬಾ' ಎಂದು ತಲೆಯಾಡಿಸಿ ಹಜಾರಕ್ಕೆ ಬಂದರು.

ಸೂರಪ್ಪನ ವೇದನೆಯನ್ನು ಸುಂದರಿಯು ತಪ್ಪಾಗಿ ತಿಳಿದಳು. ಮೂರು

ತಿಂಗಳಿಂದ ಅವಳ ಗಂಡ ಕಾಹಿಲೆ ಮಲಗಿದ್ದರು. ಈಗ ವಾರದಿಂದಂತೂ ಗಳಿಗೆ-ನಕ್ಷತ್ರವೆಣಿಸುತ್ತಿದ್ದರು. ಶಾರದೆ ಆಮಶಂಕೆಯಿಂದ ಹಾಸಿಗೆ ಹಿಡಿಯುವ ಮೊದಲು ಸೂರಪ್ಪ ಪ್ರತಿನಿತ್ಯ ಹೋಗಿ ವಿಚಾರಿಸಿಕೊಂಡು ಬರುತ್ತಿದ್ದರು. ಆ ದಿನ ಇದ್ದಕ್ಕಿದ್ದಂತೆ ಎಚ್ಚರ ತಪ್ಪಿದ ಅವಳ ಗಂಡನ ವಿಷಯ ಹೇಗೋ ತಿಳಿದು, ತನ್ನ ದುಃಖಕ್ಕೆ ಸಹಾನುಭೂತಿ ತೋರಿಸುತ್ತಿದ್ದಾರೆಂದು ಭ್ರಮಿಸಿ ಕಣ್ಣೀರಿಡುತ್ತಲೆ ಅವರನ್ನು ಹಿಂಬಾಲಿಸಿದಳು. ಹಜಾರದಲ್ಲಿನ ದೃಶ್ಯ ಅವಳನ್ನು ದಂಗುಬಡಿಸಿತು. ತನ್ನ ಕಣ್ಣನ್ನು ತಾನೆ ನಂಬಲಾರದಾದಳು. ಬರುವಾಗ ಹೊತ್ತು ತಂದ ನೋವನ್ನೆಲ್ಲ ಮರೆತು—ಮಗುವಿನ ಬಳಿ ಹಾರಿ ಮೈಮುಟ್ಟಿ ನೋಡಿ ದುಃಖ ಬೆರೆತ ಅಚ್ಚರಿಯಿಂದ ಕೇಳಿದಳು,

"ಇದೇನು ಸೂರಪ್ಪ, ಈಗ ತಾನೆ ಅಳುತ್ತಿದ್ದಳಲ್ಲ ಶಾರದ; ಆಗಲೇ ಏನಾಯಿತು ?"

ಒತ್ತಿ ಬರುತ್ತಿದ್ದ ದುಃಖವನ್ನು ನುಂಗಿ ಗದ್ಗದ ಕಂಠದಿಂದ ಹೇಳಿದರು,

"ಏನಾಯಿತೊ ನಾನು ಕಾಣೆ ಸುಂದರಿ. ಮನೆಗೆ ಬರುವುದರಲ್ಲಿ ಶಾರದ ನನ್ನನ್ನು ಬಿಟ್ಟು ದೂರ ಹೊರಟು ಹೋಗಿದ್ದಳು."

ದೂರದಲ್ಲಿ ಸೂರಪ್ಪ ಮರೆಮಾಡಲು ಮರೆತಿಟ್ಟಿದ್ದ ರಕ್ತದ ಕಲೆಯ ಅಂಗಿಯನ್ನು ಕಂಡು ಸುಂದರಿ ಹೇಳಿದಳು,

"ನಾನಾಗೊಮ್ಮೆ ಬಂದಿದ್ದೆ. ಸುಶೀಲಮ್ಮನೆ ಮಗುವಿಗೆ ಗಂಜಿ ಕುಡಿಸುತ್ತಿದ್ದುದನ್ನು ಕಂಡು, ನೀವು ಮನೆಯಲ್ಲಿಲ್ಲವೆಂದು ತಿಳಿದು, ಹೊತ್ತಾಗಿದ್ದುದರಿಂದ ಒಳಗೆ ಬರದೆ ಹಾಗೆ ಹೊರಟು ಬಿಟ್ಟೆ. ಆಗ ಶಾರದೆ ತುಂಬಾ ರಚ್ಚೆ ಮಾಡುತ್ತಿದ್ದಳು. ಎಲ್ಲೋ ಸುಶೀಲಮ್ಮ ಸಮಾಧಾನ ಪಡಿಸಲು ಸಾಧ್ಯವಾಗದೆ ಪೆಟ್ಟು ಕೊಟ್ಟಿರಬೇಕು. ಮೊದಲೆ ಆಮಶಂಕೆಯಿಂದ ಸಾಯುವಂತಿತ್ತು ಮಗು—ಪೆಟ್ಟು ತಾಳುತ್ತದೆಯೆ !"

"ಹಾಗೆ ಎಲ್ಲೋ ಆಗಿರಬೇಕು—ಇಲ್ಲದಿದ್ದರೆ ಇಷ್ಟು ಬೇಗ ಸಾಯಲು ಕಾರಣವಿಲ್ಲ."

ದೂರದಲ್ಲಿ ಬಿದ್ದಿದ್ದ ರಕ್ತದ ಕಲೆಯ ಅಂಗಿ ಅವರ ಕಣ್ಣಿಗೂ ಬಿತ್ತು. ಮನಸ್ಸಿಗೆ ಕವಿದ ಮಂಕಿನಿಂದ ಅದನ್ನು ಮರೆ ಮಾಡದೆ ಹಾಗೆ ಬಿಟ್ಟಿದ್ದರು. ತಮ್ಮ ಆ ಅಜ್ಞಾನಕ್ಕೆ ಶಾಪ ಹಾಕಿಕೊಂಡರು. ಸುಂದರಿ ಎಷ್ಟೇ ಆಪ್ತಳಾಗಿ

ದ್ದರೂ ಸುಶೀಲಮ್ಮನನ್ನು ಅವಳ ದೃಷ್ಟಿಯಲ್ಲಿ ಕೀಳು ಮಾಡಲು ಇಷ್ಟವಿರಲಿಲ್ಲ. ಅದಕ್ಕೆಂದೆ ಮೊದಲು ನಡೆದ ಸಂಗತಿಯನ್ನು ಮುಚ್ಚಿ ಮಾತಾಡಿದ್ದರು. ತಾನಾಗಿ ವಿಷಯ ತಿಳಿದು ಹೋಗಿದೆಯೆನ್ನುವ ಸಂಗತಿ ಮನವರಿಕೆಯಾದ ಮೇಲೆ ಅವಳ ಮಾತನ್ನು ಸಮರ್ಥಿಸಿ ಆ ಮಾತಾಡಿದ್ದರು.

"ಅನ್ಯಾಯವಾಯಿತು ಸೂರಪ್ಪ, ಬುದ್ಧಿ ಸ್ತಿಮಿತದಲ್ಲಿಲ್ಲದ ಸುಶೀಲಮ್ಮನ ಮೇಲೆ ನೀವು ಬಿಟ್ಟು ಹೋದುದೂ ತಪ್ಪೆ. ಅವರನ್ನು ಹೀಗೇ ಬಿಟ್ಟರೆ ಇನ್ನೂ ಏನಾದರೂ ಅನರ್ಥವಾಗುವುದೆ ಸರಿ. ಸ್ವಲ್ಪ ದಿನ ಎಲ್ಲಾದರೂ ಕರೆದು ಕೊಂಡು ಹೋಗಿ ಬನ್ನಿ; ಮನಸ್ಸಿಗೆ ಸ್ವಲ್ಪ ನೆಮ್ಮದಿಯಾದರೂ ಬರಲಿ."

ಗದ್ಗದ ಧ್ವನಿಯಲ್ಲಿ ಸೂರಪ್ಪ ಹೇಳಿದರು,

"ಹಾಗೇ ಮಾಡಬೇಕೆಂದಿದ್ದೇನೆ. ಇದೆಲ್ಲ ನನ್ನ ಪ್ರಾರಬ್ಧ ಸುಂದರಿ. ಇನ್ನೂ ಏನೇನು ಕಾಣುವುದಿದೆಯೊ ಈ ಹಾಳು ಕಣ್ಣಲ್ಲಿ !"

ಮಾತು ಮುಗಿಯುವಷ್ಟರಲ್ಲಿ ಒತ್ತರಿಸಿ ಬಂದ ದುಃಖದ ಕಟ್ಟೆಯೊಡೆ ಯಿತು. ದಳದಳನೆ ಕಣ್ಣಿನಿಂದ ನೀರು ಸುರಿಯಿತು. ಒರೆಸಿದ ಕೈಚೌಕ ಒದ್ದೆ ಮುದ್ದೆಯಾಯಿತು.

ಸೂರಪ್ಪನ ದುಃಖ ಕಂಡು ಅವಳಿಗೂ ದುಃಖ ಒತ್ತರಿಸಿತು. ಹನಿಯುದು ರಿಸುತ್ತ ದುಃಖದಿಂದ ತುಂಬಿದ ದನಿಯಲ್ಲಿ ಹೇಳಿದಳು,

"ಕಣ್ಣೀರು ಕರೆಯಬೇಡಿ, ದೇವರು ಒಳ್ಳೆಯದು ಮಾಡುವನು; ಧೈರ್ಯ ತಂದುಕೊಳ್ಳಿ."

"ನೀನಾಗ ಬಂದವಳು ಸ್ವಲ್ಪ ಹೊತ್ತಿದ್ದಿದ್ದರೆ ಈ ಅನರ್ಥವಾಗುತ್ತಿತ್ತೋ ಇಲ್ಲವೋ !"

"ನನಗೂ ಹಾಗೇ ಅನಿಸುತ್ತಿದೆ ಈಗ. ಏನು ಮಾಡಲಿ ಹೇಳಿ—ನಮ್ಮ ಮನೆಯವರಿಗೆ ಹತ್ತು ಗಂಟೆಗೆ ಹೋದ ಜ್ಞಾನ ಇನ್ನೂ ಬಂದಿಲ್ಲ. ಡಾಕ್ಟರು ಬಂದು ಇಂಜೆಕ್ಷನ್ ಕೊಟ್ಟು ಹೋದರು. ಏನು ಮಾಡಿದರೂ ಪ್ರಯೋಜನ ವಾಗಲಿಲ್ಲ—ಸತ್ತವರಂತೆ ಬಿದ್ದಿದ್ದಾರೆ. ಅಪ್ಪನೂ ಬೆಳಿಗ್ಗೆ ಹೋದವನು ಮನೆಗೆ ಬಂದಿಲ್ಲ. ನೀವು ಮನೆಗೆ ಬಂದದ್ದನ್ನು ನೋಡಿ, ನಿಮ್ಮನ್ನಾದರೂ ಕರೆದುಕೊಂಡು ಹೋಗೋಣವೆಂದು ಬಂದೆ. ನಾವೊಂದು ನೆನೆದರೆ ದೈವ ವೊಂದು ಬಗೆಯುತ್ತದೆನ್ನುವುದು ಸುಳ್ಳಲ್ಲ."

ಸೂರಪ್ಪನಿಗಿದ್ದ ಧೈರ್ಯವೂ ಕುಸಿದು ಬಿತ್ತು. ತಮಗುಂಟಾಗಿದ್ದ ನೋವನ್ನೆಲ್ಲ ಮರೆತು, ಗಾಬರಿ ತುಂಬಿದ ಆಶ್ಚರ್ಯ ದನಿಯಲ್ಲಿ ಕೇಳಿದರು.

"ಯಾಕೆ ಹಾಗಾಯಿತು ಸುಂದರಿ? ನೆನ್ನೆ ತಾನೆ ಚೆನ್ನಾಗಿದ್ದರಲ್ಲಾ! ನಿನ್ನ ಮಾಂಗಲ್ಯ ಗಟ್ಟಿಯಾಗಿರಲಮ್ಮ, ನಾಲ್ಕು ಜನಕ್ಕೆ ಬೇಕಾದವಳು ನೀನು!" ಒಂದು ಕ್ಷಣ ಯೋಚಿಸಿ ಮತ್ತೆ ಹೇಳಿದರು, "ತಡಿ, ನಾನೀಗಲೆ ಹೋಗಿ ಶ್ರೀನಿವಾಸ ಪಂಡಿತರನ್ನು ಕರೆದುಕೊಂಡು ಬರುವೆನು. ಅವರು ತುಂಬಾ ಗಟ್ಟಿಗರು. ಏನಾದರೂ ಪ್ರಯೋಜನವಾದೀತು!" ಎಂದು ಹೆಜ್ಜೆ ಮುಂದಿಟ್ಟರು.

ಸುಂದರಿ ತಡೆದು ಹೇಳಿದಳು,

"ಛೆ ಛೆ, ನೀವೀಗ ಹೋಗುವುದೆ? ಸರಿ! ಮನೆಯಲ್ಲಿ ಹೆಣವಿರಿ ಸಿವಿಸೂ ಮಾಡಕೂಡದು. ಮೊದಲು ಅಂತ್ಯಕ್ರಿಯೆ ಮುಗಿಸಿ. ನಾನು ಅದಕ್ಕೆ ವ್ಯವಸ್ಥೆ ಮಾಡುವೆನು."

"ಹಾಗಾದರೆ ನೀನಾದರೂ ಮನೆಗೆ ಹೋಗಿ, ಅವರಲ್ಲಿಗೆ ರಾಮನನ್ನು ಕಳುಹಿಸು. ತಡಮಾಡುವುದು ಬೇಡ."

"ಹಾಗೇ ಆಗಲಿ, ನಾನು ಬರುವ ವರೆಗೆ ನೀವು ಹೋಗುವುದೂ ಬೇಡ. ಮನೆಯಲ್ಲಿ ಯಾರಾದರೂ ಒಬ್ಬರಿರಲೆ ಬೇಕು."

"ಸತ್ತ ಮಗುವನ್ನು ಯಾರು ಯಾಕೆ ಕಾಯಬೇಕು ಸುಂದರೀ?"

"ಮಗುವನ್ನಲ್ಲದಿದ್ದರೆ ಸುಶೀಲಮ್ಮನನ್ನಾದರೂ ಕಾಯಬೇಡವೆ? ತಲೆಗೆ ನೆಮ್ಮದಿಯಿಲ್ಲದಿದ್ದ ಈ ಸಮಯದಲ್ಲಿ ಅವರೊಬ್ಬರನ್ನೇ ಬಿಡುವುದೂ ತಪ್ಪು."

ತಾನು ಅಪಾರ ನೋವಿನಲ್ಲಿದ್ದರೂ ಮತ್ತೊಬ್ಬರ ಕಷ್ಟದಿಂದಾಗಿ ಅದನ್ನು ಮರೆತು, ಸಹಾನುಭೂತಿ ತೋರಿ ಸಹಕರಿಸಲು ಮುಂದೆ ಬಂದ ಸುಂದರಿಯ ಔದಾರ್ಯಕ್ಕೆ ಮನಸ್ಸಿನಲ್ಲೆ ಕೃತಜ್ಞತೆ ಸಮರ್ಪಿಸಿ ಹೇಳಿದರು,

"ಸರಿ ಹಾಗಾದರೆ, ಬೇಗ ಹೋಗಿ ಬಂದು ಬಿಡು. ನೀನು ಬರುವ ವರೆಗೆ ನಾನಿಲ್ಲಿಯೆ ಇರುವೆನು."

"ಈಗ ಬಂದು ಬಿಟ್ಟೆ" ಎಂದು ಮನೆಯ ಕಡೆ ಹೆಜ್ಜೆಯಿರಿಸಿದಳು.

ನಡಿಗೆಯಲ್ಲಿ ನಾಗಾಲೋಟವಿತ್ತು. ಕಾಲು ಮನೆಯ ಕಡೆ ಹೊರಟಿದ್ದರೂ ಮನಸ್ಸು ಸುಶೀಲಮ್ಮನ ಬಳಿಯಲ್ಲೆ ಸುಳಿದಾಡುತಿತ್ತು. ಇಂದಾದ

ಅಪಘಾತಕ್ಕೆ ಅಪರೋಕ್ಷವಾಗಿ ಅವಳೆ ಕಾರಣವಾಗಿದ್ದಳು. ಶಾಂತಳ ಬಾಳಿನ ವಿಷಯ ಬಿಡಿಸಿ ಹೇಳದಿದ್ದರೆ ಸುಶೀಲಮ್ಮ ಎಂದಿಗೂ ಅಷ್ಟು ಕಲ್ಲಾಗಿರುತ್ತಿರ ಲಿಲ್ಲ. ಈ ಅನಾಹುತವಾಗುವುದೆಂದು ತಿಳಿದೆ ಸೂರಪ್ಪ–ಶಾಂತ ಇಬ್ಬರೂ ಅವ ರಿಂದ ನಡೆದ ವಿಷಯವನ್ನು ಮುಚ್ಚಿರಿಸಿದ್ದರು. ಆ ಪಾತಕಕ್ಕೆ ತಾನು ಗುರಿ ಯಾದಳು. ಶಾಂತಳಿಗೆ ಹಿತವಾಗಲಿಯೆಂದು ಮಾಡಿದ ಕೆಲಸ ಮಹಾ ಪಾತಕವಾಗಿ ಬೆಳೆದು ನಿಂತಿದೆ. ಇಡೀ ಕುಟುಂಬವನ್ನೆ ಧ್ವಂಸ ಮಾಡುವುದೊ ಏನೊ! ಹೀಗಾಗುವುದೆಂದು ಕಂಡಿದ್ದರೆ ಆ ಗೊಡವೆಗೇ ಕೈಹಚ್ಚುತ್ತಿರಲಿಲ್ಲ.

ಸುಶೀಲಮ್ಮನದು ಎಂಥಾ ದುರ್ಬಲ ಮನಸ್ಸು! ಯಜಮಾನರು, ರಂಗಮ್ಮ, ಭಟ್ಟರು ಇವರ ಮುಖಾಂತರ ಹುಡುಗಿಯ ಸಂಸಾರವನ್ನು ಸರಿಪಡಿ ಸುವುದು ಬಿಟ್ಟು, ಹೀಗೆ ತಲೆ ಕೆಡಿಸಿಕೊಂಡು ಕೂಡುವುದೆ! ಏನೊ, ಆಕೆಯ ಸ್ವಭಾವವೆ ಅರ್ಥವಾಗುವುದಿಲ್ಲ.

ಎಲ್ಲ ಬಿಟ್ಟು ತನಗ್ಯಾಕೆ ಬೇಕಿತ್ತು ಈ ವಿಷಯ? ಅವರವರ ಹಣೆ ಯಲ್ಲಿ ಬರೆದಿದ್ದಂತಾಗಲೆಂದು ಸುಮ್ಮನಿರಬೇಕಿತ್ತು. ತಿಳಿದೊ ತಿಳಿಯದೆಯೊ ತನ್ನಿಂದ ಪ್ರಮಾದವಾಗಿ ಹೋಗಿದೆ. ಈಗದನ್ನು ಸರಿಪಡಿಸಲೇ ಬೇಕು; ಇಲ್ಲ ದಿದ್ದರೆ ಶಿಶುಹತ್ಯೆಯ ಜತೆಗೆ ಸ್ತ್ರೀಹತ್ಯೆ–ಬ್ರಹ್ಮಹತ್ಯೆ ಸೇರಿ ಜನ್ಮಜನ್ಮಾಂತರಕ್ಕೂ ತಾನು ಕಣ್ಣೀರಿಡುವಂತಾದೀತು!

ಸರಿಪಡಿಸುವುದಾದರೂ ಹೇಗೆ? ಜೇನಿನಂಥ ಪ್ರೀತಿಯೆರೆದು ಬರುತ್ತಿ ರುವ ಪತಿಗೆ ಬಗ್ಗದಿದ್ದವರು ತನಗೆ ಬೆಲೆ ಕೊಡುವರೆ? ಬೆಲೆ ಕೊಡಲಿ, ಕೊಡದಿರಲಿ, ಪ್ರಯತ್ನ ಮಾಡಲೆ ಬೇಕು; ತನ್ನಿಂದಾದ ರೋಗವನ್ನು ಬೇಕಾದ ಚಿಕಿತ್ಸೆ ಮಾಡಿ ತಾನೆ ಹೋಗಲಾಡಿಸಬೇಕು.

ಸುಂದರಿಯ ಮನಸ್ಸಿನ ತುಂಬಾ ಅದೇ ವಿಚಾರವಿತ್ತು. ಮೈಮೇಲೆ ಎಚ್ಚರವಿಲ್ಲದೆ ಮಲಗಿದ್ದ ಯಜಮಾನರ ನೆನಪು ಕೂಡ ಆಗಲಿಲ್ಲ. ಮನೆಮುಟ್ಟಿ ದಾಗಲೆ ಅವಳಿಗೆ ಎಚ್ಚರವಾದದ್ದು, ತಾನು ಹಿಂದಿರುಗಿ ಬಂದ ಅರಿವಾದದ್ದು. ಗಂಡನ ಬಳಿ ಹಾರಿ ಹೋಗಿ ನೋಡಿ ಹಾಗೇ ಇರುವುದನ್ನು ಕಂಡು, ತಮ್ಮ ನನ್ನು ಪಂಡಿತರ ಮನೆಗಟ್ಟಿದಳು.

ಶಾರದೆಯನ್ನು ಮಣ್ಣು ಮಾಡಿ ಬಂದ ಮಾರನೆ ದಿನವೆ ಸುಂದರಿಯ ಮಾಂಗಲ್ಯವೂ ಕಳಚಿ ಬಿತ್ತು. ಯಜಮಾನರಿಗೆ ವಯಸ್ಸಾಗಿತ್ತೆನ್ನುವುದೊಂದು

ಕೊರತೆ ಹೊರತು ಮತ್ತಾವ ತೊಂದರೆಯೂ ಅವರಿಂದ ಅವಳಿಗಾಗಿರಲಿಲ್ಲ. ಅವರ ಸಾವು ಅವಳ ಮರ್ಮಕ್ಕೆ ಬಲವಾದ ಪೆಟ್ಟು ಕೊಟ್ಟಿತ್ತು. ಎಂದೂ ಅನುಭವಿಸಲಾರದ ಸಂಕಟ ಅನುಭವಿಸಿದಳು.

ಆ ಸಮಯದಲ್ಲಿ ಸೂರಪ್ಪ ಮಾಡಿದ ಉಪಕಾರವನ್ನು ಎಂದೂ ಮರೆಯುವಂತಿರಲಿಲ್ಲ. ತಮ್ಮ ನೋವನ್ನು ಮರೆತು ಸುಂದರಿಯ ನೋವನ್ನು ಕಳೆಯಲು ನಿಂತಿದ್ದರು. ದುಃಖದಿಂದ ತಪ್ತಳಾಗಿದ್ದ ಸುಂದರಿಯ ಆತ್ಮಕ್ಕೆ ನೆಮ್ಮದಿ ಬಂದದ್ದು ಅವರಿಂದಲೆ. ಆ ಎರಡು ಮನೆಯವರೂ ಒಂದೇ ಮನೆಯವರಂತಾಗಿ ಕಷ್ಟ ಸುಖದಲ್ಲಿ ಸಮಪಾಲು ತೆಗೆದುಕೊಳ್ಳುತ್ತಿದ್ದರು. ಸಂತೋಷದಲ್ಲಿ, ಸತ್ಕಾರ್ಯದಲ್ಲಿ ಒಬ್ಬರನ್ನೊಬ್ಬರು ಬಿಟ್ಟುಕೊಡುತ್ತಿರಲಿಲ್ಲ.

ಸುಶೀಲಮ್ಮನಿಗಾಗಿ ತೀರ್ಥಯಾತ್ರೆ ಹೊರಟ ಸೂರಪ್ಪ, ಸುಂದರಿಯನ್ನೂ ಅವರ ತಂದೆಯ ಒಪ್ಪಿಗೆ ಪಡೆದು ಜತೆಯಲ್ಲಿ ಕರೆದುಕೊಂಡು ಹೊರಟರು. ನಾಲ್ಕಾರು ಕ್ಷೇತ್ರಗಳ ಹಿತವಾದ ಸುತ್ತಾಟ, ಭಗವಂತನ ಹಲವಾರು ಸುಂದರ ರೂಪಗಳ ಭವ್ಯ ನೋಟ, ಶಾಂತಿಕ್ಷೀರವನ್ನು ತುಂಬಿ ಹರಿಯುತ್ತಿದ್ದ ನದಿ— ಹೊಳೆಗಳಲ್ಲಿ ಮೀಯಾಟ, ವಿವಿಧ ಸಂಸ್ಕೃತಿ ವೇಷ ಭಾಷೆಗಳ ರಸದೂಟ— ಇವುಗಳಿಂದ ಯಾತ್ರೆಗೆ ಹೊರಟಿದ್ದ ಎಲ್ಲರ ಮನಸ್ಸೂ ತಿಳಿಯಾಯಿತು. ಭಾರವಾದ ಮನಸ್ಸನ್ನು ಹೊತ್ತು ಹೊರಟಿದ್ದವರು ಹಗುರ ಹೊಂದಿ, ಆನಂದದ ಹಕ್ಕಿಗಳನ್ನು ಹಾರಾಡಿಸುತ್ತ ಊರು ತಲುಪಿದ್ದರು.

## ೧೭

ಸೂರಪ್ಪ, ಶಾಂತ ಮಗುವನ್ನು ಕರೆದುಕೊಂಡು ಗಂಡನ ಮನೆಗೆ ಮರಳಿದಂದಿನಿಂದ ತೀರ್ಥಯಾತ್ರೆ ಮುಗಿಸಿಕೊಂಡು ಬಂದವರೆಗಿನ ಎಲ್ಲ ವಿಷಯವನ್ನು ಭಟ್ಟರಿಗೆ ಕೂಲಂಕಷವಾಗಿ ಕಾಗದದ ಮುಖಾಂತರ ತಿಳಿಸಿದ್ದರು. ಅದರಲ್ಲಿದ್ದ ಒಂದೊಂದು ಮಾತೂ ಹೊಟ್ಟೆ ಸುಡುತಿತ್ತು. ಗೋಪಿಯಿಂದಾಗಿ ಎಲ್ಲಿ ಆ

ಹಾಕದೆ ಇರುವರೆ! ಏಳು ಏಳು ಹುಚ್ಚಪ್ಪ, ಕೈಕಾಲು ತೊಳಿ."

"ನನ್ನ ಮಾತನ್ನು ಸ್ವಲ್ಪ ಕೇಳಿ ಲಚ್ಚಪ್ಪ........!"

"ನಾನು ಕೇಳುವುದೂ ಇಲ್ಲ, ನೀನು ಹೇಳುವುದೂ ಬೇಡ. ಹೆಂಗಸರು ಮಕ್ಕಳನ್ನು ಕರೆದುಕೊಂಡು ಮೊದಲು ಒಳಗೆ ನಡಿ; ಹೊಟ್ಟೆಗೇನಾದರಾಗಲಿ-ಆಮೇಲೆಲ್ಲ. ಈ ನಿನ್ನ ವೇಷವೋ, ಹೆಂಡತಿ ಮಕ್ಕಳನ್ನಿಟ್ಟಿರುವ ಚೆಂದವೋ, ಕಣ್ಣಿಂದ ನೋಡಲಾರೆ ಕಣಪ್ಪ, ಈ ಕಷ್ಟವನ್ನು. ಇಂದಿಗೆ ದೇವರು ನನ ಗೇನೂ ಕಡಿಮೆ ಮಾಡಿಲ್ಲ. ಮೈತುಂಬ ಬಟ್ಟೆ ತೊಟ್ಟು, ಹೊಟ್ಟೆ ತುಂಬ ಅನ್ನ ವುಂಡು ಸಂತೋಷದಿಂದ ನೀವು ನನ್ನ ಕಣ್ಣೆದುರಿಗಿದ್ದರೆ ನನಗದೇ ಸಂತೋಷ. ಏಳು, ನನ್ನ ಮಾತಿಗೆರಡಾಡಬೇಡ. ನಿನ್ನ ಹೊಣೆಯನ್ನು ಭಗವಂತ ನನಗೆ ವಹಿಸಿದ್ದಾನೆ. ನನ್ನಾತ್ಮಪ್ರೇರಣೆಯಂತೆ ನಾನು ನಡೆಯಲೆ ಬೇಕು. ನಿನ್ನನ್ನ ಇಲ್ಲಿ ಬರೆದಿರುವಾಗ ಸಂಕೋಚವೇಕೆ? ಏಳು ಹೊತ್ತಾಯಿತು—ಮಕ್ಕಳುಮರಿ ಯೆಲ್ಲ ಹಸಿದಿದ್ದಾರು."

ಆ ಧರ್ಮಾತ್ಮ ಅಂದು ಕೈಹಿಡಿದು ನಿಲ್ಲಿಸದಿದ್ದರೆ ಈಹೊತ್ತಿಗೆ ತಾವೇನಾ ಗುತ್ತಿದ್ದರೊ! ಅವರು ನಾಲ್ಕಾರು ಶ್ರೀಮಂತರ ಮನೆಯ ಪೌರೋಹಿತ್ಯ ವನ್ನು ಕೊಡಿಸಿ ಕೊಟ್ಟದ್ದಲ್ಲದೆ, ನಿಲ್ಲಲು ನೆರಳಾಗಿ ಶಿವರಾಂಪೇಟೆಯಲ್ಲಿದ್ದ—ತಾವೀಗ ವಾಸವಾಗಿರುವ—ಅವರ ಮನೆಯನ್ನು ಅರ್ಧ ಬೆಲೆಗೆ ಬಿಟ್ಟುಕೊಟ್ಟಿ ದ್ದರು. ಅವರ ಉಪಕಾರದಿಂದ ಇಂದು ಮನೆಯಲ್ಲಿ ದೀಪ ಬೆಳಗುತ್ತಿದೆ. ತಮ್ಮ ಮನೆಯ ದೀಪ ಬೆಳಗಿದ ಆ ಪುಣ್ಯಾತ್ಮನ ಮನೆಯ ದೀಪವನ್ನು ಬೆಳ ಗಿಸಲೆ ಬೇಕು. ಲಚ್ಚಪ್ಪ ಸಾವಿನ ಹಾಸಿಗೆಯಲ್ಲಿ ಮಲಗಿದ್ದಾಗಲೂ ತಮ್ಮಿಂದ ಅದೇ ಮಾತನ್ನು ತೆಗೆದುಕೊಂಡಿದ್ದರು. ಸಾವಿಗೆರಡು ದಿನಕ್ಕೆ ಮುಂಚೆ ನೋಡಲು ಬಂದ ತಮ್ಮನ್ನು ಲಚ್ಚಪ್ಪ ಹತ್ತಿರ ಕರೆದು ಹೇಳಿದರು,

"ನಾನೇ ಹೇಳಿಕಳುಹಿಸಬೇಕೆಂದಿದ್ದೆ—ನೀನೇ ಬಂದದ್ದು ಒಳ್ಳೆಯದಾ ಯಿತು. ಬಾ ಕೂತುಕೊ. ವಿಶಾಲಾಕ್ಷಮ್ಮನಿಗೆ ಹೇಗಿದೆ ಈಗ?"

"ಸ್ವಲ್ಪ ಗುಣವಿದೆ. ಮೊನ್ನೆಯಂತೂ ಕೈಕಾಲು ಬಿಡಿಸಿಬಿಟ್ಟಿದ್ದಳು ಪುಣ್ಯಾತಗಿತ್ತಿ."

"ವಿಷಮ ಶೀತಜ್ವರದ ಹಣೆಬರಹವೆ ಅಷ್ಟು! ಗಳಿಗೆಗಳಿಗೆಗೂ ಗಾಬರಿ ತುಂಬುತ್ತಲೆ ಇರುತ್ತದೆ. ಡಾಕ್ಟರು ಏನು ಹೇಳುವರೊ!"

"ಏನೂ ಗಾಬರಿಯಿಲ್ಲವೆಂದು ಹೇಳುವರು. ಆದರೂ ನೋಡಬೇಕು—ಏನಾಗುವುದೊ !"

"ಡಾಕ್ಟರು ಗಾಬರಿಯಿಲ್ಲವೆಂದ ಮೇಲೆ ಏನೂ ಹೆದರುವುದು ಬೇಡ, ಗುಣವಾಗುತ್ತೆ; ದೇವರಿದ್ದಾನೆ."

"ನಿಮ್ಮ ಮೈ ಕೈ ನೋವು ಹೇಗಿದೆ ಈಗ ?"

"ನನ್ನದು ಹೋಗುವುದು ಒಂದೇ ದಿವಸ. ಊತ ಸೊಂಟದ ವರೆಗೂ ಬಂದಾಯಿತು. ಪ್ರಯಾಣಕ್ಕೇನೂ ಹೆಚ್ಚು ದಿನವಿಲ್ಲ ಇನ್ನು."

"ಅಪಶಬ್ದವಾಡಬೇಡಿ ಲಚ್ಚಪ್ಪ ! ತಲೆ ವರೆಗೂ ಊತ ಬಂದವರೆಷ್ಟು ಮಂದಿ ಬದುಕಿಲ್ಲ ? ದೇವರು ಕಣ್ಣುಬಿಟ್ಟು ನೋಡಿದರೆ ಒಂದು ದಿನದಲ್ಲಿ ಇಳಿದು ಹೋಗುವುದು, ಎಲ್ಲ !"

"ಇರಬಹುದು, ಅದು ನನಗಲ್ಲ. ನಾನು ಅರವತ್ತಾದವನು. ಈ ವಯಸ್ಸಿನಲ್ಲಿ ದೇವರ ಕೃಪೆ ಬಯಸುವುದೂ ತಪ್ಪೆ. ಅದಿರಲಿ. ನಿನ್ನಿಂದ ನನಗೊಂದುಪಕಾರವಾಗಬೇಕಲ್ಲ !"

"ಯಾವ ಕೆಲಸವನ್ನಾದರೂ 'ಮಾಡು' ಎಂದು ದಂಡಿಸಿ ಹೇಳುವ ಅಧಿಕಾರ ನಿಮಗಿರುವಾಗ ಅಷ್ಟು ದೊಡ್ಡ ಮಾತೇಕೆ ! ಅಪ್ಪಣೆ ಕೊಡಿಸಿ—ನಿಮ್ಮಾಜ್ಞೆಯನ್ನು ಶಿರಸಾ ವಹಿಸಿ ಪಾಲಿಸುವೆನು."

"ನಾನೇನೂ ಇನ್ನು ಹೆಚ್ಚು ದಿನ ಬದುಕಲಾರೆ. ನನ್ನ ಕಾಲ ಹತ್ತಿರ ಬಂದಿದೆ. ಮಕ್ಕಳೆಲ್ಲ ಚಿಕ್ಕವರು. ಕುಟುಂಬದ ಹೊಣೆಯನ್ನು ನಿನ್ನ ಹೆಗಲಿಗೆ ಹಾಕಿ ಹೋಗಬೇಕೆಂದಿದ್ದೇನೆ. ನಿನ್ನಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ. ಆ ಜವಾಬ್ದಾರಿಯನ್ನು ಹೊತ್ತರೆ ಸುಖವಾಗಿ ಕಣ್ಣು ಮುಚ್ಚುವೆನು. ದೊಡ್ಡ ಮನಸ್ಸು ಮಾಡಿ ನನ್ನ ಬೇಡಿಕೆಯನ್ನು ನಡೆಸಿಕೊಡು."

"ಈಗಲೆ ಆ ಮಾತು ಬೇಡ ಲಚ್ಚಪ್ಪ—ದೇವರೆಂದೂ ಇಷ್ಟು ಬೇಗ ಅನ್ಯಾಯ ಮಾಡಲಾರ."

"ಆಗಲಿ—ನಾನಿನ್ನೂ ನಾಲ್ಕು ಕಾಲ ಬದುಕಿದರೆ ಚಿಂತೆಯಿಲ್ಲ. ಮುಂಜಾಗ್ರತೆ ತೆಗೆದುಕೊಳ್ಳುವುದರಲ್ಲೇನೂ ತಪ್ಪಿಲ್ಲವಲ್ಲ."

"ತಪ್ಪೆಂದಿಗೂ ಇಲ್ಲ....!" ಎಂದು ಅಭಿಪ್ರಾಯವನ್ನು ಪೂರ್ಣ ತಿಳಿಸದೆ ಏನೊ ಆಲೋಚಿಸುತ್ತ ಕುಳಿತರು.

"ಯಾಕೆ ರಾಮು, ನನ್ನ ಮಾತು ಮನಸ್ಸಿಗೆ ಬರಲಿಲ್ಲವೆ ?"

"ರಾಮರಾಮ, ಆ ಮಾತು ಮಾತ್ರ ಆಡಬೇಡಿ ಲಚ್ಚಪ್ಪ. ನನ್ನ ದೇಹದ ಚರ್ಮ ಸುಲಿದು ನಿಮ್ಮ ಮನೆಗೆ ಹಂದರ ಮಾಡೆಂದರೂ ಸಿದ್ಧನಿದ್ದೇನೆ. ನಿಮ್ಮಿಂದಲೆ ಜೀವ ತುಂಬಿ ಉಸಿರಾಡುತ್ತಿರುವ ಈ ದೇಹ ಅಷ್ಟೂ ಮಾಡಲಾರದೆ ?"

"ನನ್ನ ಕೈಮೇಲೆ ಕೈಹಾಕಿ ಹೇಳು—ಹುಡುಗರು ಪ್ರಾಯಕ್ಕೆ ಬಂದು ಒಂದು ರೀತಿಯಾಗಿ ನಿಲ್ಲುವ ವರೆಗೆ ಯಾರು ಏನೆಂದರೂ ಅವರ ಕೈ ಬಿಡುವುದಿಲ್ಲವೆಂದು !"

"ಈಶ್ವರಸಾಕ್ಷಿಯಾಗಿ ನಿಮ್ಮಾಜ್ಞೆಯನ್ನು ಅಕ್ಷರಶಃ ಪಾಲಿಸುವೆನು—ಆ ಬಗ್ಗೆ ನಿಶ್ಚಿಂತೆಯಿಂದಿರಿ" ಎಂದು ಕೈಮೇಲೆ ಕೈಹಾಕಿ ಹೇಳಿದರು.

"ನನ್ನ ಮನಸ್ಸಿಗೀಗ ನೆಮ್ಮದಿ ಬಂತು. ಇನ್ನು ಯಾವಾಗ ಕಣ್ಣು ಮುಚ್ಚಿದರೂ ಚಿಂತೆಯಿಲ್ಲ. ಸಂಜೆ ಕಾರಕೂನರು ಬಂದಾಗ ಒಮ್ಮೆ ಇತ್ತ ಕಡೆ ಬಂದು ಹೋಗು—ಕೆಲವು ಲೆಖ್ಖಪತ್ರದ ವಿಷಯ ಮಾತಾಡಬೇಕಾಗಿದೆ."

"ಆಗಲಿ, ಬರುವೆನು."

ಲಚ್ಚಪ್ಪನಿಂದ ತಮ್ಮ ಕುಟುಂಬಕ್ಕಾದ ಮಹೋಪಕಾರ ಮೃತ್ಯುಸಮಯದಲ್ಲಿ ಅವರಿಗೆ ತಾವಿತ್ತ ವಾಗ್ದಾನ, ಸೂರಪ್ಪನಿಗೂ ತಮಗೂ ಇರುವ ಪ್ರಗಾಢ ಸ್ನೇಹ, ಶಾಂತಳ ಬಗ್ಗೆ ಅವರಲ್ಲಿ ತಾವಿತ್ತ ಭರವಸೆ—ಹೀಗೆ ಆ ಸಂಸಾರದ ಸುತ್ತಲೂ ತಮ್ಮನ್ನು ಬಿಗಿದಿರುವ ಕಾರಣಗಳು ಜೀವ ತುಂಬಿ ಮನಸ್ಸಿನ ಮುಂದೆ ಎದ್ದು ನಿಂತು, ಆ ಸಂಸಾರಕ್ಕೆ ದುಡಿದ ದುಡಿಮೆಯನ್ನು ಒರೆಹಚ್ಚಿ ನೋಡುತ್ತಿದ್ದುವು.

ಕೊಟ್ಟ ಮಾತನ್ನು, ಹೊತ್ತ ಉಪಕಾರವನ್ನು ಮರೆಯದೆ, ತಮ್ಮಿಂದ ಕರ್ತವ್ಯ ಲೋಪವಾಗದಂತೆ ಎಚ್ಚರ ವಹಿಸಿ, ನಿರ್ವಂಚನೆಯಿಂದ ಹಗಲಿರುಳೂ ದುಡಿದಿದ್ದರು. ಈ ವೇಳೆಗಾಗಲೆ ಗೋಪಿ ಒಂದು ರೀತಿಯಾಗಿ ನಿಲ್ಲಬೇಕಿತ್ತು. ನಿಲ್ಲುವ ವಯಸ್ಸೂ ಆಗಿದೆ. ಯಾರ ದುರದೃಷ್ಟದಿಂದಲೊ ಏನೊ ವಯಸ್ಸು ಕಳೆದಂತೆಲ್ಲ ಅಧೋಗತಿಗಿಳಿಯುತ್ತಿದ್ದಾನೆಯೇ ಹೊರತು ಮೇಲೇಳುತ್ತಲೇ ಇಲ್ಲ.

ತಾರುಣ್ಯದಲ್ಲಿ ಅವಿವೇಕಿಗಳಾಗಿದ್ದವರು—ಸಂಸಾರ ಬೆಳೆದಂತೆ ಸರಿ ಹೋಗುವರೆಂದು ಲೋಕರೂಢಿಯಿದೆ. ಗೋಪಿ ಅದನ್ನು ಸುಳ್ಳು ಮಾಡಿದ್ದಾನೆ. ಮಗುವಿನ ತಂದೆಯಾದಂದಿನಿಂದ ಅವನ ಸಂಸಾರ ಇನ್ನೂ ಹದಗೆಟ್ಟಿದೆ. ವಯಸ್ಸಿಗೆ ಬಂದಿದ್ದಾನೆಂದು ತಾವು ಕೈಕಟ್ಟಿ ಕುಳಿತುಕೊಳ್ಳುವಂತಿಲ್ಲ. ವಯಸ್ಸಾಗಿದ್ದರೂ ಅವನ ಕಾಲಬಲದ ಮೇಲೆ ನಿಲ್ಲುವ ಚೈತನ್ಯ ಬಂದಿದ್ದರೂ ಲಚ್ಚಪ್ಪನ ದೃಷ್ಟಿಯಲ್ಲಿ ಅವನಿನ್ನೂ ಮಗು.

ಅವನಲ್ಲಿರುವ ವಿವೇಕವನ್ನು ಬೆಳಗಿಸಿ, ಶುದ್ಧ ಮಾನವನನ್ನಾಗಿ ಮಾಡುವವರೆಗೆ ಲಚ್ಚಪ್ಪ–ಸೂರಪ್ಪ ಇಬ್ಬರಿಗೂ ತಾವಿತ್ತ ವಾಗ್ದಾನ ಪೂರೈಸುವುದಿಲ್ಲ. ದೇಹ ಬಿದ್ದುಹೋದರೂ ಸರಿಯೆ, ತಮ್ಮಿಂದ ಸ್ವಾಮಿದ್ರೋಹ ಮಿತ್ರದ್ರೋಹವಾಗಗೊಡಬಾರದು. ಹೊತ್ತ ಉಪಕೃತಿಯ ಋಣದ ಬಾಧೆಯನ್ನು ತೀರಿಸಿಕೊಳ್ಳಲೆ ಬೇಕು. ಕೊಟ್ಟ ಮಾತಿನ ಪೂರ್ಣತೆಯನ್ನು ಕಾಣಲೆಬೇಕು—ಹಾಗೆಂದು ಭಟ್ಟರು ಭೀಷ್ಮಪ್ರತಿಜ್ಞೆ ಮಾಡಿ, ನೆತ್ತಿಗೆ ತಾಕುವಂತೆ ನಶ್ಯವೇರಿಸಿ ಹೆಗಲಿಗೆ ವಸ್ತ್ರ ಹೊದ್ದು ಹೆಜ್ಜೆ ಮುಂದಿಟ್ಟರು. ಹುಳಿಗೆ ರುಬ್ಬುತ್ತಿದ್ದ ವಿಶಾಲಾಕ್ಷಮ್ಮ ಕೈಕೂಡ ತೊಳೆಯದೆ, ಭಟ್ಟರು ಹೊರಟ ಸುಳಿವು ಕಂಡು ಬಂದು ಹೇಳಿದರು,

"ನರಸುಗೆ ಮೂರು ದಿನವಾಯಿತು—ಬಂದ ಜ್ವರ ಬಿಡುತ್ತಿಲ್ಲ. ಸ್ವಲ್ಪ ಪಂಡಿತರ ಮನೆಗೆ ಕರೆದುಕೊಂಡು ಹೋಗಬೇಕಿತ್ತು."

"ನನಗೆ ಬಿಡುವಿಲ್ಲ, ಚಂದ್ರು ಜತೆಯಲ್ಲಿ ಕಳುಹಿಸಿ ಕೊಡು." ಎಂದು ಹೊರಟಿದ್ದವರು ನಿಂತು ಹೇಳಿದರು.

"ಅವನಿಗೆ ಪರೀಕ್ಷೆ ನಡೆಯುತ್ತಿದೆ, ಹೋಗುವುದಿಲ್ಲವೆಂದು ಹೇಳುವನು. ಈ ಸಮಯದಲ್ಲಿ ತೊಂದರೆ ಕೊಡುವುದು ಸರಿಯಲ್ಲ."

"ಹಾಗಿದ್ದ ಮೇಲೆ ನೀನೆ ಕರೆದುಕೊಂಡು ಹೋಗು—ನನಗಂತೂ ಬಿಡುವಿಲ್ಲ." ಎಂದು ಹೆಜ್ಜೆ ಮುಂದಿಟ್ಟರು.

ಹೊರಟವರನ್ನು ತಡೆದು ಹೇಳಿದರು ವಿಶಾಲಾಕ್ಷಮ್ಮ,

"ನೀವು ಹೀಗೆ ಮಾಡುವುದು ನನಗೇನೂ ಸರಿ ಕಂಡುಬರಲಿಲ್ಲ. ಮನೆಯವರ ಕಷ್ಟ-ಸುಖದ ಕಡೆ ಗಮನ ಕೊಡದೆ, ಮೂರು ಹೊತ್ತೂ ಕಂಡವರ ಚಾಕರಿ ಬಳಿಯುತ್ತಿದ್ದರೆ ನೋಡಿದವರೇನನ್ನುವರು?"

"ಕಂಡವರನ್ನು ಮೆಚ್ಚಿಸಲು ಬಾಳುತ್ತಿಲ್ಲ ನಾನು. ಅನ್ನವಿಕ್ಕಿದ ಮನೆಗೆ ಹಿತ ಬಯಸುವುದು ನನ್ನ ಕರ್ತವ್ಯ. ಶಾಂತ ಹೊರಗಿನವಳೇನಲ್ಲ; ಸ್ನೇಹಿತನ ಮಗಳು, ಮಗಳಿಗೆ ಸಮ !"

"ನೀವು ಮಗಳೆಂದು ತಿಳಿದರೂ ನೋಡಿದವರ ಕಣ್ಣಿಗೆ ಹಾಗಾಗುತ್ತಿಲ್ಲ ವಲ್ಲ. ಹುಡುಗಿಯನ್ನು ಗಂಡನಿಗೆ ವಿರುದ್ಧವಾಗಿ ಎತ್ತಿಕಟ್ಟಿ ಸಂಸಾರ ಹಾಳು ಮಾಡುತ್ತಿರುವಿರೆಂದು ಊರೆಲ್ಲ ಪುಕಾರೆದ್ದಿದೆ."

"ಆ ಸುದ್ದಿಯನ್ನು ತಿಪ್ಪೆಗೆ ಎಸೆ. ಎಲುಬಿಲ್ಲದ ನಾಲಗೆ—ತಮ್ಮಲ್ಲಿ ಮನುಷ್ಯತ್ವವಿದೆಯೆನ್ನುವುದನ್ನು ಮರೆತು, ನಾಲಗೆಯಾಡಿದಂತೆ ತಿರುಗಿಸುವರು ಜನ; ಅದಕ್ಕೆ ಬೆಲೆ ಕೊಡುವೆಯೇನು ?"

"............... !"

"ಮೂವತ್ತು ವರ್ಷಗಳಿಂದ ನನ್ನೊಡನೆ ಬಾಳುತ್ತಿರುವೆಯಲ್ಲ—ನನ್ನ ಸ್ವಭಾವದ ಪರಿಚಯವಾಗಿಲ್ಲ ನಿನಗೆ! ಹೆಣ್ಣಾಗಿ ಹುಟ್ಟಿ, ದುಃಖಾಗ್ನಿಯಲ್ಲಿ ಬೇಯುತ್ತಿರುವ ಮತ್ತೊಂದು ಹೆಣ್ಣಿಗೆ ಸಹಾನುಭೂತಿ ತೋರುವುದು ಬಿಟ್ಟು ಕರುಬುವೆಯಾ ?"

"........... .... !"

"ಹೊಟ್ಟೆ-ಬಟ್ಟೆಗೆ ಗತಿಯಿಲ್ಲದೆ ದೇಶಾಂತರ ಹೊರಟು ನಿಂತಾಗ, ನಿನಗೆ ನೆರಳು–ಅನ್ನ ಕೊಟ್ಟವರಾರು ? ಭಗವಂತ ಈಗ ಕಣ್ಣುಬಿಟ್ಟು ನೋಡಿದ್ದಾನೆಂದು ಅನ್ನವಿಕ್ಕಿದವರನ್ನು ಮರೆತುಬಿಡುವುದೆ ? ಥೂ ! ನಿನ್ನ ಮುಖ ತೋರಿಸಬೇಡ ನನಗೆ! ನಿನ್ನ ಅವಿವೇಕ ನಡವಳಿಕೆ ಬ್ರಾಹ್ಮಣತನಕ್ಕೇ ಅವಮಾನ. ಮನಸ್ಸನ್ನು ಶುದ್ಧ ಮಾಡಿಕೊಂಡು, ನೀನಾಡಿದ ಮಾತನ್ನು ಹಿಂದಿರುಗಿ ತೆಗೆದುಕೊಳ್ಳುವವರೆಗೆ, ಈ ಮನೆಯಲ್ಲಿ ಒಂದು ತೊಟ್ಟು ನೀರು ಮುಟ್ಟುವುದಿಲ್ಲ—ಆದದ್ದಾಗಲಿ " ಎಂದು ಸಿಟ್ಟಿನಿಂದ ದೇಹ ಹಿಡಿತಕ್ಕೆ ಸಿಕ್ಕದೆ, ಬಲವಾಗಿ ಸೆಳೆದು ಬಿಟ್ಟ ಬಾಣದಂತೆ ಸರ್ರನೆ ಹೊರಗೆ ಜಾರಿದರು.

ವಿಶಾಲಾಕ್ಷಮ್ಮ ನಿಂತಲ್ಲೇ ಕುಸಿದು ಬಿದ್ದರು. ಯಜಮಾನರಿಂದ ಎಂದೂ ಇಂಥ ಮುಖಭಂಗವಾಗಿರಲಿಲ್ಲ. ಇತ್ತೀಚೆಗೆ ತಲೆದೋರುತ್ತಿದ್ದ ಅಹಂಭಾವಕ್ಕೆ ತಕ್ಕ ಬರೆಯಿಟ್ಟಂತಾಯಿತು. ಆ ಮಾತಾಡಬಾರದಿತ್ತೆಂದು ಮಮ್ಮಲ ಮರುಗಿ

ದರು. ಗಂಡನ ಸ್ವಭಾವದ ಪರಿಚಯ ಚೆನ್ನಾಗಿತ್ತು. ಮಾನವನಲ್ಲಿರಬೇಕಾಗಿದ್ದ ಎಲ್ಲ ಸದ್ಗುಣಗಳನ್ನೂ ಅವರು ತಮ್ಮಲ್ಲಿ ದಿನೇದಿನೇ ಹೊರಹೊಮ್ಮಿಸುತ್ತ ಬರುತ್ತಿದ್ದರು. ಧರ್ಮಶ್ರದ್ಧೆ, ಕರ್ತವ್ಯನಿಷ್ಠೆ, ದೈವಭಕ್ತಿ, ಸ್ವಾಮಿ ಪ್ರೀತಿಗಾಗಿ ಬದುಕನ್ನೆ ಬಲಿ ಕೊಡುತ್ತಿದ್ದರು. ಎಷ್ಟೋ ಬಾರಿ ಗಂಡನ ಸದ್ಗುಣಕ್ಕೆ ತಲೆ ಬಗ್ಗಿದ್ದರು. ಇಂದು ತಮಗಾದದ್ದಾದರೂ ಏನು? ಯಾಕೀ ಅವಿವೇಕ ತಲೆ ಹಾಕಿತು? 'ಕಷ್ಟದಲ್ಲಿದ್ದವರಿಗೆ ಭಗವಂತ ಕಣ್ಣು ತೆರೆದು ಅನ್ನ ಕೊಟ್ಟನೆಂಬ ಗರ್ವದಿಂದಲೊ?'

'ಇರಬಹುದು! ಅವರು ಹೇಳಿದ ಮಾತು ಸುಳ್ಳಲ್ಲ. ಈಗುಂಟಾದ ಸುಖದಿಂದ ಹಿಂದೆ ನಾನು ಪಟ್ಟ ಕಷ್ಟವನ್ನೆಲ್ಲ ಮರೆಯುತ್ತಿದ್ದೇನೆ; ಅನ್ನವಿಟ್ಟು ನೆಲೆ ನಿಲ್ಲಿಸಿದ ಸ್ವಾಮಿಗೆ ದ್ರೋಹಿಯಾಗುತ್ತಿದ್ದೇನೆ. ಅದಕ್ಕೆ ನನ್ನಲ್ಲುಂಟಾದ ಅಹಂಭಾವವೆ ಕಾರಣ. ಅದಕ್ಕಲ್ಲಿಗೆ ಮುರಿದು ಹಾಕಬೇಕು.'

'ಇಷ್ಟಕ್ಕೂ ಈ ದಿನ ನಾನಾಡಿದ ಮಾತಿಗೆ ಅಹಂಭಾವವೊಂದೇ ಕಾರಣವೆ?'

'ಇಲ್ಲ, ನರಸುವೂ ಕಾರಣವಾಗಿದ್ದಳು. ತಮ್ಮ ಮಗು ಜ್ವರದಲ್ಲಿ ನರಳುತ್ತಿದ್ದರೂ ಅಲಕ್ಷ್ಯ ಮಾಡಿ, ಮತ್ತೊಬ್ಬರ ರಕ್ಷಣೆಗೆಂದು ಹೊರಟದ್ದು ನನಗೆ ಸಹಿಸಲಿಲ್ಲ. ಮಕ್ಕಳು ಅನಾರೋಗ್ಯದಲ್ಲಿರುವಾಗ ಹೆಂಡತಿಯಾದವಳು ಗಂಡನ ಸಹಾಯ, ಸಾನ್ನಿಧ್ಯವನ್ನು ಬಯಸುವುದು ತಪ್ಪೆ? ಯಾವ ಗೃಹಿಣಿ ತಾನೆ ಇಂಥಾ ಸಂದರ್ಭದಲ್ಲಿ ಪತಿಯು ಮತ್ತೊಬ್ಬರ ಸೇವೆಗೆ ಹೊರಟರೆ ಸುಮ್ಮನಿರುವಳು?'

'ಯಾರೂ ಸುಮ್ಮನಿರುವುದಿಲ್ಲ—ಮೊದಲು ತನ್ನ ಹಿತಚಿಂತನೆ, ಆ ಮೇಲೆ ಪರರ ಹಿತಚಿಂತನೆ—ಇದು ಲೋಕರೂಢಿ.'

'ಹಾಗಿದ್ದಲ್ಲಿ ನನ್ನನ್ನೇಕೆ ತಪ್ಪಾಗಿ ಕಂಡರು? ಅವರೆ ಎಷ್ಟೋ ಬಾರಿ ಹೇಳಿರಲಿಲ್ಲವೆ—ನೀನು ನನಗೆ ತಕ್ಕ ಹೆಂಡತಿ ವಿಶಾಲಿ—ಎಂದು! ಅಂಥವರು ಈದಿನ ಎಷ್ಟು ಮಾತಂದು ಬಿಟ್ಟರು!'

'ಅವರಂದದ್ದು ಸರಿ. ಅವರ ನೆರಳಾಗಿ ನಡೆಯುತ್ತಿದ್ದ ನಾನು ಈ ದಿನ ಏಕೆ ಅವರನ್ನು ಹೀಯಾಳಿಸಿ ಮಾತಾಡಬೇಕಿತ್ತು! ಮಗುವಿನ ಜ್ವರಕ್ಕೂ ನಾನಂದ ಮಾತಿಗೂ ಎಲ್ಲಿಯ ಸಂಬಂಧ! ಕರ್ತವ್ಯನಿಷ್ಠರಾದವರಲ್ಲ ಎಲ್ಲ

ರಂತೆ ತಪ್ಪೆಣಿಸಿ, ಅಷ್ಟು ವಕ್ರವಾಗಿ ನಡೆದುಕೊಂಡದ್ದು ಸರಿಯಲ್ಲ. ಲೋಕಕ್ಕೇನು ಗೊತ್ತು–ಅವರು ಸ್ವಾಮಿಭಕ್ತಿಗಾಗಿ, ವಾಗ್ದಾನ ಪೂರೈಕೆಗಾಗಿ ತಮ್ಮ ಸರ್ವಸ್ವವನ್ನೂ ಬಲಿಗೊಟ್ಟು ಹಾಗೆ ದುಡಿಯುತ್ತಿರುವರೆಂದು ! ತಿಳುವಳಿಕೆಯಿಲ್ಲದ ಜನ ಅಂದದ್ದನ್ನು ನೆಚ್ಚಿ ನಾನು ಹಾಗೆ ಆಡಬಾರದಿತ್ತು. ನನ್ನವರ ಗುಣ ನನಗೆ ಗೊತ್ತಿಲ್ಲವೆ ? ಒಂದು ಗಳಿಗೆಯ ಅಜ್ಞಾನಕ್ಕೆ ಬಲಿಯಾಗಿ ಎಂಥ ಅವಿವೇಕ ಮಾಡಿದೆ? ಇನ್ನೆಂದೆಂದೂ ನಾನು ಕಂಡವರ ಮಾತಿಗೆ ಕಿವಿಗೊಡುವುದಿಲ್ಲ. ಅವರ ನಿಯತ್ತೆ ನನ್ನ ನಿಯತ್ತು; ಅವರ ಕರ್ಮವೆ ನನ್ನ ಕರ್ಮ; ಅವರ ಧರ್ಮವೆ ನನ್ನ ಧರ್ಮ !'

'ಅವರಂದಂತೆ ನನ್ನ ತಪ್ಪನ್ನು ತಿದ್ದಿಕೊಂಡಿರುವೆನು. ಇನ್ನು ಅಂದ ಮಾತನ್ನು ಹಿಂದಕ್ಕೆ ತೆಗೆದುಕೊಂಡು ಕ್ಷಮೆ ಬೇಡಿದರಾಯಿತು.'

'ಮನಸ್ಸು ನೊಂದವರು ಕ್ಷಮಾಯಾಚನೆಗೆ ಬೆಲೆ ಕೊಡುವರೊ, ಇಲ್ಲವೊ !'

'ಕೊಟ್ಟೇ ಕೊಡುವರು, ಅವರದು ಹೂವಿನಂಥ ಮನಸ್ಸು.'

ಹಾಗೆಂದು ಅಲ್ಲೆ ಹಜಾರದಲ್ಲಿ ತೂಗು ಹಾಕಿದ್ದ ಭಟ್ಟರ ಭಾವಚಿತ್ರದ ಕಡೆ ನೋಡಿದರು. ಹುಸಿ ನಗುತ್ತಾ ಕುಳಿತಿದ್ದ ಭಟ್ಟರು ಹೌದೆಂದು ತಲೆ ಹಾಕಿದರು. ಆ ನಗೆಯೊಡನೆ ತಮ್ಮ ನಗೆಯನ್ನು ತೇಲಿಬಿಟ್ಟು ಒಳಗೆ ಹೋದರು. ಪಶ್ಚಾತ್ತಾಪ ಜಲದಿಂದ ತುಂಬಿದ ಹೃದಯವನ್ನೂ ನಂಜಿಡಿದ ನುಡಿಚೆಲ್ಲಿದ ನಾಲಿಗೆಯನ್ನೂ ಶುದ್ಧ ಮಾಡಿಕೊಂಡಂತೆ ಧೂಳು ತುಂಬಿ ಒಣಗಿದ ಕೈಯನ್ನು ತೊಳೆದು ಮತ್ತೆ ರುಬ್ಬಲು ಕುಳಿತರು. ಮನಸ್ಸು ಪುನಃ ಯಜಮಾನರ ಬೆನ್ನು ಹತ್ತಿ ಹೋಯಿತು.

ಭಟ್ಟರು ಬಲವಂತದಿಂದ ಕಾಲೆಳೆದುಕೊಂಡು ಹೋಗುತ್ತಿದ್ದರು. ಹತೋಟಿ ತಪ್ಪಿದ್ದ ಮನಸ್ಸು ಹಿಡಿತಕ್ಕೆ ಬಂದಿರಲಿಲ್ಲ. ಆಗಾಗ ಉಸಿರು ನೋವನ್ನು ಹೊತ್ತು ಭಾರವಾಗಿ ಹೊರಬರುತ್ತಿತ್ತು. ಇಂದು ಕೇಳಬಾರದ ಮಾತನ್ನು ಕೇಳಿದ್ದರು. ಜನರ ಬಾಯಿಂದ ತನ್ನ ಬಗ್ಗೆ ಆ ಬಗೆಯ ಹೊಲಸು ಮಾತು ಹೊರಬೀಳಬಹುದೆಂದು ಕನಸು–ಮನಸಿನಲ್ಲೂ ನೆನೆಸಿರಲಿಲ್ಲ. ಸಮಾಜದ ಬಗ್ಗೆ ಹೇಸಿಕೆಯುಂಟಾಯಿತು. ಅದರ ಕರಾಳ ಮುಖದ ಪರಿಚಯವಾದದ್ದು ಅವರಿಗಂದೆ. ನಡೆದ ವಿಷಯವೊಂದು––ಜನ ತಿಳಿದದ್ದೊಂದು !

ಇತ್ತೀಚೆಗೆ ಶಾಂತ ಗಂಡನಿಗೆ ವಿರುದ್ಧವಾಗಿ ನಿಂತಿರುವುದು ಹೌದು—ಆದರೆ ಅದು ತನ್ನಿಂದಲ್ಲ; ಗೋಪಿ ಕೊಡುವ ಯಾತನೆ ಸಹಿಸಲಾರದೆ ಅವಳೆ ತಿರುಗಿಬಿದ್ದಿದ್ದಾಳೆ. ಅದು ಸ್ವಾಭಾವಿಕವೆ. ಮನುಷ್ಯನ ಸಹನೆಗೂ ಇತಿ-ಮಿತಿಯಿಲ್ಲವೆ? ಅಷ್ಟು ತಿಳಿಯದ ಜನ ಯಾಕಾಗುವರು! ಇಷ್ಟಕ್ಕೂ ಯಾಕೆ ಬೇಕು, ಕಂಡವರ ಮನೆಸುದ್ದಿ? ತಂತಮ್ಮ ಸಂಸಾರದಲ್ಲೆ ತಿದ್ದಿಕೊಳ್ಳು ವುದು ಬ್ರಹ್ಮಾಂಡದಷ್ಟಿರುವಾಗ, ಮತ್ತೊಬ್ಬರ ಸಂಸಾರಕ್ಕೆ ತಲೆಹಾಕುವುದಾದರೂ ಯಾಕೆ? ಮೂರ್ಖಜನವಲ್ಲವೆ!

ಅವರಾದರೂ ಹೋಗಲಿ—ತಿಳುವಳಿಕೆಯಿಲ್ಲದ ಜನ ಅನ್ನುವುದು ಸ್ವಾಭಾವಿಕ. ತಕ್ಕಮಟ್ಟಿಗೆ ತಿಳುವಳಿಕೆಯ ಮಟ್ಟದಲ್ಲಿದ್ದು, ಯುಕ್ತಾಯುಕ್ತತೆಯ ಪರಿಜ್ಞಾನದ ಪರಿಚಯವಿದ್ದ ವಿಶಾಲಾಕ್ಷಿ ಅಂದದ್ದು ಮಹಾಪರಾಧ. ಹಾಗನ್ನಬಾರದಿತ್ತವಳು. ದುಡುಕಿ ಅಂದದ್ದಕ್ಕೆ ಪ್ರಾಯಶ್ಚಿತ್ತವಾಗಲೆ ಬೇಕು. ತಾನಂದದ್ದು ಸರಿ ಅವಳಿಗೆ. ಆ ಮಾತನ್ನಲ್ಲೆ ಮುರಿಯದಿದ್ದಿದ್ದರೆ ಆ ದೌರ್ಬಲ್ಯ ಬೆಳೆಸಿಕೊಂಡು ಹೋಗುತ್ತಿದ್ದಳು. ನಾನು ಬಿಗು ಬಿಟ್ಟುಕೊಡದಿದ್ದುದು ಸಮನಾಯಿತು. ಬುದ್ಧಿ ಕಲಿಯಲಿ—ಎಂದು ಹೆಜ್ಜೆ ಜೋರು ಮಾಡಿದರು. ಮನಸ್ಸಿಗುಂಟಾಗಿದ್ದ ವೇಗ ಕಾಲಿಗೆ ಹರಿದು ಹತ್ತು ನಿಮಿಷದಲ್ಲಿ ರಂಗಮ್ಮನ ಮನೆ ತಲುಪಿದ್ದರು.

ರಂಗಮ್ಮ ಮೂಲೆ ಹಿಡಿದು ಕೂತಿದ್ದರು. ಸರಸು ಶೀತಕೆಮ್ಮಿನಿಂದ ಹಾಸಿಗೆ ಹಿಡಿದು ಮಲಗಿದ್ದಳು. ಮೈಯಲ್ಲಿ ಸಣ್ಣ ಜ್ವರವೂ ಇತ್ತು. ಮನೆಯ ಕೆಲಸವೆಲ್ಲ ನಾಣಿಯ ಮೇಲೆಯೆ ಬಿದ್ದಿತ್ತು. ನಗುನಗುತ್ತಲೆ ಮಾಡುತ್ತಿದ್ದ. ಭಟ್ಟರು ಬಂದಾಗ ಅಡಿಗೆಯೆಲ್ಲ ಆಗಿ ಹೆಂಡತಿಗೆ ಮೆಣಸಿನಕಾಳು ಕಷಾಯವನ್ನು ಉಪಚಾರ ಮಾಡಿ ಕುಡಿಸುತ್ತಿದ್ದ. ಹೊರಗಿನಿಂದ ಬಂದ ಭಟ್ಟರ ಕಣ್ಣಿಗೆ ಮೊದಲು ಬಿದ್ದದ್ದು ಅದೇ ನೋಟವೆ! ಅವನ ಸೇವಾನಿಷ್ಠೆಯನ್ನು ಕಂಡು ಮೈಯುಬ್ಬಿ ಕೂರುತ್ತ ಹೇಳಿದರು,

"ಇಲ್ಲಿಗೆ ಬಂದರೆ ಮನೆಗೆ ಹೋಗಬೇಕೆನಿಸುವುದೆ ಇಲ್ಲ ನಾಣಿ. ನಿಮ್ಮ ಗಂಡ–ಹೆಂಡಿರ ಹೊಂದಾಣಿಕೆ ಅಷ್ಟು ಆಕರ್ಷಣೀಯವಾಗಿದೆ. ಕಷ್ಟ-ಸುಖದಲ್ಲಿ ಇಬ್ಬರೂ ಸಮ ಪಾಲು ತೆಗೆದುಕೊಳ್ಳುತ್ತಿರುವಿರಿ. ನಿಮ್ಮ ಬದುಕಿನ ಕ್ರಮ ನಿಜವಾಗಿಯೂ ಮಾದರಿಯಾಗಿದೆ. ಇನ್ನಾರಾದರೂ ಆಗಿದ್ದರೆ ಶೀತ

ಬಂದವರನ್ನು ಲೆಖ್ಖಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ."

"ಎಷ್ಟೋ ಜನ ಹಾಗೆ ಕಡೆಗಣಿಸುವರು—ನಾನೂ ನೋಡಿರುವೆನು; ಆದರೆ ಹಾಗೆ ಮಾಡಲು ನನ್ನ ಮನಸ್ಸೊಪ್ಪುವುದಿಲ್ಲ. ನಮಗೆ ಸ್ವಲ್ಪ ಮೈ ಚುಳ್ಳೆಂದರೆ ಸಾಕು, ಮಲಗಿದಲ್ಲಿಂದ ಏಳಲು ಬಿಡದೆ ಹಗಲೂ ರಾತ್ರೆ ನಿಷ್ಠೆ ಯಿಂದ ಸೇವೆ ಮಾಡುವರು. ನಮ್ಮದಾದರೆ ಜೀವ, ಅವರದಲ್ಲವೊ! ಅವಳಾ ಗಲೇ ಎದ್ದು ಅಡಿಗೆ ಮಾಡುವೆನೆಂದು ಹಠ ಹಿಡಿದಿದ್ದಳು. ನಾನೆ ಬೇಡ ವೆಂದು ತಡೆದೆ."

"ಒಳ್ಳೆಯದು ಮಾಡಿದೆ. ಇದೇ ಔದಾರ್ಯ–ಉತ್ಸಾಹ–ಪ್ರೀತಿ ಕಡೆ ವರೆಗೂ ನಿನ್ನಲ್ಲಿ ಜೀವ ತುಂಬಿರಲಿ. ಮನೆಯನ್ನು ಬೆಳಗಲು ಬಂದ ಹೆಣ್ಣನ್ನು ಎಂದೂ ಕಡೆಗಣಿಸಬಾರದು. ನಿಮ್ಮಣ್ಣನ ಸಂಸಾರದ ಕ್ರಮ ನೋಡಿದರೆ ಹೊಟ್ಟೆ ಉರಿದುಹೋಗುತ್ತದೆ. ನೀನೆಲ್ಲಿ, ಅವನೆಲ್ಲಿ! ಸರಸು ನಿಜವಾಗಿಯೂ ನಿನ್ನ ಕೈ ಹಿಡಿಯಲು ಪುಣ್ಯ ಮಾಡಿದ್ದಳು."

"ಅವಳಂಥಾ ಹೆಂಡತಿ ಸಿಕ್ಕಬೇಕಾಗಿದ್ದರೆ ನಾನೂ ಪುಣ್ಯ ಮಾಡಿದ್ದೆ."

"ಇಬ್ಬರಲ್ಲೂ ಆ ತೃಪ್ತಿ ಬಂದಾಗಲೆ ಸಂಸಾರ ಸ್ವರ್ಗವಾಗಬೇಕಾದರೆ!"

"ಅತ್ತಿಗೆ ಹೇಗಿದ್ದಾಳೆ? ಬಹಳ ದಿನವಾಯಿತು—ಆ ಕಡೆ ನಾನು ಹೋಗದೆ!"

"ಹೋಗದೆ ಇದ್ದುದು ಒಳ್ಳೆಯದಾಯಿತು. ಇನ್ನು ಮರೆತೂ ನಿಮ್ಮ ಣ್ಣನ ಮನೆಗೆ ಕಾಲಿಡಬೇಡ. ನಿನ್ನಲ್ಲಿ ಈವರೆಗೆ ಮುಚ್ಚಿರಿಸಿದ್ದ ಒಂದು ವಿಷಯವನ್ನು ಮನಸ್ಸು ಗಟ್ಟಿಮಾಡಿ ತಿಳಿಸಲು ಬಂದಿದ್ದೇನೆ. ಅದನ್ನು ಕೇಳಿ ತಲೆ ಕೆಡಿಸಿಕೊಳ್ಳುವುದಿಲ್ಲವೆಂದು ಮಾತು ಕೊಟ್ಟರೆ ಮಾತ್ರ ಹೇಳುವೆನು."

"ಧೈರ್ಯವಾಗಿ ಹೇಳಿ.....ನನ್ನ ತಲೆ ಗಟ್ಟಿಯಿದೆ; ಸಾಮಾನ್ಯಕ್ಕೆ ಕೆಡುವು ದಿಲ್ಲ ಅದು!"

"ಪಕ್ಕದ ಕೋಣೆಗೆ ಹೋಗೋಣ, ಇಲ್ಲಿ ಆ ಮಾತಾಡುವುದು ಸರಿ ಯಲ್ಲ—" ಎಂದು ಎದ್ದು ಇಬ್ಬರೂ ಪಕ್ಕದ ಕೋಣೆಯ ಕಡೆ ಹೊರಟಿದರು. ಹೋಗುತ್ತಾ ಭಟ್ಟರು ಕೇಳಿದರು "ರಂಗಮ್ಮ ಎಲ್ಲಿ ಕಾಣುವುದಿಲ್ಲ?"

"ಹಿಂದುಗಡೆ ಎಲ್ಲೋ ಇರಬೇಕು."

ನಾಣಿಯ ರೂಮಿನ ಪಕ್ಕದ ಕೋಣೆ ವಿಶಾಲವಾಗಿತ್ತು. ಯಾವ ಸಾಮಾನೂ ಸರಂಜಾಮೂ ಇರಲಿಲ್ಲ. ಅಲ್ಲಿ ಹಾಸಿದ್ದ ಚಾಪೆಯ ಮೇಲೆ ಇಬ್ಬರೂ ದೇಹವೂರಿದರು. ಭಟ್ಟರು ಮೂಗಿಗೆ ಬಲವಾದ ಒಂದು ಚಿಟಿಕೆ ನಸ್ಯವೇರಿಸಿ, ಶಾಂತ ಗೋಪಿಯ ಜೀವನದಲ್ಲಿ ಕಾಲಿಟ್ಟಂದಿನಿಂದ—ಆ ದಿನದ ವರೆಗೆ ನಡೆದ ಎಲ್ಲ ವಿಷಯವನ್ನು ಕೂಲಂಕಷವಾಗಿ ತಿಳಿಸಿ ಹೇಳಿದರು.

"ಇಂಥಾ ವಿಚಿತ್ರ ವ್ಯಕ್ತಿಯನ್ನು ನಾನೆಲ್ಲೂ ನೋಡಿಲ್ಲ. ಅನೇಕ ಸಂಸಾರ ದಲ್ಲಿ, ಅವರವರ ಸ್ವಭಾವಕ್ಕನುಸರಿಸಿ ಗಂಡ–ಹೆಂಡಿರ ನಡುವೆ ಈ ಬಗೆಯ ಸಂದೇಹ ತಲೆದೋರುವುದುಂಟು. ಆದರೆ ಇಷ್ಟು ಮಿತಿಮೀರಿಸಿಕೊಂಡು ಯಾರೂ ಸಂಸಾರ ಹಾಳು ಮಾಡಿಕೊಳ್ಳಲಾರರೆಂದು ನನಗನಿಸುತ್ತೆ. ಗೋಪಿ ಬೇಕೆಂದು ಸಂಸಾರದಲ್ಲಿ ವಿರಸ ಬೆಳೆಸಿಕೊಂಡು ಬರುತ್ತಿರುವನು. ಯಾರಾದ ರೊಬ್ಬರ ಬಲಿಯಾದ ಹೊರತು, ಅದು ಸರಿಹೋಗುವಂತೆ ಕಂಡುಬರಲಿಲ್ಲ."

ಭಟ್ಟರು ಹೇಳುತ್ತಿದ್ದಂತೆ, ಒಟ್ಟಾಗಿದ್ದಾಗ ಮನೆಯಲ್ಲಿ ನಡೆಯುತ್ತಿದ್ದ ಎಲ್ಲ ವಿಷಯವೂ ಕಣ್ಣಮುಂದೆ ಕಟ್ಟಿ ನಿಂತಿತು. ಅತ್ತಿಗೆಯೊಡನೆ ತಾನು ಪಗಡೆಯಾಡಿದ ದಿನ ಅಣ್ಣ ಸಹನೆ ಮೀರಿ ಅವಳೊಡನೆ ರೇಗಾಡಿದ್ದು; ಲೋಕರೂಢಿಯಂತೆ ಗರ್ಭಿಣಿಯಾದವಳಿಗೆ ತಾಸಿತ್ತ ಉಡುಗೊರೆ ನೆಪವಾಗಿ, ತನ್ನ ಮತ್ತು ಅವಳ ನಡುವೆ ಅಣ್ಣ ಬಳಸುತಿದ್ದ ಅವಾಚ್ಯ ಶಬ್ದ—ಇವುಗಳಿ ಗೆಲ್ಲ ತಮ್ಮಿಬ್ಬರ ನಡುವೆ ವೈಷಮ್ಯವಿರುವುದೆ ಕಾರಣವೆಂದು ತಿಳಿದಿದ್ದ. ಅಂದಾ ಡಿದ ಮಾತಿನ ನಿಜವಾದ ಅರ್ಥ ಇಂದು ಹೊಳೆಯಿತು. ತನ್ನಿಂದಾಗಿ ಯಾವ ಅಪರಾಧವೂ ಇಲ್ಲದೆ ಅತ್ತಿಗೆ ಪಡುತ್ತಿರುವ ಯಮಯಾತನೆ ನೆನೆದು ಕಣ್ಣು ಕರ ಗಿತು. ಕಂಬನಿ ಮಿಡಿಯುತ್ತ ಹೇಳಿದ,

"ಒಟ್ಟಿನಲ್ಲಿದ್ದಾಗ ನಮ್ಮಿಬ್ಬರ ನಡುವೆ ಅಣ್ಣ ಅವಾಚ್ಯ ಶಬ್ದ ಬಳಸುತ್ತಿ ದ್ದುದನ್ನು ನಾನೂ ಕಿವಿಯಾರೆ ಕೇಳಿರುವೆನು. ಆದರೆ ನನಗೆ ಆಗ ಅದರ ನಿಜ ವಾದ ಅರ್ಥ ಹೊಳೆಯಲಿಲ್ಲ. ನಮ್ಮಿಬ್ಬರ ನಡುವೆಯಿದ್ದ ವೈಷಮ್ಯದ ಬೇಗೆ ಯನ್ನು ಅತ್ತಿಗೆಯ ಮುಖಾಂತರ ಹೊರಗೆ ಉಗುಳುತ್ತಿರುವನೆಂದು ಭಾವಿಸಿದ್ದೆ. ನಿಜವಾಗಿಯೂ ಮನಸ್ಸನ್ನು ಕಲ್ಲಾಗಿ ಮಾಡಿ ಆ ಮಾತನ್ನು ಕೇಳುತ್ತಿದ್ದೇನೆ. ಒಂದೇ ಬೊಗಸೆ ರಕ್ತ ಹಂಚಿ ಬಂದ ನನ್ನಲ್ಲಿ ನಮ್ಮಣ್ಣನಿಗಿಷ್ಟು ಅಪನಂಬಿ ಕೆಯೆ! ಮೂವತ್ತು ವರ್ಷ ಅವನೊಡನೆ ಕೂಡಿ–ಆಡಿ ಬೆಳೆದಿರುವೆನು.

ನನ್ನ ಸ್ವಭಾವದ ಪರಿಚಯ ಚೆನ್ನಾಗಿದ್ದೂ ತಪ್ಪೆಣಿಸಿದನಲ್ಲಾ! ಅವನಿಷ್ಟು ನೀಚನೆಂದು ತಿಳಿದಿದ್ದರೆ, ಅವನ ಲಗ್ನವಾದ ದಿನವೆ ಬೇರೆಯಾಗಿ ಬಿಡುತ್ತಿದ್ದೆ. ನನ್ನದು ಬಿಡಿ—ಗಂಡಸು; ಮಾತನ್ನು ಕೊಡವಿಕೊಂಡು ಹೋಗುವೆನು. ಪಾಪ, ಅತ್ತಿಗೆಯ ಪಾಡೇನಾಗಬೇಕು! ಇಂಥಾ ಹೊಲಸು ಮಾತು ಕೇಳಿದಾಗ ಅವಳಿಗೆ ಎಷ್ಟು ಯಾತನೆ ಪಡಬಹುದು! ಅವನು ನಿಜವಾಗಿಯೂ ಮನುಷ್ಯನಲ್ಲ, ರಾಕ್ಷಸ. ಇಂಥಾ ಗಂಡಸರನ್ನು ನೋಡಿಯೆ ಹೆಂಗಸರು ಸುಧಾರಣೆ–ಸ್ವತಂತ್ರ ಬೇಕೆಂದು ಹೊರಟದ್ದು. ಅವರ ಬೇಡಿಕೆಯಲ್ಲಿ ಏನೂ ತಪ್ಪಿಲ್ಲ. ಈ ನರಕವನ್ನು ಯಾರು ತಾನೆ ಅನುಭವಿಸುವರು! ಇಷ್ಟಾದರೂ ವಿರೋಧಿಸದೆ ಅತ್ತಿಗೆ ಸುಮ್ಮನಿರುವಳೆ ?"

"ಈವರೆಗೂ ಮೂಕಳಾಗಿಯೆ ಯಾತನೆ ಅನುಭವಿಸಿದಳು. ಈಗ ತಿರುಗಿ ಬಿದ್ದಿದ್ದಾಳೆ. ಸಹನೆಗೂ ಮಿತಿಯಿಲ್ಲನೆ? ಎಲ್ಲಿಯವರೆಗೆ ಅನುಭವಿಸುವರು ?"

"ಒಳ್ಳೆಯದು ಮಾಡಿದಳು. ಈ ಕೆಲಸ ಆಗಲೆ ಮಾಡಿದ್ದರೆ ಇಷ್ಟು ಹೊತ್ತಿಗೆ ಅಣ್ಣ ದಾರಿಗೆ ಬಂದುಬಿಡುತ್ತಿದ್ದ."

"ಮೂರ್ಖರನ್ನು ದಾರಿಗೆ ತರುವದೊಂದೆ ದಿವಸ ನಾಣಿ. ಅವರಲ್ಲಿ ನಮ್ಮ ಯಾವ ಪ್ರಯೋಗವೂ ಪ್ರಯೋಜನಕ್ಕೆ ಬರುವುದಿಲ್ಲ. ಶಾಂತ ತಿರುಗಿ ಬಿದ್ದಂದಿನಿಂದ ಅವನು ಕೊಡುವ ಯಾತನೆ ಮತ್ತಷ್ಟು ಹೆಚ್ಚಾಗಿದೆ."

"ಅತ್ತಿಗೆಯೇನನ್ನುವಳು ?"

"ನಾನು ಹೇಗೂ ಸಾಯುವುದು ಖಂಡಿತ; ಅವರಿಗೆ ತಕ್ಕ ಬುದ್ಧಿ ನಾನೆ ಕಲಿಸಿ ಸಾಯುವೆನು; ಆ ಬಗ್ಗೆ ಯಾರೂ ತಲೆಹಾಕಿ ನೋಯುವುದು ಬೇಡವೆನ್ನುವಳು."

"ಅವಳ ದೊಡ್ಡ ಗುಣಕ್ಕೆ ತಕ್ಕ ಮಾತಾಡಿರುವಳು. ನಾನೂ ನನ್ನ ಪುರುಷತ್ವಕ್ಕೆ ತಕ್ಕಂತೆ ನಡೆದುಕೊಳ್ಳುವೆನು. ಆಬಗ್ಗೆ ಯಾರು ಅಡ್ಡಿಪಡಿಸಿದರೂ ಕೇಳುವವನಲ್ಲ—" ಎಂದು ಛಟ್ಟನೆ ಮೇಲೆದ್ದನು. ಸಿಟ್ಟು ಬೆಂಕಿಯ ಜ್ವಾಲೆಯಂತೆ ಮೈತುಂಬ ವ್ಯಾಪಿಸಿತ್ತು.

ಭಟ್ಟರೂ ಎದ್ದು ಹೊರಟು ನಿಂತವನನ್ನು ತಡೆದು ಕೇಳಿದರು,

"ಎಲ್ಲಿಗೆ ಹೊರಟೆ ನಾಣಿ! ನೀನಿತ್ತ ಮಾತನ್ನು ಮರೆತು ಬಿಟ್ಟೆ ಯೇನು ?"

"ಮರೆತಿಲ್ಲ, ನೆನಪಿದೆ; ಆದಕ್ಕೆಂದೆ ಹೊರಟದ್ದು. ತಲೆ ಗಟ್ಟಿಯಿರುವವರ ಲಕ್ಷಣ, ಷಂಢರಂತೆ ಕೈಕಟ್ಟಿ ಕುಳಿತುಕೊಳ್ಳುವುದಲ್ಲ; ತಮ್ಮಲ್ಲಿರುವ ಪುರುಷತ್ವ ದಿಂದ ಅನ್ಯಾಯವನ್ನು ಬಗ್ಗು ಬಡೆಯುವುದು."

"ನಿನ್ನ ಪರವಾಗಿ ಆ ಕೆಲಸವನ್ನು ನಾನು ಮಾಡುವೆನು—ನೀನೀ ಸಮಯದಲ್ಲಿ ಅಲ್ಲಿಗೆ ಖಂಡಿತ ತಲೆಯಿಕ್ಕುವುದು ಬೇಡ. ಒಂದು ಹೆಜ್ಜೆ ಮುಂದಿರಿಸಿದರೆ ನನ್ನಾಣೆಯಿದೆ."

"ಇಲ್ಲದ ಕಟ್ಟುಹಾಕಿ ನನ್ನ ತಲೆ ಕೆಡಿಸಬೇಡಿ, ದೂರ ಹೋಗಿ. ನೀವು ನನ್ನ ರಟ್ಟೆಯಲ್ಲಿ ಬಲವಿರುವಾಗ ನನಗೆ ಸಂಬಂಧಪಟ್ಟ ವಿಷಯದಲ್ಲಿ ಯಾರೂ ತಲೆ ಹಾಕುವುದು ಬೇಡ. ಅವನನ್ನು ವಿಚಾರಿಸಲು ನನ್ನಿಂದ ಸಾಧ್ಯವಾಗು ವುದೊ ಇಲ್ಲವೊ ನೋಡುವೆನು. ಬುದ್ಧಿ ತಿಳಿದಂದಿನಿಂದ ಒಂದಲ್ಲ ಒಂದು ವಿಧದಲ್ಲಿ ನನ್ನ ತಲೆ ತಿನ್ನುತ್ತಲೆ ಬರುತ್ತಿರುವನು. ನಡವಳಿಕೆಯನ್ನು ಶುದ್ಧ ವಾಗಿರಿಸಿ ಬಾಳುತ್ತಿರುವ ನನ್ನಲ್ಲಿ ನಿಷ್ಕಾರಣವಾಗಿ ಅಪವಾದವನ್ನು ಹೊರಿಸಿದ ಆ ನೀಚನನ್ನು ನಾನೆಂದೂ ಸುಮ್ಮನೆ ಬಿಡುವುದಿಲ್ಲ. ಇಲ್ಲದ ಹೇಸಿಕೆ ಮಾತಾಡಿ ಅತ್ತಿಗೆಯ ದೇಹವನ್ನು ಚೂರು ಚೂರು ಮಾಡುತ್ತಿರುವ ಆ ಪಾಪಿ ಯನ್ನು ಸೀಳಿ ತೋರಣ ಕಟ್ಟುವೆನು. ನನ್ನದೂ ಒಂದು ಕೈ ನೋಡಲಿ." ಎಂದು ತಡೆಯಲು ಬಂದಭಟ್ಟರನ್ನು ತಳ್ಳಿ ಹೆಜ್ಜೆಯಿಂದ ನೆಲವನ್ನು ನಡುಗಿ ಸುತ್ತಾ ಹೊರ ಅಂಗಳಕ್ಕೆ ಬಂದು, ಜೋಳದ ಕಡ್ಡಿ ಕತ್ತರಿಸಲೆಂದಿರಿಸಿದ್ದ ಮಚ್ಚನ್ನು ಕೈಗೆ ತೆಗೆದುಕೊಂಡು ಕಣ್ಣಲ್ಲಿ ಕಿಡಿ ಹಾರಿಸುತ್ತಾ ಹೊರಟನು.

ಆ ರುದ್ರನೋಟ ಕಂಡು ಭಟ್ಟರ ಎದೆ ನಡುಗಿತು. ಆ ನಡುಕ ವಿದ್ಯು ಚ್ಛಕ್ತಿಯಂತೆ ಮೈಯೆಲ್ಲ ಹರಡಿ ದೇಹದ ಹಿಡಿತ ತಪ್ಪಿಸುತ್ತಿತ್ತು. ಹದ ಮೀರಿ ಹೋಗುತ್ತಿದ್ದ ದೇಹವನ್ನು ಬಲವಂತವಾಗಿ ಹಿಡಿತಕ್ಕೆ ತಂದು ಗಟ್ಟಿ ಮನಸ್ಸು ಮಾಡಿ, ಹೆಗಲಿನಿಂದ ಜಾರಿ ಬೀಳುತ್ತಿದ್ದ ವಲ್ಲಿಯನ್ನು ಲಕ್ಷಕ್ಕೆ ತರದೆ, ಓಡಿ ಹೋಗಿ ನಾಣಿಯ ಕೈ ಜಗ್ಗಿ ಹಿಡಿದು ನಿಲ್ಲಿಸಿದರು. ನಾಣಿ ಶಕ್ತಿಯೆಲ್ಲ ಬಿಟ್ಟು 'ನನ್ನ ಕೈ ಬಿಡಿ—ಕೈ ಬಿಡಿ ಭಟ್ಟರೆ!' ಎಂದು ಕೊಸರಾಡಿದನು. ಅವನು ಎಳೆದಾಡಿದಷ್ಟೂ ಭಟ್ಟರ ಹಿಡಿತ ಬಿಗಿಯಾಗುತಿತ್ತು.

ಹಿತ್ತಿಲಲ್ಲಿದ್ದ ರಂಗಮ್ಮ ದೂರದಿಂದ ಆ ನೋಟವನ್ನು ಕಂಡು ಹೆದರಿ ಓಡಿ ಬಂದರು. ಮಲಗಿದ್ದ ಸರಸುವೂ ಕಂಗಾಲಾಗೆದ್ದು ಬಂದು ಆ ನೋಟ ಕಂಡು ಗಡಗಡ ನಡುಗುತ್ತಾ ನಿಂತಳು. ವಿಷಯವನ್ನು ಗೋಪ್ಯವಾಗಿರಿಸ ಬೇಕೆಂದು ಮಾಡಿದ್ದ ಪ್ರಯತ್ನವೆಲ್ಲ ಒಂದು ಕ್ಷಣದಲ್ಲಿ ಬಯಲಾಯಿತು. ಆ ವರೆಗೆ ನಡೆದ ವಿಷಯವನ್ನೆಲ್ಲ ಸೂಕ್ಷ್ಮವಾಗಿ ರಂಗಮ್ಮನಿಗೆ ತಿಳಿಸಿ ಹೇಳಿದರು ಭಟ್ಟರು,

"ನೀವಾದರೂ ಬುದ್ಧಿ ಹೇಳಿ ರಂಗಮ್ಮ, ನಾಣಿ ದುಡುಕುತ್ತಿರುವನು. ಆಗಬಾರದು ಆಗಿ ಹೋಗಿದೆ. ಯಾರ ಪ್ರಾಣಕ್ಕೂ ಅಪಾಯವಾಗದಂತೆ ಗೋಪಿಗೆ ಬುದ್ಧಿ ಕಲಿಸಿ, ಆ ಕುತ್ತಿನಿಂದ ಶಾಂತಳನ್ನು ಬಿಡುಗಡೆ ಮಾಡುವುದು ಬಿಟ್ಟು, ದುಡುಕಿ ಕೊಲೆಗೀಡಾದರೆ ಯಾವ ಪುರುಷಾರ್ಥ ಸಾಧಿಸಿದಂತಾ ಯಿತು ? "

"ಕೊಲೆಗೀಡಾಗುವುದಲ್ಲ–ಕೊಲೆ ಮಾಡಿ ಬರುವೆನು. ಧರ್ಮಭ್ರಷ್ಟ-ಪತ್ನಿಘಾತುಕ–ಸೋದರದ್ರೋಹಿ-ಮಾತೃವಂಚಕನಾಗಿದ್ದಾನೆ ಆ ನೀಚ. ಅಂಥ ವರಿಂದ ಭೂಮಿ ಮತ್ತಷ್ಟು ಭಾರವಾಗುತ್ತದೆ; ಅದನ್ನು ಕಳೆಯಲೆ ಬೇಕು. ನನ್ನ ಕೈ ಬಿಡಿ, ತಡೆಯಬೇಡಿ" ಎಂದು ಮತ್ತೆ ಕೊಸರಾಡತೊಡಗಿದ.

ಗಾಬರಿಯಿಂದ ಒಣಗಿದ್ದ ತುಟಿಯನ್ನು ಸವರಿಕೊಳ್ಳುತ್ತಾ ರಂಗಮ್ಮ ಹೇಳಿದರು,

"ಚೆನ್ನಾಗಿದೆ ನಾಣಿ ! ನಮ್ಮ ಸಂಸಾರವನ್ನು ಬೇಕೆಂದು ನಾವೆ ಬಯಲಿ ಗಿಡುವುದೆ ? ಅವನೇನೊ ಮೂರ್ಖ–ಹಾಗೆನ್ನುವನೆಂದರೆ ನಿನಗೂ ತಿಳುವಳಿಕೆ ಯಿಲ್ಲವೇನು ? ಕೋಪಕ್ಕೆ ತುತ್ತಾಗಿ ದೊಡ್ಡವರು–ಚಿಕ್ಕವರೆನ್ನುವುದನ್ನೆಲ್ಲಾ ಮರೆತು ಬಿಡುವುದೆ ! ನಡಿ ನಡಿ, ಎಳೆಮಗುವಿನಂತಾಡಬೇಡ."

"ಈವರೆಗೆ ಹಾಗೆ ಹೇಳಿ ಹೇಳಿಯೆ ಅಣ್ಣ ಅಟ್ಟಕ್ಕೇರಿದ್ದು. ಇನ್ನು ನಿಮ್ಮ ಆ ಗೊಡ್ಡು ಮಾತಿಗೆ ಕಾಸಿನ ಬೆಲೆ ಕೊಡುವುದಿಲ್ಲ. ನಾನು ಅವನನ್ನು ಕೊಲೆ ಮಾಡುವುದು ಖಂಡಿತ. ಅವನನ್ನು ಮುಗಿಸಿ ಬಂದ ಹೊರತು ಒಂದು ತೊಟ್ಟು ನೀರು ಮುಟ್ಟುವುದಿಲ್ಲ" ಎಂದು ಭಟ್ಟರ ಹಿಡಿತದಿಂದ ರಟ್ಟೆ ಝಾಡಿಸಿ ಬಿಡಿಸಿಕೊಂಡು ಹೆಜ್ಜೆ ಮುಂದಿಟ್ಟ.

ಭಟ್ಟರು ಬಲವೆಲ್ಲ ಹಾಕಿ ಅವನನ್ನು ಜಗ್ಗಿ ಎಳೆದು ನಿಲ್ಲಿಸಿ ಹೇಳಿದರು,

"ಆ ಮಾತಾಡಲು ನಿನಗೇನೂ ಅಧಿಕಾರವಿಲ್ಲ ನಾಣಿ. ಲಚ್ಚಪ್ಪ ಸಾಯುವಾಗ ನಿಮ್ಮೆಲ್ಲರನ್ನೂ ನನ್ನ ಕೈಮೇಲಿರಿಸಿ ಹೋಗಿದ್ದಾರೆ. ನನ್ನ ದೇಹದಲ್ಲಿ ತೊಟ್ಟು ರಕ್ತವಿರುವ ವರೆಗೆ ನಿಮ್ಮ ನಾಲ್ವರಲ್ಲಿ ಒಬ್ಬರ ತಲೆಕೂದಲೂ ಚುಳ್ಳೆನಿಸಲು ಬಿಡುವುದಿಲ್ಲ. ನಿನಗೆ ಹಾಗೆ ಗೋಪಿಯ ರಕ್ತ ಬೇಕೇ ಬೇಕೆಂಬ ದಾಹವಿದ್ದರೆ ನನ್ನ ತಲೆ ಕಡಿದು ಮುಂದೆ ಹೋಗು" ಎಂದು ಪ್ರಾಣದ ಹಂಗು ತೊರೆದು ಅವನ ಕಾಲಬಳಿ ತಲೆಬಗ್ಗಿಸಿ ಕುಳಿತರು

ಕಲ್ಲಾಗಿದ್ದ ನಾಣಿಯ ಎದೆ ಮೇಣದಂತೆ ಕರಗಿತು. ತಮ್ಮ ಕುಟುಂಬದ ಹಿತಕ್ಕಾಗಿ ಬದುಕನ್ನು ಬಲಿಗೊಟ್ಟು ಹೊರಟ ಭಟ್ಟರನ್ನು ಕಂಡು ಗೌರವದಿಂದ ತಲೆ ಬಗ್ಗಿತು. ಕೈಲಿ ಹಿಡಿದಿದ್ದ ಮಚ್ಚು ನಾಚಿ ಕೆಳಗೆ ಬಿತ್ತು. ಕಣ್ಣು ನೀರಾಡಿತು. ಕಂಬನಿ ಮಿಡಿದು ಭಟ್ಟರ ತೋಳಿಗೆ ಕೈಕೊಟ್ಟು ಎಬ್ಬಿಸುತ್ತಾ ಹೇಳಿದ,

"ನನ್ನ ತಪ್ಪನ್ನು ಕ್ಷಮಿಸಿ ಭಟ್ಟರೆ, ಇನ್ನೆಂದೂ ಅಣ್ಣನ ಗೊಡವೆಗೆ ಹೋಗುವುದಿಲ್ಲ. ಅವನ ಮನೆಯಲ್ಲಿ ಮಾರಣ ಹೋಮ ನಡೆದರೂ ಕಣ್ಣು ಮುಚ್ಚಿ ಕುಳಿತುಕೊಳ್ಳುವೆನು."

"ಹಾಗೆ ಬಾ ದಾರಿಗೆ! ಏನಿದ್ದರೂ ನಾನು ನೋಡಿಕೊಳ್ಳುವೆನು. ಈ ದೇಹದಲ್ಲಿ ಕಡೆಯುಸಿರಿರುವ ವರೆಗೆ ಶಾಂತಳನ್ನು ಕಾಯುವ ಹೊಣೆ ನನ್ನದು. ಹಾಗೆಯೆ ಗೋಪಿಗೆ ಬುದ್ಧಿ ಕಲಿಸುವ ಅಧಿಕಾರವೂ ನನ್ನದೆ ನಾನು ಜೀವಂತ ಬದುಕಿರುವಾಗ ನೀನೇಕೆ ತಲೆ ಕೆಡಿಸಿಕೊಳ್ಳುವೆ? ನನ್ನ ಬಾಳನ್ನು ಬಲಿಗೊಟ್ಟಾದರೂ ಅವರ ಬಾಳಿನಲ್ಲಿ ಶಾಂತಿ ತರಲು ಪ್ರಯತ್ನಿಸುವೆನು. ಇಷ್ಟರ ಮೇಲೆ ನಿನ್ನತ್ತಿಗೆಯ ಹಣೆಯಲ್ಲಿ ಸಾವೇ ಬರೆದಿದ್ದರೆ ಯಾರೂ ಅದನ್ನು ತಪ್ಪಿಸಲು ಸಾಧ್ಯವಿಲ್ಲ."

ಭಟ್ಟರ ಪಶ್ಚಾತಾಪವನ್ನು ಕಂಡು ರಂಗಮ್ಮನ ಮೈ ನವಿರೆದ್ದಿತು. ಕಣ್ಣೂ ಕರಗಿತು. ಕರಗಿದ ಕಣ್ಣಿಗೆ ಸೆರಗಿನ ತುದಿಯಿಂದ ಕಟ್ಟೆ ಹಾಕುತ್ತಾ ಹೇಳಿದರು,

"ಅದು ಹೌದು, ಹಣೆಯಲ್ಲಿ ಬರೆದಿದ್ದನ್ನು ಯಾರೂ ತಪ್ಪಿಸಲು ಸಾಧ್ಯ

ವಿಲ್ಲ. ಏನು ಪಾಪ ಮಾಡಿದ್ದಾಳೊ ಶಾಂತ– ಗೋಪಿಯ ಕೈ ಹಿಡಿದು ಇಲ್ಲದ ದುಃಖಪಡುತ್ತಿರುವಳು. ಇದರಿಂದ ಅವನಿಗಾದರೂ ಸುಖವಿದೆಯೆ ? ಅವ ನಿಗೂ ಕಣ್ಣೀರು ತಪ್ಪಿದ್ದಲ್ಲ. ಎಲ್ಲ ಬಿಟ್ಟು ಅವರ ಸಂಸಾರದಲ್ಲೆಲ್ಲಿ ಬಂತು ಈ ಹಾಳು ಸಂಶಯದ ಶನಿ !"

"ನನಗೂ ಅದೇ ಅರ್ಥವಾಗುವುದಿಲ್ಲ. ಸಂಶಯ ಬರಬೇಕಾದರೂ ಇಬ್ಬರ ಪೈಕಿ ಯಾರಲ್ಲಾದರೂ ಒಬ್ಬರಲ್ಲಿ ದೋಷ ಕಾಣಲೆ ಬೇಕು. ನಾನೂ ಕಣ್ಣಮೇಲೆ ಕಣ್ಣಿಟ್ಟು ನೋಡಿದ್ದೇನೆ. ಹೇಗೆ ನೋಡಿದರೂ ಅಪರಾಧ ಕಾಣು ತ್ತಿಲ್ಲ. ಇಬ್ಬರದೂ ಚಿನ್ನದಂಥ ಗುಣ. ಅವನ ಹೊಲಸು ಅಭಿಪ್ರಾಯವನ್ನು ನಾಲಗೆಯಲ್ಲಿ ತೇಲಿಬಿಟ್ಟು ಆ ಮಕ್ಕಳ ಪರಿಶುದ್ಧ ಗುಣಕ್ಕೆ ಅಪಮಾನಪಡಿಸಲು ನನಗೇ ಹೇಸಿಕೆಯಾಗುತ್ತೆ."

"ಅಷ್ಟಲ್ಲದೆ ಮತ್ತೇನು ? ತಪ್ಪು ತಿಳಿಯಲೂ ಜನಾಜನವಿಲ್ಲವೆ ? ಅವನ ಹುಟ್ಟುಗುಣವೆ ಅಷ್ಟು. ಮೊದಲಿಂದಲೂ ಮನಸ್ಸನ್ನು ಸಂಕುಚಿತ ಮಾಡಿ–ಮಾಡಿ ವಿಶಾಲತೆಯನ್ನು ಕಾಣಲು ಹೆದರುವನು. ಹಾಗಾಗಿ ಶಾಂತಳ ತುಂಬುಗುಣ ಅವನಲ್ಲಿ ಅಪಾರ್ಥ ಕಲ್ಪಿಸಿ ವಿಕಾರವನ್ನು ಕೆರಳಿಸಿದೆ. ಸಂಕುಚಿತ ಸ್ವಭಾವದ ಗಂಡುಸರ ಹಣೆಬರೆಹವೆಲ್ಲ ಅಷ್ಟೆ—ತಾವೂ ಕಣ್ಣೀರು ಕುಡಿದು, ಬಂದ ಹೆಣ್ಣುಮಕ್ಕಳನ್ನೂ ಕಣ್ಣೀರಿನ ಹೊಂಡದಲ್ಲಿ ಹೊತ್ತು ಹಾಕುವರು. ಮುಖ್ಯವಾಗಿ ಅಂಥವರಿಗೆ ಲಗ್ನ ಮಾಡಬಾರದು. ಗೋಪಿಯ ಗುಣ ಗೊತ್ತಿದ್ದೂ ಲಗ್ನ ಮಾಡಿದ್ದು ನನ್ನ ತಪ್ಪು. ಈಗೆಷ್ಟು ಪಶ್ಚಾತ್ತಾಪ ಪಟ್ಟರೆ ತಾನೆ ಪ್ರಯೋಜನವೇನು ?"

ನಾಣಿ ನಡುವೆ ಬಾಯಿ ಹಾಕಿ ಹೇಳಿದ,

"ಆ ಮಾತನ್ನು ನೂರು ಬಾರಿ ಹೇಳು. ಮೂರ್ಖರೊಡನೆ ಮದುವೆ ಮಾಡುವುದಕ್ಕಿಂತ ಆ ಹೆಣ್ಣನ್ನು ಬಾವಿಗೆ ತಳ್ಳುವುದು ಲೇಸು. ಈಗ ಹೊಳೆ ಯುವುದು ಆಗಲೆ ಹೊಳೆದಿದ್ದರೆ ಒಂದು ಹೆಣ್ಣಿನ ಕಷ್ಟವಾದರೂ ತಪ್ಪುತಿತ್ತು."

"ಅದೆಲ್ಲ ಸುಳ್ಳು ನಾಣಿ, ಜೀವನ ನಾವು ತಿಳಿದುಕೊಂಡಂತಿಲ್ಲ. ಅದರ ಆಳ ಸಮುದ್ರಕ್ಕಿಂತ ಹಿರಿದಾದದ್ದು. ಅದರ ಗರ್ಭದಲ್ಲಿರುವ ರಹಸ್ಯವನ್ನು ಯಾರೂ ಭೇದಿಸಲಾರರು. ಸಣ್ಣ ವಯಸ್ಸಿನಲ್ಲಿ ಒಳ್ಳೆತನವಿದ್ದವರು, ಬೆಳೆದ ಮೇಲೆ ಕೇಡಿಗರಾಗಬಹುದು; ಕೇಡಿಗರಾಗಿದ್ದವರು ಸಭ್ಯರಾಗಿ ಬಾಳಬಹುದು,

ಎಲ್ಲ ನಾವು ಮಾಡಿದ ಕರ್ಮದ ಮೇಲೆ ಹೋಗುತ್ತದೆ. ವಿಧಿಯ ಕೈವಾಡದ ಮುಂದೆ ಯಾರದೂ ಏನೂ ನಡೆಯುವುದಿಲ್ಲ. ಹಾಗೆ ಮಾಡಬಹುದಿತ್ತು, ಹೀಗೆ ಮಾಡಿದ್ದರೆ ಸರಿಹೋಗುತ್ತಿತ್ತೆನ್ನುವುದೆಲ್ಲ ನಮ್ಮ ಭ್ರಮೆ."

"ಹಾಗಿದ್ದರೆ ಅಣ್ಣ–ಅತ್ತಿಗೆಯಲ್ಲಿ ನಡೆದುಕೊಳ್ಳುತ್ತಿರುವ ಕ್ರಮವೂ ವಿಧಿಯ ಕೈವಾಡವೆಂದು ನಿಮ್ಮಭಿಪ್ರಾಯವೊ ?"

"ನಿಸ್ಸಂದೇಹವಾಗಿ! ಹಿಂದಿನ ಜನ್ಮದಲ್ಲಿ ಶಾಂತ ಮಾಡಿದ ಕಿಂಚಿತ್ ದುಷ್ಕರ್ಮದಿಂದಲೆ ಗೋಪಿ ಆವಳಿಗೆ ಗಂಡನಾಗದೆ ಯಮನಾಗಿದ್ದಾನೆ. ಆವಳ ಕರ್ಮಕ್ಕೆ ತಕ್ಕಂತೆ ಅವನಲ್ಲಿ ದುಷ್ಟಬುದ್ಧಿ ಬೆಳೆಯುತ್ತ ಹೋಗುತ್ತಿದೆ. ನಮ್ಮ ನಿಗಮಾಗಮಗಳು ಆದಕ್ಕೇ ಹೇಳುವುದು—ಮುಂದೆ ಸುಖ ಪಡೆಯಲು ಇಂದು ಉತ್ತಮರಾಗಿ ಬಾಳಿರೆಂದು! ಆ ಮಾತು ಅಕ್ಷರಶಃ ನಿಜ."

"ನನಗೇನೊ ಆ ಅಭಿಪ್ರಾಯ ಸರಿಕಂಡು ಬರಲಿಲ್ಲ. ನಮ್ಮಣ್ಣ ಹುಟ್ಟು ಮೂರ್ಖ. ಅಂಥವನು ಬಾಳಿನಲ್ಲಿ ವಕ್ರವಾಗಿ ನಡೆಯುವುದು ಸ್ವಾಭಾವಿಕ. ಅದಕ್ಕೆ ಅತ್ತಿಗೆ ಹೇಗೆ ಕಾರಣಳಾಗುವಳು ?"

"ಅವನ ದುಷ್ಟ ಬುದ್ಧಿಗೆ ಕಾರಣಳಾಗದಿದ್ದರೂ ಅವಳು ಮಾಡಿದ ಪಾಪ ಕರ್ಮಕ್ಕೆ ತಕ್ಕಂತೆ ಅಂಥವನ ಕೈಹಿಡಿದಳೆನ್ನುವುದನ್ನಾದರೂ ಒಪ್ಪುವಿಯೊ ಇಲ್ಲವೊ ?"

"ಅದನ್ನು ಒಪ್ಪಲೆ ಬೇಕು. ಏನೊ ಮಹಾಪಾಪ ಮಾಡಿರುವುದ ರಿಂದಲೆ ಇಂಥ ಮೂರ್ಖನ ಕೈಹಿಡಿದಿರುವಳು. ಇಲ್ಲದಿದ್ದರೆ ಅಂಥ ಹೆಣ್ಣಿಗೆ ಇಂಥ ಬಾಳೆಂದರೆ ಆಶ್ಚರ್ಯವೆ ಸರಿ."

"ಕಡೆಗೂ ಕೊಂಕಣ ಸುತ್ತಿ ಮೈಲಾರಕ್ಕೆ ಬಂದ ಹಾಗೆ ಸುತ್ತಿ ಸುತ್ತಿ ನಾ ಹೇಳಿದಲ್ಲಿಗೇ ಬಂದು ಮುಟ್ಟಿದೆ. ಪಾಪ–ಪುಣ್ಯವಿದ್ದ ಮೇಲೆ ತಕ್ಕ ಪ್ರತಿಫಲ ಅನುಭವಿಸುವ ಅವಕಾಶವೂ ಕಾಲಕ್ಕೆ ಹೊಂದಿಕೊಂಡು ಇದ್ದೇ ಇದೆ. ನಾವು ಮಾಡಿದ ಕೆಲಸ–ಕಾರ್ಯಗಳಿಗೆ ಯಜಮಾನ ತಕ್ಕ ಪ್ರತಿಫಲ ಕೊಡುವಂತೆ, ಮಾಡಿದ ಪಾಪ–ಪುಣ್ಯಗಳಿಗೆ ತಕ್ಕ ಪ್ರತಿಫಲ ಕೊಡುವ ಅಧಿಕಾರವನ್ನು 'ವಿಧಿ' ಹೊಂದುತ್ತದೆ. ನಾವು ಮಾತ್ರ ಅದನ್ನು ನಂಬುವುದಿಲ್ಲ."

"ಹೋಗಲಿ, ಈಗ ಬೇಡಿ ಆ ಮಾತು. ನನ್ನ ಅನುಭವಕ್ಕೆ ಬಂದಾಗ

ಒರೆಹಚ್ಚಿ ನೋಡುವೆನು. ಈಗ ನಾನೇನು ಮಾಡಬೇಕೆಂದು ನಿಮ್ಮ ಅಭಿಪ್ರಾಯ ?"

"ಅದೆ ಹೇಳಿದೆನಲ್ಲ--ಇದೆಲ್ಲ ಒಂದು ಹದ್ದುಬಸ್ತಿಗೆ ಬರುವವರೆಗೆ ನಿನ್ನತ್ತಿಗೆಯನ್ನು ಕಡೆಗಣ್ಣಿನಿಂದಲೂ ನೋಡಬಾರದು. ಸ್ವಲ್ಪ ದಿನದ ಮಟ್ಟಿಗೆ ನಿನ್ನತ್ತಿಗೆಯೆನ್ನುವುದನ್ನು ಮರೆತು ಬಿಡು. ಮರೆತೂ ಆ ಬೀದಿಯ ಕಡೆಗೆ ಸುಳಿಯಬೇಡ."

"ಆಗಲಿ--ನಿಮ್ಮಪ್ಪಣೆಯನ್ನು ಶಿರಸಾವಹಿಸಿ ಪಾಲಿಸುವೆನು; ಏನೂ ಸಂಶಯ ಪಡಬೇಡಿ."

"ಲಚ್ಚಪ್ಪನಿಗಿತ್ತ ವಾಗ್ದಾನವನ್ನು ನೀನೊಬ್ಬನಾದರೂ ಪೂರೈಸಿ ಕೊಡು ನಾಣಿ—ಇಲ್ಲದಿದ್ದರೆ ಎಲ್ಲರ ಆತ್ಮವೂ ಅಶಾಂತಿಯ ಅಗ್ನಿಕುಂಡದಲ್ಲಿ ಬೇಯಬೇಕಾಗುತ್ತದೆ."

"ಹೆದರಬೇಡಿ, ಇಂದಿನಿಂದ ನೀವು ಹಾಕಿದ ಗೆರೆ ದಾಟುವುದಿಲ್ಲ. ಮರೆತೂ ಮತ್ತೊಬ್ಬರ ಮನಸ್ಸು ನೋಯಿಸುವುದಿಲ್ಲ."

ಪ್ರೀತಿ ಉಕ್ಕೇರಿ ಮೈತುಂಬಿ ಬಂದ ಭಟ್ಟರು ನಾಣಿಯನ್ನು ಹತ್ತಿರ ಬರಸೆಳೆದು ತಬ್ಬಿ 'ಕೃತಾರ್ಥನಾದೆ ಕಣಪ್ಪ' ಎಂದು ಬಂದ ಕಣ್ಣೀರನ್ನು ಮಿಡಿದು ರಂಗಮ್ಮನ ಕಡೆ ಹೊರಳಿ ಹೇಳಿದರು,

"ಕುಲಕ್ಕೆಲ್ಲ ಇಂಥ ಒಬ್ಬ ಮಗನಿದ್ದರೆ ಸಾಕು ರಂಗಮ್ಮ; ಗೋಪಿಯನ್ನು ಮರೆತು ಬಿಡಿ. ಹಾಗೆಂದು ಅವನನ್ನು ಮನುಷ್ಯನನ್ನಾಗಿ ಮಾಡುವ ಪ್ರಯತ್ನ ನಿಲ್ಲಿಸುವುದಿಲ್ಲ—ಆದಾನೆಂಬ ಭರವಸೆಯಿಡಬೇಡಿ ಅಷ್ಟೆ. ಮುರುಟಿ ಹೋಗುತ್ತಿರುವ ಅವರ ಬದುಕು ಜೀವ ತುಂಬಿ ಕವಲೊಡೆದು ಬೆಳೆದರೆ ನಿಮ್ಮ ಪುಣ್ಯ. ಅವರಿಗಾಗಿ ಭಗವಂತನಲ್ಲಿ ಹರಕೆ ಸಲ್ಲಿಸುತ್ತಿರಿ; ಮುಂದೆ ಅವನಿಚ್ಛೆಯಿದ್ದಂತಾಗಲಿ. ಬನ್ನಿ, ಒಳಗೆ ಹೋಗೋಣ; ಸ್ವಲ್ಪ ಹೊತ್ತು ಕೂತಿದ್ದು ಹೊರಡುವೆನು" ಎಂದು ನಾಣಿಯ ಕೊಠಡಿಯ ಕಡೆ ಹೊರಳಿದರು.

ಎಲ್ಲರೂ ಅವರನ್ನನುಸರಿಸಿದರು. ಭಟ್ಟರೂ, ನಾಣಿ ಹೋಗಿ ಕುರ್ಚಿಯಲ್ಲಿ ಕುಳಿತರು. ಸರಸು ಹಾಸಿಗೆಯಲ್ಲಿ ಕುಳಿತು ಮೈತುಂಬ ಶಾಲು ಹೊದ್ದಳು. ರಂಗಮ್ಮ ಅಲ್ಲೆ ಮೂಲೆಯೊಂದರಲ್ಲಿ ಮೈಮುದುಡಿ ಕುಳಿತರು. ಮೂಗಿಗೆ ನಸ್ಯವೇರಿಸುತ್ತ ಭಟ್ಟರು ಮತ್ತೆ ಮಾತಿಗೆ ಮೊದಲಿಟ್ಟರು,

"ಈ ವಿಷಯ ನಿಮಗೆ ತಿಳಿದಿದೆಯೆಂದು ಮರೆತೂ ಶಾಂತಳ ಮುಂದೆ ತೋರ್ಪಡಿಸಿಕೊಳ್ಳಬೇಡಿ; ಮತ್ತಷ್ಟು ಕೊರಗು ಹಚ್ಚಿ ಕರಗಿಯಾಳು ! ನಿಮಗೆ ತಿಳಿಸಕೂಡದೆಂದು ಮೊನ್ನೆ ಕೂಡ ಕಡ್ಡಾಯ ಮಾಡಿ ಹೇಳಿದಳು. ನಾನೇ–ನಾಣಿ ಅಲ್ಲಿಗೆ ಹೋಗಿ ಬರುವುದರಿಂದ ಅಪಾಯ ಹೆಚ್ಚಬಹುದೆಂದೂಹಿಸಿ—ಅದನ್ನು ತಡೆಯಲು ತಿಳಿಸಿದೆ. ಅವಳಿಗಿನು ಗೊತ್ತಿಲ್ಲ."

"ನನಗೆ ಅದಕ್ಕೇ ಅವಳ ಮೇಲೆ ಸಿಟ್ಟು ಬರುವುದು ನೋಡಿ; ಅವಳನ್ನು ನನ್ನ ಮಗಳಂತೆ ಪ್ರೀತಿಸುತ್ತಿದ್ದರೂ ನನ್ನಲ್ಲಿ ಮುಚ್ಚುಮರೆ ಮಾಡಿದ್ದಾಳೆ."

"ಯಾವ ಮಹಾ ಸಂತೋಷದ ಸುದ್ದಿಯೆಂದು ಹೇಳುವಳು ಹೇಳಿ. ಹೇಳಲು ಬಾಯಾದರೂ ಬರುತ್ತದೆಯೆ ? ಅಥವಾ ನಿಮಗೆ ಕೇಳಲು ಮನಸ್ಸಾದರೂ ಆಗುತ್ತದೊ ? ಎಷ್ಟಾದರೂ ಅವರವರ ಮಕ್ಕಳು ಅವರಿಗೆ ಹೆಚ್ಚು. ಮಾಡಿದ ತಪ್ಪು ಅಪರಾಧವಾಗಿ ಕಾಣುವುದಿಲ್ಲ. ನೀವು ಅಂಥವರಲ್ಲದಿದ್ದರೂ ಬಹಳ ಮಂದಿ ಅದೇ ಗುಂಪಿಗೆ ಸೇರಿದವರಾಗಿದ್ದಾರೆ. ಹಾಗೆ ತಿಳಿದೆ ತಿಳಿಸಿರಲಾರಳು. ನನಗೂ ಈ ವಿಷಯ ಅವಳಿಂದ ತಿಳಿದದ್ದಲ್ಲ—ಸೂರಪ್ಪ ಹೇಳಿದರು. ನನಗೆ ತಿಳಿದಿದೆಯೆನ್ನುವ ಸಂಗತಿ ಅವಳಿಗೆ ಹೊಳೆದ ಮೇಲೆ, ಏನಾದರೂ ಕಷ್ಟ–ಸುಖ ಹೇಳಿಕೊಳ್ಳುವಳು. ಅಲ್ಲಿ ವರೆಗೆ ಅದೂ ಇರಲಿಲ್ಲ."

ರಂಗಮ್ಮನ ತಲೆ, ಗೋಪಿಯ ಒಡೆಯುತ್ತಿರುವ ಬದುಕನ್ನು ಕೂಡಿಸುವ ಹಂಚಿಕೆಯನ್ನು ಹುಡುಕಲು ಹೊರಟಿತು. ಕೊಂಚ ಹೊತ್ತು ಅಲ್ಲಿ ಇಲ್ಲಿ ಸುತ್ತಾಡಿದ ನಂತರ ಯಾವುದೊ ಆಶೆ ಮೂಡಿ ಹೇಳಿದರು,

"ನಾನೊಂದು ಮಾತು ಗೋಪಿಗ್ಯಾಕೆ ಬುದ್ಧಿ ಹೇಳಿ ನೋಡಬಾರದು ? ಎಷ್ಟಾದರೂ ಅವನು ನನ್ನ ಮಗನಲ್ಲವೆ ? ಒಂದಲ್ಲ ಒಂದು ಸಲ ನನ್ನ ಮಾತು ಅವನ ಮನಸ್ಸಿಗೆ ಬರದಿರುತ್ತದೆಯೆ ?"

"ಈಗ ಬೇಡಿ, ಇನ್ನು ಸ್ವಲ್ಪ ದಿನ ಹೋಗಲಿ; ಯಾವುದೂ ನಾನು ಹೇಳುವೆನು. ಶಾಂತಳಿಗೆ ಒಳ್ಳೆಯದಾಗಲೆಂದು ನೀವು ಹೇಳುವುದು. ಗ್ರಹಚಾರ ತಪ್ಪಿ, ಅದರಿಂದ ಅವಳಿಗೇ ಮತ್ತಷ್ಟು ತೊಂದರೆಯಾದರೇನು ಮಾಡುವಿರಿ ?"

"ಅದೂ ಹೌದು, ಅವನನ್ನು ನೆಚ್ಚುವುದೆ ಕಷ್ಟ."

"ಸರಸೂಗೆ ಬಳೆ ತೊಡಿಸಿಯಾಯಿತೇನು ?"

ತುಟಿಯ ಮೇಲೆ ಹುಸಿನಗೆ ತೇಲಿಬಿಟ್ಟು, ಕೆಣಕು ನೋಟದಿಂದ ಸರಸುವನ್ನು ತಿವಿಯುತ್ತಾ, ರಂಗಮ್ಮ ಉತ್ತರ ಕೊಡುವ ಮೊದಲೆ ತಾನೇ ಹೇಳಿಬಿಟ್ಟ ನಾಣಿ,

"ಈಗ ಒಂದು ವಾರವಾಯಿತಷ್ಟೆ—ತೌರಿನಿಂದ ಆ ಶಾಸ್ತ್ರ ಮುಗಿಸಿಕೊಂಡು ಬಂದು !"

"ಥೂ—ನಿಮಗಂತೂ ಮಾನ ಮರ್ಯಾದೆ ಒಂದೂ ಇಲ್ಲ" ಎಂದು ಹುಸಿ ಮುನಿಸಿನಿಂದಲೆ ಹೇಳಿ, ನಾಚಿಕೆಯಿಂದ ಕೆಂಪು ಬಳಿದ ಮುಖವನ್ನು ಭಟ್ಟರಿಗೆ ತೋರಿಸಲು ಅಸಹ್ಯವಾಗಿ ಸರಸು ಒಳಗೆದ್ದು ನಡೆದಳು.

"ಏನಯ್ಯ, ಅವಳನ್ನು ನಾಚುವಂತೆ ಮಾಡಿಬಿಟ್ಟೆಯಲ್ಲಯ್ಯಾ !"

"ಏನು ಮಾಡಲಿ ಹೇಳಿ, ಎಲ್ಲ ನೀವು ಹೇಳಿಕೊಟ್ಟದ್ದು " ಎಂದು ಹಲ್ಲು ಬಿಟ್ಟ.

ಹಲ್ಲಿನ ಪ್ರದರ್ಶನದಲ್ಲಿ ಭಟ್ಟರೂ ಸ್ಪರ್ಧಿಸಿದರು. ರಂಗಮ್ಮ ಮಾತ್ರ ತಮ್ಮ ನಗೆಯನ್ನು ತೋರಿಸಿಕೊಳ್ಳಲಿಲ್ಲ. ಮಾತಿಗೆ ಮುಕ್ತಾಯ ಹಾಕಲು ಭಟ್ಟರೆಂದರು—

"ಸಂಜೆ ಶಾಂತಳ ಮನೆಗೆ ಹೋಗಿ ಬನ್ನಿ—ಸ್ವಲ್ಪ ಮನಸ್ಸಿಗೆ ನೆಮ್ಮದಿ ಬರಲಿ."

"ಆಗಲಿ ಹೋಗುವೆನು. ನಾನು ಹೋಗದೆ ತುಂಬಾ ದಿನವಾಯಿತು. ನಾನಿದ್ದರೆ ತನ್ನ ಹೆಂಡತಿಗೆ ಕಿರುಕುಳ ಕೊಡಲಾಗುವುದಿಲ್ಲವೆಂದೊ ಏನೊ, ಹೋದಾಗಲೆಲ್ಲ ಕಾರಣವಿಲ್ಲದೆ ಕವಕ್ಕನೆ ಏನಾದರಂದು ಮನಸ್ಸು ನೋಯಿಸಿಬಿಡುವನು. ಈಚೀಚೆಗೆ ನನಗೆ ಹೋಗಬೇಕೆನಿಸುವುದೆ ಇಲ್ಲ."

"ಹಾಗೆ ಮಾಡಿದರೆ ಹೇಗೆ ? ಅವನ ಮಾತನ್ನು ಲಕ್ಷ್ಯ ಮಾಡದಿದ್ದರೆ ಸರಿ. ಅವನೆಷ್ಟಾದರೂ ಗಂಡುಸು, ಅವನಿಗ್ಯಾರೂ ಬೇಡ. ಹಾಗೆಂದು ಶಾಂತಳನ್ನು ಬಿಟ್ಟುಕೊಡುವುದು ಸರಿಯಲ್ಲ."

"ಏನು ಬಿಟ್ಟುಕೊಡುವುದೊ, ಏನು ಕಟ್ಟಿಕೊಳ್ಳುವುದೊ; ನನಗಂತೂ ದಿಕ್ಕೇ ತೋಚದಂತಾಗಿದೆ, ಕಡೆಗೂ ಗೋಪಿಯ ಸಂಸಾರ ಏನಾಗುವುದೊ?" ನಿಟ್ಟುಸಿರಿಟ್ಟು ಹೇಳಿದರು ರಂಗಮ್ಮ.

"ಏನೂ ಹೆದರಬೇಡಿ, ಭಗವಂತ ಒಳ್ಳೆಯದು ಮಾಡುವನು" ಎಂದು ಕುಳಿತಲ್ಲಿಂದ ಎದ್ದರು.

ನಾಣಿಯೂ ಎದ್ದು ನಿಂತನು.

"ಇದೇನು ಎದ್ದೇ ಬಿಟ್ಟಿರಲ್ಲಾ, ಕೂತುಕೊಳ್ಳಿ. ನಾಣಿ, ಅವರಿಗೊಂದು ಲೋಟ ಬಿಸಿಬಿಸಿ ಕಾಫಿ ಮಾಡಿ ತಂದುಕೊಡು, ನೋಡೋಣ."

"ಬೇಡಿ ಬೇಡಿ, ಊಟದ ಹೊತ್ತಿನಲ್ಲಿ ಎಂಥ ಕಾಫಿ!"

"ನಮ್ಮ ನಾಣಿ ಕೈಯ ಕಾಫಿ ಸ್ವಲ್ಪ ರುಚಿ ನೋಡಿ" ಎಂದು ಮಗನ ಕಡೆ ನೋಡಿ ನಕ್ಕರು.

"ನಾನು ಮಾಡಿದ ಕಾಫಿ ಕುಡಿಯಬೇಕಾದರೆ ಹೊಟ್ಟೆ ತೊಳೆದು ಬರ ಬೇಕು ಭಟ್ಟರೆ!" ಎಂದು ನಗುತ್ತಾ ಅಡಿಗೆಮನೆಗೆ ಹೊರಳಿದನು.

"ಹಾಗೇನು? ಹಾಗಾದರೆ ಕುಡಿದೇ ಹೋಗುವೆನು! ಆ ಅಮೃತ ವನ್ನು ಯಾಕೆ ಬಿಡಬೇಕು?" ಎಂದು ಹುಸಿ ನಗುತ್ತಾ ಭಟ್ಟರೂ ಅವನನ್ನು ಹಿಂಬಾಲಿಸಿದರು.

## ೧೮

ಕೂಸಿನ ರೂಪೊಡೆದು ಕಣ್ಣಿಗೆ ಕಟ್ಟಿದ ಮೊದಲ ದಿನ ಶಾಂತ ಏನಾಗು ವುದೆಂದು ಊಹಿಸಿದ್ದಳೊ ಅದು ಇಂದು ಸತ್ಯವಾಗಿ ಪರಿಣಮಿಸಿ ಜೀವವನ್ನು ಕಡಿದು ತಿನ್ನುತ್ತಿದೆ. ತಂದೆಯ ಅನುಭವದ ಅಮೃತ ಬೋಧನೆಯಿಂದ, ಮುರುಟುತ್ತಿದ್ದ ಬದುಕಿನಲ್ಲಿ ಮತ್ತೆ ಆಸಕ್ತಿ ಮೊಳೆತು, ಮನಸ್ಸಿನಲ್ಲಿ ನಕ್ಷೆ ಹಾಕಿ ಕೊಂಡಿದ್ದ ಭವಿಷ್ಯದ ಬಾಳಿನ ಗುಡಿ ಸುಂದರ ರೂಪೊಡೆದು ಬೆಳಗಲು— ತಾನೆಣಿಸಿದ ಉತ್ತಮ ಸಾಮಗ್ರಿ ದೊರೆಯದೆ ಇದ್ದ ಕಲ್ಲು—ಇಟ್ಟಿಗೆಗಳು ಕೂಡ ಕಳಚಿ ಬೀಳುವಂತಾಗಿದೆ.

ತೊಟ್ಟಿಲ ಮಗುವನ್ನು ಕರೆದುಕೊಂಡು ಬಂದಂದಿನಿಂದ ಗೋಪಿ ಕೊಡುವ ಯಾತನೆ, ತೋರಿಸುವ ತಿರಸ್ಕಾರಗಳಿಗೆ ಆಳತೆಯಿಲ್ಲ. ಮಕ್ಕಳಾದ

ಮೇಲೆ ಎಂಥವರೂ ದಾರಿಗೆ ಬರುವರೆನ್ನುವ ಲೋಕರೂಢಿಯ ಮಾತು ತನ್ನಲ್ಲಿ ಸುಳ್ಳಾಗಿದೆ. ಕುರೂಪು ಮಕ್ಕಳಾದರೆ, ಸೌಂದರ್ಯದಲ್ಲಿ ಅಭಿರುಚಿಯಿದ್ದವರು ಮಮತೆಯ ಮಧು ಉಕ್ಕಿಸದೆ ಮುಖದಿರುವಿ ಹೋಗುವರೆಂದು ಕೆಲವರು ಹೇಳುವರು. ಇದು ಹಾಗೂ ಇಲ್ಲ. ಗುಲಾಬಿ ರಂಗಿನಿಂದ ಕಣ್ಣು ಮೂಗು ತಿದ್ದಿಟ್ಟಂತಿದ್ದು, ಪೂರ್ಣಚಂದ್ರನಂತೆ ನೋಡಲು ಬಲು ಮುದ್ದಾಗಿದೆ. ಚುರುಕು ಚಟುವಟಿಕೆ ಯಾವುವರಲ್ಲೂ ಕಡಿಮೆಯಿಲ್ಲ. ಆದರೂ ಚಿಕ್ಕಪ್ಪನ ರೂಪು ಹೊತ್ತ ಅಪರಾಧಕ್ಕಾಗಿ ತಂದೆಯ ಪ್ರೀತಿಯಿಂದ ವಂಚಿತವಾಗಿದೆ. ಮಗುವನ್ನು ತನ್ನ ಕಣ್ಣಿಂದ ನೋಡಬಾರದೆಂದೊ ಅಥವಾ ತನ್ನ ಬಗ್ಗೆ ಅದರಲ್ಲಿ ಪ್ರೀತಿವಿಶ್ವಾಸ ಬೆಳೆಯಗೊಡಬಾರದೆಂದೊ ಗೋಪಿ ಮೂರು ಹೊತ್ತೂ ಹೊರಗೇ ಇರುವನು. ಮನೆಯಲ್ಲಿದ್ದರೂ ಮಗುವನ್ನು ಹತ್ತಿರ ಸೇರಿಸುವುದಿಲ್ಲ. ಅವನು ಮನೆಯಲ್ಲಿದ್ದಾಗ ಎಚ್ಚರವಾಗಿದ್ದರೆ, ಮಗು ತಂದೆಯೆನ್ನುವ ಮಮತೆಯಿಂದ ಬಾಯಿತುಂಬ 'ಅಪ್ಪ' ಎಂದು ಕರೆದು, ಮನಮೋಹಕವಾದ ತನ್ನ ಪುಟ್ಟ ಹೆಜ್ಜೆಯಿಂದ ದೇಹವನ್ನು ಬಳ್ಳಿಯಂತೆ ಬಳುಕಿಸುತ್ತಾ ಅವನ ಬಳಿ ಹೋಗಿ ನಿಲ್ಲುತ್ತದೆ. ಆಗ ಅದಕ್ಕೆ ಸಿಕ್ಕುವುದು ಅಮೌಲ್ಯ ಪ್ರೀತಿಯ ಸಿಹಿ ಮಿಠಾಯಿಯಲ್ಲ; ದ್ವೇಷ ತುಂಬಿದ ಸಿಟ್ಟಿನ ಸುಡುವ ಪೆಟ್ಟು. ಒಮ್ಮೆ ತಂದೆಯ ಬಳಿ ಹೋದ ಮಗು ನಾಲ್ಕಾರು ದಿನ ಅವನ ಹತ್ತಿರ ಸಹ ಸುಳಿಯುತ್ತಿರಲಿಲ್ಲ. ಅಷ್ಟು ದಿನ ನೆನಪಿರುವಷ್ಟು ನೋವುಂಟು ಮಾಡುತ್ತಿದ್ದ.

ಒಂದು ದಿನ ಗೋಪಿ ಮಧ್ಯಾಹ್ನ ಊಟವಾದ ನಂತರ ಮಲಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ. ಆ ದಿನ ಶಾಂತ ಬಿಸಿಲ ಕಾಲವಾದ್ದರಿಂದ ಗೋಪಿಯ ಬಯಕೆಯಂತೆ ಊಟಕ್ಕೆ ಮೊಸರೊಡೆ ಮಾಡಿದ್ದಳು. ಅವಳೆಲ್ಲೋ ಕೆಲಸದಲ್ಲಿದ್ದಾಗ ಮಗು ಪಾತ್ರೆಗೆ ಕೈಹಾಕಿ ಮೈ ಕೈತುಂಬ ಮೊಸರು ಮಾಡಿಕೊಂಡು ಒಂದು ವಡೆ ಕೈಲಿ ಹಿಡಿದು ಕಚ್ಚಿ ತಿನ್ನುತ್ತಾ ತಂದೆಯ ಬಳಿಗೆ ಬೀಳುತ್ತೇಳುತ್ತ. ಹೋಗಿ 'ಅಪ್ಪ–ಅಪ್ಪಚ್ಚಿ' ಎಂದು ಮುದ್ದಾಗಿ ಅಂದು ಒಂದು ಚೂರು ಮುರಿದು ಪ್ರೀತಿಯಿಂದ ತಂದೆಯ ತುಟಿಯ ಮೇಲಿಟ್ಟಿತು.

ಆಗ ತಾನೆ ನಿದ್ದೆಗೆ ಮೈಗೊಟ್ಟಿದ್ದ ಗೋಪಿ ಕಚಕುಳಿಯಾದಂತಾಗಿ ಥಟ್ಟನೆ ಕಣ್ಣು ತೆರೆದು, ತುಟಿಯ ಮೇಲಿದ್ದ ವಡೆಯ ಚೂರನ್ನು ಅಂಗೈಯಿಂದ ಝಾಡಿಸಿ ನೂಕಿ ಕಣ್ಣಿನಿಂದ ಕಿಡಿಯೆಸೆಯುತ್ತಾ, 'ಅನಿಷ್ಟ ಮಗುವೆ, ಸಾಯಿ

ಆಚೆ' ಎಂದು ಹಿಡಿದು ದೂರ ದಬ್ಬಿದನು.

ಮಗು ಚಿಟ್ಟನೆ ಚೀರಿ ದಡಬಡ ಎದ್ದು ತಾಯ ಬಳಿ ಓಡಿತು. ತಂದೆಯ ಬಳಿ ಹೋದ ತಪ್ಪಿಗೆ ಪೆಟ್ಟು ತಿಂದು ಬಂದಿರಬಹುದೆಂದೂಹಿಸಿ, ಶಾಂತ ಅತ್ತು ಓಡಿ ಬಂದ ಮಗುವನ್ನು ಎತ್ತಿ ಎದೆಗವುಚಿ ತಬ್ಬಿ ಹಿಡಿದು ತೊಟ್ಟಿಲಿನಂತೆ ವೈಯಾಡಿಸಿ ತೂಗಾಡುತ್ತಾ "ಅಳಬೇಡ ಮರಿ, ನಿಂಗೆ ತುಂಬ ಅಪ್ಪಚ್ಚಿ ಕೊತ್ತೀನಿ ಆಮೇಲೆ. ಕಮ್ಮುಚ್ಕೋಮ್ಮಾ!" ಎಂದು ಅತ್ತಿತ್ತ ಸ್ವಲ್ಪಹೊತ್ತು ಓಡಾಡಿ ಸಮಾಧಾನ ಮಾಡಿದಳು. ತನ್ನ ಹೊಟ್ಟೆಯಲ್ಲಿ ಹುಟ್ಟಿ ಮಗು ಪಡುವ ಯಾತನೆ ಕಂಡು ಅವಳೆದೆ ಕರಗಿ ನೀರಾಯಿತು. ಒಷ್ಟು ಹೊತ್ತು ಕಣ್ಣಲ್ಲಿ ತುಂಬಿದ ನೀರನ್ನು ಹೊರಚೆಲ್ಲಿ ಎದೆ ಹಗುರ ಮಾಡಿಕೊಂಡಳು. ಮಗುವೂ ತನ್ನ ದುಃಖವನ್ನು ಮರೆತು ಕಣ್ಣುಮುಚ್ಚಿತ್ತು. ಮಲಗಿದ ಮಗು ವನ್ನು ಹಾಸಿಗೆಯಲ್ಲಿ ಮಲಗಿಸಿ ಕೆಲಸಕ್ಕೆ ನಡೆದಳು.

ಆ ಬಾರಿ ಮಗುವಿನ ಮನಸ್ಸಿನ ಮೇಲೆ ಗೋಪಿಯ ನಡತೆ ಯಾವ ಪರಿ ಣಾಮವುಂಟು ಮಾಡಿತೋ—ಚೀರಿ ಬಂದು ಮಲಗಿದ ಮಗು ಬಹಳ ದಿನದ ವರೆಗೆ ಮೇಲೇಳಲೆ ಇಲ್ಲ. ಹೆದರಿದ ಹೊಡೆತಕ್ಕೊ ಏನೊ—'ಟೈಫಾಯಿಡ್ ಜ್ವರ'ಕ್ಕೆ ಮೈಕೊಟ್ಟಿತು. ಪ್ರತಿ ದಿನ ಜ್ವರ ನೂರಮೂರು ನೂರನಾಲ್ಕರ ವರೆಗೆ ಏರುತಿತ್ತು. ಮಗು ಸಾಯುತ್ತ ಬಿದ್ದಿದ್ದರೂ ಗೋಪಿ ಕಡೆಗಣ್ಣಿಂದ ಕೂಡ ನೋಡುತ್ತಿರಲಿಲ್ಲ. ಭಟ್ಟರೆ ಅದರ ಔಷಧ ಪಥ್ಯ ನೋಡಿಕೊಳ್ಳುತ್ತಿದ್ದರು. ಸರದಿಯ ಪ್ರಕಾರ ಶಾಂತ ಭಟ್ಟರಿಬ್ಬರೂ ಅನ್ನ ನಿದ್ರೆ ಬಿಟ್ಟು, ಗೋಪಿಯಿಂದ ಆಗಾಗ್ಗೆ ಸಿಡಿಮದ್ದಿನಂತೆ ಹಾರುತ್ತಿದ್ದ ಅವಾಚ್ಯ ಶಬ್ದಗಳನ್ನು ಅರಗಿಸಿಕೊಂಡು ಜೀವ ಕಾದಂತೆ ಕಾದು ಮಗುವನ್ನುಳಿಸಿಕೊಂಡರು.

ಆ ಸಂದರ್ಭದಲ್ಲಿ ಭಟ್ಟರಿಗೂ ಗೋಪಿಯ ಕರಾಳ ಮುಖದ ಪರಿಚಯ ವಾಯಿತು. ಜ್ವರ ಇಳಿತಾಯದ ಸಮಯದಲ್ಲಿ ಒಂದು ರಾತ್ರೆ ಮಗುವಿಗೆ ಇದ್ದಕಿದ್ದಂತೆ ಹೆಚ್ಚಾಯಿತು. ಮೈ ಕೈ ತಣ್ಣಗಾಗುತ್ತ ಬಂದು ಅತ್ತಿತ್ತ ಚಲಿ ಸದೆ ಕೊರಡಿನಂತೆ ಮಲಗಿತು. ಶಾಂತ ಗಾಬರಿಯಿಂದ ಕಣ್ಣೀರು ಕರೆಯುತ್ತ ಕುಳಿತಳು.

ಭಟ್ಟರಿಗೆ ದಿಕ್ಕು ತೋಚದಂತಾಯ್ತಿತು. ಸ್ವಲ್ಪ ಹೊತ್ತು ಅವರೂ ಗಾಬ ರಿಗೆ ತಲೆಕೊಟ್ಟರು. ಸುಮ್ಮನೆ ತಲೆ ಹಿಡಿದು ಕುಳಿತರೆ ಮಗು ಉಳಿಯಲಾರ

ದೆಂದು ಥಟ್ಟನೆ ಪೇಳಿದ್ದರು. ವೈದ್ಯರನ್ನು ಕರೆತರಲೆ ಬೇಕಾಯಿತು. ಮಗು ವಿಗೆ ನೇಮಕ ಮಾಡಿದ್ದವರು ಬಹಳ ದೂರದಲ್ಲಿದ್ದರು. ಅವರನ್ನು ಕರೆತರು ವಷ್ಟು ವ್ಯವಧಾನವಿರಲಿಲ್ಲ. ಮನೆಗೆ ಹತ್ತಿರದಲ್ಲಿದ್ದ ವೈದ್ಯರು ಗಳಗ್ರಾಹಿಗಳು. ಕೈ ಬೆಚ್ಚಗೆ ಮಾಡಿದ ಹೊರತು ಹೆಜ್ಜೆ ಮುಂದಿಡುತ್ತಿರಲಿಲ್ಲ. ಬೇರೆ ವೈದ್ಯರಿಂದ ಔಷಧ ಕೊಡಿಸುತ್ತಿದ್ದುದರಿಂದ ಅವರು ಕೇಳಿದಷ್ಟು ಹಣ ಕೊಟ್ಟು ಕರೆದು ಕೊಂಡು ಬರಬೇಕಿತ್ತು. ಆಗ ತಮ್ಮ ಹತ್ತಿರ ಹಣವಿರಲಿಲ್ಲ. ಶಾಂತ ಮೊದಲೆ ಬರಿಗೈಯವಳು. ಥಟ್ಟನೆ ಏನೊ ಯೋಚನೆ ಹೊಳೆದು, ಮಗುವಿನ ಅಂಗೈ-ಅಂಗಾಲಿಗೆ ಬ್ರಾಂದಿ ತಿಕ್ಕುತ್ತಿರುವಂತೆ ಶಾಂತಳಿಗೆ ಹೇಳಿ, ಗೋಪಿಯ ಕೊಠಡಿಯ ಬಳಿ ಹೋಗಿ ಕದ ತಟ್ಟಿದರು. ಗೊಣಗುಟ್ಟುತ್ತಲೆ ಬಂದು ಕದ ತೆರೆದ.

ಭಟ್ಟರು ಗಾಬರಿ ತುಂಬಿದ ಧ್ವನಿಯಲ್ಲಿ ಕೇಳಿದರು,

"ಹದಿನೈದು ರೂಪಾಯಿದ್ದರೆ ಕೊಟ್ಟರು ಪುಣ್ಯಾತ್ಮ—ನಾಳೆ-ನಾಡಿದ್ದ ರಲ್ಲಿ ತಲಪಿಸುವೆನು. ಮಗು ಮೈಕೈಯೆಲ್ಲ ತಣ್ಣಗಾಗಿ ಹೋಗಿದೆ. ಕೂಡಲೆ ಚಿಕಿತ್ಸೆ ಕೊಡಿಸದಿದ್ದರೆ ಬದುಕಲಾರದು."

ಉದಾಸೀನನಾಗಿ ಹೇಳಿದ ಗೋಪಿ,

"ಅಷ್ಟೆ ತಾನೆ! ನಾನೂ ಅದರ ಸಾವನ್ನೇ ಹಾರೈಸುತ್ತಿರುವೆನು. ಸಾಯಲಿ ಬಿಡಿ, ಪೀಡೆ ಕಳೆಯಿತು!"

"ನೀನು ತಂದೆಯಾಗಿ ಆ ಮಾತಾಡಬಾರದು ಗೋಪಿ."

ಮಾತುಮಾತಿಗೂ ತಿರಸ್ಕಾರ ತುಂಬಿ ಹೇಳಿದ,

"ತಂದೆಯಾಗಿದ್ದರೆ ಆಡುತ್ತಿರಲಿಲ್ಲ, ತಂದೆಯಲ್ಲವಲ್ಲ! ತಂದೆಯಾದವನನ್ನೆ ಹೋಗಿ ಕೇಳಿ."

ಭಟ್ಟರಿಗೆ ಸಿಟ್ಟಿನಿಂದ ಮೈ ಉರಿದೆದ್ದಿತು. ಅದನ್ನು ಹಿಡಿತಕ್ಕೆ ತಂದು ಧ್ವನಿಯಲ್ಲಿ ಅಸಹ್ಯತೆ ತುಂಬಿ ತಲೆ ಕೊಡವುತ್ತ ಹೇಳಿದರು,

"ಥೂ ಥೂ—ನಿನ್ನ ಹೊಲಸು ಮಾತು ಕೇಳಲು ನನಗೇ ಅಸಹ್ಯವಾಗುತ್ತೆ; ಆವಳು ಹೇಗೆ ತಡೆದಾಳು! ಶಾಂತ ಚಿನ್ನದಂಥ ಹುಡುಗಿ. ಪರಿಶುದ್ಧಳಾಗಿದ್ದಾಳೆ. ಆವಳಲ್ಲಿ ಯಾವ ದೋಷವೂ ಕಂಡುಬರುವುದಿಲ್ಲ. ಅಜ್ಞಾನಕ್ಕೆ ಬಲಿಯಾಗಿ ಸಂಸಾರವನ್ನು ಸ್ಮಶಾನ ಮಾಡಿಕೊಳ್ಳಬೇಡ. ಅದರಿಂದ ನಿನಗೂ ಸುಖವಿಲ್ಲ, ಆವಳಿಗೂ ಸುಖವಿಲ್ಲ."

"ನಾನೂ ಅನ್ನ ತಿನ್ನುವೆನು—ನನಗೂ ಬುದ್ಧಿಯಿದೆ ತಲೆಯಲ್ಲಿ; ನೀವು ಯಾರೂ ಹೇಳಿಕೊಡುವುದು ಬೇಡ. ಸುಮ್ಮನೆ ನನ್ನ ತಲೆ ಕೆಣಕಿ ರೇಗಿಸ ಬೇಡಿ, ಹೋಗಿ" ಎಂದು ಥಟ್ಟನೆ ಕದವಿಕ್ಕಿಕೊಂಡನು.

ಭಟ್ಟರು ಸಪ್ಪೆ ಮುಖ ಹಾಕಿ ಮಗುವಿನ ಬಳಿ ಬಂದರು. ಅವರ ತಲೆ ಗೋಪಿಯ ಮಾತಿನಿಂದ ಬಿಸಿಯಾಗಿದ್ದರೂ, ಮುಟ್ಟಿನೋಡಿಕೊಳ್ಳುವ ಸಮಯ ವಲ್ಲವೆಂದು ಅದನ್ನಲ್ಲೆ ತಣಿಸಿ, ತಲೆಗೆ ತಕ್ಕ ಪರಿಹಾರ ಸೂಚಿಸುವ ಕೆಲಸವಿತ್ತು ಕೂಡಲೆ ಪ್ರತಿಫಲ ಹೊಂದಿದರು. ಅಳುತ್ತ ಕೂತಿದ್ದ ಶಾಂತಳನ್ನು ಸಮಾ ಧಾನ ಮಾಡಿ ತಮ್ಮ ಕೈಲಿದ್ದ ಉಂಗುರವನ್ನು ತೆಗೆದು ಅವಳ ಕೈಗಿತ್ತು ನೆರೆ ಹೊರೆಯಲ್ಲಿ ಯಾರಲ್ಲಾದರೂ ಅಡುವಿಟ್ಟು ಹಣ ತರುವಂತೆ ಹೇಳಿದರು.

ಶಾಂತ ಎಂದೂ ಆ ಕೆಲಸ ಮಾಡಿದವಳಲ್ಲ. ಆದರೂ ಆ ಪರಿಸ್ಥಿತಿಗೆ ತಲೆ ಬಗ್ಗಿ, ಧೈರ್ಯ ಮಾಡಿ ಹೋಗಿ ಪಕ್ಕದ ಮನೆ ಶಾರದಮ್ಮನನ್ನು ಕೇಳಿ ದಳು. ಗಂಟೆ ರಾತ್ರೆ ಹತ್ತರ ಸಮಯವಾಗಿತ್ತು. ಮಲಗಲು ಹವಣಿಸುತ್ತಿ ದ್ದರು. ಆದರೂ ಬೇಸರಿಸದೆ, ಸರಿರಾತ್ರೆಯಲ್ಲಿ ಹಾಗೆಲ್ಲ ವ್ಯವಹಾರ ಮಾಡ ಬಾರದೆಂದು ಅತ್ತೆ ಗೊಣಗುಟ್ಟುತ್ತಿದ್ದರೂ ಲಕ್ಷ್ಯ ಮಾಡದೆ, ಉಂಗುರ ತೆಗೆದು ಕೊಂಡು ಇಪ್ಪತ್ತು ರೂಪಾಯಿಗಳನ್ನು ಶಾಂತಳ ಕೈಗಿತ್ತರು.

ಹೋದ ಜೀವ ಬಂದಂತಾಗಿ ಓಡಿ ಬಂದು ಭಟ್ಟರ ಕೈಲಿ ಹಣವಿತ್ತಳು. ಅವರ ಮುಖದಲ್ಲೂ ಗೆಲುವು ಮೂಡಿತು. ತಾವು ಬರುವವರೆಗೆ ಮಗುವಿನ ಮೈಗೆ ಥಂಡಿಯಾಗದಂತೆ ನೋಡಿಕೊಳ್ಳಬೇಕೆಂದು ಹೇಳಿ, ವೈದ್ಯರ ಬಳಿ ಹಾರಿ ಅವರನ್ನು ಕರೆದುಕೊಂಡು ಬಂದು ತಕ್ಕ ಚಿಕಿತ್ಸೆ ಮಾಡಿಸಿದರು. ಅಂತೂ ಇಂತೂ ಮಗು ಉಳಿದುಕೊಂಡಿತು. ಅನಂತರ ದಿನೇ ದಿನೇ ಚೇತರಿಸಿ ಕೊಳ್ಳುತ್ತ ಬಂತು.

ಶಾಂತಳಿಗೆ ಭಟ್ಟರು ಸಮೀಪದಲ್ಲಿ ಪರಿಚಯವಾದದ್ದು ಆಗಲೆ. ಅವರ ತುಂಬು ಹೃದಯದ ಹಿತನುಡಿ, ತ್ಯಾಗಮಯ ಪ್ರೇಮ, ಸೇವಾನಿಷ್ಠೆ, ಸಹಾಯ, ಸಹಕಾರಗಳ ನೆನಪು ಅವಳ ಹೃದಯದಲ್ಲಿ ಅಚ್ಚಳಿಯದೆ ನಿಂತಿತು. ತಂದೆಗಿಂತ ಹಿರಿದಾದ ಸ್ಥಾನ ಗಳಿಸಿದರು. ತನ್ನ ಜೀವದ ರಕ್ಷಣೆಗಾಗಿ, ಬಾಳಕುಡಿಯ ಯಶೋಭಿವೃದ್ಧಿಗಾಗಿ ಪರೋಕ್ಷವಾಗಿಯೂ, ಅಪರೋಕ್ಷವಾಗಿಯೂ ತಮ್ಮನ್ನು

ಬಲಿಗೊಟ್ಟು ಮಾಡುತ್ತಿರುವ ಅವರ ಒಂದೊಂದು ಮಹದುಪಕಾರವೂ ಕಣ್ಣ ಮುಂದೆ ಕಟ್ಟಿ ನಿಂತು, ದಿನಕ್ಕೆ ಹಲವಾರು ಬಾರಿ ಆವಳಿಂದ ಗೌರವದ ಕಾಣಿಕೆ ಸಲ್ಲಿಸಿಕೊಳ್ಳುತಿತ್ತು.

ಗೋಪಿ ಮಗುವನ್ನು ಎರಡು ವರ್ಷ ತುಂಬುವವರೆಗೂ ಕಣ್ಣೆತ್ತಿ ಗಮನ ವಿಟ್ಟು ನೋಡಿರಲಿಲ್ಲ. ಶಾಂತಳ ಮೇಲಿನ ದ್ವೇಷದಿಂದ ಅದನ್ನು ಕಂಡು ಕಿಡಿ ಕಾರುತ್ತಿದ್ದ. ಮಗುವಿನ ದುರದೃಷ್ಟದಿಂದ ಒಂದು ದಿನದ ಆಳವಾದ ನೋಟ ಅವನಲ್ಲಿ ಅವರ ಬಗ್ಗೆ ಹುಟ್ಟಿದ ದ್ವೇಷವನ್ನು ಸ್ಥಿರಗೊಳಿಸಿತು. ಮಗು ನಾಣಿಯ ಪ್ರತಿ ಅಚ್ಚೆಂದು ಅವನ ನರನರವೂ ಸಿಡಿದು ಹೇಳಿತು. ಅಲ್ಲಿಯ ವರೆಗೆ ಶಾಂತಳ ನಡವಳಿಕೆಯ ಬಗ್ಗೆ ಒಂದು ನಿರ್ಧಾರಕ್ಕೆ ಬರದೆ ಹಾಗೂ ಹೀಗೂ ತೂಗಾಡುತ್ತಿದ್ದ. ಆ ಮಗು ಅವನ ಮನಸ್ಸಿನ ತೂಗಾಟವನ್ನು ನಿಲ್ಲಿಸಿ ಒಂದು ನೆಲೆ ಮುಟ್ಟಿಸಿತು. ದ್ವೇಷದ ವಿಷ ಮೈತುಂಬ ಹರಡಿತು. ಇದ್ದ ಸ್ವಲ್ಪ ಕರುಣೆಯೂ ಅವಕ್ಕೆ ಬಲಿಯಾಯಿತು. ಅವನು ಪಾಷಾಣ ಮೂರ್ತಿಯಾದ. ಸ್ವಭಾವದಲ್ಲಿ ಕ್ರೂರತನ ತುಂಬಿ ನಿಂತಿತು. ಆದಷ್ಟು ಬೇಗ ಮಗುವಿನ ಸಮೇತ ಶಾಂತಳನ್ನು ಬಲಿ ತೆಗೆದುಕೊಳ್ಳಲು ಅವನೆದೆ ಕಾತರಿಸಿತು. ಕೈಯಾರೆ ಕೊಲೆ ಮಾಡುವ ಭಾವನೆಯೂ ಒಮ್ಮೆ ಹೃದಯದಂಚಿನಲ್ಲಿ ಹಣಿಕಿನೋಡಿತು. ಹಾಗೆ ಮಾಡಿದಲ್ಲಿ ನಾಣಿ–ಭಟ್ಟರಿಬ್ಬರೂ ಸೇರಿ ತನ್ನನ್ನು ಶಾಸನದ ಕಲ್ಲುಗಾಣ ಕ್ಕೊಡ್ಡಬಹುದೆಂಬ ಭೀತಿ ಬಂದು ಆ ಹಂಚಿಕೆಯನ್ನಲ್ಲೇ ಕೈಬಿಟ್ಟನು. ಅವನಿಗುಳಿ ದುದೀಗ ಒಂದೇ ದಾರಿ—ಯಾರಿಗೂ ತಿಳಿಯದಂತೆ ನಿತ ದ ವ್ಯವಹಾರದಲ್ಲಿ ಚೂರುಚೂರು ಮಾಡಿ ಸಾಯಿಸುವುದು. ಅದೇ ಸರಿಯೆಂದು ಅವನ ಮನ ಸ್ಸೊತ್ತಿ ಹೇಳಿತು. ಆದಕ್ಕೆ ತಕ್ಕ ಕ್ರಮವನ್ನು ಕೂಡಲೆ ಕೈಗೊಂಡ.

ಅವಳ ಜೀವ ಪೋಷಣೆಗೆ ಸಾಕಾದಷ್ಟು ಆಹಾರ ಹೋಗಗೊಡುತ್ತಿರ ಲಿಲ್ಲ. ಊಟ–ತಿಂಡಿ ಹೊತ್ತಿಗೆ ಎದುರಿಗೆ ತಾನಿದ್ದು ತನ್ನಳತೆಗಿಂತ ಹೆಚ್ಚಾಗಿ ಕಂಡ ಅವಳ ದೇಹಪೋಷಣೆಗೆ ತಕ್ಕಷ್ಟಿದ್ದ ಆಹಾರದಲ್ಲಿ ಕೈಹಾಕಿ ಅರ್ಧ ತೆಗೆದು ತಿಪ್ಪೆಗೆಸೆಯುತ್ತಿದ್ದನು. ಕ್ರಮೇಣ ತನಗೂ ಶಾಂತಳ ಅರೆಹೊಟ್ಟೆಗೂ, ಮಗು ವಿಗೂ ದಿನಕ್ಕೆಷ್ಟು ಬೇಕೊ ಅಷ್ಟೇ ಆಹಾರ ಸಾಮಗ್ರಿಯನ್ನು ಅಂದಾಜುಮಾಡಿ

ತಂದು ಹಾಕುತಿದ್ದ. ಅವನು ಮನೆಯಲ್ಲಿಲ್ಲದ ಸಮಯದಲ್ಲಿ ಮಾಡಿ ತಿನ್ನು ವಂತೆಯೂ ಇರಲಿಲ್ಲ.

ಮೊದಮೊದಲು ಮೌನವಾಗಿ ನಡೆಸುತ್ತಿದ್ದ ಗೋಪಿಯ ಈ ನಡವಳಿಕೆ ಅವಳಿಗರ್ಥವಾಗಿರಲಿಲ್ಲ. ಹಸಿವಿನ ಬಾಧೆ ತಡೆಯದೆ ಅವನಿಲ್ಲದ ಹೊತ್ತಿನಲ್ಲಿ ಏನಾದರೂ ಮಾಡಿ ತಿನ್ನುತ್ತಿದ್ದಳು. ಮನೆಗೆ ಸಾಮಾನು ತರುವುದನ್ನು ಕಡಿಮೆ ಮಾಡಿದ ಮೇಲೆ ಕಾರಣವನ್ನೂಹಿಸಿ ಅನ್ನದ ಮೇಲೆ ತಿರಸ್ಕಾರ ತಾಳಿದಳು. ಮಗುವಿಲ್ಲದೆ ಇದ್ದಿದ್ದರೆ ಅದನ್ನು ಮುಟ್ಟುತ್ತಿರಲಿಲ್ಲ. ಮಗುವಿಗಾಗಿ ಆ ಅರೆಗೂಳನ್ನು, ತಿರಸ್ಕಾರದ ನಂಜನ್ನು ತಿನ್ನಲಾರದೆ ತಿನ್ನುತ್ತಿದ್ದಳು. ಗಂಡನ ಆ ಅಸಹ್ಯ ನಡವಳಿಕೆಯನ್ನು ಯಾರಿಗೂ ತಿಳಿಪಡಿಸಬಾರದೆಂದು ಮೈಯೆಲ್ಲ ಕಣ್ಣಾಗಿ ನಡೆದುಕೊಳ್ಳುತಿದ್ದಳು. ಅಷ್ಟು ನಿಗದಿಂದಿದ್ದರೂ ಸುದೈವದಿಂದಲೊ ದುರ್ದೈವದಿಂದಲೊ ಭಟ್ಟರ ಕಣ್ಣಿಗೆ ಬಿದ್ದೇ ಬಿದ್ದಿತು—ಆ ಅಸಭ್ಯ ನಡವಳಿಕೆ.

ಒಂದು ದಿನ ಹಗಲಿನಲ್ಲಿ ಮಗು ಮೈಗೆ ಸ್ವಸ್ಥವಿಲ್ಲದೆ ಅನ್ನ ಮುಟ್ಟಲಿಲ್ಲ. ಅದನ್ನು ನಿಗವಿರಿಸಿ ನೋಡಿದ್ದ ಗೋಪಿ, ಶಾಂತ ಊಟಕ್ಕೆ ಕೂರುವ ವೇಳೆಗೆ ಹಾಜರಾದ. ಅವನೆಣಿಸಿದಂತೆ ಆ ಅನ್ನವನ್ನು ಶಾಂತ ತನ್ನೆಲೆಗೆ ಹಾಕಿಕೊಂಡಿದ್ದಳು. ಊಟಕ್ಕೆ ಕೂತಾಗಿತ್ತು. ಅದನ್ನು ಕಂಡು ಗೋಪಿ ನೆಪಕ್ಕೆ ಅನ್ನದ ಪಾತ್ರೆ ತಿರುಗಿಸಿ ನೋಡಿ ಸಿಡಿದೆದ್ದು ಕೇಳಿದ.

"ಮಗುವಿನ ಅನ್ನವೇನಾಯಿತು ?"

"ನಾನು ಹಾಕಿಕೊಂಡೆ—ಯಾಕೆ ?"

ಧ್ವನಿಯಲ್ಲಿ ಅವನ ಧೂರ್ತ ದರ್ಪವನ್ನೆದುರಿಸುವ ಧೈರ್ಯವಿತ್ತು.

"ಅರೆಗೂಳಿನಲ್ಲಿರಿಸಿದ್ದರೂ ಇಷ್ಟು ಕೊಬ್ಬೆ ನಿನಗೆ ? ಯಾಕಂತೆ ಯಾಕೆ ! ಮೊದಲು ಮಗುವಿನ ಪಾಲಿನ ಅನ್ನವನ್ನು ಬೀದಿಗೆಸಿ."

"ನಾನು ಎಸೆಯುವುದಿಲ್ಲ. ನೀವು ಹೇಳಿ ಹೇಳಿದಂತೆ ಕುಣಿದೇ ನನ್ನ ಬಾಳು ಇಷ್ಟು ಹೀನಾಯವಾಯಿತು. ಈ ಅರೆಗೂಳು ತಿಂದು ನಿಮ್ಮ ಚಾಕರಿ ಹೇಗೆ ಮಾಡಲಿ ?"

"ಕಟ್ಟಿಕೊಂಡ ಪ್ರಾಯಶ್ಚಿತ್ತಕ್ಕೆ ಹಾಗೇ ಮಾಡಬೇಕು. ಇನ್ನು ಮುಂದೆ ನಿನಗಷ್ಟೂ ಕೂಳು ಕೊಡುವ್ವದಿಲ್ಲ. ನಿನ್ನ ಕೊಬ್ಬು ಇಳಿಸುವೆನು."

"ನನ್ನ ಕೊಬ್ಬು ನೀವಲ್ಲ ಇಳಿಸುವುದು, ದೇವರು ಇಳಿಸಬೇಕು. ನಾಲಗೆ ಸಿಕ್ಕಿದೆಡೆ ತಿರುಗುವುದೆಂದು ಹುಚ್ಚಾಪಟ್ಟೆ ಆಡಬೇಡಿ."

ಕೈ ಮುಷ್ಟಿ ಹಿಡಿದು ಓಡುಕಚ್ಚೆ ಹತ್ತಿರ ಹಾರಿ ಹೇಳಿದ,

"ಏಯ್, ಹಲ್ಲು ಹಿಡಿದು ಮಾತಾಡು ರಂಡೆ! ನಾಲಗೆ ಸಡಿಲ ಬಿಟ್ಟೆ ಯೆಂದರೆ ನಿನ್ನ ಗತಿಗಾಣಿಸಿ ಬಿಡುವೆನು."

"ಬಾಯಿ ಮಾತಾಗಲಿಲ್ಲ, ಗತಿಗಾಣಿಸಲು! ಏನೊ, ಗಂಡನಲ್ಲಾ ಎನ್ನುವ ಗೌರವವಿತ್ತು ಬಾಯಿ ಮುಚ್ಚಿಕೊಂಡಿದ್ದರೆ ನಿಮ್ಮದು ಅತಿಯಾಯಿತು. ನಾನೂ ನೋಡುವಷ್ಟು ದಿನ ನೋಡುವೆನು. ಸಹಿಸಲಾಗದಿದ್ದ ಕಾಲಕ್ಕೆ ಗೊತ್ತೇ ಇದೆ."

ಧ್ವನಿಯಲ್ಲಿ ತಿರಸ್ಕಾರ ತುಂಬಿ ಹೇಳಿದ,

"ಏನು ಮಾಡೀಯೆ ನೀನು ಮಹಾ—ಸಾಯುವೆ ಅಷ್ಟೆ ತಾನೆ !"

"ಸುಮ್ಮನೆ ಸಾಯುವುದಿಲ್ಲ; ಆದರಿಂದ ನೀವು ಕಡೆವರೆಗೂ ಕಣ್ಣೀರಿಡು ವಂತೆ ಮಾಡಿ ಸಾಯುವೆನು."

ಅವಳ ಧ್ವನಿಯಲ್ಲೂ ತಿರಸ್ಕಾರ ತುಂಬಿತ್ತು.

ರೋಷವೆದ್ದ ಹುಲಿಯಂತೆ ಅವಳ ಮೇಲೆ ಹಾರಿ, ಜುಟ್ಟು ಹಿಡಿದು ನೆತ್ತಿ ಕಿತು ಹೋಗುವಂತೆ ಗುಂಜಾಡಿ,

"ರಂಡೆ! ಗಂಡ ಎನ್ನುವ ಗೌರವ ಕೂಡ ಇಲ್ಲದೆ ಬಾಯಿಗೆ ಬಂದಂತೆ ಬೊಗಳುವೆಯಾ, ನಿನಗೆಷ್ಟು ಬಾಯಿ ? ಸಾಯಿ ನೀನು ! ಅನ್ನ ತಿನ್ನದಿದ್ದರೆ ಪೀಡೆ ಕಳೆಯಿತು— ನಾಯಿ !" ಎಂದು ಅಬ್ಬರಿಸುತ್ತಾ ಕಾಲಿನಿಂದ ಅನ್ನ ತಿಕ್ಕಿ, ಎಲೆಯನ್ನೆತ್ತಿ ದೂರ ಬಿಸಾಡಿದ.

ಆ ವೇಳೆಗೆ ಭಟ್ಟರು ಬಂದು ಅಡಿಗೆ ಮನೆಯ ಬಾಗಿಲಲ್ಲಿ ನಿಂತಿದ್ದರು. ಆ ಕ್ರೂರ ಕೃತ್ಯ ಅವರ ಕಣ್ಣನ್ನು ಕುಕ್ಕಿತು. ಅದನ್ನು ಕಾಣಲಾರದೆ ಒಂದು ಗಳಿಗೆ ಕಣ್ಣು ಮುಚ್ಚಿದ್ದು, ಅನಂತರ ಮರುಕ ತುಂಬಿದ ಧ್ವನಿಯಲ್ಲಿ ಹೇಳಿ ದ್ದರು,

"ಯಾಕೆ ಗೋಪಿ, ಬರಬರುತ್ತಾ ನೀನಿಷ್ಟು ಅನಾಗರಿಕನಾಗುತ್ತಿರುವೆ ! ಪಾಪ-ಪುಣ್ಯಕ್ಕಾದರೂ ಮನುಷ್ಯ ಅಂಜಬೇಡವೆ ? ಚೆನ್ನಾಗಿದೆ ! ನಾನೆಲ್ಲೂ ನೋಡಲಿಲ್ಲ—ಇಂಥಾ ಅಸಭ್ಯ ನಡವಳಿಕೆಯನ್ನ !"

ಆ ಮಾತು ಗೋಪಿಯ ಮನಸ್ಸನ್ನು ಕರಗಿಸುವುದಕ್ಕೆ ಬದಲು ಮತ್ತಷ್ಟು ರೇಗಿಸಿತು. ಸಿಟ್ಟಿಗೆದ್ದು ಹೇಳಿದ,

"ಭಟ್ಟರೆ, ನಿಮಗೆಷ್ಟು ಬಾರಿ ಹೇಳಿಲ್ಲ—ನಮ್ಮ ಗಂಡ-ಹೆಂಡಿರ ನಡುವೆ ಬರಕೂಡದೆಂದು ! ಇನ್ನೊಂದು ಬಾರಿ ನಮ್ಮ ಸುದ್ದಿಗೆ ಬಂದರೆ ಖಂಡಿತ ಸುಮ್ಮನೆ ಬಿಡುವುದಿಲ್ಲ."

ಆ ಮಾತಿಗೆ ಭಟ್ಟರು ಹೆದರಿ ಹಿಂಜರಿಯಲಿಲ್ಲ. ಕೆರಳಿ ಅವನೆದೆ ಹಿಡಿದು ಜಗ್ಗಿಸಿದರು—

"ನೀನು ನನ್ನ ಪ್ರಾಣ ತೆಗೆದರು ಸರಿಯೆ, ನಿನ್ನ ನೀಚ ಕೃತ್ಯದ ನಡುವೆ ಅಡ್ಡಬರುವುದು ಬಿಡುವುದಿಲ್ಲ. ಲಚ್ಚಪ್ಪ ಸಾಯುವಾಗ ನಿಮ್ಮ ಹೊಣೆಯನ್ನು ನನ್ನ ಹೆಗಲಿಗೆ ಹಾಕಿ ಹೋಗಿದ್ದಾರೆ. ನಿನ್ನಲ್ಲಿ ಮನುಷ್ಯತ್ವ ತಲೆಯೆತ್ತುವ ವರೆಗೆ ನಿಮ್ಮ ಸಂಸಾರದಿಂದ ಹೆಜ್ಜೆ ಕಿತ್ತು ಹೊರಗಿಡುವುದಿಲ್ಲ. ಹೆದರಿಸಿದರೆ ಹೆದರುವೆನೆಂಬ ಅಭಿಪ್ರಾಯವಿದ್ದರೆ, ಕಳೆದುಬಿಡು."

"ನಿಮಗೆಲ್ಲ ವಿಚಾರಿಸಿಕೊಳ್ಳುವೆನು—ಇರಲಿ. ಎಲ್ಲ ಒಂದೆ ಗುಂಪಿಗೆ ಸೇರಿದ್ದೀರಿ. ನೋಡೋಣ, ನನಗೂ ಬುದ್ಧಿ ಕಲಿಸಲು ತಾಕತ್ತಿದೆಯೊ ಇಲ್ಲವೊ ಎಂದು !" ಎಂದು ಆವರೆಗೆ ಸ್ವಲ್ಪವಾದರೂ ಭಟ್ಟರಲ್ಲಿ ಗೌರವ ಕಾದಿರಿಸಿಕೊಂಡ ಗೋಪಿ ತಗ್ಗಿ, ಹೆಚ್ಚು ಮಾತಿಗವಕಾಶ ಕೊಡದೆ ಸರ್ರನೆ ಅಲ್ಲಿಂದ ಹೊರಗೆ ಜಾರಿದನು.

ಭಟ್ಟರು ಕಣ್ಣೀರಿನ ಕಾಲುವೆ ಹರಿಸುತ್ತ ಕುಳಿತಿದ್ದ ಶಾಂತಳನ್ನು ಸಂತೈಸಿ ಬಲವಂತವಾಗಿ ಅವಳ ಬಾಯಿ ಬಿಡಿಸಿ ಎಲ್ಲ ವಿಷಯವನ್ನೂ ತಿಳಿದುಕೊಂಡರು. ಆಗ ಏನೂ ಮಾತಾಡಲಿಲ್ಲ. ಅನಂತರದ ಅವರ ನಡವಳಿಕೆ ಆಶ್ಚರ್ಯ ತಂದಿತು.

ಅದೇ ದಿನ ಸಂಜೆ ಐದು ಗಂಟೆಗೆ ಭಟ್ಟರು ಕೈಲೊಂದು ಗಂಟು ಹಿಡಿದು ಬಂದರು. ಶಾಂತ ಮಗುವನ್ನು ಮಡಲಿನಲ್ಲಿ ಮಲಗಿಸಿಕೊಂಡು ಅಕ್ಕಿ ಆರಿಸುತ್ತಾ ಕುಳಿತಿದ್ದಳು. ಅವರು ಬಂದವರೆ ಆ ಮಾತು ಈ ಮಾತಾಡಿ ಗಂಟನ್ನು ಮೆಲ್ಲನೆ ಅವಳ ಬಳಿ ಸರಿಸಿದರು. ಶಾಂತಳಿಗೆ ಮಧ್ಯಾಹ್ನದ ಘಟನೆ ನೆನಪಿಗೆ ಬಂದು, ಗಂಟಿನಲ್ಲಿರುವುದನ್ನು ಸುಮಾರಾಗಿ ಅಂದಾಜು ಮಾಡಿಕೊಂಡಳು. ಆದರೂ ಅದನ್ನು ತೋರ್ಪಡಿಸಿಕೊಳ್ಳದೆ ಕೇಳಿದಳು,

"ಅದೇನು ಮಾವ ?"

ಭಟ್ಟರನ್ನು 'ಮಾವ' ಎಂದು ಕರೆಯುವ ವಾಡಿಕೆಯಿತ್ತು ಅವಳಲ್ಲಿ.

"ಬಿಚ್ಚಿ ನೋಡು, ಏನೆಂದು ಗೊತ್ತಾಗುವುದು !"

"ನೀವು ಹೇಳಿದರೆ ಸಾಕು, ಹೇಳಿ."

"ನಾನು ಹೇಳುವುದಿಲ್ಲ, ನೀನೇ ತೆಗೆದು ನೋಡಬೇಕು."

"ಅಬ್ಬಾ ನಿಮ್ಮ ಹಠವೆ" ಎಂದು ಹುಸಿ ನಗೆಯಿಂದ ಗಂಟು ಬಿಚ್ಚಿ ನೋಡಿ, ಬಗೆಬಗೆಯ ಹಣ್ಣುಹಂಪಲು ಕಂಡು ಅಚ್ಚರಿಗೊಂಡು ಉದಾಸೀನ ದಿಂದ ಹೇಳಿದಳು,

"ಇದೆಲ್ಲ ಯಾಕೆ ಹೇಳಿ—ಇಂದೊ ನಾಳೆಯೊ ಸಾಯುವ ದೇಹಕ್ಕೆ !"

"ಛೆ ಛೆ, ಅಪಶಬ್ದ ವಾಡಬೇಡ. ಬದುಕಿನಲ್ಲಿ ಭರವಸೆಯಿಡು. ಭಗವಂತ ಒಳ್ಳೆಯದು ಮಾಡಿಯಾನು "

ಕಣ್ಣಲ್ಲಿ ನೀರು ತುಂಬಿ ಹೇಳಿದಳು,

"ನನ್ನ ಭರವಸೆ ಎಂದೋ ಮಣ್ಣಾಗಿ ಹೋಯಿತು. ನನಗೆ ಯಾರೂ ಒಳ್ಳೆಯದು ಮಾಡುವುದಿಲ್ಲ."

"ಕಷ್ಟ ಕಾಲದಲ್ಲಿ ಹಾಗೆನ್ನಿಸುವುದು ಸ್ವಾಭಾವಿಕ. ನಮ್ಮ ಪ್ರಾರಬ್ಧ ಕರ್ಮ ಬಲವಾಗಿ ಬಿಗಿದಿರುವಾಗ ಯಾರು ಮಾಡಿದ್ದೂ ಪ್ರಯೋಜನಕ್ಕೆ ಬರುವು ದಿಲ್ಲ. ಅದಕ್ಕೂ ಕಾಲ ಬರಬೇಕು. ಎಲ್ಲ ಒಳ್ಳೆಯದಾಗುತ್ತೆ, ಹೆದರಬೇಡ. ತಿನ್ನು—ಇನ್ನು ಮೇಲೆ ಪ್ರತಿದಿನದ ಸಂಜೆಯ ಆಹಾರ ನನ್ನದು. ನಾನು ತಂದುಕೊಟ್ಟಿದ್ದನ್ನು ಬಾಯಿ ಮುಚ್ಚಿ ತಿನ್ನಬೇಕು. ತುಟಿ ಎರಡು ಮಾಡ ಬಾರದು."

"ಒಂದು ದಿನ ಎರಡು ದಿನವಾದರೆ ಸರಿ, ಸಾಯುವ ವರೆಗೂ ಇರುವ ಗೋಳಿಗೆ ನೀವ್ಯಾಕೆ ತಲೆ ಕೊಡುವಿರಿ ?"

ತುಂಬಿದ ಹೃದಯದಿಂದ ಹೇಳಿದರು,

"ನೀನು ನನ್ನ ಮಗಳಾದ್ದರಿಂದ."

ಶಾಂತಳಿಗೆ ಆಶ್ಚರ್ಯವಾಯಿತು. ಭಟ್ಟರು ತನ್ನನ್ನು ಮಗಳೆಂದೇ ಸಂಬೋಧಿಸಿದ್ದರು. ಕಣ್ಣಲ್ಲಿ, ಕರ್ಮದಲ್ಲಿ, ನಾಲಗೆಯಲ್ಲಿ, ಹೃದಯದಲ್ಲಿ

ಅದೇ ತಂದೆಯ ಮಮತೆ ತುಂಬಿ ನಿಂತಿತ್ತು. ಕಣ್ಣಲ್ಲಿ ಗೌರವ ತುಂಬಿ ಒಂದು ಕ್ಷಣ ಅವರನ್ನೇ ದಿಟ್ಟಿಸಿ ನೋಡುತ್ತ ಕುಳಿತು ಬಿಟ್ಟಳು. ಭಟ್ಟರು ಅವಳ ಭಾವಾರ್ಥವನ್ನರಿತು ಆ ನೋಟ ತುಂಬಿ ಹೇಳಿದರು,

"ಹೌದು ಶಾಂತ, ನೀನು ನನ್ನ ಮಗಳೆ. ನನ್ನನ್ನು ನೆಚ್ಚಿಯೇ ಸೂರಪ್ಪ ನಿನ್ನನ್ನು ಗೋಪಿಗೆ ಕೊಟ್ಟು ಲಗ್ನ ಮಾಡಿದರು. ನಾನು ಮಾತ್ರ ಹೊತ್ತ ಜವಾಬ್ದಾರಿಯನ್ನು ನಡೆಸಲಾರದ ಹೇಡಿಯಾಗಿರುವೆನು. ಯಾರ ಪಾಪ ರೋಷದಿಂದಲೊ ಮಾಡಿದ ಪ್ರಯತ್ನವೆಲ್ಲ ನೀರಿನಲ್ಲಿ ಹೋಮ ಮಾಡಿದಂತಾ ಗುತ್ತಿದೆ. ಆದರೂ ನನ್ನಾಶೆ ಬಿಟ್ಟಿಲ್ಲ—ಬಿಡುವುದೂ ಇಲ್ಲ. ನಿನ್ನ ಸಂಸಾರ ಸರಿಹೊಂದಿಸಲು ನನ್ನ ಬಲಿಯನ್ನು ಬೇಕಾದರೂ ಕೊಡಲು ಸಿದ್ಧನಿರುವೆನು. ಅದನ್ನು ಸರಿಪಡಿಸಿದ ಹೊರತು ನನ್ನಾತ್ಮಕ್ಕೂ ಶಾಂತಿಯಿಲ್ಲ. ನೀನು ಮಾತ್ರ ಇನ್ನು ಮೇಲೆ ಹೊಟ್ಟೆ ದಂಡಿಸಬಾರದು. ಕೈಕಾಲು ಗಟ್ಟಿಯಿದ್ದರೆ ಏನಾದರೂ ಮಾಡಬಹುದು."

"ಅದು ಹೌದು, ಕೈಕಾಲು ಗಟ್ಟಿಯಿದ್ದರೆ ಏನಾದರೂ ಮಾಡಬಹುದು. ಆಗಲಿ, ನಿಮ್ಮ ಮಾತನ್ನು ಮೀರಿ ನಾನೆಂದೂ ನಡೆಯುವುದಿಲ್ಲ. ತಿನ್ನುವೆನು. ನಿಮಗಾಗಿಯಾದರೂ ತಿನ್ನುವೆನು."

"ನನಗಾಗಿಯಲ್ಲ, ಮಗುವಿಗಾಗೆಂದು ಹೇಳು. ಆ ಮಗುವಿನ ಹಣೆ ಯಲ್ಲಿ ಭಾಗ್ಯ ಬರೆದಿದ್ದರೆ ನಿನ್ನ ಬಾಳಿನಲ್ಲಿ ಶಾಂತಿ ಬರುವುದೆಷ್ಟರಲ್ಲಿದೆ! ನಾನಿನ್ನು ಬರಲೆ?"

"ಒಳ್ಳೆಯದು!"

ಎರಡು ಹೆಜ್ಜೆ ಮುಂದಿರಿಸಿದವರು ಮತ್ತೆ ನಿಂತು ಹೇಳಿದರು,

"ಆ ಅನ್ನಕಂಟಕನಿಗೆ ಮಾತ್ರ ಗೊತ್ತಾಗಬಾರದು—ಕಡೆಗೆ ನಾನಿಲ್ಲಿ ಬರುವುದನ್ನೂ ತಡೆದು ಬಿಟ್ಟಾನು!"

"ಏನೂ ಗಾಬರಿ ಬೀಳಬೇಡಿ, ಗೊತ್ತಾಗಗೊಡುವುದಿಲ್ಲ. ನಿಶ್ಚಿಂತೆಯಿಂದ ಹೋಗಿಬನ್ನಿ."

ಭಟ್ಟರು ನೆಮ್ಮದಿಯಿಂದ ಕಾಲು ಕಿತ್ತರು. ಅಂದಿನಿಂದ ಪ್ರತಿದಿನ ಸಂಜೆ ಗೋಪಿ ಇಲ್ಲದ ವೇಳೆ ನೋಡಿ, ಹಣ್ಣು-ಹಂಪಲು ತಂದು ಎದುರಿಗೆ ಕೊಡುತ್ತು, ತಿನ್ನಲು ತೊಂದರೆ ಮಾಡಿದರೆ ಮಗುವಿಗಂದಂತೆ ಗದ್ದರಿಸಿ ತಿನ್ನಿಸಿ

ಹೋಗುತ್ತಿದ್ದರು. ಅವರ ನೆನವು-ನಂಬಿಕೆ, ಉಪಚಾರ-ಆದರಗಳಿಲ್ಲದಿದ್ದರೆ ಈ ವೇಳೆಗೆ ಅವಳು ಪರಲೋಕಯಾತ್ರೆ ಹಿಡಿದು ಎಷ್ಟೋ ದಿನವಾಗುತಿತ್ತು.

* * * *

ಶಾಂತ ಬದುಕಿನಲ್ಲಿ ಕೆನ್ನಾಲಗೆ ತೆರೆದು ಬರುತ್ತಿದ್ದ ಎಲ್ಲ ಘಟನೆಗಳನ್ನು ಧೈರ್ಯದಿಂದಲೆ ಎದುರಿಸುತ್ತ ಬಂದಳು. ಗೋಪಿ ತನ್ನಿಂದ ತೀರ ದೂರವಾದಾಗ ಮಾತ್ರ ದಿಕ್ಕುಗೆಟ್ಟಳು. ಅವಳಲ್ಲಿ ಆವರೆಗೆ ಆಸೆ-ಭರವಸೆಗಳನ್ನು ತುಂಬಿ ನಿಂತಿದ್ದ ಧೈರ್ಯ ಕುಸಿದು ಬಿತ್ತು. ಎಷ್ಟೇ ಜಗಳ ಕದನವಾದರೂ ಅವನ ಸಂಪರ್ಕ ಸುಖವಿದ್ದಷ್ಟು ದಿನ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಒಂದಲ್ಲ ಒಂದು ದಿನ ಸರಿಹೋದಾನೆಂಬ ದೂರದ ಆಶೆಯೊಂದು ಎಣ್ಣೆ ಕಡಿಮೆಯಾದ ದೀಪದಂತೆ ಮಿಣುಗಾಡುತಿತ್ತು. ಅವನು ತನ್ನಿಂದ ತೀರ ದೂರವಾದಂದಿನಿಂದ ಆ ಆಶಾದೀಪವೂ ಆರಿ ಹೋಯಿತು. ಅವಳಿಗಿನ್ನು ಬದುಕುವ ಆಶೆ ಉಳಿಯಲಿಲ್ಲ. ಸುಖ ತೊರೆದವನು ತನ್ನನ್ನು ಬದುಕಲು ಬಿಡುತ್ತಾನೆಂಬ ಭರವಸೆಯೂ ಬರಲಿಲ್ಲ.' ಆಗ ಮಾತ್ರ ತಗ್ಗಿದಳು. ಜೀವನ ಜೋತು ಬಿದ್ದ ಆ ಸಂಪರ್ಕ ಸುಖವನ್ನು ಬಿಟ್ಟುಕೊಡಲಾರದೆ ಅವನ ಮನಸ್ಸನ್ನೊಲಿಸಲು ಬಹಳ ಪ್ರಯತ್ನಪಟ್ಟಳು. ಪಟ್ಟ ಪ್ರಯತ್ನವೆಲ್ಲ ಹೊಳೆಯಲ್ಲಿ ಹುಳಿ ಕದಡಿದಂತಾಯಿತು. ಕಡೆಗೆ ಅಭಿಮಾನ ಭಂಗವಾದಂತಾಗಿ ಎಲ್ಲ ಮಮತೆಯನ್ನೂ ತೊರೆದು ಕಲ್ಲಾದಳು. ಆವರೆಗೆ ತನ್ನ ಹೃದಯದಲ್ಲಿ ಗೋಪಿಗೆ ಕೊಟ್ಟಿದ್ದ ಸ್ಥಾನವನ್ನು ನಿರ್ದಾಕ್ಷಿಣ್ಯವಾಗಿ ಕಿತ್ತೆಸೆದಳು. ಅಂದಿನಿಂದವನು ಅವಳ ಕಣ್ಣಲ್ಲಿ ಗಂಡನಾಗುಳಿಯದೆ ಯಮದೂತನಾಗಿ ನಿಂತನು. ಅಷ್ಟಾದರೂ ಆಗಾಗ ಅವಳ ಮನಸ್ಸಿನಲ್ಲಿ ಆ ಕೊರಗೆದ್ದು ಕರಗಿಸುತ್ತಿತ್ತು. ಅಗಲಿಕೆಯ ದಿನದ ಅವನ ಆ ಅವಾಚ್ಯ ಶಬ್ದ, ರಾಕ್ಷಸ ನಡವಳಿಕೆ, ಕಣ್ಣ ಮುಂದೆ ಕಟ್ಟಿ ನಿಂತು ಮನಸ್ಸನ್ನು ಮತ್ತೆ ಕಲ್ಲು ಮಾಡುತಿತ್ತು.

ಅಂದಿನ 'ಆ ರಾತ್ರೆ' ಯನ್ನು ನೆನೆಸಿಕೊಂಡರೆ ಮೈ 'ಜುಂ' ಎನ್ನುತಿತ್ತು. ಈಗ ನಾಲ್ಕೈದು ತಿಂಗಳ ಹಿಂದಿನ ಮಾತು. ಎಂದಿನಂತೆ ಕೆಲಸ–ಬೊಗಸೆ ಮುಗಿಸಿಕೊಂಡು ಕೊಠಡಿಗೆ ಹೋಗಿ ಹಾಸಿಗೆ ಹಾಸಿದಳು. ದಿನಪತ್ರಿಕೆ ಓದು

ತ್ತಿದ್ದ ಗೋಪಿ, ಬಟ್ಟೆ ಕೊಡವಿದ್ದ ಶಬ್ದ ಕೇಳಿ ಥಟ್ಟನೆದ್ದು, ಸಿಟ್ಟಿನಿಂದ ಕಟ ಕಟನೆ ಹಲ್ಲು ಕಡಿಯುತ್ತ ಹಾಸಿಗೆಯ ಬಳಿ ಹಾರಿ ಬಂದು ಶಾಂತಳ ಹಾಸಿಗೆ ಯನ್ನೆತ್ತಿ ದೂರವೆಸೆದನು. ಶಾಂತ ಮಾತಾಡದೆ ಎಸೆದ ಹಾಸಿಗೆಯನ್ನು ಕಂಡು ಮತ್ತೆ ಗೋಪಿಯ ಹಾಸಿಗೆಯ ಪಕ್ಕದಲ್ಲಿ ಹಾಸತೊಡಗಿದಳು. ಕೋಪ ದಿಂದ ಬುಸು ಬುಸು ಉಬ್ಬಸ ಬಿಡುತ್ತ ನಿಂತಿದ್ದ ಗೋಪಿ, ಹಾಸುತ್ತಿದ್ದ ಹಾಸಿಗೆ ಯನ್ನು ಪುನಃ ಎಸೆದು ಕೆಂಗಣ್ಣಿನಿಂದ ಅಬ್ಬರಿಸಿ ಅರಚಿದ,

"ಬೇಡ ಶಾಂತ, ಮೊಂಡು ಹಿಡಿದೆಯೆಂದರೆ ಈಗಲೆ ನಿನ್ನ ಕತ್ತು ಹಿಸುಕಿ ಸಾಯಿಸಿ ಬಿಡುವೆನು."

"ನೀವು ಸಾಯಿಸಿದರೂ ಚಿಂತೆಯಿಲ್ಲ, ಈ ಅಧಿಕಾರ ಮಾತ್ರ ನಾನು ಬಿಟ್ಟುಕೊಡುವುದಿಲ್ಲ."

ಚುಚ್ಚಿ ಕೇಳಿದ,

"ಆ ಮಾತಾಡಲು ನಿನಗೆ ಯೋಗ್ಯತೆಯಾದರೂ ಇದೆಯೇನು ?"

"ಇರುವುದರಿಂದಲೆ ಹೇಳಿದ್ದು."

"ಅಬ್ಬಾ ! ಪಾಪ ಮಾಡಿಯೂ ಪವಿತ್ರತೆಯನ್ನು ಕಾದುಕೊಳ್ಳುವ ನಿನ್ನ ದರ್ಪವೆ ! ಇದ್ದರೆ ಹೀಗಿರಬೇಕು. ನಿನ್ನಂಥ ಮೋಸಗಾರ್ತಿಯರನ್ನು ನಾನೆಲ್ಲೂ ನೋಡಿಲ್ಲ."

"ನಿರಪರಾಧಿಯ ಮೇಲೆ ಅಪರಾಧ ಹೇರಿ, ಚಿತ್ರಹಿಂಸೆ ಮಾಡಿ ಕೊಲ್ಲುವ ನಿಮ್ಮಂಥ ಕಟುಕರನ್ನು ನಾನೂ ಎಲ್ಲೂ ನೋಡಿಲ್ಲ."

ಅವಳ ಕೆನ್ನೆಯ ಮೇಲೆ ಛಟ್ಟನೆ ಹೊಡೆದು ಹೇಳಿದ,

"ಪಿಶಾಚಿ, ಮುಚ್ಚು ಬಾಯಿ ! ಅಪರಾಧ ಮಾಡಿ ಇಲ್ಲವೆಂದು ಸಾಧಿಸಿ ನನ್ನನ್ನೆ ದೂರುವೆಯಾ ?"

"ಅಪರಾಧ ಮಾಡಿರುವೆನೆಂದು ನಿಮಗೆ ಹೇಳಿದವರು ಯಾರು ? ಕಣ್ಣಿಂದ ನೋಡಿರುವಿರೇನು ?"

ಆ ಮಾತು ಕೇಳಿ ಛಟ್ಟನೆ ಹಿಂದಿರುಗಿ, ಬೀಸುಗಾಲು ಹಾಕಿ ನೆಲವನ್ನು ನಡುಗಿಸುತ್ತಾ ತೊಟ್ಟಿಲ ಬಳಿ ಹೋಗಿ, ಮಲಗಿದ್ದ ಮಗುವನ್ನು ತನ್ನೊಂದೆ ಕೈಲಿ ರಟ್ಟೆ ಹಿಡಿದೆತ್ತಿ ತಂದು, ಮಗು ಚೀರಿಡುತ್ತಿದ್ದರೂ ಲಕ್ಷ್ಯ ಮಾಡದೆ

ಕನಿಕರಪಡದೆ ಅವಳ ಮುಂದೆ ಜೋತಾಡಿಸುತ್ತ ಸೂರು ಬೀಳುವಂತೆ ಅರಚಿದ,

"ಇದಕ್ಕಿಂತ ಬೇರೆ ಸಾಕ್ಷಿ ಬೇಕೇನು ? ಕಣ್ಣಿಂದ ನೋಡುವುದಕ್ಕಿಂತ ನೂರರಷ್ಟು ಪ್ರಮಾಣ ಕೊಡುತ್ತಿದೆ. ಇದಕ್ಕೇನು ಬೊಗಳುವೆ ?"

ಶಾಂತ–ಗೋಪಿಯು ಕೈಲಿ ಜೋತಾಡುತ್ತಿದ್ದ ಮಗುವನ್ನು ಕಂಡು ನಡು ಗಿದಳು. ಆದರೆ ಆ ನಡುಕ ಅವಳಲ್ಲಿ ಹೆಚ್ಚು ಹೊತ್ತಿರಲಿಲ್ಲ. ಬಾಳಿನ ಕ್ರೂರ ಗರಗಸಕ್ಕೆ ತಲೆ ಕೊಟ್ಟಿದ್ದವಳು, ಮನಸ್ಸನ್ನು ಕಲ್ಲು ಮಾಡಿ, ಗೋಪಿಯ ಮನ ಸ್ಸನ್ನು ಹೊಕ್ಕಿದ್ದ ಸಂಶಯವನ್ನು ಕಳೆದೋಗೆಯಲೆಬೇಕೆಂಬ ನಿರ್ಧಾರಕ್ಕೆ ಬಂದು ಮಗುವಿನ ಕಡೆಗೂ ತಿರುಗಿ ನೋಡದೆ ಮಾತು ಮುಂದುವರಿಸಿದಳು,

"ಸಾಕಷ್ಟು ವಿದ್ಯಾವಂತರಾಗಿದ್ದು, ಈ ಮಾತಾಡುವುದನ್ನು ನೋಡಿದರೆ, ನನಗೆ ಅಸಹ್ಯವಾಗುತ್ತೆ. ಮಕ್ಕಳು ಮನೆತನದವರನ್ನು ಹೊತ್ತು ಹುಟ್ಟುವುದು ಸೃಷ್ಟಿಧರ್ಮ. ಅದನ್ನು ಸಾಕ್ಷಿಗಿರಿಸಿ ಹೇಳುತ್ತಿರುವ ನಿಮ್ಮ ಅಜ್ಞಾನಕ್ಕೆ ನಾನೇ ನುತ್ತರ ಕೊಡಲು ಸಾಧ್ಯ !"

"ಮಾಡಿದ ಪಾಪವನ್ನು ಮುಚ್ಚಲು ಸೃಷ್ಟಿಧರ್ಮದ ಮರೆಹೋಗುವೆಯಾ? ನನ್ನ ಹತ್ತಿರ ನಿನ್ನಾಟವೆಲ್ಲ ನಡೆಯುವುದಿಲ್ಲ. ನಾಣಿಯೊಡನೆ ಲಲ್ಲೆ ಹೊಡೆ ಯುತ್ತಿದ್ದುದನ್ನು ಇದೇ ಕಣ್ಣಿನಿಂದ ನಾನೇ ಎಷ್ಟೋ ಬಾರಿ ನೋಡಿರುವೆನು. ನನ್ನ ಬಾಯಿ ಬಡಿಯುವೆಯಾ ಚಂಡಾಲಿ!" ಎಂದು ,ಕೆನ್ನೆಗೆ ಛಟ್ಟನೆ ಬೀರಿ ದನು.

ಕೆನ್ನೆ ಸವರಿಕೊಳ್ಳುತ್ತಾ ಹೇಳಿದಳು,

"ಆಡಿದ ಮಾತು ಯಾವುದೆಂದು ಎಂದಾದರೂ ಕಿವಿಗೊಟ್ಟು ಕೇಳಿರುವಿ ರೇನು ?"

ಧ್ವನಿಯಲ್ಲಿ ಅಣಕದ ನಂಜು ತುಂಬಿ ಚುಚ್ಚಿ ನುಡಿದ,

"ಮುಖದ ಭಾವ ನೋಡಿದರೆ ಸಾಲದೆ? ಕಿವಿಗೊಟ್ಟು ಬೇರೆ ಕೇಳ ಬೇಕೇನು ?"

"ನಿಮ್ಮ ಹತ್ತಿರ ಮಾತಾಡುವವರಿಗೆ ಬುದ್ಧಿಯಿಲ್ಲ" ಎಂದು ಮತ್ತೆ ಹಾಸ ತೊಡಗಿದಳು.

ಕೈಲಿ ಹಿಡಿದಿದ್ದ ಮಗುವನ್ನಲ್ಲೆ ನೆಲದ ಮೇಲೆ ಕುಕ್ಕರಿಸಿ ಬಿಚ್ಚಿದ್ದವಳ

ಹಾಸಿಗೆಯನ್ನೆತ್ತಿ ಕೋಣೆಯಿಂದ ಹೊರಗೆ ರೊಯ್ಯನೆಸೆದು,

"ಯಾರಿಗೆ ಹೇಳಿದ್ದು ರಂಡೆ, ನಾಯಿ ಮುಟ್ಟಿದ ಮಡಕೆ ನೀನು. ನಿನ್ನ ಎಂಜಲು ಸಂಪರ್ಕ ಸುಖ ನನಗೆ ಬೇಡ. ತೊಲಗು ಮೊದಲು ಆಚೆ ಇಲ್ಲಿಂದ" ಎಂದು ಕಾಲಿನಿಂದೊದ್ದ.

"ನೀವಿಂದು ನನ್ನನ್ನು ಕೊಂದರೂ ಚಿಂತೆಯಿಲ್ಲ, ನಾನೀ ಸ್ಥಳ ಬಿಟ್ಟು ಕದಲುವುದಿಲ್ಲ."

"ನಿನ್ನನ್ನೀಗಲೆ ಸಾಯಗೊಡುವುದಿಲ್ಲ. ನನಗಿತ್ತ ನೋವಿನ ನೂರರಷ್ಟು ಯಾತನೆಯನ್ನು ನೀನು ತಿಂದು ಸಾಯಬೇಕು. ಏಳು, ಮೊದಲು ನನ್ನ ಕಣ್ಣೆದುರಿನಿಂದ ಆಚೆ ತೊಲಗು. ನಿನ್ನ ಪಾಪದ ಮುಖ ನೋಡಿದಷ್ಟೂ ನನ್ನ ಹೊಟ್ಟೆಯಲ್ಲಿ ಬೆಂಕಿಯೇಳುತ್ತದೆ. ನನ್ನ ಹೊಟ್ಟೆ ಉರಿಸಬೇಡ, ಎದ್ದು ನಡೆ ಆಚೆ !" ಎಂದು ಕಾಲಿನಿಂದ ದಬದಬ ಒದ್ದನು.

ಶಾಂತ ಕುಳಿತ ಸ್ಥಳದಿಂದ ಕದಲಲಿಲ್ಲ. ಕಣ್ಣಲ್ಲಿ ನೀರೂ ತುಂಬಲಿಲ್ಲ. ಯಾತನೆಯನ್ನು ಸಹಿಸಿ ಕಲ್ಲಾಗಿ ಕುಳಿತಿದ್ದಳು. ಅವಳ ಕಲ್ಲುತನವನ್ನು ಕಂಡು ಮತ್ತಷ್ಟು ರೇಗಿ,

"ನಿನ್ನ ಮೊಂಡು ಹಠವನ್ನು ಮುರಿಯದಿದ್ದರೆ ನಾನು ಗಂಡುಸೆ ಅಲ್ಲ—ನಾಯಿ !" ಎಂದು ಅಳುತ್ತಿರುವ ಮಗುವಿನ ಬಳಿ ಬಂದು, ಒಂದೆ ಕೈಯಲ್ಲಿ ಅದನ್ನು ರಟ್ಟೆ ಹಿಡಿದೆತ್ತಿ ಕೋಣೆಯಿಂದ ಹೊರಗೆ ತೆಗೆದುಕೊಂಡು ಹೋಗಿ ಧೊಪ್ಪನೆ ಕುಕ್ಕರಿಸಿ ಬಂದು ಶಾಂತಳ ರಟ್ಟೆ ಹಿಡಿದು 'ನಿಮ್ಮ ದಮ್ಮಯ್ಯ—ನನ್ನನ್ನು ಹೊರಗೆ ಹಾಕಬೇಡಿರೆ'ಂದು ಬೊಬ್ಬೆಯಿಡುತ್ತಿದ್ದರೂ ಲಕ್ಷ್ಯಮಾಡದೆ ಕರಗದೆ ದರದರ ಎಳೆದುಕೊಂಡು ಹೋಗಿ ಕೋಣೆಯ ಹೊರಗೆ ನೂಕಿ, ಕದವನ್ನು ಧಡಾರನೆ ಮುಚ್ಚಿ ತನ್ನ ಹಾಸಿಗೆಯ ಮೇಲೆ ಹೋಗಿ ಧೊಪ್ಪನೆ ಉರುಳಿದ.

ಗೋಪಿಗೂ ಆ ಹೊಸ ಬಾಳನ್ನು ಒಗ್ಗಿಸಿಕೊಳ್ಳಲು ಬಲು ಕಷ್ಟವಾಯಿತು. ಶಾಂತ ಮತ್ತಾವುದಕ್ಕೆ ಬೇಡವಾಗಿದ್ದರೂ ಕಾಮಪಿಪಾಸೆಯನ್ನ ಡಗಿಸಲು ಬೇಕಾಗಿದ್ದಳು. ಸಿಟ್ಟಿನ ಭರದಲ್ಲಿ ಹೊರಗೆ ಹಾಕಿಬಿಟ್ಟಿದ್ದ. ಮನಸ್ಸನ್ನು ಮಾತ್ರ ಅವನಿಂದ ಜಯಿಸಲಾಗಲಿಲ್ಲ. ಎರಡು-ಮೂರು ತಿಂಗಳ ವರೆಗೂ ಅದರೊಡನೆ ಹೋರಾಡುತ್ತಲೆ ಬಂದ. ಸೋಲು ಅವನಿಗೆ, ಗೆಲು ಪ್ರ

ಮನಸ್ಸಿಗೆ ಇದ್ದಕ್ಕಿದ್ದಂತೆ ಒಂದು ದಿನ, ಬಲವಂತದಿಂದ ಲಗಾಮು ಹಾಕಿ ಹಿಡಿದಿದ್ದ ಸಂಯಮ ಕಡಿವಾಣವನ್ನು ಕಳಚಿ ಓಡಿತು. ಮನಸ್ಸಿನಲ್ಲಿದ್ದ ಕಾಮಪಿಪಾಸೆ ಸಂಪರ್ಕ ಸುಖಕ್ಕಾಗಿ ಚೀರಿಡುತ್ತಿತ್ತು.

'ಹೋಗು, ಅವಳು ಏನಾದರೇನು ! ನಿನ್ನ ಕಾಮತೃಷೆ ತೀರಿದರೆ ಸರಿ '

'ಅದು ಹೇಗೆ ಸಾಧ್ಯ ? ನಡತೆ ತಪ್ಪಿದ ಹೆಂಡತಿಯಲ್ಲಿ ಸಂಪರ್ಕ ಸುಖ ಬಯಸಿ ಹೋದರೆ ಬಿಗಿ ತಪ್ಪಿ ಹೋಗುವುದಿಲ್ಲವೆ ?'

'ಅವಳನ್ನು ಹೆಂಡತಿಯಲ್ಲವೆಂದು ಎಂದೊ ನಿರ್ಧರಿಸಿರುವೆಯಲ್ಲ, ನಿನಗೇಕಿನ್ನು ಆ ಭಯ !'

'ಆದರೂ ಆ ಎಂಜಲು ಸುಖಕ್ಕೆ ಮೈಯೊಡ್ಡಲು ಮನಸ್ಸು ಹಿಂಜರಿಯುತ್ತದೆ.'

'ಕಮಲೆಯೊಡನೆಯೂ ಹೀಗೆಯೆ ನಡೆದುಕೊಳ್ಳುತ್ತಿದ್ದೆಯಾ ? ನಿರ್ದಾಕ್ಷಿಣ್ಯವಾಗಿ ಅವಳಲ್ಲಿ ಸುಖಪಡಲಿಲ್ಲವೆ ?'

'ಅವಳೆಷ್ಟಾದರೂ ವೇಶ್ಯೆ. ಅಲ್ಲಿ ಈ ಪ್ರಶ್ನೆಗಳೆ ಏಳಲಿಲ್ಲ.'

'ಹುಚ್ಚಪ್ಪ, ನಡತೆ ತಪ್ಪಿದ ಗರತಿಗೂ ವೇಶ್ಯೆಗೂ ಯಾವ ವ್ಯತ್ಯಾಸವಿದೆ ?'

'ಯಾವ ವ್ಯತ್ಯಾಸವೂ ಇಲ್ಲ.'

'ಹಾಗಿದ್ದ ಮೇಲೆ ಹೋಗು—ಅವಳಲ್ಲಿ ಸುಖಪಡು. ಇರುವಷ್ಟು ದಿನ ಯಾಕೆ ಬಿಡಬೇಕು ! ನೀನು ಕೊಡುವ ಅನ್ನಬಟ್ಟೆಯೇನು ಬಿಟ್ಟೆಯೆ !'

'ಹೌದು, ನಾನು ಕೊಡುವ ಅನ್ನ-ಬಟ್ಟೆ ಬಿಟ್ಟೆಯಲ್ಲ. ಅವಳು ನನ್ನ ಹೆಂಡತಿಯಲ್ಲದಿದ್ದರೂ ನನ್ನ ವೇಶ್ಯೆ. ಅವಳಲ್ಲಿ ಕಾಮತೃಷೆ ತೀರಿಸಿಕೊಳ್ಳಲು ನನಗೆ ಅಧಿಕಾರವಿದೆ. ಆ ಅಧಿಕಾರವನ್ನು ಚಲಾಯಿಸಲೆ ಬೇಕು.'

ಮೈಯಲ್ಲಿ ಪಶುಬಲ ಮೂಡಿತು. ಮತ್ತೇರಿದ ಆನೆಯಂತೆ ಹೆಜ್ಜೆ ಹಾಕುತ್ತಾ ಅವಳ ಕೊಠಡಿಯ ಬಳಿ ಬಂದ. ಶಾಂತ ಮಗುವನ್ನು ಮಲಗಿಸಿಕೊಂಡು ಮಲಗಿದ್ದಳು. ಹೊಸ್ತಿಲೊಳಗೆ ಕಾಲಿರಿಸಿ ಧ್ವನಿಯಲ್ಲಿ ದರ್ಪ ತುಂಬಿ ಹೇಳಿದ,

"ನನ್ನ ಹಾಸಿಗೆ ತಂದು ಇಲ್ಲಿ ಹಾಸು, ಶಾಂತ."

ಆ ಮಾತು ಶಾಂತಳ ಮೈಯಲ್ಲಿ ಮುಳ್ಳಾಡಿಸಿತು. ಮಗುವನ್ನಲ್ಲೇ ಬಿಟ್ಟು, ಛಟ್ಟನೆದ್ದು ಮಾರು ದೂರ ಹಿಂದಕ್ಕೆ ಹಾರಿ ನಿಂತಳು. ದೇಹಾದ್ಯಂತವೂ ಸಿಟ್ಟಿನಿಂದ ಕಂಪಿಸುತಿತ್ತು. ಸಿಟ್ಟನ್ನು ಹಿಡಿತಕ್ಕೆ ತಂದು ಧ್ವನಿಯಲ್ಲಿ ಅಣಕ ತುಂಬಿ ಹೇಳಿದಳು,

"ನಾನು ನಾಯಿ ಮುಟ್ಟಿದ ಮಡಕೆ. ನೀವು ಸುಖಪಡಲು ಯೋಗ್ಯವಾದ ಶರೀರವಲ್ಲವಿದು."

"ಅದು ನನಗೆ ಗೊತ್ತಿದೆ. ಗೊತ್ತಿದ್ದೆ ಬಂದಿದ್ದೇನೆ, ಬಾ" ಎಂದು ಅವಳ ಬಳಿ ಹೋಗಿ ಹಾರುತ್ತಿದ್ದವಳನ್ನು ತಡೆದು ಕೈಹಿಡಿದ.

ಕೊಸರಾಡಿ ಕೈ ಬಿಡಿಸಿಕೊಂಡು ಮತ್ತೆ ಮಾರು ದೂರ ಹಾರಿ ಹೇಳಿದಳು,

"ನಾನೇನೂ ವೇಶ್ಯೆ ಕೆಟ್ಟು ಹೋಗಲಿಲ್ಲ, ದೂರ ನಿಲ್ಲಿ."

"ನನ್ನ ಭಾಗಕ್ಕೆ ನೀನು ವೇಶ್ಯೆಯೆ. ಅನ್ನ-ಬಟ್ಟೆ ಕೊಡುವುದು ಬಿಟ್ಟಿಯಲ್ಲ. ನನ್ನ ಅನ್ನದ ಋಣ ತೀರಿಸು ಬಾ" ಎಂದು ಮತ್ತೆ ಕೈಹಿಡಿಯಲು ಹೋದ.

ಅವನಿಂದ ಮೈ ಮುಟ್ಟಿಸಿಕೊಳ್ಳಲು ಅಸಹ್ಯವಾಗಿ ಕೊಠಡಿಯಿಂದ ಹೊರಗೆ ಹಾರಿ ಬಂದು ಹೇಳಿದಳು,

"ನಿಮ್ಮನ್ನದ ಋಣವನ್ನು ಚಾಕರಿ ಬಳಿದು ತೀರಿಸುತ್ತಿರುವೆನು. ನೀವು ಕೊಡುವ ಅನ್ನಕ್ಕೆ ಅಷ್ಟೆ ಬೆಲೆ. ಮೊದಲು ಇಲ್ಲಿಂದ ಹೊರಡಿ. ಇಲ್ಲದಿದ್ದರೆ ನಿಮ್ಮ ಮಾನ ಮೂರು ಕಾಸು ಮಾಡಿ ಬಿಡುವೆನು—ಜೋಕೆ!"

"ಅಬ್ಬಾ ನಿನ್ನ ಕೊಬ್ಬೆ! ನೋಡಿಯೆ ಬಿಡುವೆನು, ನಾನೂ ಒಂದು ಕೈ; ನಿನ್ನ ಹಠ ಹೆಚ್ಚೊ—ನನ್ನ ಬಲ ಹೆಚ್ಚೊ ಎಂದು" ಎಂದು ಶಾಂತಳ ಬಳಿ ಸಿಟ್ಟಿನಿಂದ ಹರಿದು ತಿನ್ನುವವನಂತೆ ಹಾರಿದ. ಶಾಂತ ಅವನು ಹಾರಿ ಬರುವುದರಲ್ಲಿ ಮೈ ಪೆಟ್ಟಾಗುವುದನ್ನೂ ಲಕ್ಷಿಸದೆ ಅಡಿಗೆಮನೆಗೆ ಬಾಣದಂತೆ ಸರ್ರನೆ ನುಗ್ಗಿ ಕದವಿಕ್ಕಿಕೊಂಡಳು. ಗೋಪಿ ಕದವನ್ನು ಮುರಿದು ಹಾಕುವಂತೆ ದಬದಬ ದಬ್ಬಿದ. ಒಳಗಿನಿಂದ ಶಾಂತ ಅರಚಿದಳು,

"ಬಾಗಿಲು ಮುರಿದು ಒಳಗೆ ಬಂದರೆ ನಿಮ್ಮ ಗತಿ ನೆಟ್ಟಗಾಗಲಿಕ್ಕಿಲ್ಲ ನೋಡಿ. ಕೂಗುಹಾಕಿ ಅಕ್ಕಪಕ್ಕದಲ್ಲಿ ರಂಪ ಎಬ್ಬಿಸಿಬಿಟ್ಟೇನು, ಆಮೇಲೆ!"

ಕಾಮತೃಷೆಯಿಂದ ಹುಚ್ಚಾಗಿದ್ದ ಗೋಪಿ ಲಕ್ಷ್ಯ ಮಾಡದೆ ಅಬ್ಬರಿಸಿ ಅರಚಿದ,

"ಬಾಗಿಲು ತೆಗಿ ಚಂಡಾಲಿ ಮೊದಲು! ಇಲ್ಲದಿದ್ದರೆ ನಿನ್ನ ಮಗುವಿನ ಕತ್ತು ಹಿಸುಕಿ ಹಾಕಿ ಬಿಟ್ಟೇನು! ಮಗು ಬೇಕಿದ್ದರೆ ಮೊದಲು ಬಾಗಿಲು ತೆಗಿ!"

"ಹಾಗೆ ಮಾಡಿ ನೀವು ಬದುಕಿ, ನೋಡುವೆನು!"

"ಏನು ಮಾಡುವೆ ನೀನು ಮಹಾ!"

"ಮತ್ತೇನು ಮಾಡುವುದಿಲ್ಲ—ಠಾಣೆಗೆ ಹೋಗಿ ದೂರು ಕೊಟ್ಟು ನಿಮ್ಮನ್ನು ಸಾಯುವವರೆಗೆ ಸೆರೆಯಲ್ಲಿ ಕೊಳೆಯ ಹಾಕುವೆನು. ಹುಷ್ಯಾರು—ಮುಂದುವರಿದೀರಿ!"

ಆ ಮಾತಿನಿಂದ ಗೋಪಿಯ ಹುಚ್ಚು ಸರ್ರನೆ ಇಳಿಯಿತು. ಸ್ವರವನ್ನು ಸ್ವಲ್ಪ ತಗ್ಗಿಸಿ—

"ಇರಲಿರಲಿ, ನಿನ್ನನ್ನು ಆದಷ್ಟು ಬೇಗ ಸಾಯಿಸದಿದ್ದರೆ ನಾನು ನಮ್ಮ ಅಪ್ಪನ ಮಗನೆ ಅಲ್ಲ" ಎಂದು ಹೇಳಿ ಪೆಟ್ಟುತಿಂದ ನಾಯಿಯಂತೆ ಮೈಮುದುಡಿಕೊಂಡು ತನ್ನ ಕೊಠಡಿಗೆ ಜಾರಿದ.

ಶಾಂತ ಗಂಡನ ಸದ್ದಡಗಿದ ಬಹಳ ಹೊತ್ತಿನ ಮೇಲೆ, ಮೆಲ್ಲನೆ ಬಾಗಿಲು ತೆಗೆದುಕೊಂಡು ಬಂದು ತನ್ನ ಕೊಠಡಿಗೆ ಹೋಗಿ ಕದವಿಕ್ಕಿಕೊಂಡಳು. ಮಗುವಿನ ಬಳಿ ಹಾರಿ ಮೈಮುಟ್ಟಿ ನೋಡುವವರೆಗೂ ಅವಳಿಗೆ ಜೀವವಿರಲಿಲ್ಲ. ಮಗು ಸುಖವಾಗಿ ನಿದ್ರಿಸುತ್ತಿರುವುದನ್ನು ಕಂಡು ನೆಮ್ಮದಿಯ ಉಸಿರುಬಿಟ್ಟಳು. ಅಂದಿನಿಂದ ಕದವಿಕ್ಕದೆ ಒಂದು ಗಳಿಗೆ ಕೊಠಡಿಯಲ್ಲಿರುತ್ತಿರಲಿಲ್ಲ. ಗೋಪಿಯೂ ಆನಂತರ ಅವಳ ಬಳಿ ಸಂಪರ್ಕಸುಖ ಬಯಸಿ ಹೋಗಲಿಲ್ಲ. ಆಗಾಗ ನಡೆದ ಆ ಎಲ್ಲ ನೆನಪುಗಳೂ ತಲೆಯನ್ನು ಮುತ್ತಿಗೆ ಹಾಕಿ ಮೆತ್ತಗೆ ಮಾಡಿದುವು. ಮಗುವನ್ನು ಮಲಗಿಸಲೆಂದು ಮಲಗಿದವಳು ಆಯಾಸದಿಂದ ತಾನೂ ನಿದ್ರೆಗೆ ಮೈಕೊಟ್ಟಳು.

"ಏ ಸಾಯಿ—ಏಳು!"

ನಿದ್ದೆ ಹತ್ತುವುದೆ ತಡ—ಆ ಕೂಗು ಬಂದು ಅವಳನ್ನು ಬಡಿದೆಬ್ಬಿಸಿತು. ಥಟ್ಟನೆ ಮೇಲೆದ್ದು ಕುಳಿತು ಸೆರಗು ಸರಿಪಡಿಸಿಕೊಂಡಳು, ಮತ್ತು ಅದೇ

ಅಬ್ಬರ ಅಪ್ಪಳಿಸಿ ಬಂತು.

"ಮಲಗಲು ನಿನಗಾವದ್ದೇನು? ಊಟವಾದವಳೆ ಮಲಗಿ ವಿಶ್ರಾಂತಿ ತೆಗೆದುಕೊಳ್ಳಲು ಇದು ನಿಮ್ಮಪ್ಪನ ಮನೆಯಲ್ಲ. ಹಿಡಿ, ಇದನ್ನು ಹೋಳಾಗಿ ಹೆಚ್ಚಿ ಕೊಡು" ಎಂದು ಎರಡು ಮಾವಿನ ಹಣ್ಣನ್ನೂ, ಒಂದು ಸೇಬನ್ನೂ ಕೊಟ್ಟು,

"ನೀನೇನಾದರೂ ಒಂದು ಹೋಳು ಬಾಯಿಗೆ ಹಾಕಬೇಕಂತೆ–ಆಗ!" ಎಂದು ಎರಡು ಹೆಜ್ಜೆ ಮುಂದಿಟ್ಟವನು ಮತ್ತೆ ನಿಂತು "ಹಾಗೆ ಎರಡು ಲೋಟ ನ್ಯಾಂಗು ಕಾಫಿ ಮಾಡಿಡು––ಎರಡೇ ಎರಡು ಲೋಟ; ಒಂದು ತೊಟ್ಟು ಹೆಚ್ಚಿರಬಾರದು" ಎಂದು ಉತ್ತರಕ್ಕೆ ಕಾಯದೆ ಹೊರಗೆ ಹೊರಳಿದ.

ಶಾಂತ ಗೊಣಗುಟ್ಟುತ್ತಾ ಕಾಫಿಗೆ ನೀರಿಟ್ಟು ಹಣ್ಣು ಹೆಚ್ಚತೊಡಗಿದಳು. ಹತ್ತು ನಿಮಿಷದ ನಂತರ ಗೋಪಿ ಬಂದು, ಹೆಚ್ಚಿರಿಸಿದ ಹಣ್ಣಿನ ಕಡೆ ತ- ಹದ್ದಿನ ಕಣ್ಣನ್ನು ಹಾರಿಸಿ, ಗೊರಟನ್ನೂ ಸಿಪ್ಪೆಯನ್ನೂ ಅತ್ತಿತ್ತ ಮಾಡಿ ಪ- ಕ್ಷಿಸಿ ಕೇಳಿದ,

"ಗೊರಟನಲ್ಲಿ ಇಷ್ಟು ಹಣ್ಣು ಯಾಕೆ ಬಿಟ್ಟದ್ದು?"

"ಹಣ್ಣು ಗಳಿತು ಹೋಗಿದೆ —ಹೆಚ್ಚಲು ಬರುವುದಿಲ್ಲ."

"ಬರುವುದಿಲ್ಲವೇಕೆ? ಬೇಕೆಂದು ಬಿಟ್ಟದ್ದೆನ್ನು."

"ಅಷ್ಟು ಅಪನಂಬಿಕೆಯಿದ್ದರೆ ನೀವೇ ಹೆಚ್ಚಿ ನೋಡಿ."

"ನಿನಗೆ ಅನ್ನ–ಬಟ್ಟೆ ಕೊಟ್ಟು ಇಟ್ಟುಕೊಂಡಿರುವುದು ನಾನು ಮಾಡುವು ದಕ್ಕಲ್ಲ, ಹೆಚ್ಚಿ ಕೊಡು ಬಾ!"

"ನನ್ನಿಂದ ಸಾಧ್ಯವಿಲ್ಲ, ಕೈಯಿಂದ ಜಾರುತ್ತದೆ."

"ನಿನ್ನ ಉಪಾಯ ಯಾರಿಗೆ ಹೇಳಿಕೊಡುವೆ? ಹೇಗಾದರೂ ಮಾಡಿ ನಾಲಗೆ ಚಪ್ಪರಿಸಿಕೊಳ್ಳಬೇಕೆಂದಿರುವೆಯೇನು! ನಿನ್ನಾಟ ನನ್ನಲ್ಲಿ ನಡೆಯು ವುದಿಲ್ಲ" ಎಂದು ಸಿಪ್ಪೆಯನ್ನೂ ಗೊರಟನ್ನೂ ಒಟ್ಟುಮಾಡಿದನು.

ಅದನ್ನು ಕಂಡು ಶಾಂತಳಿಗೂ ಅಸಹ್ಯವಾಯಿತು. ಧ್ವನಿಯಲ್ಲಿ ತಿರಸ್ಕಾರ ತುಂಬಿ,

"ಥೂ, ನಿಮ್ಮ ದರಿದ್ರ ಹಣ್ಣು ಯಾರಿಗೆ ಬೇಕಾಗಿದೆ! ತೆಗೆದು ತಿಪ್ಪೆಗೆಸೆ ಯಿರಿ. ನಾನೇನು ಕಂಗಾಳಿಯಲ್ಲ—ಸಿಪ್ಪೆ, ಗೊರಟು ನೆಕ್ಕಲು!" ಎಂದು

ಸಟೆಕ್ಕನೆಂದು ಗೋಪಿಸಿಯು ಕಡೆ ತಿರುಗಿ ಸಹ ನೋಡದೆ ಕಾಫಿ ಸೋಸಲು ನಡೆದಳು.

"ಎರಡು ದಿನ ಈಗ ಕೊಡುವ ಕಟ್ಟು ಭತ್ಯವನ್ನೂ ನಿಲ್ಲಿಸಿದರೆ ಆಗ ಗೊತ್ತಾಗುತ್ತದೆ, ಕಂಗಾಳಿ ಆಗುವೆಯೊ-ಇಲ್ಲವೊ ಎಂದು" ಎಂದು ಒಟ್ಟು ಮಾಡಿದ ಸಿಪ್ಪೆ-ಗೊರಟನ್ನು ತಟ್ಟೆಗೆತ್ತತೊಡಗಿದ.

"ಪ್ರಾಣವನ್ನಾದರೂ ಬಿಟ್ಟೇನು, ಕಂಗಾಳಿ ಮಾತ್ರ ಆಗುವುದಿಲ್ಲ."

"ಎಂಜಲು ತಿನ್ನುವ ನಾಯಿಗೂ ರೊಚ್ಚಿದೆಯೇನು! ನನಗೆ ಗೊತ್ತೇ ಇರಲಿಲ್ಲ. ಪರೀಕ್ಷಿಸಿ ನೋಡಬೇಕು" ಎಂದು ವ್ಯಂಗದ ಮುಳ್ಳು ಚುಚ್ಚಿ ಸಿಪ್ಪೆ-ಗೊರಟನ್ನು ಆಚೆಗೆಸೆದು ಬಂದ. ಬಂದವನಿಗೆ ಥಟ್ಟನೆ ಹಲಗೆಯ ಮೇಲಿರಿಸಿದ್ದ ನಾಲ್ಕು ಮಾವಿನ ಹೋಳು ದೃಷ್ಟಿಗೆ ಬಿತ್ತು. ಹೋಗಿ ಅದನ್ನು ಕೈಗೆತ್ತಿಕೊಂಡು ಅವಳ ಮುಖದ ಬಳಿ ಹಿಡಿದು ಹೇಳಿದ,

"ನಿನ್ನ ದೊಡ್ಡತನ ಹೊರಗೆ ಬಿತ್ತಲ್ಲ!"

ಲೋಟಕ್ಕೆ ಕಾಫಿ ಬಗ್ಗಿಸುತ್ತಾ ಹೇಳಿದಳು,

"ನನ್ನ ನಾಲಗೆ ತೀಟೆಗಲ್ಲ ಇಟ್ಟದ್ದು, ಮಗುವಿಗಾಗಿ!"

ಒಡುಕಚ್ಚಿ ಧ್ವನಿಯಲ್ಲಿ ತಿರಸ್ಕಾರ ಕೋಪಗಳೆರಡನ್ನೂ ತುಂಬಿ ಅರಚಿದ,

"ಮಗು! ಯಾರ ಮಗು! ನಿನ್ನ ಮಗುವಿಗೆ ಬೇಕಾದರೆ ನಿಮ್ಮಪ್ಪನ ಮನೆಯಿಂದ ತಂದು ತಿನ್ನಿಸು. ನಾನು ದುಡಿಯುತ್ತಿರುವುದು ಕಂಡವರ ಮಕ್ಕಳ ಮೈ ಕೊಬ್ಬಿಸುವುದಕ್ಕಲ್ಲ!" ಎಂದು ಆ ಹಣ್ಣಿನ ಹೋಳನ್ನೂ ತಾನು ಹಾಕಿರಿಸಿಕೊಂಡಿದ್ದ ಎರಡು ತಟ್ಟೆಗೆ ಹಂಚಿಹಾಕಿ ಕಾಫಿ ಲೋಟವನ್ನು ತರಲು ಒಲೆಯ ಬಳಿ ಹೋದ.

ಅಷ್ಟರಲ್ಲಿ ಮಲಗಿದ್ದ ಮಗು ಎಚ್ಚರಗೊಂಡು ಒಳಗೆ ಬಂದು ಹಣ್ಣನ್ನು ಕಂಡು, ಮೆಲ್ಲನೆ ಅದರ ಬಳಿ ಹೋಗಿ ಎರಡು ಹೋಳು ತೆಗೆದು ಬಾಯಿಗಿಟ್ಟಿತು. ಕಾಫಿ ಮಾಡಿದ್ದ ಪಾತ್ರೆಯನ್ನು ಗಲಬರಿಸುತ್ತಿದ್ದ ಶಾಂತಳ ಕಣ್ಣಿಗದು ಬಿದ್ದು, ಹಿಡಿದ ಪಾತ್ರೆಯನ್ನಲ್ಲೇ ನೆಲದ ಮೇಲೆ ಹೊತ್ತು ಹಾಕಿ, ಮಗುವಿನ ಬಳಿ ಓಡಿ ಬಂದು, ಅದರ ಬಾಯಲ್ಲಿದ್ದ ಹಣ್ಣನ್ನು ಕೈಹಾಕಿ ತೆಗೆದು,

"ದರಿದ್ರ ಮಗುವೆ, ಕಂಡವರ ಕೂಳಿಗ್ಯಾಕೆ ಬಾಯಿ ಬಿಡುವೆ, ಸಾಯಿ

ಅಚೆ !" ಎಂದು ಕೆನ್ನೆ-ತೊಡೆ ಹಿಂಡಿ ದೂರ ಕುಕ್ಕರಿಸಿ ತನ್ನ ಕೆಲಸಕ್ಕೆದ್ದು ನಡೆದಳು.

ಹಣ್ಣೂ ಸಿಗದೆ, ಮೈಯೂ ನೋವಾಗಿ ಮಗು ಗಂಟಲು ಕಿತ್ತು ಕಿರಿಚಿತು. ಅದನ್ನು ಕಂಡು ಗೋಪಿಗೆಲ್ಲಿಲ್ಲದ ಸಂತೋಷ. ಕಾಫಿ ಲೋಟ, ಹಣ್ಣಿನ ತಟ್ಟೆಗಳನ್ನು ತೆಗೆದುಕೊಂಡು ಹೋಗುತ್ತ,

"ಅಳು ಅಳು, ಕರುಳು ಕಿತ್ತು ಬರುವಂತೆ ಅಳು. ನೀನು ಅಳುವುದಕ್ಕೆ ಹುಟ್ಟಿದ್ದು—ನಿನ್ನಮ್ಮ ಕಣ್ಣಿಂದ ಕಂಡು ಸುಖಪಡುವುದಕ್ಕೆ ಬದುಕಿರುವುದು. ನೀನು ಅತ್ತಷ್ಟೂ ಅವಳ ಹೊಟ್ಟೆಗೆ ಹಾಲು ಹುಯ್ದಷ್ಟು ಹಿತ. ಅಳು, ಬಾಯಿ ತುಂಬ ಅಳು; ಅವಳು ಹೊಟ್ಟೆ ತುಂಬ ನಗಲಿ !" ಎಂದು ದೊಡ್ಡದಾಗಿ ನಕ್ಕು ಇಬ್ಬರ ಕಡೆಗೂ ಚುಚ್ಚು ನೋಟ ಬೀರಿ ಹೋದ.

ಶಾಂತಳಿಗೆ ಎಲ್ಲಿಲ್ಲದ ಸಿಟ್ಟು ಮೈತುಂಬಿ ಬಂತು. ಮಗುವಿನ ಕೂಗು ಹೆಚ್ಚಾದಂತೆಲ್ಲ ಅವಳ ರುದ್ರತೆಯೂ ಮೈತುಂಬಿ ಉಬ್ಬುತಿತ್ತು. ಆವೇಶದಿಂದ ಮೈಮರೆತು ಹುಚ್ಚಿಯಂತೆ ಅದರ ಬಳಿ ಓಡಿ ಬಂದು ಪಟಪಟನೆ ಹೊಡೆದು ಔಡುಕಚ್ಚಿ,

"ನೀನು ನನ್ನನ್ನು ತಿನ್ನಲು ಹುಟ್ಟಿದ ಪ್ರಾರಬ್ಧ, ಸಾಯಿ ಮುಂಡೇದೆ !" ಎಂದು ಎತ್ತಿ ದೂರವೆಸೆದಳು.

ಮಗುವಿಗೆ ತುಂಬಾ ಪೆಟ್ಟಾಯಿತು. ಉಸಿರು ಕಟ್ಟುವಂತೆ ಅತ್ತಿತು. ಅದನ್ನು ಕಂಡು ಕರಗದೆ ಮತ್ತಷ್ಟು ಕೋಪ ತುಂಬಿ, ಹತ್ತಿರ ಹಾರಿ ಕೈ ನೋಯುವಷ್ಟು ಪೆಟ್ಟು ಬಿಗಿದು,

"ಬಾಯಿ ಮುಚ್ಚುವಿಯೊ ಕತ್ತು ಹಿಸುಕಿ ಕೊಂದು ಬಿಡಲೊ" ಎಂದಳು. ಹೆದರಿಕೆಯಿಂದ ಕೈಕಾಲು ಒದರಿ ಮತ್ತಷ್ಟು ಹಠ ಜೋರು ಮಾಡಿದ. ಮಗುವಿನ ಕುತ್ತಿಗೆಯನ್ನು ತನ್ನೆರಡು ಕೈಗಳಿಂದ ಒತ್ತಿ ಹಿಂಡುವಂತೆ ಹಿಡಿದಳು.

ವಿವೇಕ ಅವಳನ್ನು ತಡೆದು ಹಿಡಿಯಿತು. ಹಿಡಿದ ಕೈಬಿಟ್ಟು ನೆಲಕ್ಕೆ ತನ್ನ ತಲೆ ಹೊಡೆದು ತಂದೆ-ತಾಯನ್ನು ನೆನೆನೆನೆದು ಎದೆ ಬಿರಿಯುವಂತೆ ಅತ್ತಳು.

'ಅಮ್ಮಾ ! ನಾನೀ ತಿರಸ್ಕಾರ—ದ್ವೇಷದ ಬೇಗೆಯನ್ನು ಸೈಸಲಾರೆ. ನನ್ನಾತ್ಮ, ಹೃದಯ, ದೇಹ, ಬಾಳು ಎಲ್ಲ ಸುಟ್ಟು ಉರಿಯುತ್ತಿದೆ. ನಾನೀ

ಉರಿ ಸೈಸಲಾರೆ, ತಾಪ ತಾಳಲಾರೆ! ನನ್ನನ್ನು ಈ ನರಕ ಕುಂಡದಿಂದ ಮೇಲೆತ್ತಿ ಬನ್ನಿಯಮ್ಮ! ಈ ಯಮಯಾತನೆಯಿಂದ ಬಿಡುಗಡೆ ಮಾಡಿ ಬನ್ನಿಯಮ್ಮ!'

ಎಡಗೈಯಿಂದ ಹಣೆಯನ್ನು ಒತ್ತಿ ಹಿಡಿದು ಗೋಳಿಟ್ಟಳು,

'ಅಯ್ಯೋ, ನನ್ನ ಹೊಟ್ಟೆ ಸುಡುತ್ತಿರುವ ಈ ಬೆಂಕಿಯನ್ನು ಆರಿಸಲಾರೆ! ಇಲ್ಲಮ್ಮ............ನಾನು ಆರಿಸಲಾರೆ! ಅಪ್ಪಾ........ ನೀವೇಕೆ ನನ್ನನ್ನು ವಿಚಾರಿಸಿಕೊಳ್ಳುತ್ತಿಲ್ಲ........ .....! ನೀವು ಸ್ವಲ್ಪ ಬಿಗಿಯಿರಿಸಿದ್ದರೆ... ........ ನನಗೀ ಕಷ್ಟ ಬರುತ್ತಿರಲಿಲ್ಲ........... ! ಅಳಿಯನಲ್ಲಿ ನಿಮ್ಮ ಪರೀಕ್ಷೆ ಇನ್ನೂ ಮುಗಿಯಲಿಲ್ಲವೆ ?'

'ಬಾಳಿಗೆ ಕೊಳ್ಳಿಯಿರಿಸಿ ಕಣ್ಣುಮುಚ್ಚಿ ಕೂತಿರಿ. ಹತ್ತಿ ಉರಿಯುತ್ತಿದೆ ಯೆಂದಾಗ—'ಅದು ಉರಿಯಲ್ಲ, ನಿನ್ನ ಭ್ರಮೆ, ಸ್ವಲ್ಪ ದಿನ ತಾಳಿಕೊಂಡಿರು, ಎಲ್ಲ ಸರಿಹೋಗುತ್ತದೆಂ'ದು ಬೆನ್ನು ಸವರಿದಿರಿ. ನಿಮ್ಮ ವೇದಾಂತ, ಒಳ್ಳೆತನ ವೆಲ್ಲ ನನ್ನ ಬಾಳಿಗೆ ವ್ಯತ್ಯವಾಯಿತು. ನಿಮ್ಮ ಪರೀಕ್ಷೆಯ ಫಲಿತಾಂಶವೂ ನನ್ನ ಬಲಿಯೆ. ಅದನ್ನು ಬಯಸಿಯೆ ನೀವಿಷ್ಟು ಉದಾಸೀನರಾಗಿದ್ದೀರಿ. ನಿಮ್ಮದು ಕಲ್ಲು ಮನಸ್ಸು, ಕಟುಕರು ನೀವು; ನಿಮ್ಮದು ಪಾಪಿಸ ಮನೆತನ—ಕೊಲೆ ಪಾತಕರು ನೀವು! ನಿಮ್ಮ ಹೊಟ್ಟೆಯಲ್ಲಿ ನಾನು ಹುಟ್ಟಬಾರದಿತ್ತು. ಹುಟ್ಟಿ ಅಪರಾಧ ಮಾಡಿದೆ. ಯಾವ ಪಾಪ ಮಾಡಿಯೊ ನಿಮ್ಮನ್ನು ತಂದೆತಾಯಾಗಿ ಪಡೆದು ಸಂಕಟಪಡುತ್ತಿರುವೆನು............! ಸಂಕಟ ಪಡುತ್ತಿರುವೆನು.........!'

ಸಂಕಟದಿಂದ ಸುತ್ತಿ ಬೀಳುತ್ತಿದ್ದ ಮೈಯನ್ನು ಎಡಗೈ ಊರೆಗೊಟ್ಟು ತಡೆದು ಮತ್ತೆ ರೋದನದ ಹೊಳೆ ಹರಿಸಿದಳು,

'ಪರಮಾತ್ಮ! ನಿನಗೂ ನನ್ನ ಮೇಲೆ ಕರುಣವಿಲ್ಲವೆ ? ಕರುಣಾಮಯ ಆಪದ್ಬಾಂಧವನೆಂದು ನಿನ್ನನ್ನು ಕೊಂಡಾಡುವರಲ್ಲಾ. ನಿನ್ನಾ ಕರುಣೆ, ರಕ್ಷಣೆ ಮಾಡುವ ಚೈತನ್ಯವೆಲ್ಲ ಎಲ್ಲಿ ಹೋಯಿತು........? ನನ್ನ ಪಾಲಿಗಿಲ್ಲವೆ ಅದು ? ಯಾವ ಪಾಪ ಮಾಡಿದ್ದಕ್ಕಾಗಿ ನನಗೀ ಶಿಕ್ಷೆಯಿತ್ತಿರುವೆ ? ............? ನನ್ನ ಬಾಳನ್ನು ಸರಿಪಡಿಸುತ್ತಿರುವ ಸಹನೆಯಿಲ್ಲದಿದ್ದರೆ ಬಲಿಯಾದರೂ ಬೇಗ ತೆಗೆ ದುಕೊ ದೇವಾ............! ಮಾತ್ರ ನನ್ನನ್ನು ಚೂರು ಚೂರಾಗಿ ಸಾಯಿಸ ಬೇಡ........! ಚೂರು ಚೂರಾಗಿ ಸಾಯಿಸಬೇಡ........ !'

ದುಃಖ ಕೋಪವಾಗಿ ನುಡಿದಳು,

'ದೇವರು.... ...ಎಲ್ಲಿಯ ದೇವರು........! ನನ್ನ ಬಾಳು ಬೆಂಕಿಯ ಓಡಿನಲ್ಲಿಬೇಯುತ್ತಿದ್ದರೂ ಕಡೆಗಣ್ಣೆತ್ತಿ ಸಹ ನೋಡದವನು ದೇವರೆ........! ಆ ಶಬ್ದ ಕೂಡ ನನ್ನ ಬಾಯಲ್ಲಿ ಬರಬಾರದು. ನನಗೆ ಯಾರಿಂದ ಯಾವ ಸುಖವೂ ಆಗಿಲ್ಲ—ಆಗುವುದೂ ಇಲ್ಲ! ನನಗೆ ಯಾರೂ ಇಲ್ಲ, ಯಾರಿಗೂ ನಾನು ಬೇಡವಾಗಿದ್ದೇನೆ. ಯಾರಿಗೂ ಬೇಡವಾದ ಈ ದೇಹವನ್ನು ಚೂರು ಚೂರು ಮಾಡಿ ನಾನೇ ಕೊಲ್ಲುವೆನು........ಚೂರು ಚೂರು ಮಾಡಿ........!'

ಎಂದು ಮಾವಿನ ಹಣ್ಣು ಹೆಚ್ಚಿದ ಚಾಕುವಿನ ಬಳಿ ಹಾರಿ, ಕಲ್ಲುಮನಸ್ಸಿನಿಂದ ಕೈಗೆತ್ತಿ ತನ್ನ ಎಡಗೈಗೆ ಎರಡು–ಮೂರು ಬಾರಿ ಒತ್ತಿ ಒತ್ತಿ ಹೊಡೆದುಕೊಂಡಳು. ರಕ್ತ ಛಿಳ್ಳನೆ ಹಾರಿತು. ಚೂರಿ ಕತ್ತಿನ ಬಳಿ ಸರಿದಾಗ—ಕಾರಂಜಿಯಂತೆ ಪುಟಿಯುತ್ತಿದ್ದ ರಕ್ತವನ್ನೂ, ತನ್ನನ್ನು ತಾನೆ ಹೊಡೆದುಕೊಳ್ಳುತ್ತಿರುವ ತಾಯಿಯ ಕಠೋರತೆಯನ್ನೂ ಕಂಡು ಗಾಬರಿಯಿಂದ ಮಗು–ಚಿಟ್ಟನೆ ಚೀರುತ್ತಾ ಓಡಿ ಬಂದು ತಾಯಿಯ ಕಾಲು ತಬ್ಬಿ ಹಿಡಿಯಿತು.

ಅಮೃತವನ್ನೆರೆದು ಬಂದ ಆ ಅಮೌಲ್ಯ ಪ್ರೀತಿಗೆ, ಮಮತೆಯ ಮುಗ್ಧ ಕರೆಗೆ, ಶಾಂತ ತನು-ಮನವನ್ನು ತೂರಿಬಿಟ್ಟಳು. ಕೈಲಿ ಹಿಡಿದಿದ್ದ ಚಾಕುವನ್ನು ರೊಯ್ಯನೆಸೆದು ಮಗುವನ್ನೆತ್ತಿ ತಬ್ಬಿಕೊಂಡು ಮುದ್ದಿನ ಮಳೆಗರೆದು—

"ಹೆದರಬೇಡ ಕಂದ, ನಾನೇನೂ ಮಾಡಿಕೊಳ್ಳುವುದಿಲ್ಲ. ನಾವಿಬ್ಬರೂ ಯಾರಿಗೆ ಬೇಡದಿದ್ದರೂ ನಿನಗೆ ನಾನು ಬೇಕು—ನನಗೆ ನೀನು ಬೇಕು. ನಿನ್ನನ್ನುಳಿದು ನಾನೆಲ್ಲೂ ಹೋಗುವುದಿಲ್ಲ. ವೈಬಿಟ್ಟು ಕಳೆಯಲಿ, ಈ ನರಕಕೂಪದಿಂದ ತೊಲಗಿ ನಾವಿಬ್ಬರೂ ದೂರ, ಯಾವ ಕಷ್ಟಕರ ಕಾಟ ಇಲ್ಲದ ಊರು ಹುಡುಕಿ ಹೋಗೋಣ. ನನ್ನ ರಟ್ಟೆ ಗಟ್ಟಿಯಿದೆ. ಕೂಲಿಡಿನಂತೆ ತೇದು ನಿನ್ನನ್ನು ಸಾಕುವೆನು. ಎಷ್ಟು ನೋವುಂಡಿರುವೆಯೊ ಅದಕ್ಕೆ ಹತ್ತರಷ್ಟು ನೂರರಷ್ಟು ಹಾಲು ಸಕ್ಕರೆಯೆರೆದು ನಿನ್ನನ್ನು ತಣಿಸುವೆನು, ಅಳಬೇಡ ಮರಿ!" ಎಂದು ಮತ್ತೆ ತಬ್ಬಿ ತಬ್ಬಿ ಮುದ್ದಿಟ್ಟು ತನ್ನ ಅಮೃತಮಯ ಪ್ರೀತಿಯಿಂದ ಅದನ್ನೂ ತಣಿಸಿ ತಾನೂ ತಣಿದಳು.

ಆ ಹೊಸ ಭಾವ ಅವಳಲ್ಲಿ ಮೂಡಿ ಬಾಳಿಗೆ ಮತ್ತೆ ಗರಿ ಮೂಡಿಸಿತು.

ಆದ ನೋವನ್ನೆಲ್ಲ ಮರೆತು ಮಗುವನ್ನು ಎದೆಗವಚಿಕೊಂಡೆ ಕೆಲಸಕ್ಕೆದ್ದು ನಡೆದಳು.

ಒಳಗೆ ಅಷ್ಟು ಅಬ್ಬರಿಸಿ ಬಂದ ಗೋಪಿ ಸೀತಾರಾಮುವಿನೊಡನೆ ಕೇಕೆ ಹಾಕಿ ಹಣ್ಣು ತಿನ್ನುತ್ತ ಕುಳಿತಿದ್ದ. ಅವನಿಗೆ ಅವರಿಬ್ಬರನ್ನು ನೋಯಿಸಿದಷ್ಟೂ ಹರುಷ ಹೆಚ್ಚುತಿತ್ತು. ಅವರಿಗೆ ತಾನು ಕೊಡುತ್ತಿದ್ದ ಯಾತನೆಯನ್ನು ನೆನೆ ನೆನೆದು ಮೈ ಕುಣಿಸಿ ಕುಣಿಸಿ ನಗುತ್ತಿದ್ದ.

"ಇದೇನೈಯ್ಯ, ಇವತ್ತಿಷ್ಟು ಖುಷಿಯಾಗಿರುವೆ?" ಎಂದು ಸೀತಾರಾಮು ಅವನ ನಗುವನ್ನು ತಡೆದು ಕೇಳಿದ.

"ನನ್ನ ಬೆನ್ನಿಗೆ ಹತ್ತಿದ ಶನಿ ಸವೆಯುತ್ತ ಬರುತ್ತಿದೆ. ಇನ್ನು ಹೆಚ್ಚು ದಿನ ಅದರ ಕಾಟವಿಲ್ಲ. ಸದ್ಯದಲ್ಲೆ ಪ್ರಯಾಣ ಖಂಡಿತ. ಅದಕ್ಕೆ ನನಗಿಷ್ಟು ಖುಷಿ" ಎಂದು ಮತ್ತೂ ಹೊಟ್ಟೆ ಕುಣಿಸಿ ನಕ್ಕನು.

ಸೀತಾರಾಮುವೂ ನಗುನಗುತ್ತಲೆ ಉತ್ತರವಿತ್ತ,

"ಹಠ ಸಾಧಿಸುವುದರಲ್ಲಿ ನೀನು ಪಕ್ಕಾ ಆಸಾಮಿ ಕಣೈಯ್ಯ!"

"ಅಷ್ಟಿಲ್ಲದೆ ಮತ್ತಿನ್ನೇನು? ಈ ಗುಂಡಿಗೆ ಸಾಮಾನ್ಯದ್ದಲ್ಲ. ಅನ್ಯಾಯ ಮಾಡಿದವರನ್ನು ಅಪ್ಪಳಿಸಿ ಹಾಕುವುದೆ!"

"ಹೋಗಲಿ ಬಿಟ್ಟುಬಿಡು—ಹೇಗೂ ನಾಣಿ ಬೇರೆಯಾದನಲ್ಲಾ—ಇನ್ನೇಕೆ ಆ ಬಡ ಪ್ರಾಣಿಯ ಮೇಲೆ ವಿಷ ಕಾರುವೆ?"

ಗಂಟುಮುಖ ಹಾಕಿಕೊಂಡು ಬಿರುಸಿನ ಬಾಣ ಬಿಟ್ಟ,

"ನೋಡು ಸೀತಾರಾಮು, ಆ ಒಂದು ಮಾತಿಗೆ ಮಾತ್ರ ನೀನು ತಲೆ ಹಾಕಿ ಬರಬಾರದು. ಹಾಗೆ ಮಾಡಿದೆಯೆಂದರೆ ನಿನಗೂ ಇಲ್ಲಿಂದ ಉಚ್ಚಾಟನೆ ಖಂಡಿತ."

ಆ ಒರಟನನ್ನು ಎದುರಿಸುವ ಚೈತನ್ಯ ಸಾಲದೆ ತಾನೂ ಮಾತು ತಿರುಗಿಸಿದ,

"ಹೋಗಲಿ ಬಿಡು ಆ ಮಾತು. ನನ್ನನ್ನು ಬರಹೇಳಿದ್ದೇಕೆಂದು ಹೇಳಲೆ ಇಲ್ಲವಲ್ಲ?"

"ಭಟ್ಟರು ಇತ್ತೀಚೆಗೆ ನನ್ನ ಸಂಸಾರಕ್ಕೆ ತಲೆ ಹಾಕಿ ಬರುವುದು ಹೆಚ್ಚಾಗಿ ಹೋಗಿದೆ. ಏನಾದರೂ ಮಾಡಿ ಅದನ್ನು ತಡೆಯಬೇಕಲ್ಲಾ!"

"ನಾನೂ ಅದೇ ನಿನಗೆ ಹೇಳಬೇಕೆಂದಿದ್ದೆ. ಊರೆಲ್ಲ ಅವರ ಮೇಲೆ ಏನೇನೊ ಹೇಳುವರು!"

ಅವನು ಹೇಳಿದ್ದೆ ಒಂದು, ಇವನು ಅರ್ಥ ಮಾಡಿದ್ದೆ ಒಂದು! ಅಂತೂ ಸಂದರ್ಭಕ್ಕೆ ತಕ್ಕಂತೆ ಹೊಂದಿಸಿ ಮಾತಾಡಿದ್ದ.

"ಆ ಮಾತು ನನಗೂ ಕಿವಿಗೆ ಬಿದ್ದಿದೆ. ತಂದೆಗೆ ಬದಲಾಗಿ ನಮ್ಮನ್ನೆಲ್ಲ ಸಾಕಿ ಸಲಹಿದ್ದಾರಲ್ಲ, ಎನ್ನುವ ಗೌರವದಿಂದ ಇಷ್ಟು ದಿನ ಸುಮ್ಮನಿದ್ದೆ. ಅವರಿಗಿನ್ನು ತಕ್ಕ ಬುದ್ಧಿ ಕಲಿಸದಿದ್ದರೆ ಸಂಸಾರವೂ ಸಂಜಿನ ಪಾಲಾಗುವುದು, ಶಾಂತಳೂ ಹೆಮ್ಮಾರಿಯಾಗುವಳು! ಆಮೇಲೆ ನಾನು ಹೂಡಿದ ಪ್ರಯತ್ನವೆಲ್ಲ ಮಣ್ಣಾಗುವುದು!"

"ಅವರೊಬ್ಬರಿಗೆ ಶಿಕ್ಷೆಯಿತ್ತರೇನು ಸಾರ್ಥಕ? ನಾಣಿಯನ್ನೂ ಬಗ್ಗು ಬಡಿಯಬೇಕು. ಅಲ್ಲಿಂದ ಕಿವಿ ತುಂಬಿಕೊಂಡು ಬಂದವನ್ನೆ ಅವರಿಲ್ಲಿ ಕಾರುವುದು."

ನಾಣಿಯಲ್ಲಿ ಹಗೆ ತೀರಿಸಿಕೊಳ್ಳುವ ಕಾತರತೆಯಿದ್ದ ಸೀತಾರಾಮು ಆ ಅವಕಾಶವನ್ನುಪಯೋಗಿಸಿಕೊಂಡು ಸುಳ್ಳು ಸುಳ್ಳೆ ಹೇಳಿ, ಅವನ ಬಗ್ಗೆ ಗೋಪಿಯ ಹೃದಯದಲ್ಲಿ ದ್ವೇಷದ ಬೆಂಕಿಯಾಡಿಸಿದ.

"ಅದು ನನಗೂ ಗೊತ್ತು. ಅದಕ್ಕಿನ್ನೂ ಸ್ವಲ್ಪಕಾಲ ಬೇಕು. ಆ ಕೆಲಸ ನಾನೆ ಮಾಡುವೆನು. ಯಾವುದಕ್ಕೂ ಮೊದಲು ಈ ಶನಿಯ ಬಲಿಯಾಗಬೇಕು."

ನಾಣಿಯ ಬಗ್ಗೆ ಗೋಪಿ ತಳೆದ ಭಾವನೆಯನ್ನೂ ಅದನ್ನು ತುಂಬಿಕೊಳ್ಳಲು ಇರುವ ಕಾತರತೆಯನ್ನೂ ಕಂಡು ಹಿಗ್ಗಿ ಹೇಳಿದ,

"ಹಾಗಾದರೆ ಭಟ್ಟರ ಬೇಟೆ ನಾನೇ ಆಡಬೇಕೆನ್ನುವಿಯಾ!"

"ಹೌದು ಪುಣ್ಯಾತ್ಮ, ಆ ಕೆಲಸ ನೀನೆ ಮಾಡಬೇಕು. ಎಷ್ಟಾದರೂ ಸಾಕಿದವರು—ಮಮತೆ ಬಾಧಿಸಿದರೆ ಕಷ್ಟ!"

"ಅದು ಸರಿ, ಅವರು ಕೈಗೆ ಸಿಗುವುದಾದರೂ ಹೇಗೆ? ಹೊರಗೆಲ್ಲೂ ಹೆಚ್ಚಾಗಿ ಓಡಾಡುವುದೆ ಕಾಣುವುದಿಲ್ಲ!"

ಗೋಪಿ ಸ್ವಲ್ಪ ಹೊತ್ತು ಯೋಚಿಸಿ ಹೇಳಿದ,

"ಸಾಯಂಕಾಲ ಮನೆಗೆ ಹೋಗುವವನು ಅಂಗಡಿಗೆ ಬಂದು ಹೋಗು, ಯಾವುದೂ ತಿಳಿಸುವೆನು."

ಸೀತಾರಾಮು ಆಗಲಿಯೆಂದು ತಲೆ ಹಾಕಿ ಕಾಫಿ ಹೀರತೊಡಗಿದ. ಗೋಪಿಯೂ ಕಿಟಕಿಯ ಕಡೆ ಏನನ್ನೋ ನೋಡುತ್ತಾ ಕಾಫಿ ಚಪ್ಪರಿಸ ತೊಡಗಿದ.

ಅಷ್ಟರಲ್ಲಿ ಮಗು ಸದ್ದು ಮಾಡದೆ ಬಂದು ಸೀತಾರಾಮು ತಿಂದು ಬಿಟ್ಟಿದ್ದ ಹಣ್ಣಿನ ಹೋಳಿಗೆ ಹೆದರಿ ಹೆದರಿ ಕೈಯಿಕ್ಕಿತು. ಗೋಪಿ ಅದರಕಡೆ ಸಪ್ಪನೆ ತಿರುಗುವುದಕ್ಕೂ ಮಗು ಹೊರಡುವುದಕ್ಕೂ ಸಮನಾಯಿತು. ಕೆರಳಿ ಕೈಲಿ ಅರ್ಧ ಕುಡಿದು ಹಿಡಿದಿದ್ದ ಕಾಫಿಯ ಬಟ್ಟಲನ್ನು ಅದರ ಎಡಗಣ್ಣಿಗೆ ಗುರಿಯಿರಿಸಿ ರೊಯ್ಯನೆ ಬೀಸಾಡಿದ. ಬಟ್ಟಲು ಕಣ್ಣಿನ ಗುಡ್ಡೆಗೆ ತಾಕಿ ಕೆಳಗೆ ಬಿತ್ತು. ಗುಡ್ಡೆ ಕೆಂಪು ತುಂಬಿ ರಕ್ತ ಕಾರುವಂತಾಯಿತು. ಸುತ್ತಲೂ ಕೆಂಡಕ್ಕೆ ಹಾಕಿದ ರೊಟ್ಟಿಯಂತೆ ಬುರು ಬುರು ಊದಿತು. ಯಾತನೆ ತಡೆಯಲಾರದೆ ಮಗು ಚೀರಿಡುತ್ತಾ ಕೆಳಗೆ ಬಿದ್ದು ಬಿದ್ದು ಹೊರಳಾಡಿತು. ಸೀತಾರಾಮು ಕೆಡುಕನಾದರೂ ಆ ಹಸುಗೂಸು ಯಾತನೆಪಡುವುದನ್ನು ಕಣ್ಣಿಂದ ನೋಡಲಾರದೆ ಹೋದ. ಎತ್ತಿ ಸಮಾಧಾನ ಮಾಡಲೆಂದು ಬಗ್ಗಿದವನ ರಟ್ಟೆಯನ್ನು ಹಿಡಿದೆಳೆದು ಹೇಳಿದ ಗೋಪಿ,

"ಥೂ ಮುಟ್ಟಬೇಡ, ಅದು ಪಾಪದ ಮಗು ನಿನ್ನ ಕೈಗೂ ಪಾಪ ಸೋಂಕೀತು!"

ಸೀತಾರಾಮು ಗೋಪಿಯ ಮಾತಿಗೆ ಎರಡಾಡಲಾರದೆ ಬೆಪ್ಪಾಗಿ ನಿಂತು ಬಿಟ್ಟ.

ಅಷ್ಟರಲ್ಲಿ ಚೀರಿದ ಶಬ್ದವನ್ನು ಕೇಳಿ ಶಾಂತ ಓಡಿ ಬಂದು ಮಗುವಿನ ಬಳಿ ಕೂತು ಎತ್ತಿ ಎದೆಗವುಚಿ ಕಣ್ಣಿಗಾದ ರಂಪವನ್ನು ಕಂಡು ಸೀತಾರಾಮು ಇರುವುದನ್ನು ಲಕ್ಷಿಸದೆ ಕೆರಳಿದ ಸಿಂಹಿಣಿಯಂತೆ ಕಟಕಟ ಹಲ್ಲು ಕಡಿಯುತ್ತ ಕೇಳಿದಳು,

"ನನ್ನ ಮಗುವನ್ನು ಹೊಡೆಯಲು ನೀವು ಯಾರು? ಯಾರನ್ನು ಕೇಳಿ ಮಗುವಿನ ಮೈ ಮುಟ್ಟಿದಿರಿ?"

ಗೋಪಿಯೂ ಅಷ್ಟೇ ಜೋರಿನಲ್ಲಿ ಅಬ್ಬರಿಸಿದ,

"ನನ್ನ ಮನೆಯಲ್ಲಿರುವಷ್ಟು ದಿನ ನನಗೆ ಆ ಹಕ್ಕಿದೆ. ನನ್ನ ಅನ್ನದ ಕೂಲಿ ತೆಗೆದುಕೊಳ್ಳಲು ಯಾರ ಅಪ್ಪಣೆಯೂ ನನಗೆ ಬೇಕಿಲ್ಲ."

"ನಿಮ್ಮ ಮನೆಯಲ್ಲಿದ್ದರೆ ತಾನೆ ನಿಮಗೆ ಆ ಹಕ್ಕು! ಈ ಕ್ಷಣ ನಿಮ್ಮ ಮನೆ ಬಿಟ್ಟು ಹೊರಡುವೆನು. ರಟ್ಟೆ ಮುರಿದು ತಿನ್ನುವವಳಿಗೆ ಎಲ್ಲಾದರೇನು? ಈ ನರಕದ ಅನ್ನಕ್ಕೆ ಬೆವರು ಹರಿಸುವುದಕ್ಕಿಂತ ಬೇರೆಲ್ಲಾದರೂ ಹೋಗಿ ಕೂಲಿ ಮಾಡಿದರೆ ಮಗುವಿನ ಪ್ಯೈಂಗಾದರೂ ಗಟ್ಟಿಯಾಗುತ್ತೆ. ನಿಮ್ಮ ಅರಗೂಳನ್ನು ನೀವೇ ತಿಂದು ಬದುಕಿ. ಆ ದರಿದ್ರ ಕೂಳು, ಪಾಪದ ಕೂಳು ನನಗೂ ಬೇಡ ನನ್ನ ಮಗುವಿಗೂ ಬೇಡ. ಬೆಂಕಿ ಬೀಳಲಿ ಆ ಅನ್ನಕ್ಕೆ!"

ಕೋಪ ದುಃಖವಾಗಿ ಕಣ್ಣೀರಿಡುತ್ತಾ, ಮಗುವಿನ ಕೆನ್ನೆ ಸೇವರಿಸುತ್ತಾ ಗದ್ಗದ ಧ್ವನಿಯಲ್ಲಿ ಹೇಳಿದಳು,

"ಅಳಬೇಡ ಕಂದ, ನಿನಗಿನ್ನು ಈ ನರಕದ ಯಾತನೆಯ ಹೆದರಿಕೆಯಿಲ್ಲ. ನಾವಿಬ್ಬರೂ ಯಾವ ಕಟುಕರ ಕಣ್ಣಿಗೂ ಬೀಳದಷ್ಟು ದೂರ ಹೋಗಿ ಬದುಕೋಣ ಅಳಬೇಡ. ಸುಮ್ಮನಿರು!" ಎಂದು ಎರಡು ಹೆಜ್ಜೆಯಿರಿಸುವುದರಲ್ಲೆ ಕಾಂತಳ ಮಾತಿನಿಂದ ಉರಿದೆದ್ದು, ಬೀರುವಿನಲ್ಲಿರಿಸಿದ್ದ ಕೈಗೋಲನ್ನು ಹುಡುಕಲು ಹೋದ ಗೋಪಿ ಕೈಗೆ ಸಿಗದೆ ಹಾಗೇ ಹಿಂದಿರುಗಿ, ರೋಷದ ಹುಲಿಯಂತೆ ಅವಳ ಬಳಿ ಹಾರಿಬಂದು ತಲೆಯನ್ನು ಗುಂಜಾಡುತ್ತಾ ಅಬ್ಬರಿಸಿದ,

"ರಂಡೆ! ನಿನಗಾ ಸ್ವತಂತ್ರವಿತ್ತವರು ಯಾರು?"

"ನಿಮ್ಮ ಪ್ರೀತಿ ಕಮರಿದಂದು ಆ ಸ್ವತಂತ್ರ ತಾನೆ ಬಂದು ನನ್ನನ್ನಾಶ್ರಯಿಸಿದೆ. ಬೇಕೆಂದು ನೀವೆ ನನ್ನ ಬಳಿ ಕಳುಹಿಸಿರುವಿರಿ. ನಾನೆ ಉಪಯೋಗಿಸಿಕೊಂಡಿರಲಿಲ್ಲ. ಈಗ ಅದಕ್ಕೆ ಸಕಾಲ ಬಂದಿದೆ" ಎಂದು ಅವನ ಅಬ್ಬರಕ್ಕೆ ಕೊಡುವ ಯಾತನೆಗೆ ಜಗ್ಗದೆ, ಮಾತಿಗೆ ತಕ್ಕ ಉತ್ತರವಿತ್ತು ಹೆಜ್ಜೆ ಮುಂದಿರಿಸಿದಳು.

ಅವಳ ಅಡ್ಡಬಂದು ಗೋಪಿ ಅಬ್ಬರಿಸಿ ಅರಚಿದ,

"ಏ ನಾಯಿ, ಒಂದು ಹೆಜ್ಜೆ ಮುಂದಿರಿಸಿದರೆ ನಿಮ್ಮಿಬ್ಬರದೂ ಗತಿ ಮುಗಿಯಿತೆಂದು ತಿಳಿ. ಜೀವದ ಮೇಲೆ ಆಶೆಯಿದ್ದರೆ ಬಾಯಿ ಮುಚ್ಚಿ ತೆಪ್ಪಗೆ ಒಳಗೆ ಹೋಗು, ಇಲ್ಲದಿದ್ದರೆ .. ....... !"

"ಇನ್ನು ನಿಮ್ಮ ಯಾವ ಬೆದರಿಕೆಗೂ ನಾನು ಹೆದರುವುದಿಲ್ಲ. ನಮ್ಮಿಬ್ಬರ ಬಲಿ ಆಗಲೇಬೇಕೆಂದಿದ್ದರೆ, ನಿಮ್ಮಿಂದಾಗುವುದು ಬೇಡ; ನನ್ನಿಂದಲೇ ಆಗಲಿ" ಎಂದು ಮತ್ತೆ ಹೆಜ್ಜೆ ಮುಂದಿರಿಸಿದಳು.

ಗೋಪಿಯೂ ಎರಡು ಹೆಜ್ಜೆ ಮುಂದಿರಿಸಿ ಅಬ್ಬರಿಸಿದ,

"ನೀನೇನಾದರೂ ಮನೆ ಬಿಟ್ಟು ಹೋಗಬೇಕಂತೆ, ನಿಮ್ಮಪ್ಪನನ್ನು ಗುಂಡಿಕ್ಕಿ ಕೊಲ್ಲುವೆನು, ಜೋಕೆ !"

ಶಾಂತ ಆ ಮಾತು ಕೇಳಿ ನಿಜಕ್ಕೂ ಹೆದರಿದಳು. ಅವಳ ಬೆನ್ನು ತಟ್ಟಿ ಎದೆ ಮುಂದು ಮಾಡಿ ನಿಂತಿದ್ದ ಧೈರ್ಯ-ಸ್ಥೈರ್ಯಗಳೆಲ್ಲ ಕುಸಿದು ಬಿದ್ದವು. ತನ್ನಿಂದ ತನ್ನ ತಂದೆ–ತಾಯಿಗಳಿಗೆ ತೊಂದರೆಯಾಗುವುದನ್ನು ಕಾಣಲು ಕಣ್ಣು ಹೆದರಿತು. ತನ್ನ ಪಾಪಕರ್ಮಕ್ಕೆ ಅವರನ್ನು ಗುರಿಮಾಡಲೊಪ್ಪದೆ ಜೀವ ಮುದುಡಿತು. ಗೋಪಿ ಎಲ್ಲರಂತಲ್ಲ; ಆಡಿದ ಮಾತನ್ನು ಮಾಡಿ ತೋರಿಸು ವವನು. ಮಹಾ ಮೂರ್ಖ. ಅವನನ್ನು ಎದುರು ಹಾಕಿಕೊಂಡು ಹೆಜ್ಜೆ ಹೆಜ್ಜೆಗೂ ಯಮಯಾತನೆ ಪಡುವುದಕ್ಕಿಂತ, ಸಾವಧಾನವಾಗಿ ಉಪಾಯದಿಂದ ಬುದ್ಧಿ ಗಲಿಸಬೇಕೆಂಬ ಭಾವನೆ ಹೊಳೆದು ಬಂದು,

"ಸದ್ಯ ಆ ಕೆಲಸ ಮಾತ್ರ ಮಾಡಬೇಡಿ. ಏನಿದ್ದರೂ ನಿಮ್ಮ ಪೌರುಷ ನಮ್ಮಿಬ್ಬರಲ್ಲೇ ಮುಗಿದು ಹೋಗಲಿ. ನಿಮಗಾಗಿ ಕರುಣೆ ಬರುವವರೆಗೆ ನೀವಿತ್ತ ಯಾತನೆ ಅನುಭವಿಸುವೆನು—ಆದದ್ದಾಗಲಿ" ಎಂದು ಮುಂದಿಟ್ಟ ಹೆಜ್ಜೆ ಯನ್ನು ಹಿಂದೆ ಹಾಕಿ ಒಳಗೆ ಹೋದಳು.

ಗೋಪಿ ದೊಡ್ಡದಾಗಿ ನಕ್ಕು, ಬಟ್ಟೆ ಧರಿಸಿ ಸೀತಾರಾಮುವಿನ ಬೆನ್ನ ಮೇಲೆ ಬಡಿದು,

"ನಡಿಯೈಯ್ಯ, ಆಗಲೆ ಗಂಟೆ ಐದೂವರೆಯಾಯಿತು, ಅಂಗಡಿಗೆ ಹೋಗೋಣ" ಎಂದು ಹೆಜ್ಜೆ ಮುಂದಿರಿಸಿದ.

ಜೀವನದ ಕರಾಳ ನೃತ್ಯ ಕಂಡು ಕಣ್ಣು ಕತ್ತಲೆ ಬಂದು ಬೆಪ್ಪಾಗಿ ನಿಂತಿದ್ದ ಸೀತಾರಾಮು, ಅವನ ಕರೆಯಿಂದೆಚ್ಚೆತ್ತು ಮೂಕನಂತೆ ಅವನನ್ನು ಹಿಂಬಾಲಿಸಿದ; ಶಾಂತಳನ್ನು ತಾನೂ ಬಯಸಿದ್ದ. ಒಂದಲ್ಲ ಒಂದು ದಿನ ಅವಳನ್ನು ಕೆಣಕಬೇಕೆಂದು ಸಮಯವನ್ನೂ ಕಾಯುತ್ತಿದ್ದ. ಇಂದು ಗೋಪಿಯ ಸ್ವಭಾವದ ನಗ್ನತೆ ಕಣ್ಣಿಗೆ ಬಿದ್ದು, ಭೀತಿ ಬಂದು ತನ್ನಾ ಬಯಕೆಯನ್ನೂ ಸಮೂಲವಾಗಿ ಕಿತ್ತೆಸೆದ.

ಅವರು ಹೋಗುವುದಕ್ಕೂ ಹಣ್ಣಿನ ಚೀಲ ಹಿಡಿದು ಭಟ್ಟರು ಬರುವು ದಕ್ಕೂ ಸಮನಾಯಿತು. ಮಗುವನ್ನು ತೊಡೆಯಲ್ಲಿರಿಸಿ ದೇವರ ಮುಂದೆ ಬಳ

ಬಳನೆ ಕಣ್ಣೀರು ಸುರಿಸುತ್ತ ಕುಳಿತಿದ್ದ ಶಾಂತಳನ್ನು ಕಂಡು–ಬೆಚ್ಚಿ ಬಿದ್ದು ಕೇಳಿದರು,

"ಏನಾಯಿತು ಮಗು ಮತ್ತೆ ?"

ನಡೆದ ವಿಷಯವನ್ನು ಅಕ್ಷರಶಃ ತಿಳಿಸಿ, ಹೇಳಿದಳು.,

"ನನ್ನಿಂದ ನಮ್ಮ ತಂದೆ–ತಾಯಿಗೆಲ್ಲಿ ತೊಂದರೆಯಾಗುವುದೊ ಎನ್ನುವ ಹೆದರಿಕೆ ಬಂದುಬಿಟ್ಟಿದೆ; ಅವರು ಯಾವುದಕ್ಕೂ ಹೇಸದವರು."

"ಬಾಯಿ ಮಾತಾಗಲಿಲ್ಲ—ಇದ್ದವರಿಗೆಲ್ಲ ಬೆಜ್ಜರಿಕೆ ಹಾಕಲು ! ಕಾನೂನು ಸತ್ತು ಬಿದ್ದಿದೆಯೆ ! ಅವರನ್ನು ಗುಂಡಿಕ್ಕಿ ಕೊಂದರೆ ಇವನನ್ನು ಶೂಲಕ್ಕೇರಿಸುವರು, ಹಾಗೇ ಎಂದಿಗೂ ಬಿಡುವುದಿಲ್ಲ. ಆ ಹೆದರಿಕೆ ಅವನಿಗೆ ಚೆನ್ನಾಗಿದೆ. ನಿನ್ನನ್ನು ಹೆದರಿಸಲು ಹಾಗೆಲ್ಲ ಮಾತಾಡುವನು. ಅವನಿಗೆ ನಿಜವಾಗಿಯೂ ಆ ಧೈರ್ಯವಿದ್ದಿದ್ದರೆ ನಿನ್ನ ಕತ್ತು ಹಿಸುಕಿ ಎಷ್ಟೋ ದಿನವಾಗಬೇಕಿತ್ತು. ಕಾನೂನಿನ ದೃಷ್ಟಿಯಲ್ಲಿ ತಾನು ಅಪರಾಧಿಯಾಗಬಾರದೆಂದೆ ನಿನಗೀ ಚಿತ್ರಹಿಂಸೆ ಕೊಡುತ್ತಿರುವನು. ಏನೇ ಆಗಲಿ, ನೀನು ಮಾತ್ರ ಮೈಗಟ್ಟಿಯಾಗಿಟ್ಟುಕೊಂಡಿರಬೇಕು. ನೋಡು ಶಾಂತ, ಇಲ್ಲದಿದ್ದರೆ ನಮ್ಮ ಪ್ರಯತ್ನವೆಲ್ಲ ಮರಳುಗಾಡಿನಲ್ಲಿ ನೀರು ತುಂಬಿಟ್ಟಂತಾಗುವುದು." ಎಂದು ತಂದಿದ್ದ ಹಣ್ಣನ್ನು ಅವಳ ಕೈಗಿತ್ತು, ಮಲಗಿದ್ದ ಮಗುವನ್ನು ಮೆಲ್ಲನೆ ಪಕ್ಕಕ್ಕೆ ಹೊರಳಿಸಿದರು. ಪೆಟ್ಟಾದ ಕಣ್ಣನ್ನು ಕಂಡು ಗಾಬರಿಯಿಂದ ಬಿಳಚಿಹೋದಂತಾಗಿ ಹೇಳಿದರು,

"ನೋಡಿದವರ ಕಣ್ಣು ಕಳಚಿ ಬೀಳುವಂತಿದೆಯಲ್ಲಾ—ಅವನೆದೆ ಎಷ್ಟು ಕಲ್ಲಿರಬೇಕು ! ಅರಿಯದ ಕೂಸಿನ ಮೈಮೇಲೆ ಕೈಮಾಡಿದವನು ಮನುಷ್ಯನೆ? ಇಂಥಾ ಕಟುಕರನ್ನು ನಾನೆಲ್ಲೂ ನೋಡಿಲ್ಲ. ಮಗುವಿಗೆ ಬೆಚ್ಚಗೆ ಬಟ್ಟೆ ಹಾಕಿ ಕೊಡು, ವೈದ್ಯರ ಬಳಿ ಕರೆದುಕೊಂಡು ಹೋಗಿ ಬರುವೆನು ಮೊದಲು."

ಶಾಂತ ಎದ್ದು ಮಗುವಿಗೆ ಒಗೆದ ಅಂಗಿ ತೊಡಿಸಿ, ಮೈತುಂಬ ಬೆಚ್ಚಗೆ ಶಾಲು ಹೊದಿಸಿ ಭಟ್ಟರ ಕೈಗಿತ್ತು ಕಣ್ಣೀರಿಡುತ್ತಾ ಗದ್ಗದ ಧ್ವನಿಯಿಂದ ಹೇಳಿದಳು,

"ಈ ಯಮಯಾತನೆಯನ್ನು ನಾವಿನ್ನೂ ಎಷ್ಟು ದಿನ ಸೈಸಬೇಕು ಮಾವಾ ! ಇದಕ್ಕೆ ಕೊನೆ ಮೊದಲೆ ಇಲ್ಲವೆಂದು ಕಾಣುತ್ತೆ."

ಭಟ್ಟರೂ ಪಂಚೆಯ ಸೆರಗಿನಿಂದ ಕಣ್ಣೊರೆಸುತ್ತ ಹೇಳಿದರು,

"ಇನ್ನು ಸ್ವಲ್ಪ ದಿನ ಸಹಿಸಿಕೊ, ತಾಯಿ. ಗೋಪಿ ದಾರಿಗೆ ಬರದಿದ್ದರೆ ನಿನಗೇನಾದರೂ ಒಂದು ವ್ಯವಸ್ಥೆ ಮಾಡುವೆವು. ಸೂರಪ್ಪನೂ ಅದೇ ನಿರ್ಧಾರಕ್ಕೆ ಬಂದಿದ್ದಾರೆ; ರಂಗಮ್ಮ-ನಾಣಿ ಕೂಡ ಅದೇ ಅಭಿಪ್ರಾಯವಿತ್ತಿದ್ದಾರೆ. ನೀನಿನ್ನು ಸ್ವಲ್ಪ ದಿನ ಕಲ್ಲಿನಂತಾಗಬೇಕು. ಮರೆತೂ ಅವನಿಗೆ ಮಾರುತ್ತರ ಕೊಡಬೇಡ. ಆದರಿಂದ ನಿನಗೇ ತೊಂದರೆ ಹೆಚ್ಚು. ಅವನು ಹೇಳಿದಂತೆ ನಡೆದುಕೊಂಡು ಬಿಡು. ನಿನ್ನ-ಮಗುವಿನ ಉಳಿದ ರಕ್ಷಣೆ ನಾನು ಮಾಡುವೆನು. ಆ ಪ್ರಯೋಗವನ್ನೂ ಮಾಡಿ ನೋಡಿ ಬಿಡೋಣ. ಮುಂದೆ ಭಗವಂತನ ಇಚ್ಛೆಯಿದ್ದಂತಾಗಲಿ."

"ಹಾಗೇ ಆಗಲಿ. ಇನ್ನುಮೇಲ್ ತುಟಿ ಎರಡು ಮಾಡದೆ ಅವರು ಹೇಳಿದಂತೆ ನಡೆದುಕೊಂಡಿರುವೆನು. ಅವರ ಕಟುಕತನದಿಂದ ಮನಸ್ಸಿಗೆ ಮುಳ್ಳು ಚುಚ್ಚಿದರೂ ನಾಲಿಗೆ ಬಿಚ್ಚುವುದಿಲ್ಲ; ಅರಚಿ-ಅರಚಿ ಅವರ ನಾಲಿಗೆ ಸತ್ತರೂ ಉತ್ತರ ಕೊಡುವುದಿಲ್ಲ. ನನಗೆ ಅವರೊಡನೆ ಮಾತನಾಡಿ ತಾನೆ ಆಗಬೇಕಾದದ್ದೇನು! ಎಂದೋ ಅವರು ನನ್ನ ಮನಸ್ಸಿನಿಂದ ದೂರವಾಗಿ ಹೋಗಿದ್ದಾರೆ. ಮರ್ಯಾದೆಗಾಗಿ ಅವರೊಡನೆ ಬಾಳಬೇಕಾಗಿದೆ ಅಷ್ಟೆ!"

"ಇರಲಿ. ಈಗಲೆ ಆ ನಿರ್ಧಾರಕ್ಕೆ ಬರಬೇಡ. ಒಳ್ಳೆಯದಾದೀತು—ನೋಡೋಣ" ಎಂದು ಹೆಜ್ಜೆ ಮುಂದಿರಿಸಿ ಮತ್ತೆ ನಿಂತು "ಮರೆತಿದ್ದೆ ಓಡಿ, ಮಗುವನ್ನು ಕರೆದುಕೊಂಡು ಬರುವುದರಲ್ಲಿ ಕಾಫಿ ಮಾಡಿರಿಸು" ಎಂದು ಕಾಫಿ ಪುಡಿ ಸಕ್ಕರೆ ಪೊಟ್ಟಣವನ್ನಿತ್ತು, ಅಚ್ಚೇರು ಹಾಲು ಹಿಡಿಯುವಂಥಾ ಥಾಲಿಯೊಂದನ್ನು ತರಿಸಿಕೊಂಡು ಹೆಜ್ಜೆಗೆ ವೇಗ ತುಂಬಿದರು.

## ೧೯

ಶಾಂತ-ಭಟ್ಟರು ಹೇಳಿದ ಮಾತನ್ನು ಚಾಚೂ ತಪ್ಪದಂತೆ ನಡೆಸುತ್ತಿದ್ದಳು. ಗೋಪಿಯು ಯಾವ ಮಾತಿಗೂ-ಅದು ತನ್ನ ಕರುಳು ಕತ್ತರಿ

ಸುತ್ತಿದ್ದರೂ–ಪ್ರತಿ ಹೇಳುತ್ತಿರಲಿಲ್ಲ. ಊಟ ತಿಂಡಿಯಲ್ಲಿ ಅವನ ಅಂದಾಜಿಗಿಂತ ಕಡಿಮೆಯೆ ಉಪಯೋಗಿಸುತ್ತಿದ್ದಳು. ಮರೆತೂ ಅವನ ಕಣ್ಣೆದುರು ಮಗುವನ್ನು ಸುಳಿಯಗೊಡುತ್ತಿರಲಿಲ್ಲ. ಅವನು ಮನೆಯಲ್ಲಿದ್ದ ವೇಳೆಯಲ್ಲಿ ಪಕ್ಕದ ಮನೆಯ ಶಾರದಮ್ಮನ ಹತ್ತಿರ ಬಿಟ್ಟು ಬರುತ್ತಿದ್ದಳು. ಕೊಠಡಿ ಶುದ್ಧ ಮಾಡುವುದು, ಬಟ್ಟೆ–ಬರೆ ಅಣಿ ಮಾಡಿಡುವುದು, ನೀರೆರೆಯುವುದು, ಬಡಿಸುವುದು ಯಾವುದರಲ್ಲೂ ಮಾತಿಗಾಸ್ಪದವಾಗದಂತೆ ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿದ್ದಳು. ಆದರೂ ಆಗಾಗ [illegible] ಗೋಪಿ ಅಬ್ಬರಿಸುತ್ತಿದ್ದ; ಸಂಗಡ ಕೈಯೂ ಮುಂದು ಮಾಡುತ್ತಿದ್ದ.

ಒಂದು ಮಧ್ಯಾಹ್ನ ಗೋಪಿ ಕೈಯಲ್ಲಿ ಯಾವುದೋ ಅಂಚೆಯ ಕಾಗದ ಹಿಡಿದು ಮನೆಗೆ ಬಂದ. ಮುಖದಲ್ಲಿ ಸಿಟ್ಟು ದುಮುದುಮುಸುತಿತ್ತು. ಆ ಕೂಡಲೆ ಹೊರಗೆ ಕಾರಲು ಅವಕಾಶವಾಗಲಿಲ್ಲ. ಬಹುವಾಗಲೆ ಹೊತ್ತಾಗಿತ್ತು. ಅಭ್ಯಂಜನ ಬೇರೆ ಮಾಡಿಕೊಳ್ಳುವ ದಿನ. ಹೊಟ್ಟೆ ಬೇರೆ ಒಂದುಕಡೆ ಕಾಯುತ್ತಿದೆ. ಯಾವುದನ್ನು ತಡೆದರೂ ಹಸಿವನ್ನು ತಡೆಯಲು ಅವನಿಂದ ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಎದೆಯಲ್ಲಿ ಕುದಿಯುತ್ತಿದ್ದ ಭಾವನೆಯನ್ನು ಬದಿಗಿರಿಸಿ ಸ್ನಾನಕ್ಕಿಳಿದ. ಮೌನವಾಗಿ ಬಂದು ಶಾಂತ ನೀರೆರೆಯಲು ಮುನ್ಸೂಚನೆಯಾಗಿ ಸೆರಗನ್ನು ಸೊಂಟಕ್ಕೆ ಬಿಗಿದಳು.

ನೀರು ಹವಣು ಮಾಡುತ್ತಿದ್ದ ಶಾಂತಳ ಕೆನ್ನೆಗೆ ಫಟ್ಟನೆ ಹೊಡೆದು ಹೇಳಿದ,

"ಏಯ್, ನಿಟ್ಟುಸಿರು ಬಿಡಲು ಸಿನಗಾದಸ್ತೇನು! ನಿನ್ನ ಸರಳಾಟಕ್ಕೆಲ್ಲ ನಾನು ಕರಗುವುದಿಲ್ಲ. ನನ್ನ ಮುಂದೆ ಅಸ್ಸುಸ್ಸೆನ್ನಬೇಡ ನೋಡು, ಸುಮ್ಮನಿರುವುದಿಲ್ಲ ಆಮೇಲೆ!"

ಶಾಂತ ನಿಟ್ಟುಸಿರಿಟ್ಟದ್ದು ನಿಜ; ಬೇಕೆಂದು ಹಾಗೆ ಮಾಡಿರಲಿಲ್ಲ. ಅನಾರೋಗ್ಯಕ್ಕೆ ತುತ್ತಾದ ದೇಹದಿಂದ ಅವಳ ಹತೋಟಿ ಮೀರಿ ಉಸಿರು ಅಬ್ಬರ ಮಾಡಿಕೊಂಡು ಹೊರಬರುತಿತ್ತು. ಏಕೊ ಏನೊ, ಈಗ ಹದಿನೈದು ದಿನಗಳಿಂದ ಸಂಜೆಯಾಯಿತೆಂದರೆ, ಹೇಳಿ ಕಳಿಸಿಕೊಂಡಂತೆ ಜ್ವರ ಮೈತುಂಬಿ ಬರುತ್ತಿದೆ. ಆದರ ಹಿಮ್ಮೇಳಕ್ಕೆ ಕೆಮ್ಮು ಬೇರೆ ಕಾಲಿಕ್ಕಿದೆ. ಎಂಥ ಜ್ವರವೊ

ಏನೊ, ಮೈಯನ್ನು ಹಣ್ಣು ಹಣ್ಣು ಮಾಡಿ ಬಿಟ್ಟಿದೆ. ಆಗಾಗ ಸುಸ್ತು ಸಂಕಟ ತಲೆದೋರಿ ಪೆಚ್ಚಾಗುತ್ತಿದ್ದಾಳೆ. ಮೊದಲಿನಷ್ಟು ಕೆಲಸ ಕೂಡ ಕೈಲಿ ಹರಿಯುತ್ತಿರಲಿಲ್ಲ. ಗೋಪಿಯ ರಾಕ್ಷಸತನಕ್ಕೆ ಹೆದರಿ ಎಳೆದಾಡಿಕೊಂಡು ಬಹಳ ಕಷ್ಟದಿಂದ ಮಾಡುತ್ತಿದ್ದಳು. ಈ ದಿನವೂ ಮೈಯಲ್ಲಿ ಜ್ವರ ತುಂಬಿತ್ತು. ಆ ಕಾವನ್ನು ಸಹಿಸಲಾರದೆಯೊ ಏನೊ, ಉಸಿರು ವೇಗವೇಗವಾಗಿ ಹೊಡೆದುಕೊಳ್ಳುತ್ತಿದೆ. ಆ ವೇಗವನ್ನು ತಡೆಯಲು ಅವಳಿಂದ ಸಾಧ್ಯವಾಗುತ್ತಲೆ ಇಲ್ಲ. ತಡೆಯದಿದ್ದರೆ ರೋಷ ತುಂಬಿದ ಹೆಬ್ಬುಲಿಯಂತೆ ಹಾರಿ ಬೀಳುವನು ಗೋಪಿ. ಏನು ಮಾಡುವುದೆಂದೆ ಗೊತ್ತಾಗಲಿಲ್ಲ. ಮಾತಾಡದೆ ನೀರೆರೆಯತೊಡಗಿದಳು. ಅಷ್ಟರಲ್ಲಿ ಸಿಟ್ಟಿನ ಬೆಂಕಿಯಿಂದ ಸಿಡಿದ ಮತ್ತೊಂದು ಕಿಡಿ ಹಾರಿ ಬಂತು.

"ಅಬ್ಬಾ! ಸತ್ತು ಹೋದೆ ನಾನು. ಮನಸ್ಸೆಲ್ಲಿಟ್ಟಿರುವೆ ಚಂಡಾಲಿ! ಕುದಿಯುವ ನೀರು ಹಾಕಿ ಮೈ ಚರ್ಮ ಸುಟ್ಟು ತೆಗೆಯಬೇಕೆಂದಿರುವೆಯೇನು? ಸ್ವಲ್ಪ ತಣ್ಣೀರು ಬೆರೆಸಿ ಹಾಕು ನಾಯಿ!"

ನೀರಿನಲ್ಲಿ ಅವನಿಗೆ ಬೇಕಾದಷ್ಟು ಕಾವಿತ್ತು. ಆದರೂ ಕೂಗಾಡಿದ್ದಾನೆ. ತಣ್ಣೀರು ಬೆರೆಸಿದರೆ ತಣ್ಣಗಾದರೇನು ಮಾಡುವುದು? ಬಿಸಿ ಮಾಡೆಂದರೆ ತಕ್ಷಣ ಮಾಡಲು ಸಾಧ್ಯವಿದೆಯೆ? ಬೆರೆಸಿದರೂ ಕಷ್ಟ, ಬೆರೆಸದಿದ್ದರೂ ಕಷ್ಟ. ಏನು ಮಾಡಲಿ? ಆದದ್ದಾಗಲಿಯೆಂದು ಎರಡು ಚೆಂಬು ತಣ್ಣೀರು ಬೆರೆಸಿ ಹಾಕಿದಳು. ಅವಳು ನೆನೆಸಿದ್ದಂತೆಯೆ ಆಯಿತು. ಮತ್ತೆ ಅದೇ ಅಬ್ಬರ ಗುಡುಗಿ ಬಂತು.

"ಥೂ ನಿನ್ನ ದರಿದ್ರ ಮುಸುಡಿಗಷ್ಟು ಬೆಂಕಿ ಹಾಕ. ಹದಣು ಮಾಡೆಂದರೆ ತಣ್ಣಗೆ ಮಾಡಿದ್ದೀಯಾ ಹೆಣದತ್ತ ರಂಡೆ! ಬಂದೆ, ಸ್ನಾನ ಮಾಡಿ ನಿನ್ನನ್ನು ವಿಚಾರಿಸುವೆನು" ಎಂದು ಅವಳ ಕೈಯಿಂದ ಚೆಂಬು ಕಸಿದು ತಾನೆ ಬರ ಬರ ನೀರು ಹುಯ್ದುಕೊಳ್ಳತೊಡಗಿದ.

ಏನು ಮಾಡಲೂ ತೋಚದೆ ಪೆಚ್ಚಾಗಿ ನಿಂತಿದ್ದ ಶಾಂತಳನ್ನು ಕಂಡು ಮತ್ತಷ್ಟು ಕಿಡಿಯಾಗಿ ಕೈಲಿ ಹಿಡಿದಿದ್ದ ನೀರಿನ ಚೆಂಬನ್ನು ರೊಯ್ಯನೆ ಅವಳ ಮೇಲೆಸೆದು ಕೂಗಿದ,

"ನನ್ನ ಕಣ್ಣೆದುರು ನಿಲ್ಲಬೇಡ— ಸಾಯಿ ಆಚೆ ನಾಯಿ!"

ಪ್ರೈಮೇಲೆಸೆದ ಚೆಂಬನ್ನು ಕಟ್ಟೆಯ ಮೇಲಿರಿಸಿ, ಒದ್ದೆಯಾದ ಬಟ್ಟೆ ಹಿಂಡಿಕೊಂಡು ಯಾವ ಮಾತೂ ಆಡದೆ ಮೌನವಾಗಿ ಅಲ್ಲಿಂದ ಹೊರಬಿದ್ದಳು. ಗೋಪಿ ಸ್ನಾನ ಮಾಡಿಕೊಂಡು ಬರುವುದರಲ್ಲಿ ಊಟಕ್ಕೆ ತಟ್ಟೆಯಿರಿಸಿ ಸಿದ್ಧ ಮಾಡಿದ್ದಳು. ಬಂದವನೆ ಮಡಿವಸ್ತ್ರ ಧರಿಸಿ ಹೋಗಿ ತಟ್ಟೆಯ ಮುಂದೆ ಕುಳಿತ.

ಶಾಂತಳಿಗಂದ ಮಾತು ಮರೆತಿರಲಿಲ್ಲ. ಹಸಿವನ್ನು ತಣಿಸಿ ಮುಂದಿನ ಯೋಚನೆ ಮಾಡುವುದೆಂದು ಅನ್ನಕ್ಕೆ ಕೈಯಿಕ್ಕಿದ. ಕೈ ಅನ್ನ ಕಲಿಸುತಿದ್ದರೂ ತಲೆ ಬೆಳಿಗ್ಗೆ ಮಾವನಿಂದ ಬಂದ ಕಾಗದದ ವಿಷಯವನ್ನು ಮೆಲುಕು ಹಾಕು ತಿತ್ತು. ಲಗ್ನವಾಗಿ ನಾಲ್ಕು–ನಾಲ್ಕೂವರೆ ವರ್ಷ ತುಂಬಿದ್ದರೂ ಸೂರಪ್ಪ ಮಗ ಳನ್ನು ಕುರಿತು ಈವರೆಗೆ ತನ್ನೊಡನೆ ಚಕಾರ ಶಬ್ದವೆತ್ತಿರಲಿಲ್ಲ. ಈ ದಿನ ಬಂದ ಕಾಗದದ ತುಂಬಾ ತನ್ನ ದೂಷಣೆಯೆ ತುಂಬಿತ್ತು. ಶಾಂತಳನ್ನು ಅಲಕ್ಷ್ಯ ವಾಗಿ, ಅಸಡ್ಡೆಯಾಗಿ ಕಂಡರೆ ತನ್ನಿಂದ ಬೇರ್ಪಡಿಸುವೆನೆಂದು ಬೆಜ್ಜರಿಕೆ ಬೇರೆ ಹಾಕಿದ್ದರು. ಅವರು ಹಾಗೆ ಬರೆಯುವರೆಂದು ಕನಸು ಮನಸಿನಲ್ಲೂ ತಿಳಿದಿರ ಲಿಲ್ಲ. ಕಾಲಗತಿಗೆ ತಕ್ಕಂತೆ ಅವರೆದೆಯಲ್ಲಿ ಆ ಧೈರ್ಯ ಮೂಡಿದೆ. ಆ ಮಾತು ತನ್ನಭಿಮಾನವನ್ನು ಚೂರು ಚೂರು ಮಾಡಿದೆ. ಈ ಅಪಮಾನ ತನಗೆ. ಶಾಂತಳಿಂದಲೆ ಆದದ್ದು. ಅವಳು ತನ್ನೆಲ್ಲ ವಿಷಯವನ್ನೂ ಸಮೂಲವಾಗಿ ತಿಳಿಸಿರುವುದರಿಂದಲೆ ಸೂರಪ್ಪ ಇಷ್ಟು ಮುಂದುವರಿದಿದ್ದಾರೆ. ಹೀಗೇ ಇದ್ದರೆ ಇನ್ನು ಸ್ವಲ್ಪ ದಿನದಲ್ಲಿ ಅವಳ ತನ್ನಿಂದ ಬೇರೆಯಾಗಲಿಕ್ಕೂ ಸಾಕು. ಅಷ್ಟಾ ಗಲು ಮಾತ್ರ ಬಿಡಬಾರದು. ಆದಷ್ಟು ಬೇಗ ಅವಳನ್ನು ಕೊನೆಗಾಣಿಸಬೇಕು. ತಾನು ಹಾತೊರೆದಷ್ಟೂ ಅವಳ ಸಾವು ಮುಂದು ಮುಂದೆ ಹೋಗುತ್ತಿದೆ. ಅರೆ ಹೊಟ್ಟೆಯಲ್ಲಿಟ್ಟಾಗಲೆ ಐದಾರು ತಿಂಗಳಾದುವು. ಮೈ ಮಾತ್ರ ಕರಗಿದೆಯೆ ಹೊರತು, ಜೀವ ಹಾಗೇ ಜೋತಾಡುತಿದೆ. ಅದನ್ನು ಬಗ್ಗುಬಡೆದ ಹೊರತು ಹಾರುವುದಿಲ್ಲ—ಆರುವುದಿಲ್ಲ. ಬಗ್ಗುಬಡಿಯಲೆ ಬೇಕು. ಅದಕ್ಕೆ ಇಂದೇ ಸುದಿನ. ಊಟವಾಗಲಿ, ಅವರಪ್ಪನ ಕಾಗದವನ್ನು ಮುಖಕ್ಕೆಸೆದು ಅದರಲ್ಲಿ ರುವ ಒಂದೊಂದು ಮಾತಿಗೂ ಪೆಟ್ಟಿನ ತಿಂಡಿ ತಿನಿಸಿ ಹಣ್ಣುಮಾಡಿ ಆಚೆಗೆಸೆ ಯುವೆನು—ಹಾಗೆಂದು ನಿರ್ಧರಿಸಿ ಅನ್ನ ಕಲಿಸಿ ಬಾಯಿಗಿರಿಸಿದ.

ಶಾಂತಳ ದುರ್ದೈವ ಊಟವಾಗುವ ವರೆಗೂ ತಡೆಯಗೊಡಲಿಲ್ಲ.

ನೋವುಂಟು ಮಾಡಲು ಬಾಯ್ದೆರೆದು ಕಾದಿದ್ದ ಅದು ತನ್ನ ಕರಾಳ ಮುಖ ಕುಣಿಸಿ ಅಣಕಿಸಿತು. ಉದರ ಕ್ರೂರತನ ಗೋಪಿಯ ಮುಖದಲ್ಲಿ ಪ್ರತಿಬಿಂಬಿಸಿತು. ಬಾಯಿಗಿಕ್ಕಿದ ಅನ್ನವನ್ನು 'ಥೂ ಥೂ' ಎಂದುಗಿದು ಔಡುಕಚ್ಚಿ,

"ಕತ್ತೆರಂಡೆ! ನನ್ನನ್ನೇನು ಉಪವಾಸ ಕೆಡವಿ ಸಾಯಿಸಬೇಕೆಂದಿರುವೆಯಾ? ಅಡಿಗೆ ಮಾಡುವಾಗ ಬುದ್ಧಿಯನ್ನೆಲ್ಲಿರಿಸಿದ್ದೆ? ತಿನ್ನು ಬಾ ನಾಯಿ ನೀನೆ! ಈ ಅರೆಬೆಂದ ಅನ್ನ-ಉಪ್ಪಿನ ಮುದ್ದೆ ಹುಳಿಯನ್ನು ನೀನೆ ತಿಂದು ತೇಗು—ಹೂಂ........!" ಎಂದು ಹೂಂಕರಿಸಿ ದುರುಗುಟ್ಟಿ ನೋಡಿದ.

ಶಾಂತ ಮಾತನಾಡದೆ ಕಲ್ಲಿನಂತೆ ನಿಂತಿದ್ದಳು. ದೃಷ್ಟಿ ಉದಾಸೀನ ತುಂಬಿ—ನಿಂತ ನೆಲವನ್ನು ಕೊರೆಯುತ್ತಿತ್ತು. ಅವಳ ಮೌನದ ಆ ನಿಲುವು ಅವನನ್ನು ಮತ್ತಷ್ಟು ರೇಗಿಸಿತು. ಅದೇ ತಟ್ಟೆಗೆ ಕೈ ತೊಳೆದು ದವಡೆಯಲ್ಲಿ ಸಿಟ್ಟಿನ ಜೆಂಕಿ ಉಜ್ಜುತ್ತಾ ಕಣ್ಣಲ್ಲಿ ಕಿಡಿ ಹಾರಿಸುತ್ತಾ ಅವಳ ಬಳಿ ಹಾರಿ,

"ಯಾರಿಗೆ ಹೇಳಿದ್ದು ಪಿಶಾಚಿ, ಕಲ್ಲಿನಂತೆ ನಿಂತಿರುವೆಯಾ! ನಿನ್ನ ಮೊಂಡುತನಕ್ಕೆ ತಕ್ಕ ಮದ್ದರೆಯುವೆನಿಂದು—ಬಾ ನಾಯಿ!" ಎಂದು ಬುಸು ಬುಸು ಉಚ್ಛ್ವಾಸಬಿಡುತ್ತಾ, ದರದರ ಎಳೆದುಕೊಂಡು ಬಂದು ತಟ್ಟೆಯ ಮುಂದೆ ಒತ್ತಾಯವಾಗಿ ಕೂರಿಸಿ, ಪಾತ್ರೆಯಲ್ಲಿದ್ದ ಅನ್ನ-ಹುಳಿಯನ್ನೆಲ್ಲ ತಂದು ತಟ್ಟೆಗೆ ಸುರಿದ.

ತಟ್ಟೆ ತುಂಬಿ ಊರೆಲ್ಲ ರಂಪವಾಯಿತು—ಸಗ್ಗಲಿಲ್ಲ ಶಾಂತ. ಅನ್ನಕ್ಕೆ ಕೈಯಿಕ್ಕಲೂ ಇಲ್ಲ; ಅಡಿಗೆ ಏನಾಗಿದೆ ಎಂದು ಬಾಯಿಬಿಟ್ಟು ಕೇಳಲೂ ಇಲ್ಲ. ಮೌನದ ಬಂಡೆಯಂತೆ ಸದ್ದಿಲ್ಲದೆ ಕುಳಿತಿದ್ದಳು. ಗೋಪಿ ಅಬ್ಬರದ ಬಿರುಗಾಳಿ ಯೆಬ್ಬಿಸಿ ಕಡೆಗೂ ಅವಳನ್ನಲುಗಿಸಿದ. ತಲೆಯನ್ನು ತಟ್ಟೆಗೆ ತಾಕುವಂತೆ ಒತ್ತಿ ಹಿಡಿದು—

"ಮೊಂಡು ಹಠ ಹಿಡಿದೆಯೆಂದರೆ ಗುಂಡಿಕ್ಕಿ ಕೊಂದೇನು! ಬಾಯಿ ಮುಚ್ಚಿ ತಿನ್ನು. ಇಂದು ನಿನಗೆ ಹಬ್ಬ. ಹೊಟ್ಟೆ ತುಂಬಾ ಹಾಕುವೆನು. ಇನ್ನು ಇಂಥ ಊಟ ಕಾಣುವೆಯೊ ಇಲ್ಲವೊ! ಮಾಡಿದ ಅನ್ನ-ಹುಳಿಯೆಲ್ಲ ನಿನಗೆ. ಒಂದು ಕಾಳು ಉಳಿಸಿದೆಯೆಂದರೆ ಮೈಮೂಳೆ ಉಳಿಯಲಿಕ್ಕಿಲ್ಲ, ನೋಡು!" ಎಂದು ಕೈಬಿಟ್ಟು ಹೋಗಿ ಕಿಟಕಿ ಬಾಗಿಲುಗಳನ್ನೆಲ್ಲ ಭದ್ರ ಪಡಿಸಿ ಬಂದ.

ಶಾಂತ ಕಣ್ಣೀರಿಡುತ್ತಾ ಅನ್ನವನ್ನು ಕಲಿಸಿ ಬಾಯಿಗಿರಿಸಿದಳು. ಉಪ್ಪಿನ ಕಟಿ! ಎಲ್ಲೋ ಮರೆತು ಎರಡು ಬಾರಿ ಉಪ್ಪು ಹಾಕಿರಬೇಕು; ಅದಕ್ಕಿಷ್ಟು ಅಬ್ಬರವೆ! ತಾನೇನು ಬೇಕೆಂದು ಮಾಡಿದ್ದೆ? ಬದುಕಿನ ಬೇಗೆ ಜ್ವರದ ತಾಪದಲ್ಲಿ ತಲೆಕೆಟ್ಟು ತಿಳಿಯದೆ ಮಾಡಿದ ಅಪರಾಧ! ಸಮಾಧಾನದಿಂದ ಬೇರೆ ಮಾಡಿ ಹಾಕೆಂದರೆ ಮಾಡಿ ಹಾಕುತ್ತಿರಲಿಲ್ಲವೆ? ಉಪ್ಪಿನ ವಿಷದ ಅನ್ನವನ್ನು ತಾನು ತಾನೆ ಹೇಗೆ ತಿನ್ನುವುದು! ಹೊಟ್ಟೆ ತೊಳೆಸಿ ಬರುತ್ತಿದೆಯಲ್ಲಾ....!" ಎಂದು ಗೋಳಿಡುತ್ತಿರುವಲ್ಲಿ ನಿಜಕ್ಕೂ ಎದೆಯೊತ್ತಿ ಬಂತು. ಬಲವಂತದಿಂದ ಗುಟುಕರಿಸಿದಳು. ಅಷ್ಟರಲ್ಲಿ ಕಾದ ಕಬ್ಬಿಣದ ರಸದಂತೆ ಬಂದು ಚುರುಗುಟ್ಟಿಸಿತು ಮಾತು—

"ಈ ಕೂಳನ್ನು ನನಗೆ ತಿನ್ನಿಸಬೇಕೆಂದಿದ್ದೆಯೇನು! ತಿನ್ನು, ಕಾರಿದೆಯೆಂದರೆ ಕತ್ತು ಹಿಸುಕಿ ಹಾಕಿ ಬಿಡುವೆನು ನಾಯಿ!" ಎಂದು ತಲೆಯನ್ನು ಮತ್ತೆ ಬಗ್ಗಿಸಿ ಹಿಡಿದನು.

ಎಷ್ಟು ಒತ್ತಾಯ ಮಾಡಿ ತಿಂದರೂ ಗಂಟಲೊಳಗಿಳಿಯಲೇ ಇಲ್ಲ. ಬಾಯಿಗೆ ಹಾಕಿದ ಅನ್ನವನ್ನುಗುಳಿ ಹೇಳಿದಳು,

"ನೀವು ನನ್ನನ್ನು ಕೊಂದರೂ ಚಿಂತೆಯಿಲ್ಲ—ಈ ಉಪ್ಪಿನ ಅನ್ನ ಮಾತ್ರ ತಿನ್ನಲಾರೆ."

ತಲೆಗೂದಲನ್ನು ಗುಂಜಾಡಿಸುತ್ತ ಕೇಳಿದ,

"ನಿಮ್ಮಪ್ಪನಿಗೆ ಕಪ್ಪು ಮುಚ್ಚಿ ಕಾಗದ ಮಾತ್ರ ಬರೆಯಬಲ್ಲೆ—ಅಲ್ಲವೊ!"

ಅವನು ಕೇಳಬೇಕೆಂದಿದ್ದ ಮಾತು ಸಂದರ್ಭಕ್ಕೆ ಹೊಂದಿಕೊಂಡು ಬಂದು ಮೈಯಲ್ಲಿ ಆವೇಶ ತುಂಬಿತು. ಕಲ್ಲಾದ ಶಾಂತಳ ಮೂಕತನ ಆ ಆವೇಶಕ್ಕೆ ಕರಾಳ ರೂಪ ಕೊಟ್ಟಿತು. ಗೋಪಿ ಎಂದಿಗಿಂತ ಭಯಂಕರನಾದ. ಅವನೆದೆಯಲ್ಲಿ, ಕಣ್ಣಲ್ಲಿ, ಮೈಯಲ್ಲಿ ಶಾಂತಳ ಬಲಿಯ ದಾಹ ಹಾಹಾಕಾರ ಮಾಡುತ್ತಾ ಹಬ್ಬಿತು. ಮೈ ಕುಣಿಸುತ್ತಾ, 'ಬುಸುಬುಸು ಉಸಿರು ಬಿಡುತ್ತಾ ಬಾಗಿಲ ಬಳಿ ಹಾರಿ, ಬಟ್ಟೆ ಹರವಲು ಇರಿಸಿದ್ದ ಕೋಲನ್ನು ತೆಗೆದುಕೊಂಡು ಬಂದು, ಎಡಗೈಲಿ ಜುಟ್ಟು ಹಿಡಿದು, ಬಲಗೈಲಿ ಜೆತ್ತ ಕುಣಿಸುತ್ತ ಅಬ್ಬರಿಸಿದ,

"ಬೊಗಳು ರಂಡೆ! ಏನೇನು ಬರೆದಿದ್ದೆ? ನನ್ನ ಕೈ ಹಿಡಿದು ದ್ರೋಹ ಮಾಡಿದ್ದಲ್ಲಗೆ ನಿಮ್ಮಪ್ಪ—ಅಮ್ಮನ ಮುಂದೆ ನನ್ನನ್ನು ಕೀಳು ಮಾಡಿಸಿಯಾ

ನಾಯಿ !" ಎಂದು ಕೋಲಿನಿಂದ ನಾಲ್ಕೇಟು ದಬದಬ ಹೊಡೆದು ಮತ್ತೆ ಮಾತಿನ ಬೆಂಕಿ ಕಾರಿದ—"ಅಷ್ಟಷ್ಟುದ್ದ ಮಾತನ್ನು ಬಳಸಿ ಮನಸ್ಸಿಗೆ ತೋಚಿದಂತೆ ಗೀಚಿರುವನಲ್ಲಾ ಭಂಡ ಮುದುಕ! ಅವನ್ಯಾರು ನನಗನ್ನಲು? ನನ್ನ ಸುದ್ದಿ–ಸಮಾಚಾರವನ್ನು ಆ ಚಂಡಾಲನಿಗೆ ತಿಳಿಸಲು ನಿನಗೇನು ಹಕ್ಕು! ಬೊಗಳೆ ನಾಯಿ ರಂಡೆ........!"

ಕೈಲಿ ಹಿಡಿದ ಕೋಲು ಪಶುವಿನ ಮೇಲಾಡುವಂತೆ ನಿರ್ದಾಕ್ಷಿಣ್ಯವಾಗಿ ಅವಳ ಕೈ–ತಲೆ–ಬೆನ್ನು–ಕಾಲುಗಳ ಮೇಲೆ ನೃತ್ಯಗುಣಿಕ ಕುಣಿಯಿತು.

ಶಾಂತ ಪೆಟ್ಟು ತಾಳಲಾರದೆ, ನೀರಿನಿಂದ ಹೊರಗೆಳೆದು ಹಾಕಿದ ಮೀನಿನಂತೆ ಮಿಲಿಮಿಲಿ ಒದ್ದಾಡುತ್ತ ಬೊಬ್ಬೆಯಿಟ್ಟಳು.

"ನಿಮ್ಮ ದಮ್ಮಯ್ಯ........ಹೊಡೆಯಬೇಡಿ. ನಾನು ತಾಳಲಾರೆ........ ತಾಳಲಾರೆ........ಅಯ್ಯೋ....ತಾಳಲಾರೆ........!"

ಅವಳು ಬೊಬ್ಬೆಯಿರಿಸಿದಷ್ಟೂ ಹೊಡೆತ ಜೋರಾಗುತ್ತಿತ್ತು—ಅಬ್ಬರ ಏರುತ್ತಿತ್ತು.

"ನಿನ್ನನ್ನು ಹೊಡೆಯುವುದಲ್ಲ—ಮಚ್ಚಿನಿಂದ ಕೊಚ್ಚಿ ಹಾಕಬೇಕು. ನನ್ನೆದೆಗೆ ಬೆಂಕಿಯಿರಿಸಿದ ಮಾರಿ ನೀನು—ಮರ್ಯಾದೆಯನ್ನು ಮಸಣ ಮಾಡಿದ ಚಂಡಾಳಿ ನೀನು—ಅಭಿಮಾನವನ್ನು ಚೂರು ಮಾಡಿದ ಡಾಕಿನಿ ನೀನು! ನೀನು ಸಾಯಬೇಕು, ಸತ್ತು ಭಸ್ಮವಾಗಬೇಕು! ಅಲ್ಲಿವರೆಗೆ ನನ್ನೆದೆಯ ಸಂಜಿಳಿಯುವುದಿಲ್ಲ, ಕಾವು ಆರುವುದಿಲ್ಲ! ಆರುವುದಿಲ್ಲ ಚಂಡಾಳಿ.... ....ಆರುವುದಿಲ್ಲ........!"

ಮತ್ತೆ ಅವಳ ಮೈಮೇಲೆ ಹುಚ್ಚಾಗಿ ಕುಣಿಯಿತು ಕೋಲು. ಅದರುದ್ದಕ್ಕೂ ಅವಳೆದೆಯಿಂದ ಬಂದ ನೋವಿನ ಬೊಬ್ಬೆ ಮನೆ ತುಂಬ ವ್ಯಾಪಿಸಿತು. ತನ್ನ ರಾಕ್ಷಸ ನಡವಳಿಕೆ ಹೊರಗಿನವರಿಗೆ ಗೊತ್ತಾಗದಂತೆ ಆಗಾಗ ಅವಳ ಬಾಯಿ ಬೇರೆ ಅಮುಕಿ ಹಿಡಿಯುತ್ತಿದ್ದ. ಅದರಿಂದ ಅವಳಿಟ್ಟ ಬೊಬ್ಬೆ ಹೊರಗೆ ಹೆಚ್ಚಾಗಿ ಹೋಗದೆ ಗಂಟಲಿನಲ್ಲೆ ಒದ್ದಾಡಿ ಅಡಗುತ್ತಿತ್ತು.

ಹೊಡೆತ ತಿಂದು ಅವಳ ಮೈ ಶಕ್ತಿಗುಂದಿದಂತೆ, ಹೊಡೆದು ಅವನ ಕೈಯೂ ಉರಿಯಹತ್ತಿತು. ಹಿಡಿದ ಕೋಲನ್ನೆಸೆದು ಕಾಲಿನಿಂದ ದಬದಬ

ಒದ್ದ. ಎರಡು ಒದೆತ ಒದೆಯುವುದರಲ್ಲೆ ಶಾಂತ ಎಚ್ಚರತಪ್ಪಿ ನೆಲಕ್ಕುರುಳಿ ದಳು. ಮೂರ್ಛೆ ಬಂದು ಆ ಯಮಯಾತನೆಯನ್ನು ಮರೆಸಿತು.

ಸತ್ತಂತೆ ಬಿದ್ದ ಅವಳನ್ನು ಕಂಡು,

"ಇನ್ನೇನು ಹೆಚ್ಚು ದಿನ ಬದುಕಲಾರದು ನಾಯಿ! ಹಣ್ಣಾಗುವಷ್ಟು ಬಾರಿಸಿದ್ದೇನೆ. ಬಿದ್ದಿರಲಿ ನೆಲಕಚ್ಚಿ!" ಎಂದು ಬಟ್ಟೆ ಹಾಕಿಕೊಂಡು ಮುಂಬಾಗಿಲನ್ನು ಒಳಗಡೆಯಿಂದ ಭದ್ರಪಡಿಸಿ—ಹಿಂಬಾಗಿಲನ್ನು ಮುಂದೆಳೆದು ಕೊಂಡು ಹೊರಬಿದ್ದ.

ಸುಮಾರು ಅರ್ಧ ಗಂಟೆಯ ಮೇಲೆ ಮೆಲ್ಲನೆ ಉಸಿರಾಡಿಸುತ್ತ ಕಣ್ಣು ಬಿಟ್ಟಳು ಶಾಂತ. ನಾಲಗೆ ಆರಿ ಅಂಗುಳಕ್ಕಂಟಿತ್ತು. ನೀರಿಗಾಗಿ ಕಾತರಿಸಿತು ಜೀವ. ಮೇಲೇಳಲಾಗಲಿಲ್ಲ. ಮೈಕೈಯೆಲ್ಲ ಊದಿ ಕೊರಡಿನಂತಾಗಿದೆ. ಹಣೆ ಸೀಳು ಬಿಟ್ಟು ನೆತ್ತರು ಬಸಿಯುತ್ತಿದೆ. ಹರಿದಾಡಿಸಲು ಕೂಡ ಆಗುತ್ತಿಲ್ಲ. ಯಮಯಾತನೆಯಾಗುತ್ತಿದೆ. ಮನೆಯಲ್ಲಿ ಒಬ್ಬರ ಸುಳಿವಿಲ್ಲ, ಗೋಪಿ ಕೂಡ ಹೊರಟು ಹೋಗಿರುವನು. ಇದ್ದರೂ ಪ್ರಯೋಜನವಿಲ್ಲ ನೀರೆಂದರೆ ಕೊಡುವುದು ವಿಷವೆ! ಮೈಯ್ಯ ಯಾತನೆ ಬಾಯಾರಿಕೆ ಸಹಿಸದೆ ಮಿಡುಕು ತ್ತಿದ್ದಾಳೆ. ಬಾಯಿಗೆ ಬಂದಂತೆ ಕನವರಿಸುತ್ತಿದ್ದಾಳೆ.

' ಹಾ! ಇಷ್ಟು ಯಾತನೆ .......ಯನ್ನು........ಜೀವನ........ದಲ್ಲೆಂದೂ ....... ಪಟ್ಟಿರಲಿಲ್ಲ........! ಇದು........ನನ್ನ........ಕೊನೆಗಾಲ.......... ವಾಗಿರಬೇಕು... .... ಅದಕ್ಕೆ........ಇಷ್ಟು... ....ಯಮ....ಯಾತನೆ........ಈ ಸಂಕಟ........ಈ........ಮೃತ್ಯು........ಗುಣಿತ........! ಹಾ.... ! ಹಾ....! ಭಗವಂತ........ನನ್ನನ್ನಿನ್ನು....... ಈ ನರಕದಲ್ಲಿ....... ಕೊಳೆ........ ಹಾಕ ಬೇಡ........! ನಾನಿನ್ನು........ಭವಿಸಲಾರೆ.... .. ! ಅನುಭವಿಸುವ........ ಚೈತನ್ಯ .......ವೆಲ್ಲ........ಸತ್ತು ಹೋಯಿತು.......! ಆದಷ್ಟು....... ಬೇಗ ....... ನನ್ನನ್ನೀ........ಕಷ್ಟದಿಂದ ಪಾರು ಮಾಡು........ದೇವಾ........... ! ಅಯ್ಯೋ........... ಪ್ರಾಣ........ಹೋಗುತ್ತಿದೆ........ ಬಾಯಾರಿಕೆ........ ! ಮಾವಾ........ಬೇಗ .. ....ಬನ್ನಿ ಮಾವಾ........! ಬೇಗ ಬನ್ನಿ... ........ ! ಉಸ್ಸ್........ !"

ಸುಸ್ತಾಗಿ ತಲೆ ಪಕ್ಕಕ್ಕೆ ಹೊರಳಿಸಿದಳು. ಅಷ್ಟರಲ್ಲಿ ನಿದ್ದೆಯಿಂದೆದ್ದ

ಮಗು ತಾಯಿಯನ್ನು ಹುಡುಕಿಕೊಂಡು ಬಂದು, ನರಳುತ್ತಿರುವುದನ್ನು ಕಂಡು ಉಸಿರೆತ್ತದೆ ಸಪ್ಪೆ ಮುಖ ಹಾಕಿ, ಹತ್ತಿರ ಹೋಗಲೊ ಬೇಡವೊ ಎಂದು ಅನುಮಾನಿಸುತ್ತ ಮೆಲ್ಲನೆ ಹೆಜ್ಜೆಹಾಕುತ್ತ ಬಂದಿತು, ಹತ್ತಿರ ಬರುತ್ತಿದ್ದ ಮಗುವನ್ನು ಕಂಡು ಗದ್ದರಿಸಿದಳು,

"ಶನಿಯೆ—ದೂರ ಕುಕ್ಕರಿಸು; ನನ್ನ ಮುಟ್ಟಬೇಡ."

ಮಗು ಪೆಚ್ಚಾಗಿ, ಮತ್ತೆ ಕರೆಯುವಳೇನೊ ಎಂದು ಆಸೆತುಂಬಿದ ಕಣ್ಣಿನಿಂದ ತಾಯನ್ನು ನೋಡುತ್ತಾ ಅಲ್ಲೇ ನಿಂತುಬಿಟ್ಟಿತು. ಅವಳಿಗೀಗ ಮಗುವೂ ಬೇಡವಾಗಿತ್ತು. ಹದ ತಪ್ಪಿದ ಆರೋಗ್ಯ, ಗಂಡನ ಕಟುಕತನ ಅವಳ ಬದುಕಿನ ಆಸೆಯನ್ನೆಲ್ಲ ಕೊಲ್ಲುತಿತ್ತು.

ತನ್ನ ಬಾಳ ಸಮಸ್ಯೆಗೆ ಬಿಡುಗಡೆಯೆ ಇಲ್ಲ, ಪರಿಹಾರವೆ ಇಲ್ಲ. ಬಾಳನ್ನು ಬಲಿಗೊಟ್ಟಷ್ಟೂ ಅದು ಹೆಚ್ಚುತ್ತಿದೆ. ಎದುರಿಸಿ ನೋಡಿಯಾಯಿತು, ಮೌನವಾಗಿದ್ದು ಮೂಕವೇದನೆ ಅನುಭವಿಸಿ ನೋಡಿಯಾಯಿತು. ಯಾವುದರಿಂದಲೂ ಅವರ ನೆತ್ತಿಗೆ ಹತ್ತಿದ ಹುಚ್ಚು ಇಳಿಯಲೆ ಇಲ್ಲ. ಅದು ಆರಲು ತನ್ನ ಸಾವಾಗಲೆ ಬೇಕು; ತನ್ನಕ್ಕನಂತೆ ತಾನೂ ಈ ಕಟುಕತನಕ್ಕೆ ಬಲಿಯಾಗಲೆ ಬೇಕು! ಇದು ಮನೆತನಕ್ಕೆ ಬಂದ ಶಾಪ. ತನ್ನ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳಿಗೆ ಉಳಿಗಾಲವಿಲ್ಲ. ಶಾರದೆಯೂ ಸತ್ತದ್ದೇ ಅದಕ್ಕೆ ಸಾಕ್ಷಿ. ಅವಳು ಸತ್ತು ಬದುಕಿದಳು. ಇಲ್ಲದಿದ್ದರೆ ತಮ್ಮಿಬ್ಬರಂತೆ ಅವಳೂ ನರಕದ ಬಾಳಿಗೆ ತುತ್ತಾಗಿ ಕಣ್ಣೀರಿಟ್ಟು ಕೈ ಸೆಗಾಣಬೇಕಿತ್ತು. ನಿಜವಾಗಿಯೂ ಶಾರದೆ ಸತ್ತು ಬದುಕಿದಳು. ತಾನೂ ಸಾಯುವುದರಲ್ಲಿದ್ದಾಳೆ. ಸಾವೂ ತನ್ನನ್ನು ಹುಡುಕಿಕೊಂಡು ಹತ್ತಿರ ಬರುತ್ತಿದೆ. ಅಕ್ಕತಂಗಿಯರನ್ನು ಕೂಡಿಕೊಳ್ಳಲು ಇನ್ನು ಹೆಚ್ಚು ದಿನವೇನೂ ಬೇಕಿಲ್ಲ. ತನ್ನನ್ನು ಅವರ ಬಳಿಗೆ ಬೇಗ ಕರೆದುಕೊಂಡು ಹೋಗಬೇಕೆಂದೇ ಈ ಅನಿಷ್ಟ ಜ್ವರ—ಕಟುಕತನವೆರಡೂ ಬೆನ್ನುಬಿದ್ದು ಬಂದಿದೆ. ತಾನೇನೊ ಸಾಯುವುದು ಖಂಡಿತ. ಮಗುವಿಗೇನು ಮಾಡುವುದು? ಆ ಕಟುಕ ತಂದೆಯ ಕೈಲಿತ್ತು ಹೋದರೆ ತನ್ನಾತ್ಮಕ್ಕಾದರೂ ಶಾಂತಿಯಿದೆಯೆ? ಸಾವಿನ ಹಾಸಿಗೆಯಲ್ಲಿರುವ ತಾನು ಮಾಡುವುದಾದರೂ ಏನು? ಹಣೆಯಲ್ಲಿ ಬರೆದಿದ್ದಂತಾಗಲಿ........' ಹಾಗೆಂದು ಯೋಚನೆ ಮಾಡುವ ಚಿತ್ತ ತನ್ನ ಸತ್ತು ತಲೆಯಲ್ಲಿ ಹೋವೆದ್ದ ಶಾಂತ-ಮಗುವಿನ

ಕಡೆಗೊಮ್ಮೆ ಕೊರಳಿ ನೋಡಿದಳು. ಮಗು ತಾಯಲ್ಲಿ ನೆಟ್ಟ ತನ್ನ ನೋಟ ವನ್ನು ಕದಲಿಸಲಿಲ್ಲ. ಅದನ್ನು ಕಂಡು ಅವಳ ಹೊಟ್ಟೆ ಚುರುಗುಟ್ಟಿತು. ತನ್ನೆಲ್ಲ ಪ್ರೀತಿಯನ್ನೂ ಕಣ್ಣಲ್ಲಿ ತುಂಬಿ, “ ಬಾ ಮರಿ, ಇನ್ನೊಂದು ಗಳಿಗೆಯೊ, ಎರಡು ಗಳಿಗೆಯೊ ! ಇರುವಷ್ಟು ಹೊತ್ತು ಇಬ್ಬರೂ ಒಟ್ಟಿಗಿದ್ದು ತೃಪ್ತಿ ಪಡೋಣ ” ಎಂದು ಎರಡು ಕೈಗಳನ್ನೂ ಚಾಚಿದಳು.

ಮಗು ಮೆಲ್ಲನಡಿಯಿರಿಸಿ ತಾಯಿಯ ಸೊಂಟದ ಬಳಿ ಬಂದು ಕುಳಿತಿತು. ಅದರ ಕತ್ತಿಗೆ ತನ್ನ ಬಲಗೈ ಬಳಸಿ ಹಾಕಿ, ಮೈ ನೋಯುತ್ತಿದ್ದರೂ ಲಕ್ಷಿಸದೆ ಶಿಶುವನ್ನು ತನ್ನೆದೆಯ ಮೇಲಿರಿಸಿಕೊಂಡು ತಟ್ಟುತ್ತ ಮಲಗಿದಳು.

ಎಂದಿನಂತೆ ಸಂಜೆ ಭಟ್ಟರು ಬಂದರು. ಕದ ತಟ್ಟಿ ಸಾಕಾಯಿತು ಮಲಗಿರಬಹುದೆಂದೂಹಿಸಿ ಕಿಟಕಿಯ ಬಳಿ ನಡೆದರು. ಕಿಟಕಿಯೂ ಮುಚ್ಚಿತ್ತು. ಎಂದೂ ಹೀಗಾಗಿರಲಿಲ್ಲ. ಮನಸ್ಸಿನಲ್ಲಿ ಏನೇನೊ ಕೆಟ್ಟ ಯೋಚನೆಗಳು ತಲೆ ಹಾಕಿದುವು. ಕಂಗಾಲಾಗಿ ಹಿತ್ತಿಲ ಬಾಗಿಲ ಬಳಿ ಬಂದು ಕದವನ್ನು ನೂಕಿದರು. ಕದ ತೆರೆಯಿತು. ಒಂದೆ ನೆಗೆತಕ್ಕೆ ಒಳಗೆ ಹಾರಿದರು. ಅವರ ಊಹೆ ಸತ್ಯವಾಗಿತ್ತು.

ಭಟ್ಟರನ್ನು ಕಂಡೊಡನೆ ಶಾಂತಳ ಕಣ್ಣು ಬಳಬಳನೆ ನೀರು ಕಾರಿತು. ತುಟಿ ಅದುರಿ ಎದೆಯಲ್ಲಿ ಒತ್ತಿ ಬರುತಿದ್ದ ಮಾತನ್ನು ತಡೆ ಹಿಡಿಯಿತು. ಸುಸ್ತಾಗಿ ಕತ್ತು ಪಕ್ಕಕ್ಕೆ ಹಾಕಿದಳು.

ಆ ನೋಟ ಕಂಡು ಕೈಲಿದ್ದ ಹಣ್ಣಿನ ಚೀಲವನ್ನು ನೆಲದ ಮೇಲೆಸೆದು ‘ಅಣ್ಣ’ ಎಂದು ಶಾಂತಳ ಬಳಿ ಹಾರಿದರು. ರಕ್ತದಿಂದ ಹೆಪ್ಪುಗಟ್ಟಿದ್ದ ಶಾಂತಳ ಶರೀರವನ್ನು ಕಂಡು ಕಣ್ಣು ಕತ್ತಲಿಟ್ಟಿತು. ಗುಂಡಿಗೆ ಗಾಬರಿಯ ಸಿಡಿಮದ್ದಿನಾರ್ಭಟಕ್ಕೆ ನಡುಗಿತು. ತಲೆ ಗಿರ್ರನೆ ತಿರುಗಿ ಕುಳಿತಲ್ಲಿಂದಲೆ ಬೀಳುವಂತಾದರು. ಕಡೆಗೆ ಆಯ ತಪ್ಪಿದ ದೇಹವನ್ನು ನೆಲಕ್ಕೆ ಕೈಯೂರಿ ಹಿಡಿದು ನಿಲ್ಲಿಸಿದರು. ಗರ್ಭಿಣಿ ಸ್ತ್ರೀಯ ಮೇಲೆ ಗೋಪಿ ಮಾಡಿದ ಪೈಶಾಚಿಕ ನರ್ತನ ಅವರ ಗಾಬರಿಯ ಮದ್ದಿನ ಗಾಡಿಗೆ ಬೆಂಕಿಯಿರಿಸಿ ಸುಟ್ಟು, ಆ ಸ್ಥಳದಲ್ಲಿ ಸಿಟ್ಟಿನ ಮಾರಿಯನ್ನು ತಂದು ಕುಣಿಸಿತು. ಕಟಕಟ ಹಲ್ಲು ಕಡಿಯುತ್ತ ಹೇಳಿದರು,

“ಕಡೆಗೂ ಆ ಯಮದೂತ ತನ್ನ ಕಟುಕತನದ ಕೆನ್ನಾಲಗೆಯಿಂದ ನಿನ್ನ ಮೈಯ ರಕ್ತ ಹೀರಿಯೆ ಬಿಟ್ಟ. ಇನ್ನು ಆ ಚಂಡಾಲನಲ್ಲಿ ಪರೀಕ್ಷೆ ಸಾಕು.

ಅವನ ಹಣೆಬರಹವಿಷ್ಟೆ. ಬದುಕು ಬೇಡವೆಂದು ಕೈಯಾರೆ ಕೊಲೆ ಮಾಡುತ್ತಿರುವಾಗ ಒತ್ತಾಯ ಮಾಡುವುದರಲ್ಲಿ ಅರ್ಥವಿಲ್ಲ. ಈಗಲೇ ಸೂರಪ್ಪನಿಗೆ ಬಂದು ಕರೆದುಕೊಂಡು ಹೋಗುವಂತೆ ತಂತಿ ಕೊಡುವೆನು. ಅವನಿನ್ನು ಬೀದಿಯ ನಾಯಿಯಾಗಿ ಅಲೆಯಲಿ, ಮಣ್ಣು ಮುಕ್ಕಿ ಸಾಯಲಿ, ಆ ಪಾಪಿ!" ಎಂದು ಕೈಲಿ ಒಂದು ಪಾತ್ರೆ ಹಿಡಿದು ಅಲ್ಲೆ ಹತ್ತಿರದಲ್ಲಿದ್ದ ಹೊಟೇಲಿಗೆ ಹೋಗಿ ಕಾಫಿ ಹಾಕಿಸಿಕೊಂಡು ಬಂದು ಇಬ್ಬರಿಗೂ ಕುಡಿಸಿ, ಹಾಸಿಗೆ ಹಾಸಿ ಮಲಗಿಸಿ ಜಿಜ್ಜಗೆ ಹೊದೆಸಿ "ಈಗ ಬಂದೆ" ಎಂದು ಹೊರಗೆ ಹಾರಿದರು.

ದೊಡ್ಡಪೇಟೆಯಲ್ಲಿರುವ ಅಂಚೆಯ ಕೇಂದ್ರ ಕಚೇರಿಗೆ ಬಂದು ಸೂರಪ್ಪನಿಗೆ ತಂತಿಯಿತ್ತು, ಅಲ್ಲೆ ಮೇಲೆ ಸೆಯಿಂಟ್ ಫಿಲೋಮಿನಾ ಚರ್ಚಿನ ಬಳಿಯಿರುವ ಜಟಕಾ ಸ್ಟ್ಯಾಂಡಿಗೆ ವಾಯುವೇಗದಲ್ಲಿ ಹಾರಿ ಗಾಡಿಯೊಂದನ್ನು ಗೊತ್ತುಮಾಡಿಕೊಂಡು ಮನೆಗೆ ಬಂದರು. ಮಗುವನ್ನು ಸೊಂಟಕ್ಕೇರಿಸಿ—ಶಾಂತಳನ್ನು ಕೈ ಹಿಡಿದು ಮೆಲ್ಲನೆ ನಡೆಸಿಕೊಂಡು ಬಂದು ಗಾಡಿಯಲ್ಲಿ ಕೂರಿಸಿ, ಅಲ್ಲೆ ಸಮೀಪದಲ್ಲಿರುವ ಖಾಸಗಿ ವೈದ್ಯರಲ್ಲಿ ಚಿಕಿತ್ಸೆ ಮಾಡಿಸಿ ಮನೆಗೆ ತಂದು ಬಿಟ್ಟು 'ಈ ಕ್ಷಣದಲ್ಲಿ ಬರುವೆನೆ'ಂದು ಅದೇ ಗಾಡಿಯಲ್ಲಿ ಹೊರಬಿದ್ದರು.

ಸುಮಾರು ಅರ್ಧ ಗಂಟೆ ಕಳೆಯುವುದರಲ್ಲೆ ರಂಗಮ್ಮನೊಡನೆ ಮತ್ತೆ ಹಾಜರಾದರು. ಅತ್ತೆಯನ್ನು ಕಂಡೊಡನೆ ಶಾಂತಳ ಕಣ್ಣೀರು ಕಟ್ಟೊಡೆದು ರಂಜಕ್ಕುಡಿಯಾಗಿ ಹರಿಯಿತು. ಆ ವೇಗಕ್ಕೆ ಸುತ್ತಲಿದ್ದವರ ಕಣ್ಣೀರ ಕಟ್ಟೆಯೂ ಒಡೆದು, ಹರಿದು ಒಟ್ಟುಗೂಡಿದುವು. ಸ್ವಲ್ಪ ಹೊತ್ತು ಮೂಕರೋದನ ಆ ವಾತಾವರಣವನ್ನು ಗಂಭೀರಗೊಳಿಸಿತು. ಆ ಸ್ಮಶಾನಮೌನ ಶಾಂತಳಿಗಸಹ್ಯವಾಗಿ ಎದೆ ಬಿರಿಯುವಂತೆ ಗೋಳಿಟ್ಟಳು.

"ನಾನೆ ಹೇಳಿ ಕಳಿಸಬೇಕೆಂದಿದ್ದೆ ಅಮ್ಮ....ನನ್ನ....ಕಷ್ಟಕ್ಕೆ....ನೋತು....ಮಾವನೆ....ಆ ಕೆಲಸ....ಮಾಡಿದರು. ನೀವು....ಬಂದುದು .. ಒಳ್ಳೆಯದಾಯಿತು .. ....ನಾನಿನ್ನು....ಈ ನರಕದ....ಯಾತನೆ.... ಅನುಭವಿಸಲಾರೆ ಅಮ್ಮ.... ನನ್ನನ್ನು... ಬಿಟ್ಟು....ನೀವು....ನೀವು... ಎಲ್ಲೂ....ಹೋಗಬೇಡಿ....ಎಲ್ಲಿಗೂ....ಹೋಗಬೇಡಿಯಮ್ಮ....! ಎಲ್ಲೂ... ಹೋಗಬೇಡಿ...!' ಸುಸ್ತಾಗಿ ಕೈ ನೆಲಕ್ಕೆಸೆದು, ತಲೆ ಪಕ್ಕಕ್ಕೆ ಹೊರಳಿಸಿದಳು.

ರಂಗಮ್ಮ ಹೋಗಿ ಶಾಂತಳ ಬಳಿ ಕುಳಿತು, ತಲೆ ನೇವರಿಸಿ, ಗದ್ಗದಧ್ವನಿ

ಯಲ್ಲಿ ಹೇಳಿದರು,

"ಅಳಬೇಡ ಶಾಂತ, ಇನ್ನು ಗೋಪಿ ಕತ್ತು ಹಿಡಿದು ದಬ್ಬಿದರೂ ನಿನ್ನನ್ನು ಬಿಟ್ಟು ಕದಲುವುದಿಲ್ಲ. ಒಂದು ಪಕ್ಷ ನಾನು ಹಾಗೆ ಹೋಗಲೇ ಬೇಕಾಗಿ ಬಂದರೆ, ಸಂಗಡ ನಿನ್ನನ್ನು ಕರೆದುಕೊಂಡೆ ಹೋಗುವೆನು; ಧೈರ್ಯ ವಾಗಿರು."

ಭಟ್ಟರು ಪಂಚೆಯ ತುದಿಯಿಂದ ಕಣ್ಣೊರೆಸುತ್ತ ಹೇಳಿದರು,

"ನೋಡಿ, ಅವಳಾಗಿರುವ ಚೆಂದ! ಈ ರಕ್ತದಾಹಕ್ಕಾಗಿಯೆ ಅವನು ಲಗ್ನವಾದಂತಿದೆ. ಮೊದಲೆ ಗೊತ್ತಿದ್ದರೆ ಲಗ್ನವಾಗಲು ಬಿಡುತ್ತಿರಲಿಲ್ಲ. ಅವ ನಿಗೆ ಹೆಣ್ಣು ಕೊಡಿಸಿ ನಾನೆ ಮುತ್ತೈಳ ಕೆಲಸ ಮಾಡಿದೆ. ಆ ಪಾಪ ಯಾವ ಪವಿತ್ರ ನದಿಗೆ ಹೋಗಿ ತೊಳೆದರೂ ಹೋಗಲಾರದು. ನನ್ನ ಬೆನ್ನ ಹಿಂದೆ ಜನ್ಮಾಂತರಕ್ಕೆ ಕಟ್ಟಿಟ್ಟ ಬುತ್ತಿಯಾಗಿ ನಿಂತಿದೆ."

ಕಣ್ಣೊರೆಸಿ ಹೇಳಿದರು ರಂಗಮ್ಮ,

"ನಾನೇನು ಹೇಳಲಿ ಭಟ್ಟರೆ? ನನಗೇನೂ ತೋಚುತ್ತಿಲ್ಲ. ಇಷ್ಟು ಕಟುಕನಾಗಿ ನಡೆದುಕೊಳ್ಳುತ್ತಿರುವವನು ನನ್ನ ಮಗನಲ್ಲವೆಂದು ಮಾತ್ರ ಹೇಳ ಬಲ್ಲೆ."

"ಎಂಥವರಿಗಾದರೂ ಹಾಗೆನ್ನಿಸುವುದೆ ಸರಿ. ಕೆಟ್ಟ ನಡತೆಯಿಂದ ಕರುಳು ಸುಟ್ಟ ಮೇಲೆ ಮರುತೆ 'ಬಾ' ಅಂದರೆ ಬರುತ್ತದೆಯೆ? ನೀವಂದದ್ದು ಸರಿ." ಎಂದು ಈಗ್ಯೆದಾರು ತಿಂಗಳಿಂದ ಶಾಂತಳಲ್ಲಿ ನಡೆದುಕೊಳ್ಳುತ್ತಿರುವ ಗೋಪಿಯ ರಾಕ್ಷಸ ನಡವಳಿಕೆಯನ್ನು ಬಣ್ಣಿಸಿ ಹೇಳಿದರು, "ಗಂಡನಾಗಿ ತಾನು ಏನು ಮಾಡಿದರೂ ನಡೆದು ಹೋಗುತ್ತದೆಂಬ ಕೆಟ್ಟದೆ ಅವನಿಗೆ ಬಂದು ಹೋಗಿದೆ; ಅದಕ್ಕೆ ಹೀಗೆಲ್ಲ ಮಾಡುತ್ತಿರುವನು. ಕಾನೂನು ಬಲ ಉಪ ಯೋಗಿಸಿಕೊಂಡು ಅವನ ಕಟುಕತನಕ್ಕೆ ತಕ್ಕ ಬರೆ ಹಾಕಬಹುದಿತ್ತು! ನನ್ನ ಕಣ್ಣ ಮುಂದೆ ಬೆಳೆದ ಹುಡುಗ, ಅಪಮಾನಪಡಿಸಬಾರದೆಂದು ತಡೆದಿ ರುವೆನು!"

"ಕಟುಕರಿಗೆ ದಯೆ ತೋರುವುದೂ ಅಪಾಯವೆ. ಅವನಿಗೆ ಹೇಗಾದರೂ ಮಾಡಿ ಬುದ್ಧಿ ಕಲಿಸಬೇಕು."

ರಂಗಮ್ಮ ಗೋಪಿಯ ಕಟುಕತನಕ್ಕೆ ಹೇಸಿ, ತಮ್ಮ ಮಾತೃತ್ವವನ್ನು

ಕಲ್ಲು ಮಾಡಿ ಆ ಮಾತಂದಿದ್ದರು. ಅವರ ನ್ಯಾಯಪರತೆ ಭಟ್ಟರಿಗಾಶ್ಚರ್ಯ ವನ್ನುಂಟು ಮಾಡಿತು. ತಲೆದೂಗಿ ಹೇಳಿದರು,

"ಯಾರು ಏನೂ ಮಾಡುವುದು ಬೇಡಾಮ್ಮ, ಜೀವನವೆ ಅವನಿಗೆ ತಕ್ಕ ಬುದ್ಧಿ ಕಲಿಸುವುದು ಇನ್ನು ಸ್ವಲ್ಪ ದಿನ ಹೋಗಲಿ ನೋಡಿ, ಅವನ ಬಾಳು ನಾಯಿ ಬಾಳಾಗದಿದ್ದರೆ ಕೇಳಿ. ನಾವು ಬಯಸಿ ಆಗದಿದ್ದರೂ ಅದು ಅವ ನನ್ನು ತಾನಾಗಿ ಹುಡುಕಿ ಬರುವುದು. ಕಾನೂನು ಕೊಡುವ ಶಿಕ್ಷೆಗಿಂತ ನೂರರಷ್ಟು ಕಾವಿರುವುದು—ಅದರಲ್ಲಿ! ನಾವು 'ಅಯ್ಯೋ' ಎಂದು ಮರು ಗಿದರೂ ವಿಧಿ ಮರುಗುವುದಿಲ್ಲ. ಕರ್ಮಕ್ಕೆ ತಕ್ಕ ಫಲವನ್ನು ಒದ್ದು ಕೊಡು ವುದು."

"ಅನುಭವಿಸಲಿ ಬಿಡಿ, ಆಗಲಾದರೂ ಗೊತ್ತಾಗಲಿ ನೋವಿನ ಅನುಭವ."

"ಗೋಪಿ ಎಲ್ಲರ ಪ್ರೀತಿ ವಿಶ್ವಾಸಗಳನ್ನೂ ಕಳೆದುಕೊಳ್ಳುತ್ತಿರುವನಲ್ಲ, ಎಂದು ವ್ಯಸನವಾಗುತ್ತದೆ. ಜೀವನದ ವಿಕಾಸತೆಗಿರುವುದೆ ನಮ್ಮ-ತಮ್ಮವರ ಪ್ರೀತಿ-ವಿಶ್ವಾಸದ ಬೆಳಕು—ನೀರು. ಅದರ ಕೊರತೆಯಾದಂದು ಬಾಳಿನ ಗಿಡ ಹುಳು ಹಿಡಿದು ಕಮರಿ ಹೋಗುವುದೆ ಸರಿ."

"ಅವನ ಹಣೆಬರಹವೆ ಹಾಗಿರುವಾಗ ಯಾರೇನು ಮಾಡಲು ಸಾಧ್ಯ ಭಟ್ಟರೆ? ಅವನನ್ನು ಮನುಷ್ಯನನ್ನಾಗಿ ಮಾಡಲು ನಮ್ಮ ಪ್ರಯತ್ನವೇನು ಕಮ್ಮಿಯಿತ್ತೆ! ಅದೆಲ್ಲವನ್ನೂ ತಳ್ಳಿ, ಅವನ ವಿಧಿ ಅಧಃಪಾತಾಳಕ್ಕೆಳೆಯುತ್ತಿರು ವಾಗ ಎಷ್ಟು ಚಿಂತಿಸಿದರೂ ಅಷ್ಟೆ."

"ಅದು ಹೌದು, ವಿಧಿಯ ಮುಂದೆ ಯಾರ ಕೈವಾಡವೂ ನಡೆಯುವುದಿಲ್ಲ. ನಾನಿನ್ನು ಬರಲೆ? ನಾಳೆ-ನಾಡಿದ್ದರಲ್ಲಿ ಸೂರಪ್ಪನೂ ಬರಬಹುದು."

"ಅವರಿಗೆ ನನ್ನ ಈ ಸುಟ್ಟ ಮುಖವನ್ನು ಹೇಗೆ ತೋರಿಸಲಿ ಹೇಳಿ. ಮಗಳಿಗಿಂತ ಹೆಚ್ಚಾಗಿ ಸಾಕುವೆನೆಂದು ಹೇಳಿ ಕಟುಕನ ಕೈಗಿತ್ತು ಕಣ್ಣುಮುಚ್ಚಿ ಕುಳಿತಿರುವೆನು."

"ನೀವೇನು ಬೇಕೆಂದು ಮಾಡಿದ ಅಪರಾಧವಲ್ಲವಲ್ಲ? ಅವಳ ಪ್ರಾರಬ್ಧ ಕರ್ಮ ಹಾಗೆ ಕಿತ್ತು ತಿನ್ನುತಿದೆ. ಅದು ತಿಳಿಯದಷ್ಟು ಮೂಢರಲ್ಲ ಸೂರಪ್ಪ. ನಿಮ್ಮ ವಿಷಯದಲ್ಲಿ ಈಗಲೂ ಅವರಿಗೆ ಅಪಾರ ಗೌರವವಿದೆ. ನಾಳೆ ಇಲ್ಲಿ ಬಂದು ಇಳಿಯುವುದೂ ನಿಮಗಾಗಿಯೆ. ಆ ಅಸಮಾಧಾನವನ್ನಿರಿಸಿಕೊಳ್ಳಲೆ

ಬೇಡಿ" ಎಂದು ಹೆಜ್ಜೆ ಮುಂದಿಟ್ಟರು.

ಹೋಗುತ್ತಿದ್ದವರನ್ನು ಕುರಿತು ಹೇಳಿದರು ರಂಗಮ್ಮ,

"ನಾನು ಬಂದೆನೆಂದು ಬರುವುದನ್ನು ನಿಲ್ಲಿಸಬೇಡಿ, ದಿನಕ್ಕೊಮ್ಮೆಯಾದರೂ ಬಂದು ಹೋಗುತ್ತಿರಿ."

"ಅಗತ್ಯವಾಗಿ ಬರುವೆನು. ಯಾರು ಬರದಿದ್ದರೂ ನಾನು ಬರುವುದನ್ನು ನಿಲ್ಲಿಸುವುದಿಲ್ಲ. ನಿಮ್ಮ ಕುಟುಂಬದ ಹೊಣೆ ನನ್ನ ಜೀವಕ್ಕಂಟಿ ಹೋಗಿದೆ" ಎಂದು ಹೋಗುತ್ತಲೆ ಹೇಳಿ ಹೋದರು.

ಅವರಿಗೆ ಮಂಪರು ಹತ್ತಿ ಮಲಗಿದ್ದ ಶಾಂತ ಎಚ್ಚರಗೊಂಡು, ಕರುಳು ಕಿತ್ತು ಬರುವಂತೆ ನರಳಿದಳು. ಆ ನರಳಾಟ ರಂಗಮ್ಮನ ಕರುಳನ್ನು ಸುಟ್ಟಿತು. ನೆಲಕ್ಕೆಸೆದವಳ ಕಾಲನ್ನು ಹಾಸಿಗೆಯಲ್ಲಿರಿಸಿ, ರಂಗಮ್ಮ ಮೃದುವಾಗಿ,

"ಅಳಬೇಡಮ್ಮ, ಅತ್ತರೆ ಮತ್ತಷ್ಟು ನೋವು ಹೆಚ್ಚಾಗುವುದು. ಎರಡು ದಿನ ಔಷಧ ಬಿದ್ದರೆ ಎಲ್ಲ ಗುಣವಾಗುತ್ತದೆ, ಸುಮ್ಮನಿರು" ಎಂದು ಮೈಸವರಿ "ನಾನು ಊರಲ್ಲಿದ್ದಿದ್ದರೆ ನಿಮ್ಮ ಸಂಸಾರ ಇಷ್ಟು ಹದಗೆಡಲು ಬಿಡುತ್ತಲೆ ಇರಲಿಲ್ಲ. ಶಕುಂತಳೆಯ ಬಾಣಂತನಕ್ಕೆ ಹೋದದ್ದೆ ತಪ್ಪಾಯಿತು, ಹೋಗಬಾರದಿತ್ತು!" ಎಂದು ಮರುಗಿದರು.

"ಮೊದಲು ಇಷ್ಟಿರಲಿಲ್ಲಮ್ಮ, ಈಗೈದಾರು ತಿಂಗಳಿಂದ ತೀರ ಹೆಚ್ಚಾಗಿದೆ. ಇಂದು-ನಾಳೆ ಸರಿಹೋಗಬಹುದೆಂದು ತಗ್ಗುತ್ತಲೆ ಬಂದಿರುವೆನು. ನಿರಾಶೆಯೆ ಹೆಚ್ಚುತ್ತಿದೆ ಹೊರತು ಆಶೆಯ ಬೆಳಕೆ ಇಲ್ಲ."

"ಹೋಗಲಿ, ಹೆಚ್ಚು ಮಾತಾಡಿ ಆಯಾಸ ಮಾಡಿಕೊಳ್ಳಬೇಡ, ಮುಂದೆ ಎಲ್ಲ ಸರಿಹೋದೀತು; ನೋಡೋಣ. ನಿಮ್ಮ ಸಂಸಾರ ಸರಿಹೊಂದಿದ ಹೊರತು ನಾನೂ ಇಲ್ಲಿಂದ ಕಾಲು ಕೀಳುವುದಿಲ್ಲ" ಎಂದು ಮೇಲೆದ್ದು ಮೈತುಂಬ ಹೊದಿಸಿ "ಸ್ವಲ್ಪ ನಿದ್ದೆ ಮಾಡು, ನೋವು ಕಡಿಮೆಯಾಗುತ್ತೆ. ಬಾ ಮರಿ, ನಾವು ಒಳಗೆ ಹೋಗೋಣ" ಎಂದು ಮಗುವನ್ನು ಸೊಂಟಕ್ಕಿಳಿಸಿ ಒಳಗೆ ನಡೆದರು.

ಗೋಪಿಯ ಮನಸ್ಸೆಲ್ಲಾ ಮನೆಯ ಕಡೆಗೇ ಇತ್ತು. ಅಂಗಡಿಯನ್ನು ಕಾರಕೂನರ ಮೇಲೆಯೆ ಬಿಟ್ಟು ಮನೆಗೆದ್ದು ನಡೆದ. ಅಷ್ಟು ಬೇಗ ಹೊರಬಿದ್ದದ್ದು ಶಾಂತಳಿಗೆ ಉಪಚರಿಸುವುದಕ್ಕೆಂದಲ್ಲ—ಅವಳಿಗಾದ ಅಪಘಾತದ

ವಿಷಯ ತಿಳಿದು ಯಾರಾದರೂ ಅವಳ ಸಹಾಯಕ್ಕೆ ಬಂದಾರೆಂಬ ಭಯದಿಂದ.

ಅವನಿಗೆ ಕಣ್ಣಿರುವುದು ಭಟ್ಟರ ಮೇಲೆಯೆ. ಅವಳ ಪ್ರತಿಯೊಂದು ಕಷ್ಟದಲ್ಲಿಯೂ ಎಲ್ಲರಿಗಿಂತ ಮೊದಲು ಅವರು ಹಾಜರಿರುತ್ತಾರೆ. ಅದನ್ನು ತಡೆಯಲು ಎಷ್ಟೋ ಬಾರಿ ಅವರೊಡನೆ ಕಾದಾಡಿದ್ದಾನೆ. ಮಗುವಿಗೆ ಟಾಯಿಫಾಯಿಡ್ ಬಂದ ಸಮಯದಲ್ಲಂತೂ ತನಗೂ ಅವರಿಗೂ ಕೈ ಕೈ ಆಗುವಷ್ಟಾಗಿತ್ತು. ಒಂದೆರಡು ಬಾರಿ ಹೊಸ್ತಿಲೊಳಗೆ ಕಾಲಿರಿಸಲು ಬಿಡುವುದಿಲ್ಲವೆಂದು ಬಾಗಿಲಿಗೆ ಅಡ್ಡ ಬೇರೆ ಹಾಕಿದ್ದ. ಏನು ಮಾಡಿದರೂ ಸಗ್ಗಲಿಲ್ಲ. ಅವರ ಮೊಂಡು ಹಠದ ಬೆಂಕಿಯ ಮುಂದೆ ಅವನ ರಾಕ್ಷಸತನವೆಲ್ಲ ಮಂಜಿನಂತೆ ಕರಗಿ ಹೋಗಿತ್ತು.

ಭಟ್ಟರು ಅವನೆದುರಿಗೆ ಅವನ ಮನೆಗೆ ಬರುವುದೂ ಬಹಳ ವಿರಳ. ಬಂದರೂ ಅವನ ಲಕ್ಷ್ಯ ಮಾಡದೆ ತಮ್ಮ ಕೆಲಸ ಮುಗಿಸಿ ಹೋಗುತ್ತಿದ್ದರು. ಗೋಪಿ ಅವರನ್ನು ತನ್ನ ಮನೆಯಲ್ಲಿ ಹೆಚ್ಚಾಗಿ ಕಾಣದಿದ್ದರೂ, ಬಂದಾಗ ಅವರು ತೋರುವ ದರ್ಪ ಸಹಿಸುತ್ತಿರಲಿಲ್ಲ. ಹೇಗಾದರೂ ಮಾಡಿ ಅವರು ತನ್ನ ಮನೆಗೆ ಬರುವುದನ್ನು ತಡೆಯಬೇಕೆಂಬ ಇಚ್ಛೆ ಅವನಲ್ಲಿ ಪ್ರಬಲವಾಗಿ ಬೆಳೆಯಿತು. ಅದು ನೆರವೇರುವ ವರೆಗೆ ಶಾಂತಿಯಿಲ್ಲವೆಂದು ಮನಸ್ಸು ಚೀರಿಡುತ್ತಿತ್ತು.

ಆ ಕೆಲಸವನ್ನು ಸೀತಾರಾಮುವಿಗೆ ಹೇಗೂ ಒಪ್ಪಿಸಿದ್ದಾನೆ. ಅವನಿಗೆ ವಹಿಸಿದ ಮೇಲೆ, ಯಾವ ಕೆಲಸವಾಗಲಿ ಆಗದೆ ಹೋಗುವುದಿಲ್ಲ. ಅಲ್ಲಿವರೆಗೆ ತನ್ನಿಚ್ಛೆಗೆ ವಿರುದ್ಧವಾಗಿ ಏನೂ ನಡೆಯದಿದ್ದರೆ ಸಾಕು. ಆ ಭಟ್ಟ ಮಹಾ ಕೊರಮ. ಅವನಿಗೆ ಇಂಥ ಸುದ್ದಿಯೆಲ್ಲ ಬಂದು ಮುಟ್ಟುವುದು ಬಹಳ ಬೇಗ. ಈ ವೇಳೆಗೆ ಸುದ್ದಿ ತಿಳಿದು ಬಂದುಬಿಟ್ಟಿದ್ದರೆ? ನಾನು ಮಾಡಿದ್ದು ತಪ್ಪು. ಹೋಗುವಾಗ ಎಲ್ಲ ಕದವಿಕ್ಕಿ ಮನೆಗೆ ಬೀಗ ಹಾಕಿ ಹೋಗಬೇಕಿತ್ತು. ಆಗ ಈ ಕೊರಮನ ನೆನಪು ತಲೆಗೆ ಹೊಳೆಯಲೇ ಇಲ್ಲ. ದೇವರ ದಯದಿಂದ ಇಂದೊಂದು ದಿನ ಆ ಹದ್ದಿನ ಕಣ್ಣಿಗೆ ಬೀಳದಿದ್ದರೆ ಸಾಕು. ನಾಳೆಯಿಂದ ಬೀಗ ಹಾಕಿಯೆ ಓಡಾಡುವೆನು. ಒಬ್ಬರನ್ನೂ ಬಾಗಿಲ ಬಳಿ ಸುಳಿಯಗೊಡುವುದಿಲ್ಲ. ಹೊರಗೆ ಹೆಣ ಹಾಕಿದ ದಿನ ಬೇಕಾದರೆ ನೋಡಿಕೊಂಡು ಹೋಗಲಿ. ಹೀಗೆಲ್ಲ ತಲೆ ಕಾಯಿಸುತ್ತ ಮನೆಯೊಳಗೆ ಕಾಲಿರಿಸಿದ.

ಮುಚ್ಚಿದ್ದ ಬಾಗಿಲು ತೆರೆದಿದ್ದಾಗಲೆ ಅವನರ್ಧ ಶಕ್ತಿ ಉಡುಗಿಹೋಯಿತು. ಅಡಿಗೆ ಮನೆಯಲ್ಲಿ ಮಗುವಿನೊಡನೆ ಮಾತನಾಡುತ್ತಿದ್ದ ರಂಗಮ್ಮನ ಧ್ವನಿ ಕೇಳಿದ ಮೇಲಂತೂ ಪೂರ್ತಿ ನೆಲಕ್ಕೆ ಕುಸಿದುಬಿದ್ದ. ತನ್ನ ಬಯಕೆ ಹಣ್ಣಾಗುವ ಸಮಯದಲ್ಲಿ ಮತ್ತೆ ಮಹಾವಿಘ್ನ. ತನಗೆ ಬೇಡವಾಗಿರುವಾಗ ಇವರೆಲ್ಲ ಯಾಕೆ ಬರಬೇಕು! ಇದೆಲ್ಲ ಆ ಭಟ್ಟನ ಕುತಂತ್ರ. ಅವನಿಂದಲೆ ಸುದ್ದಿ ತಿಳಿದು ಅಮ್ಮ ಬಂದಿರಬೇಕು.

ಒಂದು ಗಳಿಗೆ ಭಟ್ಟರು ಅವನಿಂದ ಹಿಡಿ ಶಾಪ ಹಾಕಿಸಿಕೊಂಡರು. ಅದುವರೆಗೆ ಅವರ ಬಗ್ಗೆ ಕಾದಿರಿಸಿದ್ದ ಅಲ್ಪಸ್ವಲ್ಪ ಭಯ-ಭಕ್ತಿಯೂ ನಿರ್ನಾಮವಾಯಿತು. ಆದಷ್ಟು ಬೇಗ ಬಗ್ಗುಬಡೆಯಬೇಕೆಂದು ನಿರ್ಧರಿಸಿ ತಲೆಯನ್ನು ತಾಯ ಬಳಿ ಓಡಿಸಿದ.

ಅಮ್ಮನಿಗೆ ಶಾಂತಳೆಂದರೆ ಪ್ರಾಣ. ಈ ಸ್ಥಿತಿಯಲ್ಲಿ ಅವಳೊಬ್ಬಳನ್ನೇ ಬಿಟ್ಟು ಎಂದಿಗೂ ಹೋಗುವುದಿಲ್ಲ. ಶೈತ್ಯೋಪಚಾರವಾದರೆ ಶಾಂತ ಚೇತರಿಸಿಕೊಳ್ಳುವಳು. ಹಾಗಾದಲ್ಲಿ ಮತ್ತಷ್ಟು ದಿನ ಅವಳೊಡನೆ ತಾನು ಹೆಣಗಾಡಬೇಕು. ಈಗಲೆ ತನ್ನ ತಲೆ ಬೇಸರ ಬಂದು ಹೋಗಿದೆ. ಆದಷ್ಟು ಬೇಗ ಆ ಸಮಸ್ಯೆಯನ್ನು ಬಗೆಹರಿಸಿಕೊಳ್ಳದಿದ್ದರೆ ಸಾಧ್ಯವೆ ಇಲ್ಲ. ಹೇಗಾದರೂ ಮಾಡಿ ಅಮ್ಮನನ್ನು ಇಲ್ಲಿಂದ ಹೊರಡಿಸಲೆ ಬೇಕು. ಈ ಸಮಯದಲ್ಲಿ ತಾಯ್ತನಕ್ಕೆ ತಲೆ ತಗ್ಗಿಸಿದರೆ ತನಗೇ ಆಪತ್ತು—ಹಾಗೆಂದು ಅಡಿಗೆ ಮನೆಯ ಬಳಿ ಕಾಲಿರಿಸಿ ಮಾತು ಪ್ರಾರಂಭಿಸಬೇಕೆನ್ನುವುದರಲ್ಲೆ, ರಂಗಮ್ಮನೆದೆಯಿಂದ ದರ್ಪ ತುಂಬಿ ಹಾರಿ ಬಂದ ತಿರಸ್ಕಾರದ ಸಿಡಿಮದ್ದು ಅವನನ್ನೇ ತಾಕಿ ನಡುಗಿಸಿತು.

"ಥೂ! ನಿನ್ನ ಮೂರ್ಖತನಕ್ಕಷ್ಟು ಬೆಂಕಿ ಹಾಕ. ನಿನ್ನ ಪಾಪಿ ಮುಖ ನೋಡಬೇಕೆನಿಸುವುದಿಲ್ಲ. ನಿನ್ನಂಥ ಕಟುಕನನ್ನು ಹಡೆದ ನನ್ನ ಹೊಟ್ಟೆ ಪುಣ್ಯಕ್ಕೆಷ್ಟು ಶಾಪ ಹಾಕಿದರೂ ಸಾಲದು. ಕುಲಸ್ಥರ ಮನೆ ಹೆಣ್ಣು ಮಗಳನ್ನು ತಂದು ಇಲ್ಲದ್ದನ್ನೆಣಿಸಿ ಹೊಟ್ಟೆ ಹುಣ್ಣು ಮಾಡಿದ ನಿನಗೆ ದೇವರೆಂದಿಗೂ ಸುಮ್ಮನೆ ಬಿಡುವುದಿಲ್ಲ. ಎಷ್ಟು ಪುಣ್ಯ ಮಾಡಿದ್ದೆಸೊ ನಿನ್ನನ್ನು ಪಡೆಯಲು! ನನ್ನ ಕಣ್ಣೆದುರು ನಿಲ್ಲಬೇಡ, ತೊಲಗು ಆಚೆ!"

ಗೋಪಿ ಎಣಿಸಿದ್ದಕ್ಕಿಂತ ತೀರ ಬದಲಾಯಿಸಿದ್ದರು ರಂಗಮ್ಮ. ಎಷ್ಟೊ

ದರೂ ಮಗನನ್ನು ಬಿಟ್ಟುಕೊಟ್ಟು ಮಾತನಾಡಲಾರರೆಂಬ ಭರವಸೆಯೆಲ್ಲ ಕರಗಿ ಹೋಯಿತು. ಇನ್ನು ಶಾಂತಳಲ್ಲಿ ತನ್ನಾಟ ನಡೆಯಲಾರದೆಂದು ಹೆದರಿದ. ಆದರೂ ತಾಯಿಯ ಮುಂದೆ ತನ್ನ ದೌರ್ಬಲ್ಯ ತೋರಿಸಿಕೊಳ್ಳಲಿಲ್ಲ. ಮೊದಲಿನ ದರ್ಪವನ್ನೆಳೆದು ತಂದು ಕೇಳಿದ,

"ಅದಿರಲಿ, ನೀನು ಬಂದದ್ದು ಯಾಕೀಗ?"

"ನಿನ್ನ ಕಟುಕತನಕ್ಕೆ ಕೊಡಲಿ ಪೆಟ್ಟು ಕೊಡಲು!"

ಆವರೆಗೆ ಮಾಡದಿದ್ದ ಧೈರ್ಯವನ್ನು ಎದೆಯಲ್ಲಿ ತುಂಬಿ ಹೇಳಿದ,

"ಅದೆಲ್ಲ ಕಟ್ಟಿರಿಸಿ ಬಿಡಬೇಕು. ಇದು ನನ್ನ ಮನೆ. ನನ್ನ ಕೈ ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ನಿನ್ನೆದುರಿಗೇ ಅವಳನ್ನು ಬಗ್ಗುಬಡೆಯದಿದ್ದರೆ ಕೇಳು."

"ಇನ್ನೊಂದು ಬಾರಿ ನನ್ನ ಹೊಟ್ಟೆಯಲ್ಲಿ ಹುಟ್ಟಿ ಬರಬೇಕು. ನನ್ನೆದುರಿಗೆ ನೀನವಳ ಮೈಮೇಲೆ ಕೈ ಮಾಡಿ ಬದುಕು ನೋಡೋಣ! ಏನೋ, ಬಂದ ಹೊಸದು, ಗಂಡ-ಹೆಂಡಿರು--ಒಬ್ಬರನ್ನೊಬ್ಬರು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ, ಇಂದು ಸರಿಹೋಗಬಹುದು, ನಾಳೆ ಸರಿಹೋಗಬಹುದೆಂದು ನೀನು ಮಾಡಿದ್ದಕ್ಕೆಲ್ಲ ಬಾಯಿ ಮುಚ್ಚಿದ್ದರೆ ನಿನ್ನಾಟ ಮಿತಿಮೀರಿ ಹೋಯಿತು. ಇನ್ನುಮೇಲೆ ಅವಳಿದ್ದಲ್ಲಿಗೆ ಕಾಲಿರಿಸಿ ನೋಡು, ಏನು ಮಾಡುವೆನೆಂದು!"

ಕೆರಳಿದ ಕಾಳಿಯಂತೆ ರೌದ್ರತೆಯನ್ನು ತುಂಬಿ ಅಬ್ಬರಿಸಿದ ತಾಯನ್ನು ಕಂಡು ಗೋಪಿ ನಿಜಕ್ಕೂ ನಡುಗಿದ. ಮಾತು ಮುಂದುವರಿಸಿದರೆ ಸ್ವಾರಸ್ಯವಿಲ್ಲವೆಂದು ತಿಳಿದು, ಧೈರ್ಯ ಕುಸಿದು ಬಿದ್ದ ಸ್ವರದಲ್ಲಿ,

"ನೀನು ಮಾಡುವುದೆಲ್ಲ ನನಗೆ ಗೊತ್ತಿದೆ. ಇರಲಿರಲಿ—ನಿಮಗೆಲ್ಲ ತಕ್ಕ ಬುದ್ಧಿ ಕಲಿಸುವೆನು" ಎಂದು ಮೆಲ್ಲನೆ ಅಲ್ಲಿಂದ ಜಾರಿದ.

ಹೋಗುತ್ತಿದ್ದ ಗೋಪಿಯನ್ನು ಕುರಿತು ಹೇಳಿದರು ರಂಗಮ್ಮ,

"ಊಟಕ್ಕೆ ಬಂದರೆ ಬಡಿಸುವೆನು, ಅಡಿಗೆಯಾಗಿದೆ!"

"ಊಟ ಮಾಡುವುದಿಲ್ಲ" ಎಂದು ಸಿಟ್ಟಿನಿಂದ ತುಂಬಿದ ಧ್ವನಿಯಲ್ಲಿ ಹೋಗುತ್ತಲೆ ಹೇಳಿದ.

"ಉಳಿಯಿತು—ಮೈ ಕೊಬ್ಬು ಕರಗಲಿ" ಎಂದು ಸರ್ರನೆ ಮಗುವಿನ ಬಳಿ ಹೊರಳಿದರು.

ಆ ಮಾತು ಕಾದ ಕಬ್ಬಿಣ ರಸದಂತೆ ಗೋಪಿಯ ಕಿವಿಗೆ ಹಾರಿ ಮೈ-ತುಂಬ ಬೆಂಕಿ ಮೂಡಿಸಿತು. ಆ ಕಾವಿಗೆ ಅವನ ಕೊಠಡಿಯ ಕದ ಸಿಕ್ಕಿ 'ಛಟ್ಟೆ'ಂದು ಸಿಡಿಯಿತು. ಹೋಗಿ ಹಾಸಿಗೆಯ ಮೇಲೆ ದೊಪ್ಪನೆ ಬಿದ್ದುಕೊಂಡ.

ಭಟ್ಟರೆಣಿಸಿದಂತೆ ಸೂರಪ್ಪ ಮಾರನೆ ದಿನ ಸಂಜೆಯೆ ಬಂದಿಳಿದರು. ರಂಗಮ್ಮ ಅವರನ್ನು ಕಂಡು ಭೂಮಿಗಿಳಿದು ಹೋದರು. ತಮ್ಮ ಬಗ್ಗೆ ಸೂರಪ್ಪನವರಲ್ಲಿ ಗೌರವವಿದೆಯೆಂದು ಭಟ್ಟರು ಭರವಸೆಯಿತ್ತಿದ್ದರು. ಶಾಂತಳ ಪರಿಸ್ಥಿತಿ ಆ ಭರವಸೆಯನ್ನು ತಳ್ಳಿ ಎದೆಯಲ್ಲಿ ಅಳುಕು ತುಂಬಿತು. ಮಗಳನ್ನು ಕೊಡುವ ಮುನ್ನ, ಕೊಟ್ಟ ಮೇಲೂ ತಮ್ಮಲ್ಲೆಷ್ಟೋ ಗೌರವ-ವಿಶ್ವಾಸವನ್ನಿರಿಸಿದ್ದರು ಸೂರಪ್ಪ. ಆ ತೂಕಿಯನ್ನಳಿಸಿಕೊಳ್ಳಲು ಗೋಪಿಯಿಂದಾಗಿ ಅಸಮರ್ಥರಾಗಿದ್ದಾರೆ. ಆ ಪಾಪಕ್ಕೆ ತಾವು ಹೊಣೆಯಲ್ಲ. ತಮಗೆ ತಿಳಿಯದಂತೆ ಅಪರಾಧ ನಡೆದು ಹೋಗಿದೆ. ಆ ವಿಷಯ, ಅಂದರೆ ತಾವು ತಪ್ಪಿತಸ್ಥರಲ್ಲವೆಂಬ ವಿಷಯ ಭಟ್ಟರಿಂದ ಗೊತ್ತಾಗಿರಬಹುದು. ಆದರೂ ತಮ್ಮನ್ನು ಅಪರಾಧಿಯಾಗಿ ಕಂಡರೆ ಸಹಿಸಿಕೊಳ್ಳಬೇಕು. ಮಕ್ಕಳು ಮಾಡಿದ ಪಾಪ ತಂದೆತಾಯನ್ನು ಕಾಡುವುದು ಸ್ವಾಭಾವಿಕ.

ಸೂರಪ್ಪನೂ ಮಕ್ಕಳೊಂದಿಗರು. ಅವರಿಗೂ ಕಷ್ಟ-ಸುಖದ ಅರಿವಿದೆ. ಎಂದಿಗೂ ಹಾಗೆ ಎಣಿಸಲಾರರು. ಹೇಗಾದರಾಗಲಿ, ಮನಸ್ಸು ಗಟ್ಟಿ ಮಾಡಿಕೊಳ್ಳುವೆನು. ಕೆಟ್ಟ ಮಕ್ಕಳನ್ನು ಹಡೆದ ಮೇಲೆ ಬರುವ ಅಪವಾದ-ಅಪಮಾನವನ್ನುಣ್ಣಲು ಸಿದ್ಧರಿರಬೇಕು—ಹಾಗೆಂದು ಮನಸ್ಸಿಗೆ ತಿಳುವಳಿಕೆ ಕೊಡುತ್ತಿರುವಲ್ಲೆ ಸೂರಪ್ಪ ರಂಗಮ್ಮನನ್ನು ಹುಡುಕಿಕೊಂಡು ಬಂದು ಮಾತಿಗೆ ಮೊದಲಿಟ್ಟರು.

"ಎಲ್ಲರೂ ಕ್ಷೇಮ ತಾನೆ ?"

ಮಾತಿನಲ್ಲಿ ಯಾವ ಕೊಂಕೂ ಇರಲಿಲ್ಲ. ಬದಲಾಗಿ ಗೌರವದ ಮಧು ತುಂಬಿತ್ತು. ಆ ಸೌಜನ್ಯ ರಂಗಮ್ಮನಿಗೆ ಜೀವ ತುಂಬಿತು. ಬೀಗರಲ್ಲಿ ತಾವೆಣಿಸಿದ್ದ ತಪ್ಪೆಣಿಕೆಗೆ ಪಶ್ಚಾತ್ತಾಪಪಟ್ಟು, ಕಣ್ಣಲ್ಲಿ ಹನಿ ತುಂಬಿ ಗದ್ಗದಿತರಾಗಿ ಹೇಳಿದರು,

"ನಾನಿನ್ನೂ ಸಾಯದೆ ಬದುಕಿರುವೆನು ನೋಡಿ. ನಿಮಗೆ ಮುಖ ತೋರಿಸುವುದಕ್ಕೆ ನಾಚಿಕೆಯಾಗುತ್ತೆ."

"ಯಾರೇನು ಮಾಡಲು ಸಾಧ್ಯ ಹೇಳಿಯಮ್ಮ—ಎಲ್ಲ ಅವರವರ ಪ್ರಾರಬ್ಧ ಕರ್ಮ. ಬುತ್ತಿ ಕಟ್ಟಿಕೊಂಡು ಬಂದದ್ದನ್ನು ಉಣ್ಣಲಾಗುವುದಿಲ್ಲ ವೆಂದು ಹೇಳಿದರೆ ಸಾಧ್ಯವಿದೆಯೆ? ನೀವ್ಯಾಕೆ ಮರುಗುವಿರಿ? ಅವಳಿಗೆ ನಿಮ್ಮ ಪ್ರೀತಿ ವಿಶ್ವಾಸ ದಾನ ಮಾಡುವುದರಲ್ಲಿ ನೀವೇನೂ ವಂಚನೆ ಮಾಡಿಲ್ಲ. ಅದನ್ನುಂಡು ಸುಖವಾಗಿರಲು ಅವಳ ಹಣೆಯಲ್ಲಿ ಬರೆದಿಲ್ಲವಲ್ಲ ಹೇಳಿ. ಎಷ್ಟು ಕಣ್ಣೀರಿಟ್ಟರೂ ಅಷ್ಟೆ. ಶಾಂತ ಎಲ್ಲಿದ್ದಾಳೆ?"

ಸೆರಗಿನ ತುದಿಯಿಂದ ಕಣ್ಣೊರೆಸುತ್ತ ಹೇಳಿದರು,

"ಹಜಾರದ ಬಲಪಕ್ಕದಲ್ಲಿರುವ ಕೋಣೆಯಲ್ಲಿ ಮಲಗಿದ್ದಾಳೆ. ಕೈಕಾಲು ತೊಳೆದು ಸ್ವಲ್ಪ ಗಂಗೋದಕ ತೆಗೆದುಕೊಂಡು ಹೋಗಿ" ಎಂದು ಕಾಫಿ ತರಲು ಅಡಿಗೆಮನೆಗೆ ಹೊರಳಿದರು.

ಸೂರಪ್ಪ ಕೈಕಾಲು ತೊಳೆದು ಬಂದು ಕಾಫಿ ಕುಡಿದು ಶಾಂತಳ ಕೊಠಡಿಗೆ ನಡೆದರು. ತಂದೆಯನ್ನು ಕಂಡು ನೊಂದಿದ್ದ ಶಾಂತ ಕಟಕ್ಕನೆ ನುಡಿದಳು,

"ಇಷ್ಟು ಬೇಗ ಯಾಕೆ ಬಂದೆಯಪ್ಪ? ಇನ್ನು ಸ್ವಲ್ಪ ದಿನ ತಡೆದು ಬಂದಿದ್ದರೆ ನನ್ನ ಚಿತೆಯ ಬೂದಿಯನ್ನಾದರೂ ತೆಗೆದುಕೊಂಡು ಹೋಗಬಹುದಿತ್ತು. ಬಹಳ ಬೇಗಾಯಿತು, ನೀನು ಬಂದದ್ದು."

ಶಾಂತ ಕರುಳು ಸುಟ್ಟಾಡಿದ ಮಾತು ಸೂರಪ್ಪನೆದೆ ಹಿಂಡುತಿತ್ತು. ಮೈತುಂಬ ಕಟ್ಟಿದ ಗಾಯದ ಪಟ್ಟಿ ಕಣ್ಣಿಗಪ್ಪಳಿಸಿ ಹೊಡೆದು ಜೀವದಲ್ಲಿ ಜುಗುಪ್ಸೆಯುಂಟು ಮಾಡುತಿತ್ತು. ಸಿಟ್ಟು—ಸಂಕಟ ಏಕಕಾಲದಲ್ಲಿ ಮೈತುಂಬಿ ಬಂದು,

"ಅನ್ನು ಶಾಂತ, ನಿನ್ನ ಸಂಕಟವನ್ನೆಲ್ಲ ತುಂಬಿ, ಇನ್ನೂ ತೀಕ್ಷ್ಣವಾದ ಚುಚ್ಚು ನುಡಿಯ ಬಾಣ ಬಿಡು ನನ್ನೆಡೆಗೆ. ಅಷ್ಟೇ ಸಾಲದು ಮಗು, ಈ ಪಾಪಿ ದೇಹವನ್ನು ಬೆಂಕಿಯ ಓಡಿನಲ್ಲಿಟ್ಟು ಸುಟ್ಟು ಸುಟ್ಟು ತೆಗೆಯಬೇಕು! ನಿನಗೆ ಮಾಡಿದ ಮಹಾಪರಾಧಕ್ಕೆ ಅದೇ ತಕ್ಕ ಮದ್ದು. ಹಿಡಿ, ಇದನ್ನು ಮೊದಲು ಸುಟ್ಟು ಭಸ್ಮ ಮಾಡು!" ಎಂದು ಉದ್ರೇಕಿತರಾಗಿ ಜೇಬಿನಿಂದ ಬೆಂಕಿ ಪೊಟ್ಟಣವನ್ನು ತೆಗೆದು, ಕಣ್ಣೀರಿಡುತ್ತಿದ್ದ ಮಗಳ ಕಡೆ ಓಡಿದು "ಕರಗಬೇಡ ಶಾಂತ, ಕಲ್ಲೆದೆ ಮಾಡಿ ಸುಡು! ಸುಡು ಶಾಂತ.......... ಸುಡು........!" ಎಂದು ಒತ್ತಾಯವಾಗಿ ಅವಳ ಕೈಲಿ ಬೆಂಕಿ ಪೊಟ್ಟಣವನ್ನಿರಿಸಿ ಹಿಡಿಸಲುಗಿಸಿದರು.

ಶಾಂತ ಎಂದೂ ತಂದೆಯ ಸಿಟ್ಟನ್ನು ಕಂಡವಳಲ್ಲ. ಸಾವಿಗೆ ಬಾಯ್ದೆರೆದು ಹೊರಟ ಆ ಭೀಕರ ರುದ್ರತೆ ಅವಳೆದೆಯನ್ನು ನಡುಗಿಸಿತು. ಚೆಂಕಿ ಪೊಟ್ಟಣವನ್ನು ಹಾಸಿಗೆಯೆಡೆಯಲ್ಲಿರಿಸಿ ತಂದೆಯ ಕೈ ಹಿಡಿದು ನಡುಗುವ ಧ್ವನಿಯಲ್ಲಿ ಹೇಳಿದಳು,

"ಹೋಗಲಿ ಬಿಡು ಅಪ್ಪ, ಮನಸ್ಸಿಗೆ ಹಚ್ಚಿಕೊಳ್ಳಬೇಡ. ನನ್ನ ಹಣೆಯಲ್ಲಿ ಈ ಪಾಡೆಲ್ಲ ಬರೆದಿರುವಾಗ ಯಾರೇನು ಮಾಡಲು ಸಾಧ್ಯ? ಇಷ್ಟೆಲ್ಲ ನಡೆಯಬೇಕೆಂದಿರುವುದರಿಂದಲೆ ನಿಮಗೂ ಉದಾಸೀನದ ಮನಸ್ಸು ಕೊಟ್ಟ ದೇವರು. ಈಗಲಾದರೇನು, ಮಿಂಚಿ ಹೋಗಿಲ್ಲ. ತಕ್ಕ ಪ್ರಯತ್ನ ಮಾಡಿ ಸರಿ ಹೊಂದಿಸಬಹುದು."

"ನನಗಾ ನಂಬಿಕೆಯೆ ಸತ್ತು ಹೋಯಿತು ಶಾಂತ. ಯಾವ ತಲೆಮಾರಿನ ರಕ್ತದೋಷವೊ, ಹಿರಿಯರ ಶಾಪವೊ, ಮಾಡಿದ ಪಾಪಕರ್ಮವೊ ಈ ಪಾಪಿ ದೇಹದಲ್ಲಿಳಿದು ನಮ್ಮ ಸಂತಾನವನ್ನು ಕಿತ್ತು ಕಿತ್ತು ತಿನ್ನುತಿದೆ. ರತ್ನಳ ಬಾಳೂ ದುರಂತವಾಯಿತು........! ಶಾರದೆಯೂ ಕೈಯಾರೆ ಕೊಲೆಗೀಡಾದಳು ........! ನಿನ್ನ ಬಾಳೂ....ಶಾಂತಾ ...ನಿನ್ನ....ಬಾಳೂ........!"

ದುಃಖ ತಡೆಯಲಾರದೆ ಅರ್ಧಕ್ಕೆ ನಿಲ್ಲಿಸಿ, ಬಿಕ್ಕಿಬಿಕ್ಕಿ ಅಳತೊಡಗಿದರು. ಶಾಂತಳೆದೆಯಲ್ಲಿ ಉಕ್ಕಿ ಬರುತ್ತಿದ್ದ ದುಃಖದ ಕಡಲಿನ ಮೊರೆತವೂ ಅದರಲ್ಲಿ ಬೆರೆತು ಮಾರ್ದನಿ ಕೊಟ್ಟಿತು. ದುಃಖವನ್ನು ಹಿಡಿತಕ್ಕೆ ತಂದು, ನಿಲ್ಲಿಸಿದ ಮಾತನ್ನು ಮುಂದುವರಿಸಿದರು ಸೂರಪ್ಪ,

"ನಿನ್ನಮ್ಮ ಹೇಳಿದಾಗಲೆ ಎಚ್ಚರ ವಹಿಸಿದ್ದರೆ ಇಂದು ನಿನ್ನ ಬಾಳು ಈ ಹೀನಸ್ಥಿತಿಗೆ ಬರುತ್ತಿರಲಿಲ್ಲ. ನನ್ನಂತೆ ಗೋಪಿಯನ್ನು ತಿಳಿದು ಉದಾಸೀನ ಮಾಡಿದೆ. ನನ್ನ ಉದಾಸೀನಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿದ ದೇವರು. ನಾನು ಮಾಡಿದ ಅಪರಾಧವನ್ನು ನೀನಿರುವ ವರೆಗೆ ನಿನ್ನ ಸೇವೆ ಮಾಡಿ ಕಳೆದುಕೊಳ್ಳುವೆನು. ಏನೂ ಹೆದರಬೇಡ ಶಾಂತ ಇನ್ನು!"

"ನಾನು ಪಟ್ಟ ಒಂದೊಂದು ಯಾತನೆಯನ್ನು ನೆನೆಸಿಕೊಂಡರೆ ಎದೆ ಒಡೆದು ಹೋಗುತ್ತದೆ ಅಪ್ಪ........! ನಿನ್ನ ಅಳಿಯ........!" ಮುಂದೆ ಹೇಳಲು ಸಂಕಟ ತಾಳಲಾರದೆ ತುಟಿ ಕಚ್ಚಿದಳು.

"ಆಯಾಸ ಮಾಡಿಕೊಳ್ಳಬೇಡ, ನನಗೆ ಭಟ್ಟರಿಂದೆಲ್ಲ ವಿಷಯ ತಿಳಿದಿದೆ.

ಅವರಲ್ಲಿಗೆ ಹೋಗೇ ಇಲ್ಲಿಗೆ ಬಂದದ್ದು. ನಾಳೆ ಸಂಜೆ ಇಲ್ಲಿಂದ ಹೊರಟು ಬಿಡಬೇಕು. ಈ ನರಕದ ಮನೆಯಲ್ಲಿ ಇನ್ನು ಒಂದು ಕ್ಷಣವೂ ಇರುವುದು ಬೇಡ. ನಿನ್ನನ್ನು ನೆಟ್ಟಗೆ ಬಾಳಿಸುವೆನೆಂದು ಆ ಅಧಮ ತಕ್ಕ ಪ್ರಮಾಣ ಕೊಡುವ ವರೆಗೆ ನನ್ನ ಮನೆ ಬಿಟ್ಟು ಕದಲಿಸುವುದಿಲ್ಲ. ಮನೆಯಲ್ಲಿರು, ಗಂಡು ಮಗುವಿನಂತೆ ಸಾಕುವೆನು. ದೇವರೇನು ಕಡಿಮೆ ಮಾಡಿಲ್ಲ. ಇಚ್ಛೆಯಿದ್ದರೆ ನಾಲ್ಕಕ್ಷರ ಕಲಿತು ಯಾವುದಾದರೂ ಕಸುಬು ಮಾಡಿದರಾಯಿತು. ಇಂಥ ಅಧಮರಿಗೆ ಹಾಗೆ ಮಾಡಿಯೆ ಬುದ್ಧಿ ಕಲಿಸಬೇಕು" ಎಂದು ಹೊದಿಕೆಯನ್ನು ಸ್ವಲ್ಪ ಸರಿಸಿ ನೋಡಿ ಕೈಕಾಲುಗಳ ಪಟ್ಟಿ ಕಂಡು "ಕಟುಕ ಅವನು. ಮನುಷ್ಯರ ಜಾತಿಗೆ ಸೇರಿದ್ದರೆ ಎಂದಿಗೂ ಹೀಗೆ ಮಾಡುತ್ತಿರಲಿಲ್ಲ. ಪಶು....! ಪಶು....!" ಎಂದು ಹಣೆ ಮುಟ್ಟಿ ಕೇಳಿದರು,

"ಮೈ ಸುಟ್ಟು ಹೋಗುತ್ತಿದೆಯಲ್ಲಾ, ಔಷಧವೇನಾದರೂ ತೆಗೆದು ಕೊಂಡಿರುವೆಯೇನು?"

"ಹೌದು, ಮಾವನೆ ತಂದುಕೊಟ್ಟಿದ್ದಾರೆ."

"ಅವರೊಬ್ಬರು ದೇವರಂಥ ಮನುಷ್ಯರು. ಅವರ ಋಣವನ್ನು ತೀರಿ ಸಲು ಎಷ್ಟು ಜನ್ಮವೆತ್ತಿದರೂ ಸಾಲದು. ಅವರಿದ್ದಿದ್ದರಿಂದ ಇಷ್ಟಾದರೂ ಉಸಿ ರಿದೆ ನಿನಗೆ."

"ಅದು ಹೌದು, ಅವರಿಲ್ಲದಿದ್ದರೆ ಈ ವೇಳೆಗೆ ನಾನು ಕಣ್ಣು ಮುಚ್ಚಿ ಎಷ್ಟೋ ದಿನವಾಗಬೇಕಿತ್ತು. ನನ್ನನ್ನು ಬದುಕಿಸಿದ ಪುಣ್ಯವೆ ಅವರದು. ಅವರ ಸೇವೆಯ ಋಣ ಬೆಟ್ಟದಷ್ಟಿದೆ, ನನ್ನ ಮೇಲೆ. ತೀರಿಸುವುದು ಹೇಗೋ ಏನೊ!"

"ಅದಕ್ಕೂ ಕಾಲ ಬರುತ್ತದೆ; ಮೊದಲು ಹುಷಾರಾಗಿ ಮೈಬಿಟ್ಟು ಕಳಿ; ಆಮೇಲೆಲ್ಲ ಮಾಡೋಣ" ಎಂದು ಮೈಮೇಲೆ ಹೊದಿಕೆಯನ್ನು ಸರಿಯಾಗಿ ಹೊದಿಸಿ "ಸ್ವಲ್ಪ ಹೊತ್ತು ಮಲಗಿ ನಿದ್ದೆ ಮಾಡು, ನಾನೂ ಹೊರಗೆ ಹೋಗಿ ಬರುವೆನು" ಎಂದು ಕೊಠಡಿಯಿಂದ ನಿಧಾನವಾಗಿ ಹೊರಬಿದ್ದರು.

ರಾತ್ರಿಯೆ ಗೋಪಿಯನ್ನು ಕಂಡು ಮಾತನಾಡಬೇಕೆಂದು ಬಹಳ ಪ್ರಯತ್ನಪಟ್ಟರು ಸೂರಪ್ಪ. ಅದಕ್ಕೆಂದೆ ಭಟ್ಟರ ಮನೆಗೆ ಹೋಗಿ ಅವರನ್ನೂ ಕರೆದುಕೊಂಡು ಬಂದಿದ್ದರು ಸಂಗಡ. ಮನಸ್ಸಿನಲ್ಲಿ ಯಾವುದೋ ಹಂಚಿಕೆ

ಹೂಡಿದ್ದ ಗೋಪಿ ಆಗ ಮಾತಿಗವಕಾಶವೀಯದೆ 'ನಾಳೆಯಾಗಲಿ' ಯೆಂದು ಅವರ ಆತುರವನ್ನು ಕಟ್ಟಿ ಹಾರಿಸಿದ. ಭಟ್ಟರು ಬೆಳಿಗ್ಗೆ ಬರುವೆನೆಂದು ಆಶ್ವಾಸನವಿತ್ತು ಮನೆಯ ದಾರಿ ತುಳಿದರು. ಗಂಟೆ ಹತ್ತಾಗಿದ್ದುದರಿಂದ ಸೋಲು ಬಿದ್ದು ಎಲ್ಲರೂ ಹಾಸಿಗೆ ಹುಡುಕಿ ಹೊರಟರು. ಗೋಪಿ ಮಾತ್ರ ಆ ಕಗ್ಗತ್ತಲೆಯಲ್ಲೆಲ್ಲೋ ಕೊಂಚ ಹೊತ್ತು ಕರಗಿದ್ದು, ಎಲ್ಲರೂ ಮಲಗಿದ ಮೇಲೆ ಮನೆಗೆ ಬಂದು ಸೇರಿದ.

ಗಂಟೆ ಹನ್ನೆರಡಾದರೂ ಕಣ್ಣಿಗೆ ನಿದ್ದೆ ಹತ್ತಲೆ ಇಲ್ಲ. ಮನಸ್ಸು ಹದ ತಪ್ಪಿ ಹೋಗಿತ್ತು. ಧೈರ್ಯ ತುಂಬಿದ ಎದೆಯಲ್ಲಿ ಗಾಬರಿ ಬಂದು ಸೇರಿತ್ತು. ಸೂರಪ್ಪನನ್ನು ಕಂಡೊಡನೆ ಭೂತದರ್ಶನವಾದವನಂತೆ ನಡುಗಿದ್ದ. ಅಷ್ಟು ಬೇಗ ಬರುವರೆಂದು ಊಹಿಸಲೆ ಇಲ್ಲ. ಒಬ್ಬರಾದ ಮೇಲೊಬ್ಬರಂತೆ ಸಾವಿನ ಹಿಡಿತದಿಂದ ಶಾಂತಳನ್ನು ಬಿಡಿಸಿಕೊಳ್ಳಲು ಅಬ್ಬರಿಸಿ ಬರುತ್ತಿದ್ದಾರೆ. ತಾಯಿಯನ್ನು ಹೇಗಾದರೂ ಕಣ್ಣುಕಟ್ಟು ಮಾಡಬಹುದು; ಸೂರಪ್ಪನನ್ನು? ಸಾಧ್ಯವಿಲ್ಲ! ಏದೆಗಾರಿಕೆಯ ಮನುಷ್ಯ ಅವರು. ಅವರೊಡನೆ ಹೆಣಗುವುದು ಬಹಳ ಕಷ್ಟ. ಎಷ್ಟು ತಾಳ್ಮೆಯಿದೆಯೊ ಅಷ್ಟೆ ಸಿಟ್ಟಿನ ಸಿಡಿಮದ್ದೂ ತುಂಬಿದೆ ಅವರೆದೆಯಲ್ಲಿ. ಇನ್ನು ಸ್ವಲ್ಪ ದಿನ ಆ ಭಂಡ ಮುದುಕ ಬರದಿದ್ದರೆ ಚೆನ್ನಾಗಿತ್ತು. ಗುರಿ ಮುಟ್ಟುವುದರಲ್ಲೆ ಬಂದು ಬಿಟ್ಟಿದ್ದಾರೆ. ಇನ್ನು ಅದನ್ನು ಸಾಧಿಸುವ ಆಶೆ ತನಗುಳಿಯಲಿಲ್ಲ. ಮಗಳನ್ನು ಆ ಸ್ಥಿತಿಯಲ್ಲಿ ಕಂಡು ಒಂದು ಘಳಿಗೆ ಇಲ್ಲಿರಿಸಲಾರರು. ತೌರಿಗೆ ಹೋಗುವುದನ್ನು ತಡೆಗಟ್ಟಿದರೆ ರಕ್ಷಣಾ ಶಾಖೆಯ ಬೆಜ್ಜರಿಕೆ ಹಾಕಿ ಕರೆದುಕೊಂಡು ಹೋಗಬಹುದು. ಶಾಂತ ಒಮ್ಮೆ ಇಲ್ಲಿಂದ ಜಾರಿದಳೆಂದರೆ ಮುಗಿಯಿತು, ತನ್ನ ಬಾಳಿಗೆ ಕೊನೆ ಖಂಡಿತ. ತನ್ನಿಂದ ನೊಂದವಳು ಸೇಡು ತೀರಿಸಿಕೊಳ್ಳಲು ನಿಲ್ಲಬಹುದು. ತಂದೆ-ಮಗಳಿಬ್ಬರೂ ಸೇರಿ ಅಪಪ್ರಚಾರ ಮಾಡಿ, ಯಾರೂ ಹೆಣ್ಣು ಕೊಡದಂತೆ ತಡೆದು, ಎರಡನೆ ಮದುವೆಯ ಬಯಕೆಯನ್ನು ಮಣ್ಣು ಮಾಡಬಹುದು. ಜೀವನಾಂಶಕ್ಕೆ ದಾವಾ ಹಾಕಿ ಜೀವವನ್ನು ಹಣ್ಣು ಮಾಡಬಹುದು! ಗಾಳಿ ಗಂಟು ಮಾಡಿ ವ್ಯಾಪಾರಕ್ಕೆ ಧಕ್ಕೆ ತಂದು ಸೊಕ್ಕು ಮುರಿಯಬಹುದು. ಅಷ್ಟಾಗಲು ಜೀವವಿರುವವರೆಗೆ ಖಂಡಿತ ಬಿಡಬಾರದು. ತೌರಿಗೆ ಹೊರಟವಳ ಪ್ರಯಾಣವನ್ನು ಶಕ್ತಿ ಮೀರಿ ಮುರಿಯಬೇಕು. ಮುರಿದು ಅವಳುಸಿರನ್ನು ಕೊನೆಗಾಣಿಸಲೇ ಬೇಕು.

ಮುರಿದು ಮಾಡುವುದಾದರೂ ಏನು? ಕೊನೆಗಾಣಿಸುವುದಾದರೂ ಹೇಗೆ? ಶಾಂತಳ ಕಡೆಗೇ ತನ್ನ ತಾಯಿ ಕೂಡ ಸೇರಿಬಿಟ್ಟಿರುವಳು. ಈ ಬಾರಿ ಬಂದಂದಿನಿಂದ ಅವಳ ಹತ್ತಿರ ಸುಳಿಯಲು ಕೂಡ ಬಿಡುತ್ತಿಲ್ಲ. ಸರ್ಪ ಕಾವಲಿನಂತಿರುವಳು. ಸೊಸೆಯ ರಕ್ಷಣೆಗಾಗಿ ಮಗನ ಕೈಗೆ ಕೋಳ ತೊಡಿಸುವ ಪ್ರಸಂಗ ಬಂದರೂ ಹೆದರುವುದಿಲ್ಲವೆಂದು ಟೊಂಕ ಕಟ್ಟಿ ನಿಂತಿರುವಳು. ಅವಳು ಮಹಾ ಸಾಮರ್ಥ್ಯಶಾಲಿ. ಯಾರನ್ನೆದುರಿಸಿದರೂ ಅವಳನ್ನೆದುರಿಸುವ ಚೈತನ್ಯ ತನ್ನಲ್ಲಿಲ್ಲ.

ಹಾಗಾದರೆ ಈ ಸಮಸ್ಯೆ ಬಿಡುಗಡೆಯಾಗುವುದು ಹೇಗೆ? ಅದಕ್ಕಿರುವುದು ಎರಡೆ ದಾರಿ—ಅವರಿಚ್ಛೆಯಂತೆ ಶಾಂತಳನ್ನು ಪ್ರೀತಿಯಿಂದ ಬಾಳಿಸಬೇಕು, ಇಲ್ಲದಿದ್ದರೆ ತೌರಿನಲ್ಲಿ ತಲೆಯೆತ್ತಿ ಮೆರೆಯಲು ಬಿಡಬೇಕು; ಅವೆರಡೂ ತನ್ನಿಂದ ಸಾಧ್ಯವಿಲ್ಲ. ಮೊದಲು ಶತಪ್ರಯತ್ನ ಮಾಡಿ ಪ್ರಯಾಣವನ್ನು ತಡೆಗಟ್ಟುವೆನು, ಆಮೇಲೆ ಮುಂದಿನ ಯೋಚನೆ.

ರಂಗಮ್ಮನ ತಲೆಯೂ ಬಿಸಿಹತ್ತಿ ಮಲಗಿದ ಹಾಸಿಗೆ ಮುಳ್ಳಾಗಿ ಎದ್ದು ಕುಳಿತರು. ಗೋಪಿಯ ರಾಕ್ಷಸ ನಡವಳಿಕೆ ಮನಸ್ಸಿನ ನೆಮ್ಮದಿಯನ್ನು ನುಂಗಿ ಮೃತ್ಯು ಕುಣಿತ ಕುಣಿದು ಕಂಗಾಲು ಮಾಡಿತ್ತು. ಗಳಿಗೆ ಗಳಿಗೆಗೂ ಸಾವಿನ ಕನಸು ಕಂಡು ಕನವರಿಸುತ್ತಿದ್ದರು.

ಸಣ್ಣತನದಿಂದಲೂ ಗೋಪಿ ಒರಟು, ಒಕ್ಕಂಟಲಿ ಸ್ವಭಾವದವನು. ಆದರೆ ಬೇಕೆಂದು ಬಾಳನ್ನು ಹೀಗೆ ಬೆಂಕಿಯ ಮೈಮೇಲೆ ಎಳೆದಾಡುವನೆಂದು ಎಂದೂ ಎಣಿಸಿರಲಿಲ್ಲ. ಒರಟು ಮನುಷ್ಯರ ನಡವಳಿಕೆ ಬೆಂಕಿಯ ಉಂಡೆಯೆಂದು ತಮ್ಮ ಮಗನ ಬಾಳಿನ ಮಾದರಿಯಿಂದ ಅರಿತುಕೊಂಡರು. ಆಗ ಬಾಳು ಹೀಗಾಗಬಹುದೆಂದು ಗೊತ್ತಿದ್ದಿದ್ದರೆ ಲಗ್ನ ಮಾಡುವ ಗೋಜಿಗೆ ಹೋಗುತ್ತಿರಲಿಲ್ಲ. ಈಗ ಕೆಲಸ ಕೈಮಿಂಚಿ ಹೋಗಿದೆ. ಊರೆಲ್ಲ ಅವನ ಬಾಳಾಟ ಕಂಡು ಕೈತಟ್ಟಿ ನಗುತ್ತಿದ್ದಾರೆ. ಅವನಿಂದ ಮನೆತನಕ್ಕೆ ಪೂರ್ತಿ ಮಸಿ ಹತ್ತಿತು. ಅವನ ಬಾಳು ದಿನೇದಿನೇ ಅಧಃಪಾತಾಳಕ್ಕಿಳಿಯುತ್ತಿರುವುದನ್ನು ಕಂಡು ಸ್ವರ್ಗಸ್ಥರಾದ ತನ್ನ ಪತಿ ಕಣ್ಣೀರಿಡುತ್ತಿರಬಹುದು.

ಅವರು ತುಂಬಾ ಸಾತ್ವಿಕರು, ಧರ್ಮನಿಷ್ಠರು, ಶಾಂತಿಪ್ರಿಯರು. ಅವರ ದೃಷ್ಟಿಯಲ್ಲಿ ಹೆಣ್ಣುಮಕ್ಕಳು ದೇವತೆಗೆ ಸಮಾನ. ಮರೆತೂ ಅವರ ಕಣ್ಣಿಂದ

ತೊಟ್ಟು ನೀರು ಭೂಮಿಗೆ ಬೀಳಬಾರದು. ಒಂದು ವೇಳೆ ಎಂದಾದರೂ ಅವರ ಕೋಪಕ್ಕೆ ತುತ್ತಾಗಿ ನಾನು ಕಣ್ಣೀರು ಸುರಿಸಿದರೆ, ಅದಕ್ಕಿಮ್ಮಡಿಯಾಗಿ ತಮ್ಮ ದೇಹವನ್ನು ದಂಡಿಸಿಕೊಳ್ಳುತಿದ್ದರು. ಅಂಥವರ ಹೊಟ್ಟೆಯಲ್ಲಿ—ಆನೆಯ ಗರ್ಭದಿಂದ ಲದ್ದಿ ಬಿದ್ದಂತೆ, ಗೋಪಿ ಹುಟ್ಟಿಕೊಂಡಿರುವನು. ಅವನಿಂದ ಯಾರಿಗೂ ಸುಖವಿಲ್ಲ. ಕಷ್ಟವೊ ಸುಖವೊ, ಅವನೊಪ್ಪಲಿ ಒಪ್ಪದಿರಲಿ, ಅವರೊಡನೆ ತಾವಿದ್ದಿದ್ದರೆ ಶಾಂತಳ ಬಾಳು ಇಷ್ಟು ಬೀಳಾಗುತ್ತಿರಲಿಲ್ಲ. ಮಗನ ಒರಟುತನಕ್ಕೆ ಬೇಸತ್ತು, ಅವಾಚ್ಯ ಶಬ್ದಗಳಿಗೆ ಮನ ನೊಂದು, ಸಂಸಾರದ ಹೊರೆ ಹೊತ್ತು ಬುದ್ಧಿ ಕಲಿಯಲೆಂದು ಚಿಕ್ಕ ಮಗನ ಆಸರೆ ಹಿಡಿದಿದ್ದರು.

ತಾವೆಣಿಸಿದ್ದೆ ಒಂದು, ನಡೆದದ್ದೆ ಒಂದು. ವೈವಾಹಿಕ ಜೀವನದಿಂದ ನಡತೆ ತಿದ್ದಿಕೊಳ್ಳುವುದು ಬಿಟ್ಟು ತನ್ನ ಒರಟು ನಡವಳಿಕೆಗೆ ಮತ್ತಷ್ಟು ಜೀವ ತುಂಬುತಿದ್ದಾನೆ. ಅದಕ್ಕೆ ಕೊನೆಯೆಂದು? ಅವನ ದೃಷ್ಟಿಯಲ್ಲಿ ಶಾಂತಳ ಬಲಿಯೆ ಕೊನೆಯೆಂದಿರಬಹುದು. ತಾನು ಜೀವ ಸಹಿತವಿರುವನರೆಗೆ ಅದಕ್ಕೆ ಅವಕಾಶ ಕೊಡಕೂಡದು. ಮಗನೆಂಬ ಮಮತೆಯಿಂದ, ಮಾಡಿದ ಕೆಲಸಕ್ಕೆ ಬೆನ್ನು ತಟ್ಟುತ್ತ ಹೋಗುವ ದೌರ್ಬಲ್ಯ ತೋರಿಸಿದರೆ ವಂಶದ ಗೌರವ ಮಣ್ಣಾದಂತೆಯೆ. ಕಡೆಗೆ ತಾನಿದ್ದೂ ಸತ್ತ ಬಾಳಾಗುತ್ತದೆ; ನೋಡಿದ ಜನ ಮುಖಕ್ಕೆ ಕಲ್ಲೆಸೆಯುತ್ತಾರೆ; ತನ್ನವರು ನರಕಕ್ಕೆ ಬೀಳುತ್ತಾರೆ; ತಾನೂ ನರಕದ ಹಾದಿ ಹಿಡಿದು ಹೋಗಬೇಕಾಗುತ್ತದೆ.

ಅಬ್ಬಾ! ಆ ಯಮಯಾತನೆ ನಾನನುಭವಿಸಲಾರೆ, ನಿರಪರಾಧಿನಿಯಾದ ಶಾಂತಳನ್ನು ಬಲಿಯಾಗಗೊಡಲಾರೆ, ನನ್ನವರನ್ನು ನರಕಕ್ಕೆ ಬೀಳಗೊಡಲಾರೆ, ಜನರ ದೃಷ್ಟಿಯಲ್ಲಿ ಕೀಳಾಗಲಾರೆ. ಈ ಎಲ್ಲ ನೋವಿನಿಂದ ಪಾರಾಗಬೇಕಾದರೆ ಸ್ವಲ್ಪ ದಿನ ಅವರಿಬ್ಬರ ನಡುವೆ ವಿಶ್ರಾಂತಿಯಿರಬೇಕು. ಒಂದೆರಡು ವರ್ಷದ ವರೆಗೆ ಒಬ್ಬರ ಮುಖವನ್ನೊಬ್ಬರು ನೋಡದಂತಾಗಬೇಕು. ಇಬ್ಬರ ಮನಸ್ಸಿನಿಂದಲೂ ತಪ್ಪು ಭಾವನೆ ಕಳೆದು ಶುದ್ಧವಾದ ಮೇಲೆ ಮತ್ತೆ ಬಂದು ಜತೆಗೂಡಲಿ— ಅದೇ ಸರಿ.

ಆದರೆ ಇಷ್ಟು ವೈಷಮ್ಯ ಬೆಳೆಸಿಕೊಂಡಿರುವವನು ನಾಳೆ ಸೂರಪ್ಪನ ಸಂಗಡ ಶಾಂತಳನ್ನು ಕಳುಹಿಸಲೊಪ್ಪುವನೆ? ಬೀಗರು ದೇವರಂಥ ಮನುಷ್ಯರು. ಅಪಮಾನ ಮಾಡಿದರೆ? ಕಳುಹಿಸುವುದಿಲ್ಲವೆಂದು ಗೂಂಡಾಗಿರಿ

ಪ್ರದರ್ಶಿಸಿದರೆ? ಹಾಗೆ ಮಾಡಿ ನೋಡಲಿ ಅವನು! ಶಾಂತಳ ಪ್ರಯಾಣ ಕ್ಕಡ್ಡಿ ತಂದು ಬದುಕಲಿ! ಮೆತ್ತಗಿದ್ದಷ್ಟೂ ಹಾಕಿ ತುಳಿಯುವುದು ಹೆಚ್ಚು. ಎಲ್ಲರೂ ಸೇರಿ ಅವನ ಹಮ್ಮು ಇಳಿಸಲೆ ಬೇಕು.

ಸೂರಪ್ಪನೂ ಹೊರಳಿ ಹೊರಳಿ ಹಾಸಿಗೆ ಸವಿಸುತ್ತಿದ್ದರು. ಅದಕ್ಕೆ ತಲೆ ತಿಕ್ಕಿ ಬೆಂಕಿ ಏಳುತಿತ್ತು. ನೋವಿನ ಬೆಂಕಿ ತುಂಬಿದ್ದ ಶಾಂತಳ ಬಾಳು ಕಣ್ಣಿಗೆ ಕಟ್ಟಿ ನಿದ್ದೆಯನ್ನು ಹೊಡೆದಟ್ಟಿತ್ತು. ಲಗ್ನ ಮಾಡುವುದು ಬೇಡವೆಂದು ತಡೆದ ಹೆಂಡತಿಯ ಬಾಯಿಬಡಿದು, ಮಗಳಿಗೆಂದೂ ದ್ರೋಹ ಮಾಡುವುದಿಲ್ಲವೆಂದು ಎದೆ ತಟ್ಟಿ ಹೇಳಿ, ಗೋಪಿಯನ್ನು ಮೆಚ್ಚಿ ಮಗಳನ್ನವನ ಕೈಮೇಲಿರಿಸಿ ಧಾರೆ ಯೆರೆದಿದ್ದರು. ಅವನ ಜೀವನದ ಒಂದು ಉದಾಹರಣೆಯಿಂದ ಮಗಳ ಬಾಳನ್ನು ಸ್ವರ್ಣದ ಹರ್ಮ್ಯದಲ್ಲಿರಿಸಿ ಕಣ್ಣುತುಂಬ ನೋಡಿ ಹಿಗ್ಗಿದ್ದರು.

ತಮ್ಮ ಆ ಸುಂದರ ಕನಸು ಇಂದು ತಿರುಗು—ಮುರುಗಾಗಿದೆ. ಕನಸಿನಲ್ಲಿ ಸ್ವರ್ಣದ ಹರ್ಮ್ಯದಲ್ಲಿ ಮೆರೆದ ಬಾಳು ನನಸಿನಲ್ಲಿ ಮಸಣದ ಮುಳ್ಳಿನ ಹಾಸಿ ಗೆಯ ಮೇಲೆ ನೈ ತಿಕ್ಕಿತಿಕ್ಕಿ ಕಣ್ಣೀರಿಟ್ಟು ಹೊರಳಾಡುತಿದೆ. ಅಂದು ಶಾಂತಳ ಬಾಳು ಹೀಗಾಗುತ್ತದೆಂದು ಕಂಡಿದ್ದಿದ್ದರೆ ಆದದ್ದಾಗಲೆಂದು ಮದುವೆ ಮಾಡು ತ್ತಲೆ ಇರಲಿಲ್ಲ. ಭವಿಷ್ಯದಲ್ಲಾಶೆಯಿರಿಸಿ, ಬಾಳಿನಲ್ಲಿ ಸ್ವಲ್ಪವಾದರೂ ಸುಖ ಸಿಗದೆ ಇರಲಾರದೆಂದು ನಂಬಿ ಲಗ್ನ ಮಾಡಿದ್ದರು. ಅವರ ಊಹೆ ಸುಳ್ಳಾ ಯಿತು. ಸುಖಕ್ಕೆ ಬದಲಾಗಿ ಬೆಟ್ಟದಷ್ಟು ಕಷ್ಟ ಬಂದು ಹೆದರಿಸಿ ಹರೆಯದ ಹೆಣ್ಣಿನ ರಕ್ತ ಹೀರುತಿದೆ.

ಇಂದು ಶಾಂತ ಮಿತಿಯಿಲ್ಲದಷ್ಟು ಕಣ್ಣೀರು ಕ.ಡಿಯುತ್ತಿದ್ದಾಳೆ. ಅವಳ ಕಷ್ಟಕ್ಕೆ ಇತಿಮಿತಿಯೆ ಇಲ್ಲ. ಅಪರಾಧ ಮಾಡಿದ್ದರಾದರೂ ದುಃಖ ಅನುಭವಿ ಸುವುದು ಸರಿ. ಯಾವ ಅಪರಾಧವೂ ಇಲ್ಲದೆ ನಿಷ್ಕಲ್ಮಷ ಹೃದಯ ಹೊತ್ತು ಮೂಕ ಪಶುವಿನಂತೆ ಬಾಳಿನ ಬಂಡಿ ಎಳೆಯುತ್ತಿರುವ ಹೆಣ್ಣಿಗೆ ಈ ಸುಖವೆ? ಇದು ಮನುಷ್ಯತ್ವದ ಮಾದರಿಯೆ? ಯಾರೂ ಇದನ್ನು ತಡೆಗಟ್ಟುವವರಿಲ್ಲವೆ?

ಯಾರು ಯಾಕೆ ತಡೆಯಬೇಕು, ತಾನಿರುವಾಗ! ತಾವು ದಂಪತಿಗಳಿ ಬ್ಬರೂ ಶಾಂತಳನ್ನು ಜೀವದಂತೆ ಕಣ್ಣಲ್ಲಿ ಮುಚ್ಚಿಟ್ಟು ಸಾಕಿದ್ದಾರೆ. ತಾವು ಸಾಕಿದ್ದು ನರಬಲಿ ಕೊಡುವುದಕ್ಕಲ್ಲ—ಗಂಡ-ಹೆಂಡತಿ ಪ್ರೀತಿಯಿಂದಿದ್ದು, ಸಂತಾನದಿಂದ ಬೆಳಗಿ, ಈಶ್ವರನ ಸಂಕಲ್ಪ ಪೂರೈಸಲೆಂದು! ಯೋಗ್ಯತೆಯಿಲ್ಲ

ದಿದ್ದ ಮೇಲೆ ಆ ಬಾಳಾಟ ಅಲ್ಲಿಗೆ ಸಾಕು. ಹೊಸ ಬಾಳು ಬಾಳಲಿ ಶಾಂತ. ಕಷ್ಟವೊ ಸುಖವೊ, ಹೇಗೂ ಸ್ವಲ್ಪ ದಿನ ಸಂಸಾರದ ಸುಖವುಂಡಿದ್ದಾಳೆ. ಜೀವನದ ಪೂರ್ಣ ಪರಿಚಯನಾಗಿದೆ. ಇನ್ನು ಹೆಜ್ಜೆ ತಪ್ಪಿಯಾಳೆಂಬ ಭೀತಿಯೂ ಇಲ್ಲ. ಅಂದು ಸುಶೀಲ ಬಯಸಿದ ಬ್ರಹ್ಮಚರ್ಯ ಜೀವನವನ್ನು ಇಂದು ಬಾಳಿ ತೋರಿಸಲಿ.

ಎಲ್ಲ ಸರಿ, ಇಷ್ಟೆಲ್ಲ ಬೆಂಕಿಯೆಬ್ಬಿಸಿದ ಮನುಷ್ಯ ಸುಮ್ಮನೆ ಆರಗೊಡುವನೆ? ಸಂಶಯ ಪಿಶಾಚಿಯ ಆಹುತಿಯಾದ ಶಾಂತಳನ್ನು ಬಲಿ ತೆಗೆದುಕೊಳ್ಳಬೇಕೆಂದಿರುವಾಗ, ಅಷ್ಟು ಸುಲಭವಾಗಿ ಕರೆದುಕೊಂಡು ಹೋಗಲು ಬಿಡುವನೆ? ತಡೆದರೆ? ಬೀಗದಲ್ಲಿ ಬಂಧಿಸಿಟ್ಟು ಅಡ್ಡಿಪಡಿಸಿದರೆ? ನಾನು ಮೊದಲಿನ ಸೂರಪ್ಪನಲ್ಲ. ತಕ್ಕ ಬುದ್ಧಿಗಲಿಸಿ, ಹಮ್ಮೆಲ್ಲ ಮುರಿದು ಮೂಲೆಯಲ್ಲಿ ಕೂರಿಸಿ, ಅವನೆದುರಿಗೇ ಕರೆದುಕೊಂಡು ಹೋಗುವೆನು. ಈ ಬಾರಿ ನನ್ನನ್ನು ಕೆಣಕಿ ನೋಡಲಿ!

ಶಾಂತಳ ಕಣ್ಣೂ ಹತ್ತಲಿಲ್ಲ. ಮರುಳು ಮಾಡಿ ಹತ್ತಿರ ಬರುತ್ತಿದ್ದ ನಿದ್ದೆಯನ್ನು ಚಿಂತೆ ಬಾಯ್ದೆರೆದು ನುಂಗಿ ಅವಳ ಮಿದುಳಿನ ಶಕ್ತಿಯನ್ನಳೆಯುತಿತ್ತು. ಹಿಂದೆ ನಾಲ್ಕು ದಿನವಿರೆಂದು ತಾಯಿ ಎಷ್ಟು ಕೇಳಿಕೊಂಡರೂ ಒಪ್ಪದೆ ಗಂಡನನ್ನು ಬಿಟ್ಟಿರಲಾರದೆ ಅವನ ಬಳಿ ಹಾರಿ ಬಂದಿದ್ದಳು. ಅವನನ್ನು ಒಂದು ಗಳಿಗೆ ಎಡೆಬಿಡಲು ಮನಸ್ಸೊಪ್ಪುತ್ತಿರಲಿಲ್ಲ. ಅವನ ಸಾನ್ನಿಧ್ಯ ರಸನಿಮಿಷಕ್ಕಾಗಿ ಕೊಡುತ್ತಿದ್ದ ತೊಂದರೆಯನ್ನು ಸಹಿಸಿ ಬಾಳುತ್ತಿದ್ದಳು. ಇಂದು ಅದೇ ತಾನು ತನ್ನೆಲ್ಲ ಆಶೆ-ಆಕಾಂಕ್ಷೆ, ಬಯಕೆ-ಬೇಡಿಕೆಗಳನ್ನೂ ಮೆಟ್ಟಿ, ತಂದೆಯೊಡನೆ ತೌರಿಗೆ ಹೋಗಿ, ತನ್ನದೆ ಆದ ಒಂಟಿ ಬಾಳನ್ನು, ಹೊಸ ಬಾಳನ್ನು ಬಾಳಲು ನಿಶ್ಚಯಿಸಿದ್ದಾಳೆ.

ತನ್ನ ಬಾಳು ಯಾಕೆ ಹೀಗಾಯಿತು? ಹೊಂದಿಕೊಂಡು ಹೋದಂತೆಲ್ಲ ತನ್ನಿಂದ ದೂರವಾಗುತ್ತಿದೆ. ತಾನು ಪಡೆದು ಬಂದದ್ದೆ ಅಷ್ಟೆ? ಎಲ್ಲರಂತೆ ತುಂಬಿದ ಬಾಳು ನನಗಿಲ್ಲವೆ? ಬೆಳಗಾದರೆ ತಮ್ಮಿಬ್ಬರ ನಡುವೆ ಇದ್ದ ಬಂಧನ ಹರಿದು ಹೋಗುವುದು. ಆ ನೋವನ್ನು ಹೇಗೆ ಸಹಿಸಲಿ? ಎಷ್ಟೋ ಬಾರಿ ಅವರ ಯಾತನೆ ಸಹಿಸದೆ ನಾನೇ ಹೊರಟಿದ್ದೆನಲ್ಲಾ! ಅದು ತಾನಾಗಿ ಒದಗಿ ಬಂದ ಈ ದಿನವನ್ನೇಕೆ ಎದುರಿಸಲು ನನ್ನೆದೆ ಇಷ್ಟು ಮಿಡುಕುತ್ತಿದೆ!

ಅಂದು ನನ್ನ ಹೊರಡುವಿಕೆಯಲ್ಲಿ ಈ ಬಲವಾದ ನಿರ್ಧಾರ, ಈ ಸಿದ್ಧತೆ ಯಿರಲಿಲ್ಲ. ಅದಕ್ಕೆಂದೆ ಇರಬೇಕು—ಯಾತನೆಯಾಗಲಿಲ್ಲ. ಇಂದು, ನನ್ನ ಅವರ ಬಿಡುಗಡೆಗೆ ಎಲ್ಲ ಹೊಂದಿಸಿಕೊಂಡ ಇಂದು, ಬದುಕಿನ ಕಡೆ ಉಸಿರಿನ ವರೆಗೂ ನಮ್ಮಿಬ್ಬರ ನಡುವೆ ಅಡ್ಡಗಟ್ಟೆ ಹಾಕುವ ಇಂದು, ನನ್ನೆದೆ ಯಮ ಯಾತನೆ ಪಡುತ್ತಿದೆಯಲ್ಲಾ, ನಾನಿದನ್ನು ಸಹಿಸಿ ಹೇಗೆ ಅವರಿಂದ ದೂರವಾ ಗಲಿ! ಈ ಒಂಟಿ ಬಾಳು ನನಗೆ ಒಗ್ಗುತ್ತದೆಯೆ? ಈ ಬಾಳನ್ನು ನಾನು ಬೇಕೆಂದು ಬಯಸಿದ್ದೆನೆ? ಇಲ್ಲ, ಇದು ಅವರ ಬಯಕೆ, ಅವರು ಬಯಸಿದ ಬಾಳು. ನನ್ನಲ್ಲವರು ಇದೇ ಬಾಳನ್ನಪೇಕ್ಷಿಸುವುದು. ನಾನವರಿಂದ ಬೇರೆ ಯಾಗಿ, ಒಂಟಿಯಾಗಿ ಬಾಳುವ ನೀರಸ ಜೀವನವನ್ನು ಕಾಣಲು ಕಣ್ಣು ಹಾತೊರೆಯುತ್ತಿದೆ. ಅದಕ್ಕೆಂದೆ ಈ ಯಮಯಾತನೆಯಿಂದ ನನ್ನನ್ನು ಕೊಲ್ಲುತ್ತಿದ್ದಾರೆ.

ನಾನವರಿಗೆ ಹೆಂಡತಿಯಾಗಿ ಉಳಿಯಲಿಲ್ಲ. ಅವರ ದೃಷ್ಟಿಯಲ್ಲಿ ನಾನು ವೇಶ್ಯೆ, ವ್ಯಭಿಚಾರಿಣಿ! ಕುಲಸ್ತ್ರೀಯನ್ನು ವೇಶ್ಯೆಯಾಗಿ ಕಂಡ ಮನೆಯಲ್ಲಿ ಒಂದು ಗಳಿಗೆ ನಿಲ್ಲುವುದೂ ನನ್ನಾತ್ಮಕ್ಕೆ ಮಹಾಪರಾಧ ಮಾಡಿದಂತೆ. ನನ್ನ ತಂದೆ ಹೇಳಿದಂತೆ ಕಲ್ಲೆದೆ ಮಾಡಿ ಇವರನ್ನು ತೊರೆದು, ನನ್ನ ಮಗುವಿನ ಮುಂದಿನ ಬಾಳನ್ನು ರೂಪಿಸಿಕೊಳ್ಳುವೆನು. ಸಾಯುವ ವರೆಗೆ ಕಣ್ಣೆತ್ತಿ ಕೂಡ ನೋಡುವುದಿಲ್ಲ. ಈಶ್ವರ ನನಗೂ ಚೈತನ್ಯ ತುಂಬಿ ಕೊಡಲಿ. ನನ್ನ–ಅವರ ಬಿಡುಗಡೆಯ ಸಮಯದಲ್ಲಿ ಹೃದಯವನ್ನು ಕಲ್ಲಿಗಿಂತ ಕಠೋರ ಮಾಡಲಿ.

ಕಂಬನಿಯ ಹೊಂಡದಲ್ಲಿ ನಮ್ಮನ್ನು ಮೀಯಿಸಿದ್ದಾರೆ. ನನ್ನ–ಮಗು ವಿನ ಅಗಲಿಕೆಯಿಂದ ಆ ಸುಖವನ್ನವರೂ ಉಂಡು ತಣಿಯಲಿ. ಬಲಿ ತೆಗೆದು ಕೊಳ್ಳುವ ಉದ್ದೇಶ ಹೊತ್ತು ನಮ್ಮೊಡನೆ ವ್ಯವಹರಿಸುತ್ತಿದ್ದವರಲ್ಲಿ ಈ ಕರಗುವ ಹೃದಯವಿದೆಯೆ? ಇಲ್ಲದಿದ್ದರೆ ಹೋಗಲಿ, ಅವರ ಬಂಧನ ಹರಿದು ಹೊರಟಿ ರುವ ನನಗೇಕಿನ್ನು ಆ ಚಿಂತೆ! ಅವರಿಂದ ನನ್ನಾತ್ಮ, ಹೃದಯ, ಶರೀರ ವೆಲ್ಲವನ್ನೂ ಬೇರ್ಪಡಿಸಿ, ನನ್ನ ಕಾಲ ಮೇಲೆ ನಿಂತು, ತಕ್ಕ ಬುದ್ಧಿ ಕಲಿಸು ವೆನು.

ಅಬ್ಬಾ! ಅವರಿತ್ತ ಯಾತನೆಯೆ! ಚೂರು ಚೂರಾಗಿ ಸಾಯಿಸಿದರಲ್ಲಾ

ನಮ್ಮನ್ನು! ಅವರಿತ್ತ ಯಾತನೆಯೊಂದೆ ಸಾಕು—ಎಲ್ಲ ಮಮಕಾರವನ್ನೂ ತಳ್ಳಿ ಮನಸ್ಸನ್ನು ಕಲ್ಲು ಮಾಡಲು! ನಾಳೆಯಿಂದವರಿಗೆ ನನ್ನ ಮಗುವಿನ ಮೈ ಮುಟ್ಟುವ ಅಧಿಕಾರವಿಲ್ಲ. ನಾಳೆ ಹೊರಟು ನಿಂತಾಗ ನಮ್ಮನ್ನು ತಡೆದು ನೋಡಲಿ—ಆಗ!

ಆ ರಾತ್ರೆ ಮಲಗಿದ್ದವರೆಲ್ಲರ ತಲೆಯನ್ನೂ ಚಿಂತೆ ಹೀಗೆ ಒಂದೊಂದು ವೇಷದಿಂದ ತನ್ನೆಡೆಗೆ ಆಕರ್ಷಿಸಿ ಬಳಲಿಸಿತು. ಹೊತ್ತಾಗಿ ಕಣ್ಣು ಹತ್ತಿದ್ದುದ ರಿಂದ ಎಲ್ಲರೂ ತಡವಾಗಿಯೆ ಎದ್ದರು. ಸೂರಪ್ಪ ಎದ್ದು ಸ್ನಾನಾಹ್ನಿಕ ಮುಗಿ ಸುವುದರಲ್ಲೆ ಭಟ್ಟರು ಬಂದುಬಿಟ್ಟರು. ಅವರ ಹಿಂದೆಯೆ ಸೀತಾರಾಮು—ಸೋಡಾ ಶೀಶೆಗಳಿಂದ ತುಂಬಿದ ಕೈಚೀಲವೊಂದನ್ನು ಹಿಡಿದು ಯುದ್ಧಕ್ಕೆ ಹೊರಟ ಯೋಧನಂತೆ ಹೆಜ್ಜೆ ಹಾಕುತ್ತ ಬಂದು ಗೋಪಿಯ ಕೊಠಡಿಗೆ ತೂರಿದನು.

ಕಾಫಿ ತಿಂಡಿಯಾದದ್ದೆ ತಡ, ಭಟ್ಟರನ್ನು ಕರೆದುಕೊಂಡು ಸೂರಪ್ಪ ಗೋಪಿಯ ಕೊಠಡಿಗೆ ಬಂದರು. ಎದುರಿಗೆ ಕಾಲ ಮೇಲೆ ಕಾಲು ಹಾಕಿ ಮೀಸೆ ಹುರಿ ಮಾಡುತ್ತ ಕುಳಿತಿದ್ದ ಸೀತಾರಾಮುವನ್ನು ಕಂಡು ಬೆಂಕಿಯಾ ದರು. ಆ ಕಾವು ಗೋಪಿಯ ಬಳಿ ಬಳಸಿ ಹೋಯಿತು. ಗೋಪಿ ಅದನ್ನು ಅಲಕ್ಷಿಸಿ, ಅದಕ್ಕುತ್ತರವಾಗಿ ತುಟಿಯಲ್ಲಿ ಧೂರ್ತ ನಗೆಯೊಂದನ್ನು ತೇಲಿಬಿಟ್ಟ. ಹಿರಿಯರಾದ ತಮ್ಮನ್ನು ಕುಳಿತುಕೊಳ್ಳಲು ಸಹ ಹೇಳದೆ, ಕಾಲ ಮೇಲೆ ಕಾಲು ಹಾಕಿ ತುಟಿಯಲ್ಲಿ ಧೂರ್ತ ನಗೆಯನ್ನು ತೇಲಿಬಿಡುತ್ತಿರುವ ಅಳಿಯನ ಉದ್ಧಟ ತನಕ್ಕೆ ಹೇಸಿ, ತಿರಸ್ಕಾರ ತಳೆದು,

"ಇಂದು ಸಂಜೆ ಶಾಂತಳನ್ನು ಊರಿಗೆ ಕರೆದುಕೊಂಡು ಹೋಗುವೆನು. ನಿಮಗೆ ತಿಳಿಸಬೇಕಾದ ಅವಶ್ಯಕತೆ ಕಂಡು ಬರಲಿಲ್ಲ. ಹಿರಿಯರೆಂದೆನಿಸಿ ಉದ್ಧಟತನದಿಂದ ನಡೆದುಕೊಳ್ಳುವುದು ಸರಿಯಲ್ಲವೆಂದು ತಿಳಿದು, ನಿಮ್ಮಲ್ಲಿ ಮರ್ಯಾದೆಯಿರಿಸಿ ತಿಳಿಸಿರುವೆನು. ಮದುವೆಗೆ ಮುಂಚೆ ನೀವು ಕಟುಕರೆಂದು ಭಟ್ಟರಲ್ಲಿ ಹೇಳಿದ್ದೆ. ಆ ಮಾತಿಂದು ಸತ್ಯವಾಗಿ ಪರಿಣಮಿಸಿ ನನ್ನ ಹೊಟ್ಟೆ ಸುಡುತ್ತಿದೆ. ನಿಮಗೆ ಮಗಳನ್ನಿತ್ತು ಎರಡು ಕೈಲೂ ಸುಖ ಉಂಡೆ. ನಿಮ್ಮ ಸಹವಾಸ ಸಾಕಿನ್ನು. ನಿಮ್ಮ ಮನೆಗಿದೇ ನನ್ನ ಕಡೆಯ ಭೇಟಿ. ಇಂದಿನಿಂದ ಶಾಂತಳಿಗೂ ನಿಮಗೂ ಇದ್ದ ಋಣ ಹರಿಯಿತೆಂದು ತಿಳಿಯಿರಿ. ನನ್ನ ಜೀವ

ವಿರುವ ವರೆಗೆ ಅವಳನ್ನಿತ್ತ ಕಡೆ ಹಾಯುಗೊಡುವುದಿಲ್ಲ—" ಎಂದು ನಿಂತೇ ಹೇಳಿ ಅವನನ್ನು ನೋಡುವ ಸಹನೆಯಿಲ್ಲದೆ ಹೆಜ್ಜೆ ಹಿಂದಿರುಗಿಸಿದರು.

ಮೈಯಲ್ಲಿ ಸಿಟ್ಟಿನ ಬೆಂಕಿ ತುಂಬುತ್ತ ಕೂತಿದ್ದ ಗೋಪಿ ಥಟ್ಟನೆದ್ದು ನಿಂತು ಗುಡುಗಿದ,

"ಎಲ್ಲಿಗೆ ಹೊರಟಿರಿ ? ಮಾತು ಮುಗಿಸಿ ಹೊರಡಿ."

ಹೊರಟಿದ್ದ ಸೂರಪ್ಪ ದುರುದುರು ನೋಡುತ್ತ ನಿಂತರು. ಗೋಪಿ ಮಾತು ಮುಂದುವರಿಸಿದ,

"ನನ್ನ ಬಗ್ಗೆ ಅಷ್ಟುದ್ದ ಪಟ್ಟಿ ಒದರಿ ಬಿಟ್ಟಿರಲ್ಲಾ—ನಿಮ್ಮ ಮಗಳ ನಡವಳಿಕೆಯನ್ನೇನಾದರೂ ಪರಿಶೀಲಿಸಿರುವಿರೊ ?"

"ತಪ್ಪು ಹುಡುಕಲು ನಮ್ಮದು ಹಾದರದ ಮನೆತನವಲ್ಲ."

ಮಾವನನ್ನು ಕೆಂಗಣ್ಣಿನಿಂದ ಕೆಕ್ಕರಿಸಿ ನೋಡುತ್ತ ಗುಡುಗಿದ,

"ಅದರ ಅರ್ಥ ?"

"ತೀಟೆಯಿದ್ದರೆ ಬಿಡಿಸಿ ನೋಡಿ. ಹೋಗಿ ಭಟ್ಟರೆ, ಗಾಡಿ ತೆಗೆಸು ಕೊಂಡು ಬನ್ನಿ. ಈ ನರಕದ ಮನೆಯಲ್ಲಿ ಒಂದು ಗಳಿಗೆ ಇರುವುದು ಬೇಡ. ಇಷ್ಟು ದಿನ ಶಾಂತಳನ್ನು ಕೊಳೆ ಹಾಕಿದ್ದೆ ಮಹಾ ಪಾಪವಾಯಿತು. ಹೋಗಿ ಬೇಗ ತನ್ನಿ."

"ಆ ಹಕ್ಕು ನಿಮಗಿತ್ತವರು ಯಾರು ? ಅವಳು ನನ್ನ ಹೆಂಡತಿಯೆನ್ನುವುದನ್ನು ಮರೆತು ಬಿಟ್ಟರೇನು ?"

ಸಿಟ್ಟು ಸೂರಪ್ಪನ ಮೈಯನ್ನೂ ತುಂಬಿ, ಗೋಪಿಗಿಂತ ಎರಡರಷ್ಟು ಪ್ರಮಾಣದಲ್ಲಿ ಅಬ್ಬರದ ಗುಡುಗು ಗುಡುಗಿಸಿತು,

"ಆ ಶಬ್ದ ಉಪಯೋಗಿಸಲೂ ನಿಮಗೆ ಯೋಗ್ಯತೆಯಿಲ್ಲ. ಆಡಿ ಮರ್ಯಾದೆ ಕಳೆದುಕೊಳ್ಳಬೇಡಿ. ಅವಳು ನಿಮ್ಮ ಹೆಂಡತಿಯಲ್ಲವೆನ್ನುವುದನ್ನು ಮಾತಿನಿಂದ ಕೃತಿಯಿಂದ ಪ್ರಮಾಣ ಮಾಡಿ ತೋರಿಸಿದ್ದೀರಿ. ಇನ್ನೊಮ್ಮೆ ಆ ಮಾತಾಡಿದರೆ ನಾಲಿಗೆ ಸೀಳಿ ಬಿಟ್ಟೇನು !"

"ಬಾಳೆಯೆಲೆಯಲ್ಲ ಸೀಳಲು—ನನ್ನ ಮೈಯಲ್ಲೂ ರಕ್ತವಿದೆ. ಷಂಢನಲ್ಲ ನಾನು, ಮೈ ಮುಟ್ಟಿದವರನ್ನು ಅಪ್ಪಳಿಸಿ ಹಾಕುವೆನು."

"ನಿಮ್ಮ ಪುರುಷತ್ವದ ಪರಿಚಯವೆಂದೂ ನನಗಾಗಿದೆ; ಅದನ್ನು ಕೊಚ್ಚಿಕೊಳ್ಳಬೇಡಿ. ಅದಕ್ಕೆ ಸಾಕ್ಷಿ ನಿಮ್ಮ ಬಾಳಾಟವೆ ಇದೆಯಲ್ಲ, ಬೇರೇನು ಬೇಕು? ಮೊಸೆ ಹೊತ್ತು ನಾಚಿಕೆಯಾಗುವುದಿಲ್ಲ ನಿಮಗೆ? ಅವಳು ಅಪರಾಧ ಮಾಡಿದ್ದೆ ಆಗಿದ್ದರೆ, ಕಣ್ಣಿಂದ ಕಾಣುವ ಸಾಹಸ ಮಾಡಿ ಸುಳ್ಳೊ-ನಿಜವೊ ಎಂದು ಪತ್ತೆ ಹಚ್ಚಿ, ನಿಜವಿದ್ದರೆ ಇಬ್ಬರನ್ನೂ ಶೂಲಕ್ಕೇರಿಸಬೇಕಿತ್ತು. ಹೆಣ್ಣಿಗರಂತೆ ಕಂಡಕಂಡವರ ಮಾತಿಗೆಲ್ಲ ಕಿವಿಗೊಟ್ಟು, ಸೃಷ್ಟಿಧರ್ಮದಂತೆ ಮನೆತನದವರನ್ನು ಹೊತ್ತು ಹುಟ್ಟಿದ ಮಗುವಿನ ಮೇಲೆ ಕೆಟ್ಟ ನೋಟವಿಟ್ಟು, ಸರಸವಾಗಿ ಮಾತನಾಡಿದ್ದೆ ಅಪರಾಧವಾಗಿ ಇಲ್ಲದ ಕಥೆ ಕಟ್ಟಿ, ಸದ್ಗುಣಿ ಹೆಣ್ಣುಮಗಳೊಬ್ಬಳ ಬಲಿ ತೆಗೆದುಕೊಳ್ಳುತ್ತಿರುವಿರಲ್ಲಾ--ಇದು ಪುರುಷತ್ವದ ಲಕ್ಷಣವೆ? ಆ ಮಾತಾಡಿ ಆ ಹೆಸರಿಗೆ ಮಸಿ ಬಳೆಯಬೇಡಿ. ನಿಮ್ಮಲ್ಲಿರುವುದು ನಿಜವಾದ ಪುರುಷತ್ವವಲ್ಲ, ಅದರ ಮುಸುಕೆಳೆದ ಹೇಡಿತನ. ಅದರಿಂದಲೆ ನಿಮ್ಮ ಬಾಳಾಟ ಹೀಗೆಲ್ಲ ಒಡೆದು ಚೂರಾಗುತ್ತಿರುವುದು. ಹೋಗಿ ಭಟ್ಟರೆ, ಇನ್ನಿಲ್ಲಿದ್ದರೆ ನನ್ನ ಮನಸ್ಸಿನ್ನೂ ಕೆಟ್ಟು ಏನಾದರೂ ಅನಾಹುತವಾದೀತು! ಆದಷ್ಟು ಬೇಗ ಈ ಅಪವಿತ್ರ ಸ್ಥಳವನ್ನು ಬಿಡುವುದೊಳ್ಳೆಯದು. ಬೇಗ ಹೋಗಿ ಗಾಡಿ ತನ್ನಿ" ಎಂದು ಮಾತಿಗಾಸ್ಪದ ಕೊಡದೆ ಸರ್‍ರನೆ ಬಾಗಿಲ ಕಡೆ ಹೊರಳಿದರು.

ಭಟ್ಟರೂ ಅವರ ಬೆನ್ನು ಹಿಡಿದರು. ಅವರು ತಮ್ಮ ಕಡೆಯವರಾಗಿದ್ದು ಇಂಥ ಸಮಯದಲ್ಲೂ ತಮ್ಮ ಪಕ್ಷವನ್ನು ಎತ್ತಿ ಹಿಡಿಯದೆ, ಸಹಾನುಭೂತಿಯ ಒಂದು ಮಾತೂ ಆಡದೆ ಮೂಕರಾಗಿ ಸೂರಪ್ಪನ ಬೆನ್ನು ಹಿಡಿದು ಹೊರಟಿದ್ದು ಗೋಪಿಗೆ ಬೆಂಕಿಗೆ ತುಪ್ಪ ಸುರಿದಂತಾಯಿತು. ರೋಷ ತುಂಬಿದ ಹುಲಿಯಂತೆ ಅವರ ಬಳಿ ಹಾರಿ ಅಡ್ಡ ಹಾಕಿ ನಿಂತು ಅಬ್ಬರಿಸಿದ,

"ಏಯ್ ಸುಟ್ಟು ಮುಖದವನೆ, ಒಂದು ಹೆಜ್ಜೆ ಮುಂದಿಟ್ಟೆಯೆಂದರೆ ನಿನ್ನ ಕಾಲು ಕಳಚಿ ಬಿದ್ದೀತು—ಹುಷ್ನಾರು!"

ಹೋಗುತ್ತಿದ್ದ ಭಟ್ಟರು ನಿಂತು ಬಾಯ್ತೆರೆಯುವುದರಲ್ಲೆ ಸೀತಾರಾಮು ಹಾರಿ ಬಂದು ತನ್ನ ಚುಚ್ಚು ಮಾತಿನ ಬಾಣದಿಂದ ಚುಚ್ಚಿ ನೋಯಿಸಿದ,

"ಈ ಕಳ್ಳ ಕೊರಮನನ್ನು ಹಾಗೇ ಬಿಡಬೇಡ ಗೋಪಿ ಇವತ್ತು—ಇವನಿಂದಲೆ ನಿನ್ನ ಸಂಸಾರವೆಲ್ಲ ನುಚ್ಚುನುರಿಯಾದದು."

ಸೀತಾರಾಮುವಿನ ಮಾತಿನಿಂದ ಭಟ್ಟರಿಗೆ ವೈಯುರಿವೆದ್ದಿತು. ಬಿಚ್ಚಿದ ಗಂಟನ್ನು ಸುತ್ತಿ, ಜಾರುತ್ತಿದ್ದ ಅಂಗವಸ್ತ್ರವನ್ನು ಸರಿಯಾಗಿ ಹೊದ್ದು, ಧ್ವನಿಯಲ್ಲಿ ಅಣಕ ತುಂಬಿ ಹೇಳಿದರು,

"ಯಾರಯ್ಯ ಕಳ್ಳ ಕೊರಮ? ತಲೆಗೆ ಮೆಚ್ಚು ಮದ್ದು ಹಾಕಿ, ಗೋಪಿಯನ್ನು ಜೀವ ಸಹಿತ ಸುಲಿದು ತಿನ್ನುತ್ತಿರುವ ನೀನೊ, ನಾನೊ? ಕಳ್ಳ ಕೊರಮರಿಗೆ ಬೇಕಾದ ಮೋಸ-ಕಪಟತನ–ಬೂಟಾಟಿಕೆ, ಗೂಂಡಾಗಿರಿ, ನೀಚತನ, ಕಟುಕತನವಿರುವುದೆಲ್ಲ ನಿನ್ನಲ್ಲೊ, ನನ್ನಲ್ಲೋ? ನಮ್ಮ ಮನೆಯ ಕಪಿಲೆ ಹಸುವನ್ನು ಕದ್ದು ಅರಗಿಸಿಕೊಂಡೆ. ನಾಣಿಯಿದ್ದರೆ ಗೋಪಿಯನ್ನು ಸುಲಿದು ತಿನ್ನಲು ತೊಂದರೆಯಾಗುವುದೆಂದು ಭಾವಿಸಿ, ತಲೆಯೊಡೆಯುವ ಹಂಚಿಕೆ ಹೂಡಿ ಗುರಿ ತಪ್ಪಿ ಯಾರದೊ ತಲೆಯೊಡೆದು ಪೇಚಾಡಿದೆ. ಅಣ್ಣ–ತಮ್ಮಂದಿರನ್ನು ತೊರೆಸಿ ಬೇರೆ ಹಾಕಿದರೆ ಕೆರೆದು ತಿನ್ನಲನುಕೂಲವಾಗುವುದೆಂದು ಬಗೆದು, ನಾಣಿಯ ಮೇಲೆ ಇಲ್ಲದಾರೋಪಣೆ ಹೂಡಿ, ಗೋಪಿಯ ಮನಸ್ಸನ್ನು ಕೆಡಿಸಿ ಹಾಳು ಮಾಡಿದೆ. ಕಾಳಾಚಾರಿಯ ಕೈಲಿ ಗುಪ್ತವಾಗಿ ಹಣ ಕೊಟ್ಟು ಕಮಿಷನ್ನಿನ ಮೇಲೆ ಅವನಿಂದ ಸಟ್ಟಾ ಆಡಿಸಿ, ಗೋಪಿ ಹಾಕುತಿದ್ದ ಹಣವನ್ನೆಲ್ಲ ನೀರಿನಂತೆ ಹೀರಿದೆ. ಸಾಲದ ಹಣವನ್ನು ಕಟ್ಟುವ ಚೈತನ್ಯವಿದ್ದರೂ ಆ ಹೊಣೆಯನ್ನೂ ಅವನ ಮೇಲೆಯೆ ಹೇರಿ ಓಡಿಹೋಗುವಉದ್ದೇಶವಿಟ್ಟು, ಸಾಲಕ್ಕೆ ಕಟ್ಟದೆ ನಿನ್ನ ಹಣವನ್ನೆಲ್ಲಾ ಬ್ಯಾಂಕಿನಲ್ಲಿ ಶೇಖರಿಸುತ್ತಾ ಬಂದೆ. ಈಗ ಹೇಳು—ಕಳ್ಳ ಕೊರಮ ನೀನೊ, ನಾನೊ? ಸಂಸಾರ ಸ್ತೋತ್ರ ನೂರಾಗುತ್ತಿರುವುದು ನಿನ್ನಿಂದಲೊ, ನನ್ನಿಂದಲೊ? ಮಾತಾಡೈಯ್ಯ, ಅವನೇನೊ ಮುಠ್ಠಾಳನೆಂದರೆ ಎಲ್ಲರನ್ನೂ ಮುಠ್ಠಾಳರನ್ನಾಗಿ ಮಾಡುವಿಯೇನು!" ಎಂದು ಬಿಚ್ಚಿದ ಗಂಟನ್ನೂ ಜಾರಿದ ವಸ್ತ್ರವನ್ನೂ ಮತ್ತೆ ಸರಿಪಡಿಸಿಕೊಂಡರು.

ಎಡೆಬಿಡದೆ ಸುರಿದ ಭಟ್ಟರ ಮಾತಿನ ಕಲ್ಲುಮಳೆಯಿಂದ ಸೀತಾರಾಮು ನಡುಗಿ, ಗೋಪಿಯ ಕಡೆ ಅವನ ಭಾವನೆಯನ್ನರಿತುಕೊಳ್ಳಲು ಕಡೆಗಣ್ಣೋಟ ಬೀರಿದ. ಮೊದಲಿನಿಂದ ಎಲ್ಲರ ಬಗ್ಗೆ ದ್ವೇಷ ತಾಳಿದ್ದ ಗೋಪಿಯ ಮನಸ್ಸಿನ ಮೇಲೆ ಭಟ್ಟರ ಮಾತು ಅವರೆಣಿಕೆಯಂತೆ ಸಾಕಷ್ಟು ಪರಿಣಾಮವನ್ನುಂಟು ಮಾಡಿರಲಿಲ್ಲ. ಹಾಗೆಂದು ಸೀತಾರಾಮುವಿನ ಬೆನ್ನು ಚಪ್ಪರಿಸಲೂ ಹೋಗಲಿಲ್ಲ. ಇಬ್ಬರಲ್ಲೂ ಸಂದೇಹಾಸ್ಪದನಾಗಿ ದುರುಗುಟ್ಟಿ ನೋಡತೊಡಗಿದ.

ಅವನ ಭಾವನೆಯನ್ನರ್ಥ ಮಾಡಿಕೊಂಡು ಉಡುಗುತ್ತಿದ್ದ ಧೈರ್ಯವನ್ನೆಳೆ ತಂದು ಹೇಳಿದ ಸೀತಾರಾಮು,

"ಎಲ್ಲಾ ಸುಳ್ಳು ಗೋಪಿ, ಅವನ ಮಾತನ್ನು ನೆಚ್ಚಬೇಡ. ಅವನು ಮಾಡುತ್ತಿರುವುದನ್ನೆಲ್ಲ ತಿರುಗಿಸಿ ನನ್ನ ಮೇಲೆ ಹೇಳಿದ್ದಾರೆ. ನಾನೂ ನೀನೂ ಇಷ್ಟು ವಿಶ್ವಾಸವಾಗಿರುವುದನ್ನು ಕಂಡು ಅವರ ಕಣ್ಣು ಕುಕ್ಕುತಿದೆ. ಅದಕ್ಕೆ ಈ ಲಾಟಿನೇಂ; "

"ಕಾಳಾಚಾರಿಯ ಕೈ ಬೆಚ್ಚಗೆ ಮಾಡಿದ್ದು ಸುಳ್ಳೋ, ನಿಜವೋ, ಯಾರು ಮಾಡಿದ್ದು ಏನು ಎನ್ನುವುದೆಲ್ಲ ಪತ್ತೆ ಹತ್ತಿ ಹೋಗುವುದು. ನಿನ್ನ ಪ್ರತಿ ಯೊಂದು ಕೆಲಸದಲ್ಲೂ ಅವನ ಬೆಂಬಲವಿದೆಯೆಂದು ಅವನೆ ಹೇಳಿದ್ದಾನೆ. ನಮಗೆ ಯಾರ ಮೇಲೆ ದ್ವೇಷ ಕಾರಿ ಏನೂ ಆಗಬೇಕಿಲ್ಲ. ಅವನನ್ನೆ ಕರೆಸಿ ಕೇಳಿಸಲೇನು ?"

"ಏನೂ ಬೇಕಾಗಿಲ್ಲ ಅವನೊಬ್ಬ ಲಂಚಕೋರ, ನೀನೊಬ್ಬ ಸುಳ್ಳಿನ ಕಂತೆ ಸೃಷ್ಟಿಮಾಡುವ ಚಾಣಕ್ಯ. ನಿಮ್ಮಿಬ್ಬರನ್ನೂ ಸಾಕ್ಷಿಗೆ ತೆಗೆದುಕೊಂಡರೆ ನಿರಪರಾಧಿಗಳೂ ಅಪರಾಧಿಗಳಾಗಬೇಕಾಗುತ್ತೆ."

"ಅಬ್ಬಾ ನಿನ್ನ ಸೊಕ್ಕೆ ! ಸತ್ಯದ ಸೋಗನ್ನು ಎಷ್ಟು ಚೆನ್ನಾಗಿ ಹಾಕು ತ್ತಿರುವೆ ! ನಿನ್ನ ಬಣ್ಣದ ಬಾಳು ಬಯಲಾಗಲು ಇನ್ನೇನೂ ಹೆಚ್ಚು ದಿನವಿಲ್ಲ. ಸದ್ಯದಲ್ಲೆ ಚಿನ್ನದ ಬಳೆ ತೊಡಿಸಲು ಬರುವರು. ಆಮೇಲೆ ನಾಯಿಯಂತೆ ಕತ್ತಲೆ ಕೋಣೆಯಲ್ಲಿ ನೆಲಕಚ್ಚಿ ಕೂತಿದ್ದರೆ ಸರಿ. ಅಲ್ಲಿ ವರೆಗೆ ಕುಣಿದದ್ದೆ ಬಂತು. ಕುಣಿ....ಕುಣಿ ... !"

ಆ ಮಾತು ಗೋಪಿಯನ್ನು ಕೆರಳಿಸಿತು. ಕಣ್ಣಲ್ಲಿ ಕೆಂಪ ತುಂಬಿ ಔಡು ಕಚ್ಚಿ ಭಟ್ಟರ ಮೇಲೆ ಹಾರಬೇಕೆನ್ನುವಷ್ಟರಲ್ಲಿ, ಸೀತಾರಾಮು ಅವನ ಮೇಲೆ ಹಾರಿ ಬೀಳಲು ಬರುತ್ತಿರುವುದನ್ನು ಕಂಡು ಮುಂದಾಗುವುದನ್ನು ಕಾಣಲು ಮೈ ಯೆಲ್ಲ ಕಣ್ಣಾಗಿ ನಿಂತ.

ಸೀತಾರಾಮು ಸಿಟ್ಟಿನಿಂದ ಬೆಂಕಿಯ ಉಂಡೆಯಾಗಿ ಕಟ ಕಟ ಹಲ್ಲು ಕಡೆಯುತ್ತ,

"ಸೂಳೆಮಗನೆ, ನೀನು ತಿಂದ ಪಿಂಡದನ್ನ, ಕಂಡವರ ಗೋಳನ್ನೆಲ್ಲ ಕಕ್ಕಿ ಸುವೆನು ನೋಡೀಗ "ಎಂದು ಅವರ ಮೈಮೇಲೆ ಹಾರಿ ಗೋಡೆ ವರೆಗೆ ಅವ

ರನ್ನು ತಳ್ಳಿಕೊಂಡು ಹೋಗಿ ಒತ್ತಿ ಹಿಡಿದು ತಲೆಯನ್ನು ಗೋಡೆಗೆ ಜಜ್ಜಿಜಜ್ಜಿ ಯಿಟ್ಟನು.

ಭಟ್ಟರ ಸಿಟ್ಟು ನೆತ್ತಿಗೇರಿತು. ಔಡುಕಚ್ಚಿ,

"ನಾಯಿಭಡವಾ, ನಿನ್ನ ಸೊಕ್ಕನ್ನು ನಾನೂ ಮುರಿಯದಿದ್ದರೆ ನಮ್ಮಪ್ಪನ ಮಗನೆ ಅಲ್ಲ" ಎಂದು ಮೈಯಲ್ಲಿ ರುದ್ರಶಕ್ತಿ ಮೂಡಿಸಿ, ಅವನ ಹಿಡಿತದಿಂದ ಮೈ ಕೊಸವಿಕೊಂಡು, ತಡೆಯುತ್ತಿದ್ದವನ ಕೈಯನ್ನು ತಳ್ಳಿ, ಅವನ ಕತ್ತು-ಕಾಲಿಗೆ ಬಲವಂತವಾಗಿ ತಮ್ಮ ಕೈ ಬಳಸಿ ಹಾಕಿ ಎತ್ತಿ ದೂರ ಬಿಸಾಡಿದರು.

ಬಿದ್ದ ಹೊಡೆತಕ್ಕೆ ಸೀತಾರಾಮುವಿನ ಮೈ-ಕೈಯೆಲ್ಲ ಮಾತಾಡಿತು. ಆದರೂ ಸಗ್ಗಲಿಲ್ಲ ನೋವನ್ನು ಸವರಿ ಹಾಕಿ, ಸವರಿಸಿಕೊಂಡೆದ್ದು ಕಣ್ಣಲ್ಲಿ ಕಿಡಿ ಹಾರಿಸುತ್ತಾ ಕಟಕಟ ಹಲ್ಲು ಕಡಿಯುತ್ತಾ,

"ಚಂಡಾಲ, ನಿನ್ನ ಮೈ-ಕೈ ಮೂಳೆ ಮುರಿಯದಿದ್ದರೆ ನಾನೂ ನಮ್ಮಪ್ಪನ ಮಗನೆ ಅಲ್ಲ, ನೋಡುತ್ತಿರು!" ಎಂದು ಬಾಣದಂತೆ ತಾನು ತಂದಿದ್ದ ಕೈಚೀಲದ ಬಳಿ ಸರ್ರನೆ ಹಾರಿ ಭಟ್ಟರ ಮೈಮೇಲೆ ಶೀಶೆಗಳ ಮಳೆಗರೆದ.

ಆ ನೋಟ ಮಾತ್ರ ಸೂರಪ್ಪನಿಂದ ನೋಡಲಾಗಲಿಲ್ಲ. ಔಡುಕಚ್ಚಿ ಅಲ್ಲಿ ಬಿದ್ದಿದ್ದ ಮರದ ಪಟ್ಟಿಯೊಂದನ್ನು ಕೈಲಿ ಹಿಡಿದು ಸೀತಾರಾಮುವಿನ ಮೇಲೆ ಅಬ್ಬರಿಸಿ ಹಾರುವಷ್ಟರಲ್ಲಿ, ಗೋಪಿ ಅವರ ಬಳಿ ಹಾರಿಬಂದು, ಗೋಡೆಯ ಬಳಿ ತಳ್ಳಿಕೊಂಡು ಹೋಗಿ ಅದುಮಿ ಹಿಡಿದು, ಅವರ ಕೈಲಿರುವ ಪಟ್ಟಿಯನ್ನು ತನ್ನಲ್ಲಿ ಶಕ್ತಿ ಹಾಕಿ ಕಸಿಯತೊಡಗಿದ.

ಇತ್ತಲಾಗಿ ಭಟ್ಟರು ಅತ್ತಿತ್ತ ಛಂಗನೆ ಹಾರಿ ಅದಷ್ಟು ಅವನ ಹೊಡೆತದಿಂದ ಮೈ ತಪ್ಪಿಸಿಕೊಳ್ಳುತ್ತಿದ್ದರು. ಅವರ ಜಾಣತನವನ್ನು ನುಂಗಿ ಒಂದೊಂದು ಬಾರಿ ಅವನೆಸೆದ ಶೀಸೆ ಮೈಗುದ್ದಿ ಹಣ್ಣು ಮಾಡುತಿತ್ತು.

ಅಷ್ಟರಲ್ಲಿ, ಛಟಛಟ ಒಡೆಯುವ ಗಾಜಿನ ಶಬ್ದ ಕೇಳಿ ಅತ್ತೆ–ಸೊಸೆಯರಿಬ್ಬರೂ ಗಾಬರಿಯಿಂದ ಹೊರಗೆ ಬಂದರು. ನಡುಗುತ್ತಿರುವ ದೇಹವನ್ನು ಬಲವಂತವಾಗೆಳೆದುಕೊಂಡು ಬಂದು ಬಾಗಿಲಿಗಡ್ಡವಾಗಿ ನಿಂತರು. ರಂಗಮ್ಮ ಗೋಪಿಯನ್ನು ಗದ್ದರಿಸಬೇಕೆಂದಿರುವಷ್ಟರಲ್ಲಿ ಸೂರಪ್ಪ ಶಾಂತಳನ್ನು ಕಂಡು ಧ್ವನಿಯಲ್ಲಿ ಭೀತಿ ತುಂಬಿ ಚೀರಿದರು,

"ಶಾಂತ, ನೀನ್ಯಾಕೆ ಬಂದೆ ಇಲ್ಲಿ! ಇದ್ದ[illegible]ಕದ ಮನೆ, ಈ ನರ

ರಾಕ್ಷಸರು ನಿನ್ನ ಮೈಮೇಲೆ ಬಿದ್ದಾರು. ಹೊರಡು ಮೊದಲು ಇಲ್ಲಿಂದ."

ಶಾಂತ ಭೀತಿ ತುಂಬಿದ ಕಣ್ಣಿನಿಂದ ಅತ್ತೆಯನ್ನು ನೋಡಿದಳು. ರಂಗಮ್ಮ ಆ ನೋಟವನ್ನು ಅರ್ಥ ಮಾಡಿಕೊಂಡು ಹೇಳಿದರು,

"ನೀನು ಹೋಗು ಶಾಂತ, ನಾನು ನೋಡಿಕೊಳ್ಳುವೆನು."

ಶಾಂತ ಕಣ್ಣೀರಿಡುತ್ತಾ, ನೋವಾದ ಮೈಯನ್ನು ಮೆಲ್ಲನೆ ಮುಂದು ಹಾಕುತ್ತಾ ಹೋಗಲಾರದೆ ಹೋದಳು.

ರಂಗಮ್ಮ ಶಾಂತಳ ಕಡೆಯಿಂದ ಕಣ್ಣು ಕಿತ್ತು ಕಣ್ಣಲ್ಲಿ ಕೋಪದ ಕೆಂಡ ತುಂಬಿ ಗೋಪಿಯ ಕಡೆ ಕಿಡಿ ಹಾರಿಸುತ್ತಾ ಗದ್ದರಿಸಿದರು,

"ಗೋಪಿ, ಸೂರಪ್ಪನನ್ನು ಮೊದಲು ಬಿಡು; ಇಲ್ಲದಿದ್ದರೆ ಅಕ್ಕಪಕ್ಕದವರನ್ನೆಲ್ಲ ಕೂಗು ಹಾಕಿ ನಿನ್ನ ಮರ್ಯಾದೆ ಮೂರು ಕಾಸು ಮಾಡಿ ಬಿಡುವೆನು. ನಿನಗೇನು ಯಾರು ಹೇಳುವವರು ಕೇಳುವವರಿಲ್ಲವೇನು! ಬೀದಿಯ ನಾಯಿ, ಕೆಟ್ಟು ಹೋದೆಯಾ! ಥೂ ನಿನ್ನ ಮುಸುಡಿಗಷ್ಟು ಬೆಂಕಿ ಹಾಕ. ನಿನ್ನ ಬಾಳೊ ನೀನೊ, ಏನೆಂದು ಹುಟ್ಟಿದೆ ಹೇಳು. ನಿಮ್ಮಪ್ಪ ಒಳ್ಳೆಯವರೆಂಬ ಯಶಸು ಹೆಸರು ತೆಗೆದಿದ್ದರೊ, ಅಷ್ಟೂ ನಿನ್ನ ಕಟುಕತನದಿಂದ ಕೆಸರು. ನಿನ್ನಂಥವನನ್ನು ಮಗನೆಂದು ಹೇಳಿಕೊಳ್ಳಲೂ ನಾಚಿಕೆಯಾಗುತ್ತೆ."

ಗೋಪಿ ಹಿಡಿದ ಕೈಯನ್ನು ಸಡಲಿಸಿ ದೂರ ನಿಂತು ಮೈಯ ಬೆವರನ್ನೊರೆಸಿಕೊಳ್ಳುತ್ತ ತಾಯನ್ನು ನುಂಗುವಂತೆ ದುರಗುಟ್ಟಿ ನೋಡಿದ. ಅದನ್ನು ಗಣನೆಗೆ ತರದೆ ರಂಗಮ್ಮ ಕತ್ತನ್ನು ಸರಕ್ಕನೆ ಸೀತಾರಾಮುವಿನ ಕಡೆ ತಿರುಗಿಸಿ ತಮ್ಮ ಕೋಪದ ಕಾವಿನಿಂದ ಅವನನ್ನೂ ಸುಟ್ಟರು.

"ಹಿಡಿದ ಶೀಶೆಯನ್ನು ಮೊದಲು ಕೆಳಗಿಡು, ಸೀತಾರಾಮು! ಇಲ್ಲದಿದ್ದರೆ ನಿನಗೆ ತಕ್ಕ ಶಿಕ್ಷೆಯಾದೀತು!"

ಸೀತಾರಾಮು ಅವರ ಅಬ್ಬರಕ್ಕೆ ಹೆದರಿ ಕೈ ನಿಲ್ಲಿಸಿದ. ರಂಗಮ್ಮ ಮಾತು ಮುಂದುವರಿಸಿದರು,

"ನೀಚ! ನಿನ್ನನ್ನಿಲ್ಲಿ ಬರಹೇಳಿದವರ್‍ಯಾರು? ಅವರ ಮೈ ಮುಟ್ಟಲು ನಿನಗೇನಧಿಕಾರ? ಅವರ ವಯಸ್ಸೇನು, ನಿನ್ನ ವಯಸ್ಸೇನು! ನಾಯಿ! ನಿನ್ನ ಎಂಜಲು ಬುದ್ಧಿಯನ್ನು ಇಲ್ಲೂ ಪ್ರದರ್ಶಿಸಲು ಬಂದೆಯಾ? ಭಟ್ಟರು ಹೇಳಿದ್ದರಲ್ಲಿ ತಪ್ಪೇನಿದೆ? ನನ್ನ ಮಗನ ಬಾಳನ್ನು ಹಾಳು ಮಾಡಿದವನಲ್ಲವೇ

ನೀನು ! ಎಷ್ಟು ಸಂಸಾರವನ್ನು ಮುರಿದಿರುವೆ ನಿನ್ನೀ ವಯಸ್ಸಿಗೆ ! ಕೆಕ್ಕರಿಸಿ ನೋಡುತ್ತಾನೆ ! ನಿನ್ನ ನೋಟಕ್ಕೆ ಯಾರೂ ಹೆದರುವುದಿಲ್ಲ ಇಲ್ಲಿ. ತೊಲಗು ಮೊದಲು ಇಲ್ಲಿಂದ; ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ ನೋಡು "— ಎಂದು ಸುತ್ತಲೂ ಬಿದ್ದಿರುವ ಗಾಜಿನ ಕಡೆ ಕಣ್ಣಾಡಿಸಿ ಕೋಪದ ಸಂಗಡ, ಆಶ್ಚರ್ಯ ಭಯಗಳನ್ನು ತುಂಬಿ "ಅಯ್ಯೋಯ್ಯೊ, ಏನು ಗಾಜು, ಏನು ರಂಪ ! ಈ ಗಾಜಿನ ಮಳೆಯಿಂದ ಅವರ ಮೈ ಉಳಿದದ್ದೆ ಹೆಚ್ಚು ! ಮೂರ್ಖ........!" ಎಂದು ಗಾಜನ್ನು ಒಟ್ಟುಮಾಡಲು ಪೊರಕೆಗಾಗಿ ಒಳಗೆ ಹಾರಿದರು.

ತನ್ನ ಕೆಲಸಕ್ಕೆ ಅರ್ಧದಲ್ಲೆ ಪೆಟ್ಟು ಬಿದ್ದು ಪೆಚ್ಚಾಗಿ ನಿಂತಿದ್ದ ಸೀತಾರಾಮು ಮುಂದೆ ಮಾಡುವುದೇನೆಂದು ಹೊಳೆಯದೆ, ಗೋಪಿಯ ಅಭಿಪ್ರಾಯವನ್ನು ತಿಳಿಯಲು ಅವನ ಕಡೆ ಕಣ್ಣಾಡಿಸಿದ. ಗೋಪಿ ಆ ನೋಟವನ್ನು ನೋಡಿಯೂ ನೋಡದವನಂತೆ ಅಲಕ್ಷಿಸಿದ. ಯಾವ ಮಾತೂ ಆಡದೆ, ಸೂಚನೆಯನ್ನೂ ಕೊಡದೆ ಅವನ ಕಡೆಯಿಂದ ಕತ್ತನ್ನು ಸರಕ್ಕನೆ ತಿರುಗಿಸಿ ಬುಸುಬುಸು ಉಬ್ಬಸ ಬಿಡುತ್ತಾ ಕೆದರಿದ ಕೂದಲನ್ನು ಸರಿಪಡಿಸಿಕೊಳ್ಳತೊಡಗಿದ. ಅವನ ಪ್ರಯತ್ನವೆಲ್ಲ ಮಣ್ಣಾಗತೊಡಗಿದ್ದುದರಿಂದ ಏನೂ ಬೇಡವಾಗಿತ್ತು. ಅವನ್ನರಿತ ಸೀತಾರಾಮು ಉಪ್ರೇಕಗೊಳಿಸಲು ಹೆದರಿ ಸಮಯ ಕಾಯುತ್ತ ನಿಂತ. ರಂಗಮ್ಮನ ಮಾತನ್ನು ಸವರಿ ಕಲ್ಲುಗುಂಡಿನಂತೆ ನಿಂತಿದ್ದ ಅವನ ಭಂಡ ನಿಲುವು ಭಟ್ಟರನ್ನು ಕೆರಳಿಸಿತು. ಮೈಯಲ್ಲಿ ಸಿಟ್ಟಿನ ಜೆಂಕೆ ಯುಜ್ಜುತ್ತಾ ಕಟಕಟ ಹಲ್ಲು ಕಡಿಯುತ್ತಾ,

"ಯಾರಿಗೊ ಹೇಳಿದ್ದು ಮುತ್ತಾಳ ಮಗನೆ, ತೊಲಗುವೆಯೊ, ನಿನ್ನ ಮೈ ಪುಡಿ ಮಾಡಲೊ !" ಎಂದು ಸಿಟ್ಟಿನ ಭರದಲ್ಲಿ ಮೈಮರೆತು ಕಾಲಿಗೆ ರುದ್ರಶಕ್ತಿ ತುಂಬಿ ಮುಂದೆ ಹೆಜ್ಜೆಯೂರಿದರು. ಸುತ್ತಲೂ ಬಿದ್ದಿದ್ದ ಗಾಜಿನ ಚೂರು ಎರಡು ಕಾಲಿಗೂ ಚುಚ್ಚಿ, ದೇಹ ಆಯ ತಪ್ಪಿ "ಅಯ್ಯೋ ನನ್ನ ಕಾಲು ಹೋಯಿತು" ಎಂದು ಚೀರಿಡುತ್ತಾ ಗಾಜಿನ ಮೇಲೆಯೆ ಮೈಯುರುಳಿಸಿದರು.

ಯಾವುದು ಆಗಬಾರದೆಂದು ಈವರೆಗೆ ಎಚ್ಚರಿಕೆಯಿಂದ ತಡೆದು ಹಿಡಿದಿದ್ದರೂ ಅದು ಒಂದು ಕ್ಷಣದ ಸಿಟ್ಟಿನ ಹೊಲೆತನಕ್ಕೆ ಸಿಕ್ಕಿ ಆಗಿಹೋಯಿತು. ಕರುಳು ಕಿತ್ತು ಬರುವಂತೆ ಬೊಬ್ಬೆಯಿಡುತ್ತಿದ್ದರು. ಸುತ್ತಲೂ ಬಿದ್ದಿದ್ದ ಗಾಜು ಮೈಯ್ಯ ರಕ್ತ ಹೀರಿ ತನ್ನ ಸಾಮರ್ಥ್ಯಕ್ಕೆ ಬೆನ್ನು ತಟ್ಟಿಕೊಳ್ಳುತಿತ್ತು.

ಆ ನೋಟ ಸೀತಾರಾಮುವಿನ ಎದೆಯನ್ನರಳಿಸಿತು. ರಂಗಮ್ಮನ ಹೆದರಿಕೆಯಿಂದ ಉಕ್ಕಿ ಬಂದ ಸಂತಸವನ್ನು ಎಲ್ಲರೆದುರು ಹುಚ್ಚಾಗಿ ಹರಿಯಲು ಬಿಡದೆ ತುಟಿಯೊಳಗೆ ಒತ್ತಿಹಿಡಿದು "ಆಯಿತಲ್ಲ, ಪೌರುಷಕ್ಕೆ ತಕ್ಕ ಪ್ರತಿಫಲ" ವೆಂದು ತನ್ನಲ್ಲೆ ತಾನು ಹೇಳಿಕೊಂಡ. ಹುಬ್ಬು ಕುಣಿಸುತ್ತ, ತಲೆ ಹಾಕುತ್ತ, ಆವರೆಗೆ ತಾನು ತೋರಿದ ಸಾಹಸದಿಂದ ಉಕ್ಕಿಬಂದ ಬೆವರನ್ನು ನಾಲಗೆಯಿಂದ ನೆಕ್ಕಿ ಚಪ್ಪರಿಸಿದ.

ಗೋಪಿಗಂತೂ ಆ ಘಟನೆ ತಾನಾಗಿ ಒದಗಿ ಬಂದದ್ದು ಪರಮಾನ್ನ ಉಂಡಂತಾಯಿತು. ಬೇಸರ ತುಂಬುತ್ತಿದ್ದ ಜೀವದಲ್ಲಿ ಉತ್ಸಾಹಸಂತೋಷ ವುಕ್ಕಿ ಮೈಯುಬ್ಬಿಸುತ್ತ, ಕೆನ್ನೆಯರಳಿಸುತ್ತ ಭಟ್ಟರಿಗೆ ವ್ಯಂಗದ ಚುಚ್ಚುಬಾಣ ಬಿಟ್ಟ,

"ಕಂಡವರ ಸಂಸಾರಕ್ಕೆ ಕೈಯಿಕ್ಕಿದವರ ಗತಿಯೆಲ್ಲ ಇಷ್ಟೆ—ಅನುಭವಿಸಿ ! ಬಾರೈಯ್ಯ ಹೋಗೋಣ" ಎಂದು ತನ್ನ ಕಡೆಗೆ ನುಂಗುವಂತೆ ಬರುತ್ತಿದ್ದ ಮಾವನ ಕೆಂಗಣ್ಣಿನ ನೋಟವನ್ನು ಸವರಿ ಹಾಕಿ, ಸಿಟ್ಟಿನಿಂದ ಕಾಲನ್ನು ನೆಲಕ್ಕೆ ಬಡಿಯುತ್ತ ಹೊರಬಿದ್ದನು.

ತುಟಿಯಲ್ಲಿ ಅಣಕ ನಗೆಯನ್ನು ತೇಲಿಬಿಟ್ಟು ಅವನ ಬೆನ್ನು ಹಿಡಿದು ನಾಯಿಯಂತೆ ಹೋಗುತ್ತಿದ್ದ ಸೀತಾರಾಮುವನ್ನು ಕಂಡು ಸೂರಪ್ಪ ನಿಟ್ಟು ಸಿರಿಟ್ಟು ಕಟಕಟ ಹಲ್ಲು ಕಡಿದು 'ಇರಲಿರಲಿ, ನಿನಗೆ ಹಬ್ಬ ಕಾಣಿಸುವೆನೆ'ನ್ನುವ ಅರ್ಥ ಬರುವಂತೆ ಗೋಣು ಹಾಕಿ, ಗಾಜು ಒಟ್ಟುಮಾಡಲೆಂದು ಚಪ್ಪಲಿ ಮೆಟ್ಟಿ ಬರಲು ಹೊರಗೆ ಹೋದರು.

ಅವರು ಬರುವುದರಲ್ಲಿ ಕೈಲಿ ಹಿಡಿಹಿಡಿದು ರಂಗಮ್ಮ ಊರೆಲ್ಲ ಹಾರಿಬಿದ್ದ ಗಾಜನ್ನೊಟ್ಟು ಮಾಡಲು ಹೊರಟಿದ್ದರು. ಸೂರಪ್ಪ ಅವರನ್ನು ತಡೆದು ಆ ಕೆಲಸ ತಾವು ಮಾಡಿ, ಭಟ್ಟರ ಬಳಿ ಹಾರಿ ಬಂದು ಮೆಲ್ಲನೆ ಅವರನ್ನೆತ್ತಿ ತಮ್ಮ ಮೈಗೆ ಒರಗಿಸಿಕೊಂಡರು. ಎದೆ ಬಿರಿಯುವಂತೆ ಬೊಬ್ಬೆಯಿಡುತ್ತಿದ್ದವರನ್ನು ಸವಿ ನುಡಿಯಿಂದ ತಣಿಸುತ್ತ, ರಂಗಮ್ಮ ತಂದಿತ್ತ ಸೂಜಿಯಿಂದ ಸಣ್ಣ ಪುಟ್ಟ ಗಾಜುಗಳನ್ನೆಲ್ಲ ತೆಗೆಯತೊಡಗಿದರು. ಮೈಯ್ಯ ರಕ್ತ ಹೊಳೆಯಂತೆ ಹರಿಯಿತು. ನಾಲ್ಕಾರು ಗಾಜುಗಳು ಸೂಜಿಗೆ ಸಿಕ್ಕದಷ್ಟು ದೂರ ಹೋಗಿದ್ದವು. ಸೂರಪ್ಪ ಕಂಗಾಲಾಗಿ,

“ಶಸ್ತ್ರದ ಸಹಾಯವಿಲ್ಲದೆ ತೆಗೆಯಲು ಸಾಧ್ಯವೆ ಇಲ್ಲ ಭಟ್ಟರೆ, ಆಸ್ಪತ್ರೆಗೆ ಹೋಗಲೆ ಬೇಕು. ಸ್ವಲ್ಪ ಸೈಸಿಕೊಂಡಿರಿ, ಬಂದೆ” ಎಂದು ಪಾನಕ ಮಾಡಿ ತರಲೆಂದು ಒಳಗೆ ಹೋಗಿದ್ದ ರಂಗಮ್ಮನನ್ನು ಭಟ್ಟರ ಬಳಿ ಕಳುಹಿಸಿ ಗಾಡಿ ತರಲು ಹಾರಿದರು.

ರಂಗಮ್ಮನಿತ್ತ ಪಾನಕವನ್ನು ತೊಟ್ಟು ತೊಟ್ಟಾಗಿ ಕುಡಿದು ಕಣ್ಣೀರಿಡುತ್ತಾ ಗದ್ಗದಿಸಿದರು,

“ಕಡೆಗೂ ನನ್ನ ವೈಯ್ಯ ರಕ್ತವನ್ನು ಆ ಚಂಡಾಲನಿಗೆ ಬಲಿ ಕೊಡಲೇ ಬೇಕಾಯಿತು. ಕಾಲ್ಲೇನಿನ್ನು ಬರುತ್ತದೊ ಇಲ್ಲವೊ ರಂಗಮ್ಮ. ಆಯ್ದು ತಿನ್ನುವ ಕೋಳಿಯ ಕಾಲು ಮುರಿದಂತಾದರೇನು ಮಾಡಲಿ ?”

“ವ್ಯಥೆ ಪಡಬೇಡಿ, ಭಗವಂತ ಒಳ್ಳೆಯದು ಮಾಡಿಯಾನು! ಆ ನೀಚನ ಸಂಗಡ ಮಾತಾಡಲು ಹೋಗಬಾರದಿತ್ತು. ದುಷ್ಟರಿಗೆ ಕಲಿಸುವ ಬಗೆಯಲ್ಲಿ ಬುದ್ಧಿ ಕಲಿಸಬೇಕೆ ಹೊರತು, ಎದುರು ಹಾಕಿಕೊಳ್ಳಬಾರದು” ಎಂದು ಹೊರಗೆ ಗಾಡಿ ನಿಂತ ಶಬ್ದ ಕೇಳಿ ಧೈರ್ಯ ತುಂಬಿದರು. “ಗಾಡಿ ಬಂತು. ದೇವರ ಮೇಲೆ ಭರವಸೆಯಿರಿಸಿ ಧೈರ್ಯವಾಗಿ ಹೋಗಿ ಬನ್ನಿ, ಕಂಗಾಲಾಗಬೇಡಿ.”

ಸೂರಪ್ಪ ಭಟ್ಟರನ್ನು ಮಗುವಿನಂತೆತ್ತಿ ತಂದು ಗಾಡಿಯಲ್ಲಿ ಮಲಗಿಸಿ, ರಂಗಮ್ಮನ ಕಡೆ ಹೊರಳಿ ಹೇಳಿದರು,

“ಇವರನ್ನು ಆಸ್ಪತ್ರೆಗೆ ಸೇರಿಸಿ ಬರುವೆನು. ಶಾಂತಳ ಕಡೆ ಹೆಚ್ಚು ನಿಗವಿರಲಿ. ಆಮೇಲೆ ನಿಧಾನವಾಗಿ ಕುಳಿತು ಎಲ್ಲ ವಿಷಯ ಮಾತಾಡೋಣ.”

ಕಂಬನಿಯಿಂದ ಮಾತನಾಡಲಾರದೆ ರಂಗಮ್ಮ ತಲೆ ಹಾಕಿದ್ದೆ ಉತ್ತರವೆಂದು ತಿಳಿದು ಗಾಡಿ ಹೊಡೆಸಿಕೊಂಡು ಸೂರಪ್ಪ ಮುಂದೆ ನಡೆದರು.

## ೨೦

ಚಿಂತೆ ಮಾಡಿ ಮಾಡಿ ನಾಣಿಯ ತಲೆ ಕಾದು ಸಿಡಿದು ಹೋಗುವಂತಾಗಿತ್ತು. ಭಟ್ಟರನ್ನೂ ಶಾಂತಳನ್ನೂ ಆಸ್ಪತ್ರೆಗೆ ಸೇರಿಸಿ ಬಂದ ಸೂರಪ್ಪ, ತನ್ನಲ್ಲಿ

ಗೋಳಾಡಿಕೊಂಡು ಹೋಗಿದ್ದರು. ಅವರ ಎಡೆಬಿಡದೆ ಸುರಿಯುತ್ತಿದ್ದ ಕಣ್ಣೀರು, ಹೊಟ್ಟೆ ಸುಟ್ಟು ಸುಟ್ಟು ಬಂದ ಆ ಮಾತು, ಕಿವಿಯಲ್ಲಿ ಗುಂಯ್ ಗುಡುತ್ತ ಕಣ್ಣಮುಂದೆ ಕಟ್ಟಿ ನಿಂತು ಅವನ ಕರುಳನ್ನು ಹಿಂಡುತಿತ್ತು.

ನೋವು ತಿಂದು ತಿಂದು ಕ್ಷಯರೋಗಕ್ಕೆ ತುತ್ತಾಗಿ, ಬದುಕಿನ ಆಶೆಯನ್ನೆಲ್ಲ ತೊರೆದು ವೈದ್ಯಶಾಲೆಯನ್ನೆ ಮನೆಯನ್ನಾಗಿ ಮಾಡಿಕೊಂಡ ಅತ್ತಿಗೆಯ ದಾರುಣ ಸ್ಥಿತಿಯ ಕರ್ಣಕಠೋರ ವರ್ತಮಾನ, ಸ್ನೇಹಿತನಲ್ಲಿತ್ತ ವಾಗ್ದಾನದ ಪೂರೈಕೆಗಾಗಿ ಬದುಕನ್ನು ಬಲಿಯಿತ್ತು, ಆಹಾರ–ನಿದ್ರೆ ತೊರೆದು ಹಗಲಿರುಳೂ ದುಡಿದು ಕಡೆಗೆ ಕಾಲು ಮುರಿದುಕೊಂಡು ಕಣ್ಣೀರಿಡುತ್ತಿರುವ ಭಟ್ಟರ ಕರುಣಾಜನಕ ಸುದ್ದಿ ಇನೆರಡೂ ಬರಸಿಡಿಲಿನಂತೆ ಬಂದೆರಗಿದುವು.

ಆ ಸುದ್ದಿಯಿಂದ ನಾಣಿ ತತ್ತರಿಸಿ ಹೋದ. ಬಾಳಿನ ಈ ಅಪಘಾತಗಳನ್ನು ಕನಸು ಮನಸಿನಲ್ಲೂ ನಿರೀಕ್ಷಿಸಿರಲಿಲ್ಲ. ಯಾಕೆ ಹೀಗಾಯಿತು ? ತನ್ನಿಂದಾಗಿ ಈ ಎಲ್ಲ ಘಟನೆ ನಡೆದಿದೆ. ಅಣ್ಣನ ದೃಷ್ಟಿಯಲ್ಲಿ ನಾನು ಅಪರಾಧಿಯಾಗಿ ನಿಂತದ್ದೆ ಎಲ್ಲರ ಬಾಳಿನ ಮಾರಣ ಹೋಮಕ್ಕೂ ಕಾರಣವಾಯಿತು. ಆ ಅಪರಾಧವೆಣಿಸುವಷ್ಟು ನೀಚನೆ ತಾನು ? ಬಾಳಿನಲ್ಲಿ ಶುದ್ಧತೆಯಿಲ್ಲವೆ ? ಸೌಜನ್ಯವಿಲ್ಲವೆ ? ಧರ್ಮಬಂಧನವಿಲ್ಲವೆ ? ಯಾವುದರ ಕೊರತೆಯಿದೆ ತನ್ನ ಬಾಳಿನಲ್ಲಿ ! ಪರಿಶುದ್ಧ ಬಾಳನ್ನು ಬಾಳಬೇಕೆಂದು ಹೆಜ್ಜೆಹೆಜ್ಜೆಗೂ ತಿದ್ದಿಕೊಂಡು ಹೋಗುತ್ತಿರುವೆನಲ್ಲಾ, ನಣ್ಣಣ್ಣನಿಗೆ ತಿಳಿಯದೆ ಹೋಯಿತೆ ನನ್ನ ಸೌಜನ್ಯ, ಸರಳ ಸ್ವಭಾವ !

ಬಾಲ್ಯದಿಂದಲೂ ಒರಟಾಟವನ್ನೆ ಮಾಡುತ್ತ ಬಂದಿದ್ದಾನೆ. ಎಲ್ಲರಂತೆ ಒಂದು ದಿನವಾದರೂ ತನ್ನೊಡನೆ ಸಂತೋಷದಿಂದಾಡಿಲ್ಲ, ಕೂಡಿಲ್ಲ ತಾನು ಮಾಡಿದ ಅಪರಾಧವೇನು ? ಯಾಕೆ ಹೀಗೆ ? ಒಡಹುಟ್ಟಿನ ಪ್ರೀತಿಯನ್ನು ಳಿಸಿಕೊಂಡು ಬಾಳುವ ಪುಣ್ಯ ಪಡೆದು ಬರಲಿಲ್ಲವೆ ? ಇಲ್ಲ, ಆ ಪುಣ್ಯ ನನಗಿದ್ದಿದ್ದರೆ ನಮ್ಮ ಸೋದರಿಕೆ ಒಡೆದು ಮಣ್ಣಾಗುತ್ತಿರಲಿಲ್ಲ. ನಾನು ಮಹಾಪಾಪಿ, ಅಣ್ಣನ ವಿಶ್ವಾಸದಿಂದ ವಂಚಿತನಾದೆ, ದೇವತೆಯಂಥ ಅತ್ತಿಗೆಯನ್ನು ಜೀವ ಸಹಿತ ಬಲಿಗೊಟ್ಟೆ, ತಂದೆಗೆ ಬದಲಾಗಿ ನಿಂತು ಕಾದಾಡಿದ ಭಟ್ಟರ ಕಾಲನ್ನು ಬಲಿ ತೆಗೆದುಕೊಂಡೆ. ಎಲ್ಲ ನನ್ನಿಂದ—ಈ ಮಹಾಪಾತಕನಿಂದಲೆ ಆದದ್ದು. ನಾನು ಬದುಕಿರಬಾರದು. ಈ ಪಾಪಿ ಜನ್ಮವನ್ನು ಜಜ್ಜಿ ಜಜ್ಜಿ ಕೊನೆಗಾಣಿಸ

ಹೋಗುತ್ತಿದ್ದವನು ನಿಂತು ಹೇಳಿದ,

"ಇದಕ್ಕೂ ಸೀತಾರಾಮುವಿಗೂ ಯಾವ ಸಂಬಂಧವೂ ಇಲ್ಲ ಸರಸು. ಇಷ್ಟಕ್ಕೂ ನಮ್ಮ ಚಿನ್ನ ಒಳ್ಳೆಯದಾದರೆ ಅಕ್ಕಸಾಲಿಯನ್ನ್ಯಾಕೆ ದೂರಬೇಕು ಹೇಳು. ಎಲ್ಲ ತಪ್ಪೂ ನೋವೂ ಅಣ್ಣನ ಅವಿವೇಕದಿಂದಾದದ್ದು. ಮೊದಲು ಅವನ ವಿವೇಕವನ್ನು ಜಾಗೃತಗೊಳಿಸಬೇಕು, ತಕ್ಕ ಪ್ರಮಾಣವಿತ್ತು ಸಂದೇಹ ವನ್ನು ದೂರ ಮಾಡಬೇಕು; ಆಗ ಎಲ್ಲ ಸರಿಹೋಗುತ್ತೆ."

"ಆಗಲಿ. ಆದರೂ ಈ ಸಮಯ ಬಿಡಬೇಡಿ. ಭಟ್ಟರಿಗಾದ ಅಪಘಾತ ವನ್ನು ಮುಂದಿಟ್ಟು ಅವನಿಗೇನಾದರೂ ಶಿಕ್ಷೆ ಮಾಡಿಸಿ. ಅವನಿಂದ ನಾಲ್ಕಾರು ಜನರಿಗೆ ತೊಂದರೆಯಿದೆ."

"ಅದು ಹೌದು. ಈ ಸಮಯ ಬಿಟ್ಟರೆ ಮತ್ತೆ ಅವನನ್ನು ಹಿಡಿಯು ವುದೂ ಕಷ್ಟವಾಗುತ್ತೆ; ಹಾಗೇ ಮಾಡುವೆನು" ಎಂದು ಟವೆಲ್ಲನ್ನು ತೆಗೆದು ಕೊಂಡು ನೀರುಮನೆಗೆ ಹೋಗಿ ಮುಖಮಾರ್ಜನೆ ಮುಗಿಸಿ ಬಂದು, ಶುಭ್ರ ವಾದ ಬಟ್ಟೆ ತೊಟ್ಟು ಎಷ್ಟು ಬಲವಂತಪಡಿಸಿದರೂ ಊಟ ಮಾಡದೆ, ಕೊಟ್ಟ ಒಂದು ಲೋಟ ಕಾಫಿ ಹೀರಿ ಸಾಯಕಲ್ಲನ್ನು ಹತ್ತಿದ.

ಅವನನ್ನು ಕಳುಹಿಸಲು ಬಂದಿದ್ದ ಸರಸು ಎಚ್ಚರದುಂಬಿದಳು,

"ಹುಷಾರು, ದುಡುಕಿ ಅಪಘಾತ ಮಾಡಿಕೊಳ್ಳಬೇಡಿ."

"ಹೆದರಬೇಡ, ನನಗಿಂತ ನಿನ್ನ ಕಡೆ ಹೆಚ್ಚು ನಿಗವಿದೆ ನನಗೆ. ಗಲಾಟೆಗೆ ಅವಕಾಶ ಕೊಡದಂತೆ ನಡೆದುಕೊಳ್ಳುವೆನು. ಎಲ್ಲ [illegible]ಸ ಮುಗಿಸಿ ಬರಲು ಹೊತ್ತಾಗಬಹುದು; ಗಾಬರಿ ಬೀಳಬೇಡ" ಎಂದು [illegible]ಡಲನ್ನು ಒತ್ತಿದನು. ವಾಯುವೇಗದಲ್ಲಿ ವಾಹನ ಓಡಿತು.

ಸ್ವಲ್ಪ ದೂರ ಹೋಗುವುದರಲ್ಲೇ ಶಂಕರ ಸಿಕ್ಕಿದ. ಅವನೂ ನಾಣಿ ಯನ್ನೇ ಹುಡುಕಿಕೊಂಡು ಹೊರಟಿದ್ದ. ಅವನಿಂದ ಸೀತಾರಾಮು ಅಂಗಡಿ ಖಾಲಿ ಮಾಡಿ ಊರು ಬಿಟ್ಟು ಓಡಿಹೋದನೆಂಬ ಸುದ್ದಿ ತಿಳಿದು ಉಬ್ಬಿಹೋದ. ಠಾಣೆಯ ಕಡೆ ಹೊರಟಿದ್ದವನು ಆ ದಿಕ್ಕನ್ನು ಬದಲಾಯಿಸಿ, ವಿಷಯದ ವಿವರ ತಿಳಿಯಲು ಅವನಂಗಡಿಯ ಬಳಿ ಹಾರಿದ.

ಅಂಗಡಿ ಬಾಗಿಲಿಗೆ ಕೀಲಿ ಬಿದ್ದಿತ್ತು. ಅಕ್ಕ-ಪಕ್ಕದಲ್ಲಿ ವಿಚಾರಿಸಲಾಗಿ ಹಿಂದಿನ ದಿನ ಮಧ್ಯಾಹ್ನವೆ ಅಂಗಡಿಯನ್ನೇ ಬದಲಾಯಿಸುವೆನೆಂದು ಹೇಳಿ,

ಸಾಮಾನನ್ನೆಲ್ಲ ಸಾಗಿಸಿದ್ದನೆಂದು ತಿಳಿಯಿತು. ಸರಿಯಾದ ಸಂಗತಿ ಹೊರ ಬೀಳಲಿಲ್ಲ. ಸುದ್ದಿಯನ್ನು ಖಚಿತ ಪಡಿಸಿಕೊಳ್ಳಲು ಸರ್ರನೆ ವಾಹನವನ್ನು ಅವನ ಮನೆಯ ದಿಕ್ಕಿಗೆ ತಿರುಗಿಸಿದ.

ಮನೆ ಹತ್ತಿರವಾದಂತೆ ಸಂಶಯ ಬಲಿಯಿತು. ಸುತ್ತುಮುತ್ತಲು ಜನ ಜಾತ್ರೆಯಂತೆ ನೆರೆದಿತ್ತು. ನಿರೀಕ್ಷಿಸಿದ್ದಕ್ಕಿಂತ ಸುದ್ದಿ ಇನ್ನೂ ವಿಚಿತ್ರವಾಗಿತ್ತು. ಅಲ್ಲಿ ಕಂಡ ನೋಟ ದಂಗುಬಡಿಸಿತು. ಕಣ್ಣು ಅಗಲಿಸಿ ನೋಡಿದ. ಮನಸ್ಸಿನ ಭ್ರಮೆಯಲ್ಲ—ಸತ್ಯ ಸಂಗತಿ. ಆ ನೋಟ 'ಕಂಡವರ ದುಡ್ಡು ಮಂಜಿನಂತೆನ್ನುವುದು ಸುಳ್ಳಲ್ಲ' ವೆನ್ನುವ ನಾಣ್ಣುಡಿಯನ್ನು ಅವನ ನಾಲಿಗೆಯಲ್ಲಾಡಿಸಿತು. ಇನ್ನೂ ಸ್ವಲ್ಪ ಹತ್ತಿರ ಸರಿದು ನೋಡಿದ. ಬಾಗಿಲು ಹಾರು ಹೊಡೆದು ಅರ್ಧರ್ಧ ಸುಟ್ಟು ವಿಕಾರವಾಗಿದ್ದ ಮನೆ ಅವನ ಕುತೂಹಲವನ್ನು ಕೆರಳಿಸಿತ್ತು. ಯಾರಿಂದ, ಏಕೆ ಹೀಗೆ? ಎನ್ನುವುದೊಂದೂ ತಿಳಿಯದೆ ಮಿಕಿ ಮಿಕಿ ನೋಡುತ್ತ ನಿಂತ. ಅವನೆದೆ ಉತ್ತರಕ್ಕಾಗಿ ತುಡುಕಿತು. ಅಷ್ಟರಲ್ಲಿ ಸುತ್ತಲೂ ನೆರೆದಿದ್ದ ಜನ ಆಡಿಕೊಂಡ ಮಾತು ಅವನ ಪ್ರಶ್ನೆಗೆ ತಕ್ಕ ಉತ್ತರವಿತ್ತು ಸಮಾಧಾನಪಡಿಸಿತು.

"ಯಾರೊ ಆಗದಿದ್ದವರು, ಅವನಿಂದ ನೊಂದವರು ಮನೆಗೆ ಬೆಂಕಿಯಿಕ್ಕಿರಬೇಕು."

"ಇಡದೆ ಬಿಡುವರೆ? ಸಟ್ಟಾ ಆಟದ ನೆವದಿಂದ ಎಷ್ಟು ಜನರ ಮನೆ ಹಾಳು ಮಾಡಿರುವನೊ ಆ ಹಾರುವೈಯ್ಯ!"

"ಅದೊಂದೆ ಆದರೆ ಏನಾದರನ್ನಬಹುದು. ಕೊಟ್ಟವರ ದುಡ್ಡಿಗೆ ನಾಮ ಹಚ್ಚುವುದು, ಮನೆ ತಪ್ಪಿದ, ಗಂಡ ಬಿಟ್ಟ, ಅಶಿಕ್ಷಿತ ಹೆಣ್ಣುಮಕ್ಕಳನ್ನು ಬಲೆಯೊಳಗೆ ಸಿಕ್ಕಿಸಿ, ಕೈಲಿರುವುದನ್ನೆಲ್ಲ ಕಸಿದು [illegible]ತ್ತಟ್ಟುವುದು, ಇನ್ನೂರು ರೂಪಾಯಿನ ಮಾಲನ್ನು ಐವತ್ತಕ್ಕಿರಿಸಿಕೊಂಡು ರೂಪಾಯಿಗೆ ಎರಡಾಣೆ ಬಡ್ಡಿಯಂತೆ ಹೇರಿ, ಕಡೆಗೆ ಆ ಮಾಲನ್ನು ಸ್ವಾಹಾ ಮಾಡುವುದು—ಈ ಬಗೆಯ ನಡವಳಿಕೆಯಿಂದ ಬೇರೆ ಜನರನ್ನು ಕೆರಳಿಸಿದ್ದ."

"ಈಗ ತಿಂಗಳಲ್ಲಿ ಬೆಸ್ತರ ನಿಂಗಿಯನ್ನು ಕೆಣಕಿ ಆ ಗುಂಪಿನವರ ಶತ್ರುತ್ವ ಬೇರೆ ಕಟ್ಟಿಕೊಂಡಿದ್ದ."

"ಸರಿಸರಿ, ಇಷ್ಟೆಲ್ಲ ಇರುವಾಗ ಮನೆಗೆ ಬೆಂಕಿಹಚ್ಚುವುದೇನೂ ಹೆಚ್ಚಲ್ಲ."

ಸುತ್ತಲೂ ನೆರೆದಿದ್ದ ಜನರಿಂದ ಸೀತಾರಾಮುವಿನ ನಾಲ್ಕಾರು ಮುಖದ ವರ್ಣನೆ ಕೇಳಿ ಸುಸ್ತಾಗಿ ಹೋದ. ಅಷ್ಟರಲ್ಲಿ ಮುಖ ಸೋಲು ಬಿಟ್ಟು ಮನೆಯ ಒಳಗಡೆಯಿಂದ ಬಂದ ಇಳಿವಯಸ್ಸಿನೊಬ್ಬ ನಾಗರಿಕ ವ್ಯಕ್ತಿಯನ್ನು ಕಂಡು, ಮತ್ತಷ್ಟು ಕುತೂಹಲಾವಿಷ್ಟನಾದ. ಅವನಿಂದಲೂ ವಿಷಯ ಸಂಗ್ರಹಿಸುವ ಆತುರದಿಂದ "ಈ ಮನೆಯವರೆಲ್ಲಿ ?" ಎಂದು ಅವನಿಲ್ಲವೆಂದು ಗೊತ್ತಿದ್ದರೂ ಕೇಳಿದ.

ಆ ವ್ಯಕ್ತಿಯಿಂದ ಬಂದ ಉತ್ತರ ಆಶ್ಚರ್ಯವನ್ನಿಮ್ಮಡಿಗೊಳಿಸಿತು.

"ಯಾಕೆ, ನಿಮಗೂ ನಾಮ ಹಾಕಿ ಹೋಗಿದ್ದಾರೇನು ?"

ನಾಣಿ ಸೀತಾರಾಮುವಿನಿಂದ ತಮ್ಮ ಕುಟುಂಬಕ್ಕಾದ ಹಾನಿಯೆಲ್ಲವನ್ನೂ ಸೂಕ್ಷ್ಮವಾಗಿ ತಿಳಿಸಿ ಹೇಳಿದ.

"ಅವನ ಅದೃಷ್ಟ ನೆಟ್ಟಗಿತ್ತು—ಓಡಿ ಹೋಗಿ ಬದುಕಿಕೊಂಡ. ಇಲ್ಲದಿದ್ದರೆ ನಾಲ್ಕಾರು ವರ್ಷ ಅವನಾಟವೆಲ್ಲವನ್ನು ಕಟ್ಟಿಟ್ಟು ಕತ್ತಲೆ ಮನೆಯಲ್ಲಿ ಕೊಳೆಯಬೇಕಿತ್ತು."

"ಆ ಮನುಷ್ಯನ ಯೋಗ್ಯತೆ ಮೊದಲೆ ಗೊತ್ತಿದ್ದಿದ್ದರೆ ಬೀಸಿದ ಬಲೆಗೆ ಬೀಳುತ್ತಲೆ ಇರಲಿಲ್ಲ."

"ನಿಮಗೇನು ಮಾಡಿ ಹೋಗಿದ್ದಾನೆ ?"

"ಈ ಮನೆಯನ್ನು ಕ್ರಯಕ್ಕೆ ಕೊಡುವೆನೆಂದು ಮುಂಗಡವಾಗಿ ಎರಡು ಸಾವಿರ ರೂಪಾಯಿಗಳನ್ನು ಪಡೆದು ಕೈಲಿ ತಿರುಪತಿ ಚಿ ು ಕೊಟ್ಟು ಹೋದ. ಸದ್ಯ ನನ್ನದೃಷ್ಟ ಚೆನ್ನಾಗಿತ್ತು. ಪೂರ್ತಿ ಕೊಟ್ಟು ಕೆಡ ್ಲ."

"ಹಣವನ್ನು ಕೊಟ್ಟ ತಕ್ಷಣ ಮನೆಯನ್ನು ನಿಮ್ಮ ಹೆಸರಿಗೆ ಬರೆಸಿಕೊಳ್ಳಬೇಕಿತ್ತು."

"ಬರೆದುಕೊಡೆಂದು ಕೇಳಿದೆ; ಗೃಹಕೃತ್ಯದ ತೊಂದರೆ ಮುಂದಿಟ್ಟು ತಿಂಗಳ ಗಡು ತೆಗೆದುಕೊಂಡು, ಹಣಕ್ಕೆ ಸಾಮಾನ್ಯ ರಸೀದಿಯೊಂದಿತ್ತು ಕಾಲ ತಳ್ಳುತ್ತಲೆ ಬಂದ. ಸುತ್ತುಮುತ್ತಲೂ ಅವನಿರಿಸಿಕೊಂಡಿದ್ದ ವ್ಯವಹಾರ, ಅಂಗಡಿಯ ಡಬ್ಬು ನೋಡಿ ನಂಬಿ ನಾನೂ ಪೆಚ್ಚುಬಿದ್ದೆ."

"ಅಂತೂ ನಿಮ್ಮಿಂದಲೂ ಎರಡು ಸಾವಿರ ಗಿಟ್ಟಿಸಿದನೆನ್ನಿ."

"ಹೋಗಲಿ ಬಿಡಿ. ಯಾವ ಜನ್ಮದ, ಅವನ ಋಣ ನನ್ನ ಮೇಲಿತ್ತೊ,

ತೀರಿ ಹೋಯಿತು."

"ಇನ್ನೇನು, ಕೈಬಿಟ್ಟು ಹೋದ ಮೇಲೆ ಹಾಗೆ ಸಮಾಧಾನ ಮಾಡಿಕೊಳ್ಳಬೇಕು. ಸದ್ಯ ಇಷ್ಟರಲ್ಲೆ ಪೀಡೆ ಪರಿಹಾರವಾಯಿತಲ್ಲ ಹೇಳಿ. ಇನ್ನೂ ನಾಲ್ಕು ದಿನವಿದ್ದಿದ್ದರೆ ಇನ್ನೆಷ್ಟು ಮಂದಿಯನ್ನು ಮುಳುಗಿಸುತ್ತಿದ್ದನೊ!"

"ಈಗೇನು ಕಮ್ಮಿಯೆ? ಅಲ್ಲಿ ನೋಡಿ ಸಾಲಾಗಿ ಕೂತಿದ್ದಾರೆ, ನಾವು ಹಾಕಿಕೊಂಡವರು. ಅವಳು ಹಾಲಿನವಳು, ತಿಂಗಳಿಗೆ ಇಪ್ಪತ್ತು ರೂಪಾಯಂತೆ ಮೂರು ತಿಂಗಳ ಬಾಕಿ ಉಳಿಸಿಕೊಂಡಿದ್ದಾರಂತೆ. ಪಕ್ಕದವನು ಅವರಂಗಡಿಯ ನೌಕರ—ಆರು ತಿಂಗಳ ಸಂಬಳಕ್ಕೆ ತಿರುಪತಿ ನಾಮ, ಬರಾಬ್ಬರಿ ನೂರೆಂಬತ್ತು ರೂಪಾಯಿ. ಅದರ ಪಕ್ಕದವರು—ಸ್ನೇಹಾಚಾರದ ಮೇಲೆ ಕಾಗದಪತ್ರವಿಲ್ಲದೆ ಐನೂರು ರೂಪಾಯಿನ ಇಡೀ ಗಂಟೊಂದನ್ನಿತ್ತು ಎಳ್ಳು-ನೀರು ಬಿಟ್ಟವರು. ಅದರ ಪಕ್ಕದವನು ಜವಳಿ ಅಂಗಡಿಯವನು—ಇನ್ನೂರೈವತ್ತು ರೂಪಾಯಿಗಳ ಬಾಕಿ ಚುಕ್ತಾ ಆಗದೆ ಬೊಬ್ಬೆ ಹಾಕುತ್ತ ಕೂತಿದ್ದಾನೆ. ಇವರೆಲ್ಲ ನನ್ನ ಹಣಕ್ಕಾಗಿ ಈ ಸುಟ್ಟ ಮನೆಯನ್ನು ವಶಪಡಿಸಿಕೊಂಡದ್ದನ್ನು ನೋಡಿ, ನನ್ನನ್ನು ಮುತ್ತಿದ್ದಾರೆ. ಬೆಳಗಿಂದ ನನಗೂ ಉತ್ತರ ಹೇಳಿ ಹೇಳಿ ಗಂಟಲೆಲ್ಲ ಒಣಗಿ ಹೋಯಿತು." ಎಂದು ಅವರು ತಾವೂ ನಕ್ಕು, ಅವನನ್ನೂ ನಗಿಸಿದರು.

"ದುಡ್ಡು ಕೊಟ್ಟು ದುಃಖ ಪಡೆದುಕೊಂಡರೆನ್ನುವ ಗಾದೆಯನ್ನು ನೀವು ಸುಳ್ಳು ಮಾಡಲಿಲ್ಲ. ನಿಮ್ಮಂಥವರಿಂದ ಅವನು ಕೈಲಿ ನಾಲ್ಕು ಕಾಸು ಮಾಡಿಕೊಂಡ. ಎಲ್ಲಾದರೂ ತಲೆಯೆತ್ತಿ ಬದುಕಲಿ ಬಿಡಿ. ಸದ್ಯ ಇಲ್ಲಿಂದ ಹಾಳಾಗಿ ಹೋದನಲ್ಲ ಅಷ್ಟೇ ಸಾಕು" ಎಂದು ನಾಣಿ "ಬರುತ್ತೇನೆ ನಮಸ್ಕಾರ" ಎಂದು ಪೆಡಲನ್ನು ವೇಗವಾಗಿ ತಿರುಗಿಸಿದ.

ಅಷ್ಟಾಗುವಾಗ ಗಂಟೆ ಐದೂವರೆಯಾಗಿತ್ತು. ಹೊತ್ತಾಯಿತೆಂದು ಹೌಹಾರಿ ಮಾರುಕಟ್ಟೆಗೆ ಹೋಗಿ ಬೇಕಾದ ಹಣ್ಣು ಕೊಂಡು ಹತ್ತು ನಿಮಿಷದಲ್ಲಿ ವೈದ್ಯಶಾಲೆಯ ಬಾಗಿಲನ್ನು ಮುಟ್ಟಿದ. ವಾಹನವನ್ನಲ್ಲೆ ನಿಲ್ಲಿಸಿ, ಇರುವ ಸ್ಥಳ ಹುಡುಕಿ ಭಟ್ಟರ ಬಳಿ ಹಾರಿದ. ಅವರ ಗುಳಿಬಿದ್ದ ಕಣ್ಣು, ನಿಸ್ತೇಜವಾಗಿದ್ದ ಮುಖ—ಸೀತಾರಾಮುವಿನ ಸುದ್ದಿ ಹೊತ್ತು ತನ್ನ ದುಃಖವನ್ನೂ ತಳ್ಳಿ ತುಂಬಿ ತಂದಿದ್ದ ಉಲ್ಲಾಸವೆಲ್ಲವನ್ನೂ ಹೀರಿ ಮೊದಲಿನ ದುಃಖವನ್ನು ಮರು

ಕೊಳಿಸಿತು. ಮುಖವೆಲ್ಲ ಕೆಂಚಾಗಿ, ಕಣ್ಣು ಹನಿದುಂಬಿ, ಕತ್ತಿನ ನರವುಬ್ಬಿ ಮಾತನಾಡಲು ಸಾಧ್ಯವಾಗದೆ ಕೈಲಿ ತಂದಿದ್ದ ಹಣ್ಣನ್ನು ಬದಿಗಿರಿಸಿ ತುಟಿ ಕಚ್ಚಿ ನಿಂತ.

ಅವನ ಸ್ಥಿತಿ ಕಂಡು ಮರುಗಿ ಭಟ್ಟರೆ ಹೇಳಿದರು,

"ಆಗಿ ಹೋದುದಕ್ಕೆ ಚಿಂತಿಸಿ ಏನೂ ಫಲವಿಲ್ಲ ನಾಣಿ. ಮುಂದೆ ಮಾಡ ಬೇಕಾದ ಕೆಲಸದ ಕುರಿತು ಯೋಚನೆ ಮಾಡು."

ದುಃಖವನ್ನು ಹಿಡಿತಕ್ಕೆ ತಂದು ಹೇಳಿದ ನಾಣಿ,

"ಅದಕ್ಕೆ ಸಿದ್ಧನಾಗಿಯೆ ಬಂದಿದ್ದೇನೆ. ಅಣ್ಣನ ತಪ್ಪು ತಿಳುವಳಿಕೆ ಕಳೆ ಯದೆ ಯಾರಿಗೂ ನೆಮ್ಮದಿಯಿಲ್ಲ. ನನ್ನ ಶುದ್ಧ ನಡವಳಿಕೆಯ ಬಗ್ಗೆ ತಕ್ಕ ಪ್ರಮಾಣವಿತ್ತು, ಅವನ ವಿವೇಕವನ್ನು ಜಾಗೃತಗೊಳಿಸಬೇಕೆಂದಿರುವೆನು."

ತಮ್ಮ ಮಾತನ್ನವನು ಅರ್ಥ ಮಾಡಿದ ಬಗೆ ಹಿಡಿಸಲಿಲ್ಲ. ಮುಖ ಕಿವುಚಿ ಕಟ್ಟುನಿಟ್ಟಾಗಿ ಹೇಳಿದರು,

"ಆ ಕೆಲಸ ಮಾತ್ರ ಮಾಡಬೇಡ ನಾಣಿ. ನೀನೀಗ ಆ ಸ್ಥಳಕ್ಕೆ ಕಾಲಿ ಡಲೆ ಕೂಡದು. ಏನಿದ್ದರೂ ನಾನು ಬಂದ ಮೇಲೆ ನೋಡ್ವೋಣ."

ಭಟ್ಟರ ಮಾತು ಸಮಸ್ಯೆಯಾಗಿತ್ತು. ಮೊದಲಾಡಿದ ಮಾತಿಗೂ ಈಗಂದ ಮಾತಿಗೂ ಅರ್ಥಾರ್ಥಕ್ಕೆ ಸಂಬಂಧವಿಲ್ಲ. ತಾನು ಹೊತ್ತು ತಂದ ಅಭಿಪ್ರಾಯಕ್ಕೆ ಅವರ ಮಾತು ತೀರಾ ವಿರುದ್ಧವಾಗಿದ್ದುದರಿಂದ ಗಮನಕ್ಕೆ ತರಪೆ ತನ್ನ ಮಾತಿಗೇ ಪುಷ್ಟಿ ಕೊಟ್ಟು,

"ಹಾಗೆ ಮುಂದೂಡಿಯೆ ಇಷ್ಟೆಲ್ಲ ಘಾತ-ಅಪಘಾತ ನೋಡಬೇಕಾ ಯಿತು ಕಣ್ಣೆಂದ. ಇನ್ನೂ ಸುಮ್ಮನಿರುವುದರಲ್ಲಿ ನನಗರ್ಥ ಕಾಣಲಿಲ್ಲ. ಇಷ್ಟಕ್ಕೂ ನಾನು ಅವನನ್ನೆದುರು ಹಾಕಿಕೊಳ್ಳುವುದಿಲ್ಲ; ಸಮಾಧಾನ-ತಾಳ್ಮೆ ಯಿಂದ ಯಾರಿಗೂ ನೋವಾಗದಂತೆ ಆ ಕೆಲಸ ಮಾಡುವೆನು."

"ನೀನು ಮಾಡಬಹುದು—ಅದಕ್ಕೆ ಅವನು ಸಿದ್ಧನಿಲ್ಲ. ಅವನಿಗೀಗ ಒಳ್ಳೆಯದೆಲ್ಲ ಕೆಟ್ಟದ್ದಾಗೆ ಕಾಣುತ್ತಿದೆ. ನಿನ್ನ ಸಮಾಧಾನ, ತಾಳ್ಮೆ ಯಾವುದೂ ಅಲ್ಲಿ ನಡೆಯುವುದಿಲ್ಲ. ಆ ಒರಟುತನ ಹಣ್ಣಾಗಲು ಇನ್ನೂ ಸ್ವಲ್ಪ ಕಾಲ ಬೇಕು. ಅವನು ಮಾಡಿದ ಅಪರಾಧಕ್ಕೆ ಅವನೆ ಪಶ್ಚಾತ್ತಾಪ ಪಡುವ ದಿನ ಬರು ತ್ತದೆ. ಅಲ್ಲಿವರೆಗೆ ನೀನು ಕಾಯಬೇಕು."

ನಾಣಿಯಲ್ಲಿ ಆದಷ್ಟು ಬೇಗ ಅಣ್ಣನ ವಿಶ್ವಾಸ ಗಳಿಸಬೇಕೆಂಬ ಆತುರ ಕ್ಷಣಕ್ಷಣಕ್ಕೂ ಹೆಚ್ಚುತಿತ್ತು. ಆದರೆ ಭಟ್ಟರ ಮಾತು ಅದಕ್ಕೆ ಮುಟ್ಟುಗೋಲಿ ನಂತಿತ್ತು. ಅವರು ತಮ್ಮ ಕುಟುಂಬದ ಹಿತಚಿಂತಕರು, ವಿವೇಕಿಗಳಾದ್ದರಿಂದ ಮಾತನ್ನು ತೆಗೆದು ಹಾಕುವಂತಿರಲಿಲ್ಲ. ಹಾಗಾಗಿ ತನ್ನಭಿಪ್ರಾಯವನ್ನು ತಳ್ಳಿ ಹಾಕಿ ಬಹಳ ಪ್ರಯಾಸದಿಂದ ಅವರ ಹಿತನುಡಿಯನ್ನು ಸ್ವೀಕರಿಸಿದ.

"ಹಾಗಾದರೆ ಅಣ್ಣನನ್ನು ಕಾಣಲು ಬೇಡವೆಂತಲೆ ಹೇಳುವಿರಾ ?"

"ನನ್ನ ಅಭಿಪ್ರಾಯವೇನೊ ಅದೆ !"

ಭಟ್ಟರು ಅದೇ ನಿರ್ಧಾರದ ಧ್ವನಿಯಲ್ಲಿ ಹೇಳಿ ಮುಖ ಕಿವುಚಿದರು. ಕಾಲಿನ ಬಾಧೆ ಕರುಳನ್ನು ಹಿಂಡಿತು. ಸ್ವಲ್ಪ ಹೊತ್ತು ಮಿಲಮಿಲನೆ ಒದ್ದಾಡಿ ಸಮಾಧಾನಕ್ಕೆ ಬಂದರು.

ಆ ನೋಟ ಕಂಡು ನಾಣಿ ತತ್ತರಿಸಿ ಹೋದ. ಅತ್ತಿತ್ತ ಹೋದ ಹೊದಿ ಕೆಯನ್ನು ಸರಿಪಡಿಸಿ ಸಂಕಟದಿಂದುಸುರಿದ,

"ನಿಮ್ಮಂಥವರಿಗೆ ಹೀಗಾಗಬಾರದಿತ್ತು ಭಟ್ಟರೆ–ಎಲ್ಲ ನನ್ನಿಂದ ಆದದ್ದು. ಆ ಚಿಂತೆ ನನ್ನನ್ನು ಹುಳುವಿನಂತೆ ಕೊರೆಯುತ್ತಿದೆ. ಆ ಪಾಪವನ್ನು ಹೇಗೆ ಕಳೆ ಯಲಿ ಹೇಳಿ !"

"ಮತ್ತೊಬ್ಬರ ಪಾಪವನ್ನು ತಮ್ಮ ಮೈಮೇಲೆ ಹಾಕಿಕೊಂಡು ವ್ಯಥೆ ಪಡುವುದು ಸದ್ಗುಣಿಗಳ ಲಕ್ಷಣ. ಅದರಿಂದ ನೀನು ಹೊರತಾಗಲಾರೆ. ವ್ಯಥೆ ಪಡಬೇಡ; ನನ್ನ ಅಪಘಾತಕ್ಕೆ ನೀನು ಕಿಂಚಿತ್ತೂ ಕಾರಣನಲ್ಲ."

"ಕಾಲು ಕತ್ತರಿಸುವರಂತೆ—ಸೂರಪ್ಪ ಹೇಳಿದರು; ನಿಜವೆ ?"

"ಹೌದು, ಬಲಗಾಲಿನ ಪಾದ ಪೂರ್ತಿ ಕತ್ತರಿಸುವರು. ನಾಡಿದ್ದು ಬುಧ ವಾರ ಆಪರೇಷನ್ನಿನ ದಿನ."

"ಈ ದುಃಖವನ್ನು ಸಾಯುವ ವರೆಗೂ ಮರೆಯಲಾರೆ. ನಮಗೆ ಇಷ್ಟು ವೇದನೆಯಾಗಿರುವಾಗ ವಿಶಾಲಾಕ್ಷಮ್ಮ ಹೇಗೆ ತಾನೆ ಸಹಿಸಿಯಾರು ?"

"ಯಾರೇನು ಮಾಡುವುದಪ್ಪ—ಎಲ್ಲ ಪ್ರಾರಬ್ಧ ಕರ್ಮ. ಕಾಲು ಮುರಿದುಕೊಂಡು ಕೆಲಸಕ್ಕೆ ಬಾರದೆ ಉಂಡಾಡಿಯಂತೆ ಬದುಕಿರುವುದು ಹಣೆ ಯಲ್ಲಿ ಬರೆದಿರುವಾಗ ಯಾರೇನು ಮಾಡಲೂ ಸಾಧ್ಯವಿಲ್ಲ, ಸಹಿಸಲೆ ಬೇಕು. ಎಲ್ಲ ಸರಿ, ನೀನ್ಯಾಕಿಷ್ಟು ತಡಮಾಡಿದೆ ಬರಲು ? ಮೊನ್ನೆಯಿಂದ ನಿನ್ನನ್ನು

ಕಾದು ಕಾದು ಕಣ್ಣು ಸುಸ್ತಾಗಿ ಹೋಯಿತು."

"ಏನು ಮಾಡಲಿ ಹೇಳಿ; ಇದೇ ಸಮಯದಲ್ಲಿ ನನಗೂ ಕೆಲಸ ಬೀಳಬೇಕೆ? ಮದ್ರಾಸಿನಿಂದ ಮೊನ್ನೆಯೆ ಬರಬೇಕಿತ್ತು. ಅಲಹಾಬಾದಿನಿಂದ ಹೊಸ ಜವಳಿ ಬರುವುದೆಂದು ತಿಳಿದುಬಂದುದರಿಂದ ಒಂದು ದಿನ ತಡವಾಯಿತು. ನಾನು ಬಂದದ್ದೆ ನೆನ್ನೆ ರಾತ್ರಿ. ಬೆಳಿಗ್ಗೆ ಸೂರಪ್ಪ ಬಂದಿದ್ದರು. ಅವರಿಂದೆಲ್ಲ ವಿಷಯ ತಿಳಿದು ಊಟ ಸಹಿತ ಮಾಡದೆ ಹಾಗೆ ಹೊರಟೆ. ಓಹ್ಹೊ! ನಿಮಗೊಂದು ಸಂತೋಷದ ಸುದ್ದಿ ತಿಳಿಸಲು ಮರೆತಿದ್ದೆ" ಎಂದು ಸೀತಾರಾಮುವಿನ ವಿಷಯವನ್ನು ಕೂಲಂಕಷವಾಗಿ ತಿಳಿಸಿ, ಹೇಳಿದ "ಇನ್ನು ಸ್ವಲ್ಪ ದಿನ ಅವನು ಈ ಊರಿನಲ್ಲಿದ್ದಿದ್ದರೆ ಮನೆ ಸುಡಿಸಿಕೊಳ್ಳುವುದಿಷ್ಟೆ ಅಲ್ಲ, ತಲೆ ಕೂಡ ಒಡೆಸಿಕೊಳ್ಳುತ್ತಿದ್ದ. ಮೋಸ ಮಾಡುವುದಕ್ಕೂ ಮಿತಿ ಬೇಡವೆ? ಇನ್ನಾದರೂ ಗಂಡಾಂತರ ತಪ್ಪಿದ್ದಲ್ಲ. ಹೀಗೆ ಮಾಡುತ್ತಿದ್ದರೆ ಒಂದು ದಿನ ಯಾರಾದರೂ ಹಿಡಿಸಿ ಹಾಕುವರು"

"ಹಿಡಿಸಿ ಹಾಕಲಿ ಬಿಡು. ಅಂಥವರನ್ನು ಹಾಗೆ ಬಿಡುವುದೂ ತಪ್ಪು. ಸದ್ಯ ಪೀಡೆ ತೊಲಗಿದಂತೆ ತೊಲಗಿದ. ಗೋಪಿಯನ್ನಿನ್ನು ಹಣ್ಣು ಮಾಡಬಹುದು" ಎಂದು ಆ ಯಾತನೆಯಲ್ಲೂ ಸಮಾಧಾನ ತಂದುಕೊಂಡು ಮಾತು ಮುಂದುವರಿಸಿದರು "ಶಾಂತಳನ್ನು ಹೋಗಿ ನೋಡಿಕೊಂಡು ಬಂದೆಯಾ?"

"ಇಲ್ಲ."

"ಹೋಗಿ ನೋಡಿಕೊಂಡು ಬಾ. ಅವನಂತೂ ಹೋಗುವುದಿಲ್ಲ. ನಾನೂ ಆಸ್ಪತ್ರೆಯಲ್ಲಿ ಬಿದ್ದಿದ್ದೇನೆ. ನೀನಾದರೂ ಆಗಾಗ್ಗೆ ಹೋಗಿ ವಿಚಾರಿಸದಿದ್ದರೆ ನೋಡಿದವರೇನನ್ನುವರು! ಈ ಸಮಯದಲ್ಲಿ ಹಾಗೆಲ್ಲ ಮಾಡುವುದು ಸರಿಯಲ್ಲ."

"ಅದೊಂದನ್ನುಳಿದು ಬೇರೆ ಏನು ಹೇಳಿದರೂ ಮಾಡಲು ಸಿದ್ಧನಿರುವೆನು ಭಟ್ಟರೆ. ಅಣ್ಣನೊಪ್ಪಿಗೆಯಿಲ್ಲದೆ ಅವಳಿದ್ದಲ್ಲಿಗೆ ಹೆಜ್ಜೆ ಕೂಡ ಇಡುವುದಿಲ್ಲ. ಆ ಪವಿತ್ರಾತ್ಮಕ್ಕೆ ಇಷ್ಟು ನೋವುಂಟು ಮಾಡಿದುದೆ ಸಾಕು; ಇನ್ನು ಮರೆತೂ ನೋವುಂಟು ಮಾಡುವುದಿಲ್ಲ. ಅವಳನ್ನು ಕಾಣುವ ಪುಣ್ಯ ನನಗಿದ್ದರೆ, ಅಣ್ಣ ತಾನಾಗಿ ಬಂದು ನನ್ನನ್ನು ಕರೆದುಕೊಂಡು ಹೋಗುವನು. ಇಷ್ಟಕ್ಕೂ ನನ್ನ ಪರವಾಗಿ ಅಮ್ಮನೆ ಇರುವಳಲ್ಲ, ಹೇಳಿದ ಸೇವೆ ಮಾಡಲು, ಇನ್ನೇನು!"

ನಾಣಿಯ ಬಗ್ಗೆ ಭಟ್ಟರಲ್ಲಿ ತುಂಬಾ ಗೌರವ ಮೂಡಿತು. ಕಣ್ಣಲ್ಲಿ ಪ್ರೀತಿ ತುಂಬಿ, ಧ್ವನಿಯಲ್ಲಿ ಮಾಧುರ್ಯ ತುಂಬಿ ಹೇಳಿವರು.

"ನಿನ್ನ ಸಹವಾಸ ನನ್ನ ಯಾತನೆಯನ್ನೆಲ್ಲ ಹೀರಿಬಿಡುತ್ತಿದೆ. ನಿನ್ನ ಒಂದೊಂದು ಮಾತೂ ಮನುಷ್ಯತ್ವದ ಪರಿಚಯವನ್ನುಂಟು ಮಾಡಿ ಹೆಮ್ಮೆಯ ಸ್ಫುರಳಿಸುತ್ತದೆ. ಲಚ್ಚಪ್ಪ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದರೊ! ಅವರ ಪಡಿಯಚ್ಚೆ ನೀನು. ನಿನ್ನ ಒಂದೊಂದು ನಡವಳಿಕೆಯೂ ಅವರ ನೆನಪನ್ನು ತರುತ್ತದೆ. ಈ ಮಾನವೀಯತೆಯನ್ನು ಕಡೆವರೆಗೂ ಜಾಗೃತವಾಗಿರಿಸಿ ಕೊಂಡಿರು. ದೇವರು ಕಲ್ಯಾಣವನ್ನುಂಟು ಮಾಡುವನು. ಹಾ............! ಹಾ............!"

ಮತ್ತೆ ಅದೇ ಕರುಳು ಕತ್ತರಿಸುವ ನರಳಿಕೆ. ಆ ನೋವು ಸುತ್ತಲಿದ್ದವ ರೆಸೆಯಲ್ಲೂ ತುಂಬಿ ಸ್ವಲ್ಪ ಹೊತ್ತು ಆ ವಾತಾವರಣ ಸ್ಮಶಾನಮೌನ ತಾಳಿತು. ಆ ಮೌನ ಅಸಹನೀಯವಾಗಿ, ಮನಸ್ಸನ್ನು ಹದಕ್ಕೆ ತಂದು ಭಟ್ಟರೆ ಮಾತು ಮುಂದುವರಿಸಿದರು.

"ರಂಗಮ್ಮ ನೆನ್ನೆ ಇಲ್ಲಿ ಬಂದಿದ್ದರು. ನಾಳೆ ನಿಮ್ಮಲ್ಲಿಗೇ ಬಂದುಬಿಡುವ ರೆಂದು ಕಾಣುತ್ತೆ. ಮೊನ್ನೆಯಿಂದ ಗೋಪಿಗೂ ಅವರಿಗೂ ಹತ್ತಿದ ಜಗಳ ಹರಿಯುತ್ತಿಲ್ಲವಂತೆ. ಶಾಂತಳ ಬಳಿ ಹೋಗಿಬರುವುದಾದರೆ ತನ್ನ ಮನೆಯಲ್ಲಿರ ಕೂಡದೆಂದು ಅವನಬ್ಬರವಂತೆ. ಈ ಸಮಯದಲ್ಲಿ ಗೋಪಿಯನ್ನಾರೂ ಬಿಟ್ಟಾರು ಶಾಂತಳನ್ನು ಬಿಟ್ಟಾರೆ! ಅದೆಂದಿಗೂ ಆಗಿಹೋಗದ ಮಾತು."

"ಅತ್ತಿಗೆಯ ಔಷಧಪಥ್ಯದ ಬಗ್ಗೆ ಏನು ವ್ಯವಸ್ಥೆ ಮಾಡುವುದು?"

"ಆ ಹೊರೆಯನ್ನು ಸೂರಪ್ಪ ಹೊತ್ತಿದ್ದಾರೆ, ಆ ಬಗ್ಗೆ ನೀನೇನೂ ಚಿಂತಿ ಸುವುದು ಬೇಡ. ವೈದ್ಯರು ತಿಳಿಸಿದ ಪಥ್ಯದ ಕಡೆ ಲಕ್ಷ್ಯವಿರಿಸಿದರೆ ನಾಕು. ಹಾ........! ಹಾ........! ಅಯ್ಯೋ........ ಪರಮಾತ್ಮಾ........!"

ಆ ಬಾರಿ ಮತ್ತೂ ಯಾತನೆ ಪಟ್ಟರು. ಹೊರಳಾಡಿ ದಿಂಬು ಸ್ಥಳ ಬಿಟ್ಟು ಕದಲಿತು. ಹೊದಿಕೆ ಅತ್ತಿತ್ತ ಸರಿಯಿತು. ಹಾಸಿದ ಬಟ್ಟೆ ಸುಕ್ಕು ಸುಕ್ಕಾಯಿತು. ಆ ಸಂಕಟ ಕಂಡು ನಾಣಿಯ ತಲೆ ಗಿರ್ರನೆ ತಿರುಗಿತು. ಕಣ್ಣು ಕತ್ತಲಿಟ್ಟಿತು. ಬೀಳುವಂತಾದ ಶರೀರವನ್ನು ಮಂಚ ಹಿಡಿದು ನಿಲ್ಲಿಸಿ, ಸರಸರ

ಕಿತ್ತಲೆ ಹಣ್ಣನ್ನು ಸುಲಿದು ತೊಳೆ ಬಿಡಿಸಿ ತಿನ್ನಿಸಿ, ಬಿಸಿನೀರಿಗೆ ಸ್ವಲ್ಪ ಗ್ಲೂಕೋಸನ್ನು ಕದರಿ ಕುಡಿಸಿದ ನೋವು ಸಮಾಧಾನಕ್ಕೆ ಬಂದ ನಂತರ ಕೇಳಿದ,

"ನೀವು ಮನೆಗೆ ಬರಲಿನ್ನೂ ಎಷ್ಟು ದಿನವಾಗಬೇಕೊ ?"

"ಸುಮಾರು ಮೂರು ತಿಂಗಳಾದರೂ ಹಿಡಿಯಬಹುದೆಂದು ಹೇಳಿದ್ದಾರೆ ವೈದ್ಯರು. ನೀನಿನ್ನು ಹೊರಡು, ಗಂಟೆಯಾಯಿತು. ನಾನು ಹೇಳಿದ್ದೆಲ್ಲ ನೆನಪಿರಲಿ. ನಾಳೆ ಬರುವೆ ತಾನೆ?"

"ಆಗಲಿ. ನೀವು ಮನೆಗೆ ಬರುವ ವರೆಗೆ ದಿನ ತಪ್ಪದೆ ಬರುವೆನು."

## ೨೧

ಶಾಂತಳನ್ನು ಆಸ್ಪತ್ರೆಗೆ ಸೇರಿಸಿ ಆಗಲೆ ಮೂರು ತಿಂಗಳ ಮೇಲಾಯಿತು. ಆರೋಗ್ಯ ಸ್ವಲ್ಪವೂ ಸುಧಾರಿಸಲಿಲ್ಲ. ಹಡೆದ ಮೇಲಂತೂ ಪ್ರಕೃತಿ ಇನ್ನೂ ಹದಗೆಟ್ಟಿದೆ, ಅವಳನ್ನುಳಿಸಿಕೊಳ್ಳಬೇಕೆಂದು ರಂಗಮ್ಮ ಬಹಳ ಪ್ರಯತ್ನಿಸುತ್ತಿದ್ದಾರೆ. ಗೋಪಿಯ ಕಣ್ಣಿಗೆ ಮಣ್ಣೆರಚಲು ಅವಳ ಖರ್ಚು-ವೆಚ್ಚದ ಬಗ್ಗೆ ಸೂರಪ್ಪನಿಂದ ಸ್ವಲ್ಪ ಹಣ ತೆಗೆದುಕೊಂಡರೂ ಮೇಲಾಗುತ್ತಿದ್ದ ಹೆಚ್ಚಿನ ವೆಚ್ಚವನ್ನೆಲ್ಲ ತಾವೆ ನೋಡಿಕೊಳ್ಳುತ್ತಿದ್ದರು.

ಅವಳಾರೋಗ್ಯ ಸುಧಾರಿಸಬೇಕೆಂಬ ಆತುರ ಹೆಜ್ಜೆಹೆಜ್ಜೆಗೂ ಹೆಚ್ಚುತಿತ್ತು. ಅನುಪಾನದ ಕಡೆ ಹೆಚ್ಚು ನಿಗ ಕೊಡತೊಡಗಿದರು. ಔಷಧ ಪಥ್ಯವನ್ನು ನಿರಾಕರಿಸಿಯಾಳೆಂದು, ಆ ವೇಳೆಗೆ ತಾವು ಹಾಜರಿದ್ದು ಸ್ವಲ್ಪವೂ ವ್ಯತ್ಯಾಸವಾಗದಂತೆ ನೋಡಿಕೊಳ್ಳುತಿದ್ದರು. ಹಣ್ಣು-ಹಂಪಲು ತಿಂದಷ್ಟೂ ಸಾಲದು, ಹಾಲು ಕುಡಿದಷ್ಟೂ ಸಾಲದು. ಮೊಂಡು ಹಠ ಹಿಡಿದರೆ ಗದ್ದರಿಸಿ ತಿನ್ನಿಸುತ್ತಿದ್ದರು.

ಅವರ ನಿಗ ಅಷ್ಟರಲ್ಲಿ ಮಾತ್ರವಲ್ಲ, ಆಹಾರ ತಯಾರಿಕೆಯಲ್ಲಿಯೂ ಇತ್ತು. ಎಷ್ಟೆ ಕಷ್ಟವಾದರೂ ಆ ಹೊಣೆಯನ್ನು ಮತ್ತೊಬ್ಬರಿಗೆ ಬಿಡದೆ ತಾವೆ ನಿರ್ವಹಿಸುತ್ತಿದರು. ಅದಕ್ಕೆ ಕಾರಣ, ಅವರಷ್ಟು ಶ್ರದ್ಧೆಯಿಂದ ಯಾರೂ

ಮಾಡಲಾರರೆಂಬ ಶಂಕೆಯಿರಬಹುದು, ಅಥವಾ ಅವಳಲ್ಲಿ ಅವರಿಗಿದ್ದ ಪ್ರೀತಿಯೂ ಆಗಿರಬಹುದು. ಅದು ಹೇಗೂ ಇರಲಿ, ಅವಳ ಸೇವೆಯನ್ನು ಮಾತ್ರ ಮತ್ತೊಬ್ಬರಿಗೆ ಬಿಡದೆ ತಾವೇ ಮಾಡುತ್ತಿದ್ದರು.

ಆ ಗಡಿಬಿಡಿಯಲ್ಲಿ ಒಮ್ಮೊಮ್ಮೆ ಗರ್ಭಿಣಿಯಾದ ಸರಸುವನ್ನೂ ಲಕ್ಷ್ಯ ಮಾಡುತ್ತಿರಲಿಲ್ಲ. ಆದರಿಂದ ಸರಸುವಿಗೆ ಬೇಸರವಾಗುತ್ತಲೂ ಇರಲಿಲ್ಲ. ರಂಗಮ್ಮನಿಗೆ ಶಾಂತಳಲ್ಲಿ ಆ ಅಪಾರ ಮಮತೆಯುಂಟಾಗಲು, ಅವಳ ತುಂಬಿದ ಗುಣವೆ ಕಾರಣವೆಂದು ಸರಸು ತಿಳಿದಿದ್ದಳು. ಅಲ್ಲದೆ ಸಾವಿನ ಹಾಸಿಗೆಯಲ್ಲಿದ್ದವಳ ಕಡೆ ಹೆಚ್ಚು ನಿಗ ಕೊಡುವುದೆಂದು ತಪ್ಪೆಂದು ಹೇಳುವಷ್ಟು ಮೂಢಳೂ ಆಗಿರಲಿಲ್ಲ. ಒಟ್ಟಿನಲ್ಲಿ ಅವಳು ಶಾಂತಳಷ್ಟು ರಂಗಮ್ಮನ ಮನಸ್ಸಾಕರ್ಷಿಸಿರಲಿಲ್ಲ. ಕೆಲಸ-ಕಾರ್ಯದಲ್ಲಿ, ಗುರುಹಿರಿಯರೊಡನೆ ಸಮಾಧಾನದಿಂದ ನಡೆದುಕೊಳ್ಳುವುದರಲ್ಲಿ, ಅಣಿ-ಅಚ್ಚುಗಟ್ಟಿನಲ್ಲಿ ಎಲ್ಲದರಲ್ಲೂ ಶಾಂತಳಿಗಿಂತ ಒಂದು ತೂಕ ಕಡಿಮೆಯೆಂದೆ ಹೇಳಬಹುದು—ಹಾಗಿದ್ದಳು.

ಸರಸು ಕೆಲಸ-ಕಾರ್ಯವನ್ನು ವೈಗಾಲಸ್ಯವಾಗದಂತೆ, ತನ್ನ ಪಾಲಿಗಿಷ್ಟೆಂದು ವಿಭಾಗ ಮಾಡಿ ಅಷ್ಟೆ ಮಾಡುತಿದ್ದಳು. ಉಳಿದ ಕೆಲಸದ ಕಡೆಗೆ ಗಮನ ಕೂಡ ಹರಿಸುತ್ತಿರಲಿಲ್ಲ. ಹಾಗೆಂದು ಸಮಯದಲ್ಲಿ ಮುಖ ತಿರುಗಿಸುತ್ತಿರಲಿಲ್ಲ. ನಿರ್ವಾಹವಿಲ್ಲದೆ ಮೈಮೇಲೆ ಬಿದ್ದ ಹೆಚ್ಚಿನ ಕೆಲಸವನ್ನು ಉದಾಸೀನವಿಲ್ಲದೆ ಮಾಡುತ್ತಿದ್ದಳು. ಅವಳ ಸ್ವಭಾವವನ್ನರಿತ ರಂಗಮ್ಮ ಪೂರ್ತಿ ಕೆಲಸವನ್ನವಳ ಮೇಲೆ ಬಿಡದೆ, ತಮ್ಮಿಂದ ಸಾಧ್ಯವಿದ್ದಷ್ಟನ್ನು ಮಾಡುತ್ತಲೆ ಬಂದಿದ್ದರು. ಅದರಿಂದವರಿಗೆ ನೋವಾಗಲಿಲ್ಲ. ಸರಸುವಿನಲ್ಲೂ ಒಂದು ಬಗೆಯ ನ್ಯಾಯವಿದ್ದುದರಿಂದ ಬೇಸರಿಸದೆ ಅವಳ ಸ್ವಭಾವಕ್ಕೆ ತಮ್ಮನ್ನು ಸಂತೋಷದಿಂದಲೆ ಹೊಂದಿಸಿಕೊಂಡರು.

ಶಾಂತಳ ರೀತಿಯೆ ಬೇರೆ. ಹೊತ್ತಿಗೆ ಸರಿಯಾಗಿ ಮನೆಗೆಲಸ ಅಚ್ಚುಕಟ್ಟಾಗಿ ಮಾಡಿ ಮುಗಿಯಬೇಕು. ಮಾಡುವ ಸಮಯದಲ್ಲಿ ಮತ್ತೊಬ್ಬರಿಗಾಗಿ ಕಾಯುತ್ತಿರಲಿಲ್ಲ; ಅವರ ಪಾಲಿಗೆಂದು ಕೆಲಸವನ್ನು ಮಿಗಿಸಿಡುತ್ತಿರಲಿಲ್ಲ. ಕಣ್ಣಿಗೆ ಕಂಡದ್ದನ್ನು ಕೈಗೆ ಸಿಕ್ಕಿದ್ದನ್ನು ಮಾಡಿ ಮುಗಿಸುತ್ತಿದ್ದಳು. ಅತ್ತೆಯಿಂದಂತೂ ಒಂದು ಲೋಟ ಕೂಡ ತೊಳೆಸುತ್ತಿರಲಿಲ್ಲ. ಹೊತ್ತುಹೊತ್ತಿಗೆ ಅವಳು ಪ್ರೀತಿಯಿಂದ ಮಾಡಿಕೊಟ್ಟ ಊಟ-ಉಪಹಾರ ಮುಗಿಸಿ ಉಳಿದ ಹೊತ್ತನ್ನು

ಸದಾಚಾರ-ಸದ್ವಿನಿಯೋಗದಲ್ಲಿ ಕಳೆಯುತ್ತಿದ್ದರು ರಂಗಮ್ಮ. ಅವಳ ಸಂಗಡ ಇದ್ದಷ್ಟು ದಿನ ಹೊತ್ತು ಹೋದದ್ದೆ ಗೊತ್ತಾಗುತ್ತಿರಲಿಲ್ಲ. ತಮ್ಮನ್ನು ಕಣ್ಣಲ್ಲಿ ಮುಚ್ಚಿಟ್ಟು ಸೇವೆ ಸಲ್ಲಿಸಿದವಳ ಆ ಮಮತೆ-ಶ್ರದ್ಧೆ-ಭಕ್ತಿಯ ನೆನಪು ರಂಗಮ್ಮ ನಲ್ಲಿ ಜಾಗೃತವಾಗಿದ್ದು, ಅವರಿಂದ ಸೊಸೆಯ ಸೇವೆಯನ್ನು ತೃಪ್ತಿಕರವಾಗಿ ಮಾಡಿಸುತ್ತಿತ್ತು. ಆ ನೆನಪಿನೊಡನೆ, ಅವಳು ತಮ್ಮ ಮನೆಗೆ ಬಂದು ಏನೂ ಸುಖವನ್ನೂ ಕಾಣಲಿಲ್ಲವಲ್ಲಾ ಎನ್ನುವ ಕೊರಗೂ ಸೇರಿ ಹೆಚ್ಚಿನ ನಿಗವಿಡುವಂತೆ ಮಾಡಿತ್ತು.

ರಂಗಮ್ಮ ಹಗಲೂ ರಾತ್ರಿ ಅನ್ನ ನಿದ್ರೆಯನ್ನು ತೊರೆದು ಸೊಸೆ ಮೊಮ್ಮ ಗುವಿನ ಸೇವೆ ಮಾಡುತ್ತಿದ್ದರು. ಅವರಿಗೆ ಶಾಂತಳನ್ನು ನೋಡಿಕೊಳ್ಳುವಷ್ಟು ಕಷ್ಟವಾಗುತ್ತಿರಲಿಲ್ಲ; ತಾಯಿಯ ಎದೆ ಹಾಲಿಲ್ಲದ ಆ ಎಳೆಗೂಸನ್ನು ಕಾಪಾ ಡುವುದು ತುಂಬಾ ಕಷ್ಟವಾಗುತಿತ್ತು. ಸಾಲವಿದ್ದಕ್ಕೆ ವೈಯಲ್ಲಿ ನಿತ್ರಾಣ ಬೇರೆ. ಅದು ಗರ್ಭದಲ್ಲಿದ್ದಾಗ, ತಾಯಿ ಸಾಕಷ್ಟು ಆಹಾರ ತಿನ್ನದೆ, ಮನ ಸ್ಸನ್ನು ಚಿಂತೆಯ ಉರಿಯಲ್ಲಿ ಬಾಡಿಸಿ ದೇಹವನ್ನು ಒಣಗಿಸಿದ್ದರಿಂದಲೊ ಏನೊ ಮಗು ಸಾಕಷ್ಟು ಬೆಳೆದಿರಲಿಲ್ಲ. ಆದಾದರೂ ಹೋಗಲಿ, ಪುಷ್ಟಿಕರವಾದ ಆಹಾರವಿತ್ತು ಸಾಕಿಕೊಳ್ಳಬಹುದೆಂದರೆ, ರಚ್ಚೆಗೇನು ಮಾಡುವುದು? ಹಗಲಿ ರುಳೂ ಬಿಚ್ಚಿದ ಬಾಯಿ ಮುಚ್ಚುತ್ತಿರಲಿಲ್ಲ. ರಂಗಮ್ಮನಿಗೆ ವಿಶ್ರಾಂತಿಯಿಲ್ಲದ ಕಸರತ್ತು ಮಾಡಿಸುತಿತ್ತು ಮಗು.

ಸರಸು ಶಾಲೆಗೆ ಹೋಗುವವರೆಗೆ ಅತ್ತೆಯ ಶ್ರಮದಲ್ಲಿ ಭಾಗ ವಹಿಸಿ ತನ್ನಿಂದಾದಷ್ಟು ನೆರವು ನೀಡುತ್ತಿದ್ದಳು. ಅವಳು ಹೋದ ಮೇಲಂತೂ ಅವ ರಿಗೆ ಕಣ್ಣು ಕಣ್ಣು ಬಿಡುವಂತಾಯಿತು. ಎರಡೂ ಕಡೆ ನಿಗ ಕೊಡುವುದು ತುಂಬಾ ಕಷ್ಟವಾಗುತಿತ್ತು. ನಾಣಿಯ ಕೈಲಿ ಶಕುಂತಳೆಯ ಗಂಡನಿಗೆ ಕಾಗದ ಬರೆಸಿ, ಕೆಲವು ದಿನದ ಮಟ್ಟಿಗೆ ಅವಳನ್ನು ಕರೆಸಿಟ್ಟುಕೊಂಡರು. ಅವಳಿಗೂ ಕೈಗೂಸಿದ್ದುದರಿಂದ ಬೇಕಾಗುವಷ್ಟು ಸಹಾಯ ಸಿಗಲಿಲ್ಲ. ರಂಗಮ್ಮ-ನಾಣಿ-ಶಕುಂತಳೆ ಮೂವರಿಗೂ ಮೈ ತುರಿಸಿಕೊಳ್ಳಲು ಬಿಡುವಿಲ್ಲದಷ್ಟು ದುಡಿತ ವಾಯಿತು.

ಅಲ್ಲಿ ಇಲ್ಲಿ ಹೋಗಿ ಆ ಮಾತು ವಿಶಾಲಾಕ್ಷಮ್ಮನ ಕಿವಿ ಮುಟ್ಟಿತು. ಅವರ ಕಷ್ಟಕ್ಕೆ ಮರುಗಿ ತಾವೂ ನೆರವಾದರು. ಗಂಡನಿಗಾದ ನೋವನ್ನು

ಮರೆತು ಅವರ ಸೇವೆಯೊಂದಿಗೆ ಶಾಂತಳ ಸೇವೆಯನ್ನೂ ಕೈಲಾದಷ್ಟು ಮಾಡು ತ್ತಿದ್ದರು. ಅವರ ಆ ಹಿರಿಯ ಗುಣಕ್ಕೆ ಭಟ್ಟರೊಬ್ಬರೆ ಕಾರಣರಾಗಿರಲಿಲ್ಲ; ಶಾಂತಳ ಕರುಣಾಜನಕ ಸ್ಥಿತಿಯೂ ಅವರ ಮನಸ್ಸನ್ನು ಕರಗಿಸಿ ಸೇವೆ ತೆಗೆದು ಕೊಳ್ಳುತ್ತಿತ್ತು.

ಮೊದಲು ರಂಗಮ್ಮನಿಗೆ ಅವರಿಂದ ಕೆಲಸ ತೆಗೆದುಕೊಳ್ಳಲು ದಾಕ್ಷಿಣ್ಯ ವಾಗುತ್ತಿತ್ತು. ತಾವಾಗಿಯೆ ಸಹಾಯ ನೀಡಲು ಬಂದವರನ್ನು ಬೇಡವೆನ್ನದೆ ಸಣ್ಣ ಪುಟ್ಟ ಕೆಲಸ ಮಾಡಿಸುತ್ತಿದ್ದರು. ಕ್ರಮೇಣ ಅವರ ಒತ್ತಾಯದಂತೆ ಕೈಗೂಸಿನ ಹೊಣೆಯನ್ನವರಿಗೇ ವಹಿಸಿದರು. ವಿಶಾಲಾಕ್ಷಮ್ಮ ಮಗುವನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಬಹಳ ಮಮತೆಯಿಂದ ಸಾಕುತ್ತಿದ್ದರು. ರಂಗಮ್ಮನಿಗೆ ಅರ್ಧ ಹೊರೆ ಕಳೆದಂತಾಯಿತು. ಅಂದಿನಿಂದ ಉಳಿದ ಸಮಯ ವನ್ನು ಶಾಂತಳ ಸೇವೆಯಲ್ಲಿಯೆ ಕಳೆಯತೊಡಗಿದರು.

ಅವರು ಪಡುತ್ತಿದ್ದ ಶ್ರಮ, ತೋರಿಸುತ್ತಿದ್ದ ಪ್ರೀತಿ ಶಾಂತಳಲ್ಲಿ ಅವರ ಬಗ್ಗೆ ಅಪಾರ ಗೌರವ ಮೂಡಿಸಿತು. ಎಳೆ ಮಗುವಿಗಾದರಿಸುವಂತೆ ಆದರಿಸು ತ್ತಿದ್ದರು. ಆಹಾರ ತಿನ್ನಿಸುವುದು, ತಲೆ ಬಾಚುವುದು, ಮುಖ ಮೈ ಸೆಟ್ಟಗಿಡು ವುದು—ಈ ಎಲ್ಲ ಸೇವೆಯಲ್ಲೂ ಅವರ ತುಂಬು ತಾಯ್ತನವೆದ್ದು ಕಾಣುತ್ತಿತ್ತು. ತನ್ನತ್ತೆ-ತಂದೆ-ತಾಯಿಯ ಋಣ ತೀರಿಸಲಾದರೂ ಶಾಂತಳಿಗೆ ಬದುಕಬೇಕೆನ್ನಿ ಸಿತು. ಆ ಹಂಬಲು ಬೆಳೆದು ಬಂದಂತೆ ಸಾವಿನ ಭೀತಿಯೂ ಬೆನ್ನಟ್ಟಿ ಬಂತು ಅಕ್ಕಪಕ್ಕದವರಿಂದ ತಾನು ಕ್ಷಯರೋಗಿಯೆನ್ನುವುದನ್ನು ತಿಳಿದು ಗಾಬರಿಯಾ ದಳು. ಆ ರೋಗದ ಪರಿಣಾಮವನ್ನು ಅವರಿವರಿಂದ ಕೇಳಿ ತಿಳಿದಿದ್ದವಳಿಗೆ ಬದುಕಿನ ಬಗ್ಗೆ ಇದ್ದ ಭರವಸೆಯೂ ಕರಗಿ ಹೋಯಿತು. ಸಾಕ್ಷಿರೂಪವಾಗಿ ಜೀವ ದೇಹವೆರಡೂ ಸಾವು-ಬದುಕಿನ ನಡುವೆ ತುಯ್ಯಲಾಡುತ್ತಿದೆ ಬಾಳ ಸಮಸ್ಯೆ ಒಂದು ಘಟ್ಟಕ್ಕೆ ಮುಟ್ಟಿತೆನ್ನುವಾಗ ಸಾವು ಬಾಯ್ದೆರೆದು ನಿಂತಿದೆ. ಇದು ಹೀಗೇ ಆಗಬೇಕೆಂದಿರುವಾಗ ಯಾರ ಪ್ರಯತ್ನ ಏನೂ ನಡೆಯಲಾರದು. ತನ್ನ ಬದುಕಿಗೆ ಹೊಸ ಚೇತನ ತುಂಬಬೇಕೆಂದು ತಂದೆ ಎಷ್ಟೋ ಆಸೆ ಪಟ್ಟಿ ದ್ದರು. ತನ್ನತ್ತೆ, ಮೈದುನರು ಕೂಡ ಬಾಳಿಗೊಂದು ರೂಪು ಕೊಡಲು ಪ್ರಯ ತ್ನಿಸುತ್ತಿದ್ದಾರೆ. ಹಿರಿಯರೆಲ್ಲ ಒಟ್ಟಾಗಿ ಕಲೆತು ತನ್ನನ್ನೊಂದು ರೀತಿ ಮಾಡ ಬೇಕೆಂದಿರುವಾಗ ಬದುಕಿದ್ದರೆ ಚೆನ್ನಾಗಿತ್ತು. ಕಡೆಗೂ ಏನಾಗುವುದೋ

ಏನೊ. ಸಾವು–ಬದುಕು ಹೇಳಿ ಕೇಳಿ ಬರುವುದಿಲ್ಲ. ಗಳಿಗೆಯೋ ಕ್ಷಣವೊ ಯಾರಿಗೆ ಗೊತ್ತು !

ಆ ಭಾವನೆ ಬಂದಾಗ ಶಾಂತ ಬೆಚ್ಚಿಬಿದ್ದಳು. ಜೀವನವೆಲ್ಲ ಚಿತ್ರ ಪಟದಂತೆ ಒಮ್ಮೆ ಕಣ್ಣಮುಂದೆ ಹಾದು ಹೋಯಿತು. ಬುದ್ಧಿ ತಿಳಿಯುವುದಕ್ಕೆ ಮುಂಚೆ ಮಾಡಿದ ಪಾಪಕೃತ್ಯ ಅವಳಿಗೆ ಗೊತ್ತಿಲ್ಲ. ಬುದ್ಧಿ ತಿಳಿದಂದು ನಡೆದ ಕೆಲವು ಘಟನೆಗಳು ಕಣ್ಣಮುಂದೆ ಕಟ್ಟಿ ನಿಂತುವು.

ತನಗೆ ಎಂಟು ವರ್ಷ ತುಂಬಿ ಒಂಬತ್ತನೆ ವರ್ಷ ನಡೆಯುತ್ತಿತ್ತು. ಅಂದು ಸುಂದರಿ ಎಂದಿನಂತೆ ತನ್ನೊಡನೆ ಆಟವಾಡಲು ಬಂದಳು. ತನಗೆ ಜೂಜಾಟವೆಂದರೆ ತುಂಬಾ ಆನಂದ. ಇಬ್ಬರಿಗೂ ಅದೇ ಒಪ್ಪಿಗೆಯಾಯಿತು. ಆಟ ಪ್ರಾರಂಭವಾಯಿತು. ಓಟದಲ್ಲಿ ತನಗಿಂತ ಸುಂದರಿ ಚುರುಕು. ಕೈಲಿ ಹರಿಯದಿದ್ದರೂ ಎಲ್ಲಾ ಆಟದಲ್ಲೂ ತಾನೆ ಮುಂದು ಬರಬೇಕೆಂಬ ಕೆಟ್ಟ ಹಠ ವಿತ್ತು. ಅದಕ್ಕೆ ಸರಿಯಾಗಿ ತಂದೆತಾಯಿಯ ಅತಿಯಾದ ಮುದ್ದು ಆ ಹಠಕ್ಕೆ ಹೆಚ್ಚು ಪ್ರೋತ್ಸಾಹ ಕೊಡುತಿತ್ತು.

ಸುಂದರಿ ಬಾಲ್ಯದಿಂದಲೂ ಬಹಳ ಕಷ್ಟದಲ್ಲಿ ಬೆಳೆದ ಹುಡುಗಿ. ಬಡ ತನದ ಜತೆಗೆ ತಂದೆಯ ಸಿಟ್ಟಿನ ಕಹಿಯುಂಡು, ನಿಂತರೆ ಕೂತರೆ ಬೆಚ್ಚುತ್ತಿದ್ದಳು. ವಯಸ್ಸಿನಲ್ಲಿ ತನಗಿಂತ ಎರಡು ವರ್ಷ ಹಿರಿದಾದರೂ ತಾನು ಹೇಳಿದ ಮಾತಿಗೆ ಎರಡಾಡುತ್ತಿರಲಿಲ್ಲ; ಹಾಕಿದ ಗೆರೆ ದಾಟುತ್ತಿರಲಿಲ್ಲ. ಒಂದು ಸಮಯ ತನ್ನಿಂದ ನೋವುಂಟಾದರೂ ಬಾಯಿ ಮುಚ್ಚಿ ಅನುಭವಿಸುತಿದ್ದಳು. ಯಾರಿಗೂ ತಿಳಿಸುತ್ತಿರಲಿಲ್ಲ, ತನ್ನಿಂದ ದೂರವಾಗುತ್ತಲೂ ಇರಲಿಲ್ಲ.

ಅಂದೂ ಹಾಗೆಯೆ ಆಯಿತು. ಜೂಜಾಟ ಬಹಳ ಸ್ವಾರಸ್ಯವಾಗಿತ್ತು. ಎಷ್ಟೇ ಪ್ರಯತ್ನ ಮಾಡಿದರೂ ಸುಂದರಿಯನ್ನು ಸೋಲಿಸಲಾಗಲಿಲ್ಲ. ಆ ದಿನ ಏನಾದರೂ ಮಾಡಿ ಸೋಲಿಸಲೆಬೇಕೆಂದು, ತನ್ನಭಿಮಾನ ಕೂಗಿ ಹೇಳುತಿತ್ತು. ನೇರವಾಗಿ ಹಿಡಿಯಲು ತನ್ನಿಂದ ಸಾಧ್ಯವಿಲ್ಲ. ಮೋಸ ಮಾಡಿಯಾದರೂ ಹಿಡಿಯಬೇಕೆಂದು ಹಂಚಿಕೆ ಹುಡುಕಿದಳು. ದಾರಿ ಹೊಳೆದಾಗ ಅವಳಿಗಾದ ಆನಂದ ಅಷ್ಟಿಷ್ಟಲ್ಲ.

ಆ ಬಾರಿ ಸುಂದರಿ ಮನೆಗೆ ಸುತ್ತು ಬರುತ್ತಿರುವಾಗ ತಾನು ಅವಳನ್ನಟ್ಟಿ ಕೊಂಡು ಹೋಗದೆ, ಮುಂಬಾಗಿಲ ಹೊಸ್ತಿಲ ಬಳಿ ದಾಟ ಬರುವ ಜಾಗದಲ್ಲಿ–

ಸ್ವಲ್ಪ ಸಾಸಿವೆ ಕಾಳು ತಂದು ಹರಡಿ, ಅಲ್ಲೆ ಬಾಗಿಲ ಹಿಂದೆ ಅವಿತು ನಿಂತಳು. ಸುಂದರಿ ತಾನು ಅಟ್ಟಿಕೊಂಡು ಬರುತ್ತಿರುವೆನೆಂದೆ ಭಾವಿಸಿ ನಾಗಾಲೋಟದಿಂದ ಬಂದು ಸಾಸಿವೆಯ ಮೇಲೆ ಕಾಲಿರಿಸಿ ಧೊಪ್ಪನೆ ಜಾರಿ ಬಿದ್ದಳು. ಬಿದ್ದ ಹೊಡೆತಕ್ಕೆ ಮೈ ಕೈ ಜಜ್ಜಿ ಹೋಯಿತು. ರಾಗ ಪ್ರಾರಂಭವಾಯಿತು. ಮೊದಲು ಕುಸುಕುಸು ಅಳುತ್ತಿದ್ದವಳು, ತಾನು ಜಡೆ ಹಿಡಿದು ಜಗ್ಗಿಸಿದ ಮೇಲೆ ಜೋರು ಮಾಡಿದಳು. ಬೊಬ್ಬೆಯಿಂದ ಮನೆ ಬಿದ್ದು ಹೋಗುವಂತಾಯಿತು. ಕಿರಿಚಾಟ ಕೇಳಿ ಒಳಗೆ ಕೆಲಸದಲ್ಲಿದ್ದ ತನ್ನ ತಾಯಿ ಓಡಿಬಂದರು. ವಿಷಯ ತಿಳಿದು ತನ್ನನ್ನು ಗದ್ದರಿಸಿ, ಸುಂದರಿಯ ಮೈ ಕೈಗೆ ತೈಲ ತಿಕ್ಕಿ, ತಿಂಡಿಯಿಂದ ಬಾಯಿ ಸಿಹಿ ಮಾಡಿ ಸಮಾಧಾನ ಮಾಡಿದರು. ಆ ನೋಟ ತನ್ನ ಮೇಲೆ ಯಾವ ಪರಿಣಾಮವುಂಟು ಮಾಡಿತೊ, ಅಂದಿನಿಂದ ತಾನು ಸೋತರೂ ಸರಿಯೆ, ಸುಂದರಿಗೆ ಮಾತ್ರ ನೋಯಿಸುತ್ತಿರಲಿಲ್ಲ.

ಸುಂದರಿ ಲಗ್ನವಾದ ಹೊಸದರಲ್ಲಿ ತನ್ನ ಒಡವೆವಸ್ತ್ರವನ್ನೆಲ್ಲ ತೋರಿಸಬೇಕೆಂದು ಆಶೆಪಟ್ಟಳು. ಅವಳ ಕೋರಿಕೆಯಂತೆ ಅವುಗಳನ್ನೆಲ್ಲ ನೋಡಿ ಬರಲೆಂದು ಅವಳ ಮನೆಗೊಮ್ಮೆ ಹೋದಳು. ಅವು ಅಂಥ ಭಾರಿಯೇನಲ್ಲವಾದರೂ ಚೊಕ್ಕವಿದ್ದು, ನಾಜೂಕಾಗಿದ್ದು ನೋಡುವವರ ಮನಸ್ಸನ್ನಾಕರ್ಷಿಸುತ್ತಿದ್ದವು. ಅವುಗಳಲ್ಲಿ ಜಡೆ ಕುಚ್ಚು ಚಿನ್ನದ ತೆಳುವಾದ ಹೊದಿಕೆ ಹೊದ್ದು, ಸುತ್ತಲೂ ಗೆಜ್ಜೆ ಹೊಂದಿ ನೋಡಲು ಬಲು ಅಂದವಾಗಿತ್ತು. ಅದು ತನ್ನ ಮನಸ್ಸನ್ನು ತುಂಬಾ ಸೆಳೆಯಿತು. ನೋಡಿ ನಾಲ್ಕಾರು ದಿನಗಳಾದರೂ ಆ ರೂಪ ಕಣ್ಣಿಂದ ಮರೆಯಾಗಲಿಲ್ಲ. ತನಗೂ ಅಂಥದೊಂದು ಕುಚ್ಚು ಬೇಕೆಂಬಾಸೆಯುಂಟಾಯಿತು. ಆ ಹಂಬಲವನ್ನು ತಾಯಿಯಲ್ಲಿ ತೋಡಿಕೊಂಡಳು. ಉಳಿದ ವೇಳೆಯಲ್ಲಾಗಿದ್ದರೆ ಬಾಯಿ ಬಿಚ್ಚುವುದೆ ತಡ, ಬಂದು ಮೈಯನ್ನಲಂಕರಿಸುತಿತ್ತು. ಆಗ ಅಕ್ಕ ಕಾಲವಾದ ಸಮಯ. ದುಃಖದಲ್ಲಿದ್ದ ತಂದೆ ತಾಯಿಂದ ತನ್ನಿಚ್ಛೆ ಪೂರ್ಣವಾಗಲಿಲ್ಲ. ಆದರೆ ಮನಸ್ಸಿನಲ್ಲಿದ್ದ ಆಸೆ ಗಳಿಗೆ ಗಳಿಗೆಗೂ ಭೂತಾಕಾರದಂತೆ ಬೆಳೆದು ತನ್ನ ತಲೆ ತಿನ್ನತೊಡಗಿತು. ಕಡೆಗೆ ಅದರ ಹಿಂಸೆ ತಡೆಯದೆ, ಅಡಗಿಸಲೂ ಆಗದೆ ಒಂದುದಿನ ಸುಂದರಿಯ ಮನೆಗೆ ಹೋಗಿ, ಅವಳ ಕಣ್ಣು ತಪ್ಪಿಸಿ ಆ ಕುಚ್ಚನ್ನು ಹಾರಿಸಿಕೊಂಡು ಬಂದು ತನ್ನ ಪೆಟ್ಟಿಗೆಯಲ್ಲಿರಿಸಿಕೊಂಡಳು. ಉಪಯೋಗಿಸಲು ತಂದೆ–ತಾಯಿಯ ಹೆದರಿಕೆ,

ಹಿಂದಿರುಗಿಸಲು ಅಪಮಾನದ ಭೀತಿ. ಹಾಗಾಗಿ ಅದನ್ನು ತನ್ನಲ್ಲಿ ಬಹಳ ದಿವಸವಿರಿಸಿಕೊಳ್ಳಲೂ ಧೈರ್ಯವಾಗದೆ, ಕಡೆಗೊಂದು ದಿನ ಸುಂದರಿಯ ಮನೆಯಲ್ಲಿದ್ದ ಭಾವಿಗೆ ತೆಗೆದುಕೊಂಡು ಹೋಗಿ ಎಸೆದಳು.

ಆ ಕುಚ್ಚು ಕಳೆದಂದಿನಿಂದ ಸುಂದರಿ ಪಟ್ಟ ವ್ಯಸನಕ್ಕೆಲ್ಲೆಯಿರಲಿಲ್ಲ. ಕಡೆಗೂ ಅದು ಅವಳ ಕೈಗೆ ಸಿಗದೆ, ಯಾರೆಂದು ತಿಳಿಯದೆ ಬರಿಯ ಊಹೆ-ವ್ಯಸನವಲ್ಲೆ ಮುಕ್ತಾಯವಾಯಿತು. ಆ ಘಟನೆ ನಡೆದ ಸುಮಾರು ದಿನದವರೆಗೆ ತನ್ನ ಮನಸ್ಸಿನಲ್ಲಿ ಕಣ್ಣೀರಿಡುತ್ತಿದ್ದ ಸುಂದರಿಯ ದೈನ್ಯ ಚಿತ್ರ ಅಚ್ಚೊತ್ತಿದಂತಿತ್ತು. ಆ ನೋಟ ಕಂಡಾಗಲೆಲ್ಲ ತನ್ನೆದೆ ನಡುಗುತಿತ್ತು. ತಿಳಿಯದೆ ಮಾಡಿದ ತನ್ನಪರಾಧಕ್ಕೆ ದೇವರಲ್ಲಿ ಕ್ಷಮೆ ಬೇಡಿ, ಮುಂದೆಂದೂ ಅಂಥಾ ನೀಚ ಕೃತ್ಯಗಳಿಗೆ ಕೈಹಾಕದಂತೆ ಮನಸ್ಸನ್ನು ತಿದ್ದಿದಳು.

ಸರಸು ಲಗ್ನವಾಗಿ ಮನೆಗೆ ಬಂದಾಗ ತನ್ನ ಒಳ್ಳೆತನ ಸ್ವಲ್ಪ ಕುಸಿದು ಬಿತ್ತು. ತನ್ನತ್ತೆ ಲೋಕರೂಢಿಯಂತೆ ಹೊಸದಾಗಿ ಬಂದ ಚಿಕ್ಕ ಸೊಸೆಯ ಕಡೆ ಹೆಚ್ಚು ಲಿಗವಿರಿಸಿದರು. ಊಟ-ತಿಂಡಿ, ನೋಟ-ನುಡಿಯಲ್ಲಿ ಅವರು ತೋರಿಸುತ್ತಿದ್ದ ಪ್ರೀತಿ, ಮಾಡುತ್ತಿದ್ದ ಉಪಚಾರ ತನ್ನ ಕಣ್ಣುನ್ನಿರಿಯಿತು. ಹೊಸದಾಗಿ ಮನೆಗೆ ಬಂದ ಹೆಣ್ಣುಮಕ್ಕಳಲ್ಲಿ ಹಾಗೆ ನಡೆದುಕೊಳ್ಳಬೇಕಾದುದು ಸ್ವಾಭಾವಿಕ; ಸಹಜವೂ ಹೌದು, ನ್ಯಾಯವೂ ಆಗಿದೆ. ಆ ಮನೆಗೆ ತಾನು ಲಗ್ನವಾಗಿ ಬಂದಾಗ ತನ್ನತ್ತೆ ತನ್ನಲ್ಲೂ ಅದೇ ಮಮತೆಯಿಂದ ನಡೆದುಕೊಂಡಿದ್ದರು. ಆಗ ತನ್ನ ಮನಸ್ಸಿಗೆ ಅವರ ತುಂಬು ಮಮತೆ ಎದ್ದು ಕಂಡುಬಂದರೂ ಈಗದು ಮರೆತು ಹೋಯಿತು. ಯಾವ ದೌರ್ಬಲ್ಯದ ಕಾರಣವೊ, ತನ್ನಲ್ಲಿ ಈರ್ಷ್ಯೆ ಮೊಳೆಯಿತು. ಅವಿವೇಕಕ್ಕೆ ತುತ್ತಾದ ಮನಸ್ಸಿಗೆ ಅತ್ತೆಯ ಸಮಾನತೆ ಹಿಡಿಸಲಿಲ್ಲ. ತಿರುಗಿ ಬಿದ್ದಳು. ಅವರಿಗೆ ತೊಂದರೆಯಾಗಬಾರದೆಂದು ಪ್ರತಿಯೊಂದು ಕೆಲಸವನ್ನೂ ತಾನೆ ಮಾಡುತ್ತಿದ್ದವಳು ಅಂದು ಏನೂ ಮಾಡಲಿಲ್ಲ. ಹೊಟ್ಟೆನೋವಿನ ಸೋಗು ಹಾಕಿ ಹಾಸಿಗೆ ಹಿಡಿದಳು. ನಾಲ್ಕಾರು ದಿನ ಮಲಗಿದಲ್ಲಿಂದ ಏಳಲಿಲ್ಲ. ತನ್ನತ್ತೆ ನಿಜವೆಂದೆ ಮರುಗಿ, ಗೊತ್ತಿದ್ದ ಔಷಧಪಥ್ಯ ಮಾಡಿ ಉಪಚರಿಸಿದರು. ಅವರ ಶುದ್ಧ ನಡವಳಿಕೆ, ನಿರ್ಮಲ ಪ್ರೀತಿ ಮನಸ್ಸನ್ನು ಶುದ್ಧಗೊಳಿಸಿತು. ಮುಂದೆಂದೂ ಅತ್ತೆಯನ್ನು ತಪ್ಪಾಗಿ

ತಿಳಿಯಲಿಲ್ಲ, ಈರ್ಷ್ಯೆಗೆ ಅವಕಾಶ ಕೊಡಲಿಲ್ಲ, ಕೆಲಸಕ್ಕೆ ವೈಗಳ್ಳತನ ಮಾಡಲಿಲ್ಲ.

ತಾನು ಅತ್ತೆ ಮನೆಗೆ ಬಂದ ಹೊಸದು. ಲಗ್ನಕ್ಕೆಂದು ಬಂದ ಶಕುಂತಳೆ ಅತ್ತಿಗೆ ಗರ್ಭಿಣಿಯಾಗಿದ್ದುದರಿಂದ ತೌರಿನಲ್ಲೆ ಉಳಿದರು. ಇಬ್ಬರೂ ಹೊಂದಿಕೊಂಡು ಹೋಗುತ್ತಿದ್ದರು. ನೋಡಿದವರು ಅಕ್ಕ-ತಂಗಿಯರೆಂದು ತಿಳಿಯುತ್ತಿದ್ದರು—ಹಾಗಿದ್ದರು. ಏನಾದರೇನು, ತನ್ನ ವಕ್ರಬುದ್ಧಿ ಸ್ವಲ್ಪದರಲ್ಲಿ ಹದ ತಪ್ಪಿ ಬಿಡುತ್ತದೆ.

ಅಂದು ತನ್ನ ಸತ್ವಪರೀಕ್ಷೆ ಮಾಡಲೆಂದೋ ಏನೊ, ತನ್ನವರು ಮಾಡಿದ ಅಡಿಗೆಗೆ ಪಾಲುದಾರರನ್ನಾಗಿ ಸೀತಾರಾಮುವನ್ನು ಕರೆದುಕೊಂಡು ಬಂದರು. ಅನ್ನ ಕಡಿಮೆ ಬರಬಹುದೆಂದು ಕಂಡುಬಂದದ್ದರಿಂದ ತಾನೂ ಅತ್ತಿಗೆ ಇಬ್ಬರೂ ಎರಡನೆ ಪಙ್ತಿಗೆ ನಿಂತರು. ಅವರ ಊಟವಾಗಿ ತಮ್ಮ ಸರದಿ ಬಂತು. ಬಡಿಸುವ ಹೊಣೆ ತನ್ನದೆ. ಅಂದು ದುರದೃಷ್ಟಕ್ಕೆ ಅನ್ನ ಬೇರೆ ತಳ ಹಿಡಿದುಹೋಗಿತ್ತು. ರಾತ್ರೆ ಬಹಳವಾಗಿದ್ದುದರಿಂದ ಹೊಸದಾಗಿ ಅನ್ನಕ್ಕಿಡಲು ಸೋಮಾರಿತನ ಬೇರೆ. ಅತ್ತೆಯವರಿಗೂ ಮೈಯಲ್ಲಿ ಆರೋಗ್ಯವಿರಲಿಲ್ಲ. ಹಾಗಾಗಿ ಇದ್ದುದರಲ್ಲೆ ಸವರಿಸಿ ತಿಂದೇಳುವುದೆಂದು ನಿರ್ಧರಿಸಿದರು ಆಗ ತನ್ನ ಮನಸ್ಸಿನಲ್ಲಿ ಯಾವ ಪರಿಭೇದವೂ ತಲೆ ಹಾಕಿರಲಿಲ್ಲ. ಊಟಬಡಿಸುವಾಗ ಸುಪ್ತವಾಗಿದ್ದ ಸಣ್ಣತನ ತಲೆಯೆತ್ತಿ ಬಿಟ್ಟಿತು.

ಬಾಲ್ಯದಿಂದಲೂ ಬಾಯಿಗೆ ರುಚಿಯಾಗಿ ತಿಂದು ಅಭ್ಯಾಸ. ತಂದೆ-ತಾಯಿಯೂ ಹಾಗೆಯೆ ಬೆಳೆಸಿದ್ದರು. ತಾನು ತಿಂದು ಮಿಕ್ಕದ್ದನ್ನವರು ತಿನ್ನುತಿದ್ದರು. ಅಂದು ಅವರು ಮಾಡಿಸಿದ ಅಭ್ಯಾಸ ಅಪರಾಧಕ್ಕೆಡೆ ಮಾಡಿಕೊಟ್ಟಿತು. ತಳ ಹಿಡಿದ ಅನ್ನದಲ್ಲಿ ಬಹು ಭಾಗವನ್ನು ಅತ್ತಿಗೆಗೆ ಬಡಿಸಿ, ಇದ್ದುದರಲ್ಲಿ ಒಳ್ಳೆಯ ಅನ್ನವನ್ನು ತಾನು ತಿಂದಳು. ಅತ್ತಿಗೆಗೆ ಆ ಪರಿಭೇದ ತಿಳಿಯಲಿಲ್ಲ. ಆ ಪ್ರಸಂಗ ತನಗೆ ಮಾತ್ರ ತಕ್ಕ ಬುದ್ಧಿ ಕಲಿಸಿತು.

ಆ ಅನ್ನದ ಪ್ರಭಾವದಿಂದಲೊ ಏನೊ, ಮಾರನೆ ದಿನ ಅತ್ತಿಗೆ ಹೊಟ್ಟೆನೋವಿನಿಂದ ಮಿಲಮಿಲನೆ ಒದ್ದಾಡಿದರು. ಅವರ ಸಂಕಟ ತನ್ನ ಕರುಳು ಹಿಂಡಿತು. ನಾಲಗೆ ಸೊಕ್ಕಿಗೆ ಬಲಿಯಾಗಿ ಗರ್ಭಿಣಿ ಸ್ತ್ರೀಯ ಆರೋಗ್ಯ ಕೆಡಿಸಿದೆನಲ್ಲಾ ಎಂದು ಮಮ್ಮಲ ಮರುಗಿದಳು. ಆ ಪ್ರಸಂಗ ಇಷ್ಟು ವಿಪರೀತ

ಕ್ಕಿಟ್ಟುಕೊಳ್ಳುವುದೆಂದು ಭಾವಿಸಿರಲಿಲ್ಲ. ಮುಂಚಿತವಾಗಿ ಗೊತ್ತಿದ್ದರೆ ಹಾಗೆ ಮಾಡುತ್ತಿರಲಿಲ್ಲವೇನೊ! ಅಂತೂ, ಒಂದು ಕ್ಷಣದ ಸುಖಕ್ಕೆ ಅತ್ತಿಗೆಯ ಆರೋಗ್ಯ ಹದಗೆಟ್ಟು ಹೋಯಿತು. ಅವರಲ್ಲಿ ಅಪರಾಧವನ್ನು ತಿಳಿಸಿ ಕ್ಷಮಾಯಾಚನೆ ಮಾಡಬೇಕೆಂದು ಪ್ರಯತ್ನಿಸಿದಳು. ಮನಸ್ಸು ನಾಚಿತು, ಒಪ್ಪಲಿಲ್ಲ. ಕಡೆಗೆ ಹೊಟ್ಟೆ ನೋವಿನಿಂದ ಹಾಸಿಗೆ ಹಿಡಿದು ಮಲಗಿದ ಅತ್ತಿಗೆಯ ಸೇವೆಗೆ ನಿಂತಳು. ಆಗ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು.

ತನ್ನವರಿಗೆ ಸಟ್ಟಾ ಆಟದ ವಿಷಯವಾಗಿ ಬುದ್ಧಿ ಹೇಳಲು ತನ್ನಪ್ಪ ಬಂದಾಗ, ಕೈಲಿ ಮನೆಯಿಂದ ಸಕ್ಕರೆ ಭಕ್ಷ್ಯ ಮಾಡಿಸಿ ತಂದಿದ್ದರು. ಅತ್ತಿಗೆ–ನಾದಿನಿ–ಮೈದುನರೆಲ್ಲರಿಗೂ ಕೊಟ್ಟು ತಾನೂ ತಿಂದಿದ್ದಳು. ತನ್ನವರಿಗೆ ಮಾತ್ರ ಆದರ ಸುಳಿವು ಹತ್ತಗೊಡಲಿಲ್ಲ. ಅವರ ಒರಟುತನ, ಸ್ವಾರ್ಥಪರತೆ, ಈರ್ಷ್ಯಾ ಬುದ್ಧಿ ತನ್ನಿಂದ ಹಾಗೆ ಮಾಡಿಸಿತೊ, ಏನೊ, ಅಂತೂ ಅವರಿಗೆ ತಿಂಡಿ ಕೊಡಲು ಮನಸ್ಸಾಗಲಿಲ್ಲ. ಆಗ ಮನಸ್ಸು ಕಲ್ಲಾಗಿದ್ದರೂ ಆಮೇಲೆ ಕರಗಿ ಕಣ್ಣೀರಿಟ್ಟಿತು. ತಿಂಡಿಯ ಪ್ರಸ್ತಾಪ ಅವರಿಗೆ ತಿಳಿಯದಿದ್ದರೂ ತಾನು ಮಾಡಿದುದು ತಪ್ಪೆಂದು ಮನಸ್ಸು ಕೊರಗಿತು. ಅವರೆಷ್ಟೇ ದುಷ್ಟರಾದರೂ ಹಾಗೆ ಮಾಡಬಾರದಿತ್ತೆಂದು ಪಶ್ಚಾತ್ತಾಪ ಪಟ್ಟಳು. ಅಂದಿನಿಂದ ಎಂದೂ ಯಾವುದರಲ್ಲೂ ಅವರಿಗೆ ಮೋಸಮಾಡಿದ್ದು ತನಗೆ ನೆನಪಿಲ್ಲ.

ಇವು ತನ್ನ ಜೀವನದಲ್ಲೆಲ್ಲ ಆದ ದೊಡ್ಡ ತಪ್ಪುಗಳು. ಇದಲ್ಲದೆ ಸಣ್ಣ ಪುಟ್ಟ ತಪ್ಪುಗಳೆಷ್ಟೋ ಆಗಿದ್ದುವು. ತನ್ನಲ್ಲಿ ಜಾ ತವಾಗಿದ್ದ ವಿವೇಕ, ಒಮ್ಮೆ ಆದ ತಪ್ಪಿಗೆ ಮತ್ತೊಮ್ಮೆ ಅವಕಾಶವೀಯದಂತೆ, ಹೆಜ್ಜೆಹೆಜ್ಜೆಗೂ ತಿದ್ದುತ್ತಿತ್ತು; ಆದರೆ ಆದ ಅಪರಾಧದ ನೋವನ್ನು ಮಾಯಿಸಲಿಲ್ಲ. ಎದೆಯಲ್ಲಿ ಸುಪ್ತವಾಗಿದ್ದ ಆ ನೋವು, ಸಾವಿನ ಹಾಸಿಗೆಯಲ್ಲಿರುವ ತನ್ನಲ್ಲಿ ಜಾಗೃತವಾಗಿ, ಕಣ್ಣಿಗೆ ಕಟ್ಟಿ ನಿಂತು ತನ್ನೆದೆ ನಡುಗಿಸಿದೆ. ಈ ಅಪರಾಧಗಳೆಲ್ಲ ತನ್ನ ಬಾಳ ದುರಂತಕ್ಕೆ ಸಹಾಯವಾಗಿದ್ದುವೊ ಏನೊ! ಪ್ರಾರಬ್ಧ ಕರ್ಮವೆಂದು ಹೇಳುವುದು ಇದಕ್ಕೆಂದೆ ಕಾಣುತ್ತದೆ.

ಕರ್ಮಕ್ಕೆ ತಕ್ಕ ಫಲವೆಂದು ಹೇಳುವರಲ್ಲ—ತನ್ನಪರಾಧಕ್ಕೂ, ಈಗ ನಡೆದಿರುವ ಬಾಳಿನ ದುರ್ಗತಿಗೂ ಹೇಗೆ ನೋಡಿದರೂ ಸಂಬಂಧ ಕಾಣಿಸುತ್ತಿಲ್ಲ. ಅಂದಮೇಲೆ ತಾನಿಂದು ದುಃಖಪಡುತ್ತಿರುವುದು ಹಿಂದಿನ ಜನ್ಮದಲ್ಲಿ

ಮಾಡಿದ ದುಷ್ಕರ್ಮದ ಫಲವಿರಬೇಕು. ಯಾವುದೊ ಮಹಾಪರಾಧ ಮಾಡಿರುವುದರಿಂದಲೆ ಜೀವನ ಇಂಥಾ ದುರಂತಕ್ಕೀಡಾಗಿದೆ. ಹಿಂದೆ ಮಾಡಿದ್ದನ್ನನುಭವಿಸುವುದೆ ಇಷ್ಟು ಯಾತನೆಯಾಗಿರುವಾಗ, ಇಂದು ಮಾಡಿದ್ದನ್ನನುಭವಿಸುವುದಾದರೂ ಹೇಗೆ? ಇಷ್ಟರಲ್ಲೆ ಅನುಭವಿಸಿಯಾಗಿದೆಯೊ, ಸದ್ಯದಲ್ಲೆ ಅನುಭವಿಸುವೆನೊ ಅಥವಾ ಮುಂದೆ ಅನುಭವಿಸಬೇಕೊ? ಯಾವುದೂ ಬಗೆಹರಿಯದಾಗಿದೆ.

ಅಬ್ಬಾ! ಜೀವನ ಹೀಗೇ ಎಂದು ತಿಳಿದಿದ್ದರೆ ನನ್ನಿಂದ ಯಾವ ಅಪರಾಧವನ್ನೂ ಆಗಗೊಡುತ್ತಿರಲಿಲ್ಲ. ಸಣ್ಣ ವಯಸ್ಸಿನಲ್ಲಿ ತಂದೆ ತಾಯಿ ಕಷ್ಟ ಸುಖದ ಅರಿವಾಗದಂತೆ ಮುದ್ದಿನಿಂದ ಸಾಕಿಬಿಟ್ಟರು. ನನ್ನನ್ನವರಷ್ಟು ಪ್ರೀತಿಯಿಂದ ಸಾಕಬಾರದಿತ್ತು. ಕಷ್ಟ ಸುಖದರಿವುಂಟು ಮಾಡಿ ಸಾಕಿದ್ದರೆ, ಜೀವನದಲ್ಲಿ ಒದಗಿದ ಸನ್ನಿವೇಶಕ್ಕೆ ನನ್ನನ್ನು ಹೊಂದಿಸಿಕೊಂಡು ಯಾವ ಅಪರಾಧವೂ ಆಗದಂತೆ ನಡೆದುಕೊಳ್ಳುತ್ತಿದ್ದೆ. ಈಗ ಏನು ಮಾಡುವಂತೆಯೂ ಇಲ್ಲ. ನನ್ನಿಂದ ಸಣ್ಣ ಪುಟ್ಟ ತಪ್ಪಾಗಿ ಹೋಗಿವೆ. ಕರುಣಾಮಯನಾದ ಈಶ್ವರನು ಅಪರಾಧವನ್ನೆಲ್ಲ ಕ್ಷಮಿಸಬೇಕು, ಎಂದು ತಪ್ಪನ್ನೆಲ್ಲ ಈಶ್ವರನಿಗರ್ಪಿಸಿ ಶಾಂತಿಗಾಗಿ ಮೊರೆಯಿಟ್ಟಳು.

ಅಪರಾಧ ಹಾದು ಹೋದಂತೆ ಸುಖದ ದಿನವನ್ನೂ ಹೆಕ್ಕತೊಡಗಿದಳು. ಸುಖವನ್ನುಂಡದ್ದೆಂದರೆ ತೌರಿನಲ್ಲೆ. ಒಂದು ದಿನವೂ ತಂದೆ ತಾಯಿ ನೋಯಿಸಿದ್ದು ನೆನಪಿಲ್ಲ. ಊಟ ತಿಂಡಿ ತಾನು ಬಯಸಿದ್ದೆ ಮನೆಯಲ್ಲೆಲ್ಲರಿಗೂ. ಒಡವೆ ವಸ್ತ್ರಕ್ಕೇನು ಕೊರತೆಯಿರಲಿಲ್ಲ. ಆಟ ನೋಟದ ಬಯಕೆ ಬಾಯಿ ಬಿಚ್ಚುವುದರಲ್ಲೆ ಪೂರ್ತಿಯಾಗುತಿತ್ತು.

ಒಂದು ದಿನ ಇದ್ದಕಿದ್ದಂತೆ ಬಿಸಿಬೇಳೆ ಭಾತು ತಿನ್ನಬೇಕೆಂಬಾಸೆಯುಂಟಾಯಿತು ಆಗ ಮಧ್ಯಾಹ್ನದ ಊಟಕ್ಕೆಲೆ ಹಾಕುವ ಸಮಯ. ತಂದೆ ಊಟಕ್ಕೆ ಬಂದಾಗಿತ್ತು. ಬಿಸಿಬೇಳೆ ಭಾತು ಮಾಡಿ ಹಾಕಿದ ಹೊರತು ಊಟ ಮಾಡುವುದಿಲ್ಲವೆಂದು ರಚ್ಚೆ ಹಿಡಿದಳು. ತಾಯಿ ಮಧ್ಯಾಹ್ನ ತಿಂಡಿ ಹೊತ್ತಿಗೆ ಮಾಡಿ ಹಾಕುವೆನೆಂದು ರಮಿಸಿದರು. ತಂದೆ ತಮ್ಮ ಶಬ್ದ ಭಂಡಾರದಲ್ಲಿದ್ದ ಮಾತನ್ನೆಲ್ಲ ಬಳಸಿದರು. ಯಾವ ಪ್ರಯೋಜನವೂ ಆಗಲಿಲ್ಲ, ಹಠ ಕರಗಲೂ ಇಲ್ಲ. ಹೊಟೇಲಿನಿಂದಾದರೂ ತಂದುಕೊಡೋಣವೆಂದರೆ ಅಂದು ಅಲ್ಲೂ ಮಾಡಿರ

ಲಿಲ್ಲ. ಕಡೆಗೆ ಅವರೆ ಸೋತು, ಇಬ್ಬರೂ ಸೇರಿ ಒದ್ದಾಡಿ ಮಾಡಿ ಹಾಕಿದರು. ತಾನಷ್ಟು ತೊಂದರೆಯಿತ್ತಿದ್ದರೂ ತಂದೆತಾಯಿಗೆ ಬೇಸರವಾಗಿರಲಿಲ್ಲ. ಪಕ್ಕದಲ್ಲಿ ಕೂರಿಸಿಕೊಂಡು ಸವಿಮಾತಾಡಿ ದಿನಕ್ಕಿಂತ ತುತ್ತು ಅನ್ನ ಹೆಚ್ಚು ಹಿಡಿಸಿದರು.

ಇಂಗ್ಲಿಷ್ ವಾಯಿಲ್ಲಿನ ಲಂಗ ಹೊಲೆಸಿ ಹಾಕಿದ ಪ್ರಸಂಗವಂತೂ ಎಂದೂ ಮರೆಯುವಂತಿಲ್ಲ. ತನಗೆ ಹನ್ನೊಂದು ವರ್ಷ ತುಂಬುವ ಸಮಯ. ಒಂದು ದಿನ ಬೆಂಗಳೂರಿನಿಂದ ತನ್ನ ತಂದೆಯ ಸ್ನೇಹಿತರೊಬ್ಬರು ಹೆಂಡತಿ–ಮಕ್ಕಳೊಡನೆ ಬಂದಿಳಿದರು. ಅವರ ಮಗಳೊಬ್ಬಳು ಇಂಗ್ಲಿಷ್ ವಾಯಲ್ಲಿನ ಲಂಗ ಹಾಕಿಕೊಂಡಿದ್ದಳು. ನೋಡುವುದಕ್ಕೆ ಬಲು ಮುದ್ದಾಗಿತ್ತು. ಮಾದರಿಯೂ ಮಾಟವಾಗಿತ್ತು. ಬಣ್ಣವೂ ಕಣ್ಣಿಗೆ ಕಟ್ಟುವಂತಿತ್ತು. ಆ ಲಂಗ ಕಂಡು ತನಗೆ ಬಾಯಲ್ಲಿ ನೀರೂರಿತು. ಅಪ್ಪ–ಅಮ್ಮನಲ್ಲಿ ಆ ಮಾದರಿ ಬಟ್ಟೆ ತನಗೂ ಬೇಕೆಂಬ ವರದಿ ಒತ್ತಿಯಾಯಿತು. ಬಂದವರು ಹೋಗುವ ವರೆಗೂ ಸುಮ್ಮನಿದ್ದು ಅನಂತರ ತಂದೆ-ತಾಯನ್ನು ಪೀಡಿಸಲಾರಂಭಿಸಿದಳು. ತಂದೆ ತನ್ನ ಹಿಂಸೆ ತಡೆಯದೆ ಶಿವಮೊಗ್ಗೆಯ ಊರಿನಲ್ಲಿರುವ ಜವಳಿಯಂಗಡಿಯನ್ನೆಲ್ಲ ಜಾಲಾಡಿದರು. ಎಲ್ಲೂ ಆ ಮಾದರಿ ಬಟ್ಟೆ ಸಿಗಲಿಲ್ಲ. ತನ್ನನ್ನು ರಮಿಸಲಿಕ್ಕಾಗಿ ಅದಕ್ಕಿಂತಲೂ ಬೆಲೆ ಬಾಳುವ ಜರಿ ಕಣವನ್ನು ತಂದು ಲಂಗ ಹೊಲೆಸಿದರು. ಹಠಮಾರಿಯಾದ ತಾನು ಅದನ್ನು ಕೈಲಿ ಸಹ ಮುಟ್ಟಲಿಲ್ಲ. ಹಾಗೆಂದು ಸಮಾಧಾನವಾಗಿಯೂ ಇರಲಿಲ್ಲ. ಊಟ–ತಿಂಡಿ ನೆಟ್ಟಗೆ ಮಾಡುತ್ತಿರಲಿಲ್ಲ. ಮಾತು ಕತೆ ನೆಟ್ಟಗಾಡುತ್ತಿರಲಿಲ್ಲ. ಗಡಿಗೆ ಗಾತ್ರ ಮುಖಮಾಡಿ ಓಡಾಡುತ್ತಿದ್ದಳು ತಂದೆ ಸೋತರು. ಒಂದು ದಿನ ಬಿಡುವು ಮಾಡಿಕೊಂಡು ಬೆಂಗಳೂರಿಗೆ ಹೋಗಿ ನಾನು ಮೆಚ್ಚಿದ ಬಟ್ಟೆಯನ್ನು ತಂದು ಹೊಲೆಸಿ ತೊಡಿಸಿದರು. ಆಗ ತನಗಾದ ಆನಂದ ಅಷ್ಟಿಷ್ಟಲ್ಲ. ಆ ಆನಂದದ ಹೊಳೆಯಲ್ಲಿ ತಂದೆ–ತಾಯಿಯೂ ಮಿಂದಾಡಿದರು. ಆ ಲಂಗಕ್ಕಾಗಿ ತಾನಿತ್ತ ಕಷ್ಟದ ನೆನಪು ಹುಡುಕಿದರೂ ಅವರಲ್ಲಿ ಕಾಣಲಿಲ್ಲ.

ಅವರ ಅಮರ ಪ್ರೇಮಕ್ಕೆ, ತನ್ನಾಶೆ–ಆಶಯ, ಬಯಕೆ–ಬಡಿವಾರಗಳು ಅಮೃತಮಯವಾಗಿದ್ದವು. ಇದನ್ನು ತುಂಬಿ ಕೊಟ್ಟಷ್ಟೂ ತೃಪ್ತಿ ಸಾಲದು; ಸುಖವಾಗಿರಿಸಿದಷ್ಟೂ ಹಿಗ್ಗು ಹೆಚ್ಚುತಿತ್ತು. ಅಂದಿನಿಂದ ಇಂದಿನ ವರೆಗೆ ಪ್ರೀತಿಯ ಮಟ್ಟದಲ್ಲಿ ಸ್ವಲ್ಪವೂ ಹೆಚ್ಚುಕಡಿಮೆಯಾಗದಂತೆ ಕಾದಿರಿಸಿ ಆದರಿಸಿ

ದ್ದಾರೆ; ಉಪಚರಿಸಿದ್ದಾರೆ. ಈಗವರು ತನ್ನ ಬಳಿ ಇದ್ದಿದ್ದರೆ ಸಾಯುವುದರಲ್ಲಿ ಮತ್ತೊಮ್ಮೆ ಆ ಪ್ರೀತಿಯ ಹಾಲ್ಗಡಲಲ್ಲಿ ಮಿಂದು ತಣಿಯಬಹುದಿತ್ತು. ಅದು ಹೇಗೆ ಸಾಧ್ಯ ? ಅವರಿಲ್ಲಿಗೆ ಬರುವರೆ ? ತೀರದಾಸೆ ಅದು ! ಒಂದು ವೇಳೆ ಅತ್ತೆ ಮನಸ್ಸು ಮಾಡಿದರೆ ಸಾಧ್ಯವಾಗಬಹುದು. ಅವರು ಮನಸ್ಸು ಮಾಡ ಬೇಕಲ್ಲ ! ಮಗನಿಗೆ ಹೆದರಿ ಈಗ ಬೇಡವೆಂದು ತಡೆದರೆ ? ಅವರೆಂದೂ ಹಾಗೆ ಮಾಡುವವರಲ್ಲ. ಯುಕ್ತಾಯುಕ್ತತೆಯ ಪರಿಜ್ಞಾನ ಚೆನ್ನಾಗಿದೆ. ಮಾಡಬೇಕಾದ್ದನ್ನು ಯಾರು ತಡೆದರೂ ನಿಲ್ಲಿಸುವುದಿಲ್ಲ. ಇಂದು ನನ್ನ ಮನೋಭಿಲಾಷೆಯನ್ನವರ ಮುಂದೆ ತೆರೆದಿಡಲೆ ಬೇಕು. ತಡ ಮಾಡಿದರೆ ತಾನೆ ನೋಯಬೇಕಾಗುತ್ತದೆ. ಹಾಗೆಂದು ನಿರ್ಧರಿಸಿ ಕಣ್ಣಲ್ಲಿ ಆಶೆ ತುಂಬಿ ಬಾಗಿಲ ಕಡೆ ಹೊರಳಿದಳು.

ಆ ವೇಳೆಗೆ ಕೈಲಿ ಹಾಲು, ಹಣ್ಣು-ಹಂಪಲು ಹಿಡಿದು ರಂಗಮ್ಮ ಮಾತಿಗೆ ಮೊದಲಿಟ್ಟೆ ಬಂದರು. ಕೈಲಿ ತಂದದ್ದನ್ನು ಅಲ್ಲಿದ್ದ ಪುಟ್ಟ ಕಪಾಟಿನ ಮೇಲಿ ರಿಸಿ ಕಿತ್ತಲೆ ಹಣ್ಣನ್ನು ಸುಲಿಯುತ್ತ ಹೇಳಿದರು,

"ಸರಸು ನೆನ್ನೆ ಬೆಳಿಗ್ಗೆ ಗಂಡುಮಗು ಹಡೆದಳಂತೆ ಶಾಂತ, ಕಾಗದ ಬಂದಿದೆ."

ತುಟಿಯಲ್ಲಿ ಹುಸಿ ನಗೆ ತಂದು ಹೇಳಿದಳು ಶಾಂತ,

"ಅವಳು ಬಯಸಿದ್ದೆ ಆಯಿತು—ಗಂಡು ಮಕ್ಕಳೆಂದರೆ ಪ್ರಾಣ. ಮಗು ಬಾಣಂತಿ ಸುಖವಾಗಿದ್ದಾರೆ ತಾನೆ ?"

ಸೊಸೆಯೆಂದ ಮಾತು, ಮೊಮ್ಮಗು ಆದ ಸಂತೋಷ ಎರಡೂ ಸೇರಿ ರಂಗಮ್ಮನ ತುಟಿಯಲ್ಲೂ ತೆಳುನಗೆಯಾಡಿಸಿತು. ಶಾಂತಳ ಬಾಯಿಗೆ ಬಿಡಿಸಿದ ಕಿತ್ತಳೆಯ ಕುಸುಮವನ್ನಿಡುತ್ತ ಹೇಳಿದರು,

"ಹುಷಾರಾಗಿದಾರಂತೆ. ಅಕ್ಕ-ತಂಗಿಯರಿಬ್ಬರ ಜೋಡಿ ಸರಿಯಾಗಿದೆ. ಗಂಡುಮಕ್ಕಳೆಂದರೆ ಕೆನ್ನೆಯೆಲ್ಲ ಬಾಯಿ. ಅನುಭವಿಸುವಾಗ ಗೊತ್ತಾಗುವುದು ಆ ಸುಖ. ಒಳ್ಳೆಯವರಾದರೆ ಸರಿ, ನಮ್ಮ ಗೋಪಿಯಂಥವರಾಗಿ ಬಿಟ್ಟರೆ, ವಂಶದ ಹೆಸರಿಗೆ ಎಳ್ಳು-ನೀರು ಬಿಟ್ಟು, ಕೈಲಿ ಜೀವ ಹಿಡಿದು ದೇಶಾಂತರ ಓಡಿ ಹೋಗುವುದೆ ಸರಿ !"

ಆ ಮಾತಿಗೆ ಶಾಂತ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಗೋಪಿಯ

ನೆನಪು ಅವಳ ಮುಖದಲ್ಲಿದ್ದ ಮಂದಹಾಸವನ್ನು ನುಂಗಿ, ಆ ಸ್ಥಳದಲ್ಲಿ ಸಿಡುಕು ತುಂಬಿತು. ಆದರ ಪರಿಣಾಮವಾಗಿಯೊ ಏನೊ, ನೆತ್ತಿಹತ್ತಿ ಕೆಮ್ಮು ಜೋರಾಗಿ ಕುಡಿದ ಹಾಲೆಲ್ಲ ಈಚೆ ಬಂತು. ಆ ಕೊಳಕೆಲ್ಲ ಹೋಗಿ ಬಿದ್ದದ್ದು ರಂಗಮ್ಮನ ಮೈಮೇಲೆಯೆ! ಅದನ್ನು ಲಕ್ಷ್ಯಕ್ಕೆ ತರದೆ, ಸ್ವಲ್ಪವೂ ಬೇಸರಿಸದೆ ಶಾಂತಳ ಎದೆ ನೀವಿ ಯಾತನೆಯನ್ನು ಸ್ವಲ್ಪ ಕಡಿಮೆ ಮಾಡಿದರು. ಅವರಿಂದ ಆ ಸೇವೆಯೆಲ್ಲ ಮಾಡಿಸಿಕೊಳ್ಳುವುದು ಕಷ್ಟವಾಗಿ ಹೇಳಿದಳು ಶಾಂತ,

"ನನ್ನಿಂದಾಗಿ ನಿಮಗೆಷ್ಟು ತೊಂದರೆಯಮ್ಮ! ನಿಮ್ಮ ಸೇವೆಮಾಡುವ ಕಾಲದಲ್ಲಿ ಕೈಕಾಲು ಮುರಿದಂತೆ ಮಲಗಿ, ನಿಮ್ಮಿಂದಲೆ ಸೇವೆ ತೆಗೆದುಕೊಳ್ಳುತ್ತಿರುವೆನು. ನನ್ನ ಬಾಳಿಗೆ ನನಗೇ ಅಸಹ್ಯವಾಗುತ್ತದೆ."

"ಹಾಗೆಲ್ಲ ಹೇಳಬೇಡ, ನೀನೇನು ಬೇಕೆಂದು ಮಾಡಿಸಿಕೊಳ್ಳುತ್ತಿಲ್ಲ. ಹುಷಾರಾದ ಮೇಲೆ ಆದಕ್ಕೆರಡರಷ್ಟು ಸೇವೆ ಮಾಡಿ ತೀರಿಸುವಿಯಂತೆ, ಸುಮ್ಮನಿರು!"

"ಆ ಪುಣ್ಯ ನಾನು ಪಡೆದು ಬಂದಂತಿಲ್ಲಮ್ಮ! ಬದುಕಿದರೆ ಆ ಮಾತು ಸತ್ಯ ಮಾಡುವೆನು—ಇಲ್ಲದಿದ್ದರೆ ಮುಂದಿನ ಜನ್ಮದಲ್ಲಿ ನಿಮ್ಮ ಮಗಳಾಗಿ ಬಂದು ಋಣ ತೀರಿಸುವೆನು."

ಆ ಮಾತಿನಿಂದ ರಂಗಮ್ಮನಿಗಾಶ್ಚರ್ಯವಾಗಲಿಲ್ಲ. ಗೋಪಿ ತನ್ನ ಕಟುಕತನದಿಂದ ಅವಳ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಂಡಿದ್ದಾನೆಂದು ಎಂದೋ ತಿಳಿದಿದ್ದರು. ಸೊಸೆಯ ನಿರ್ಧಾರಕ್ಕೆ ಮೆಚ್ಚಿದರೂ ಮಗನ ದುರದೃಷ್ಟಕ್ಕೆ ಮರುಗದೆ ಇರಲಿಲ್ಲ. ಅವಳ ಕೈ ಬಾಯಿಗಳನ್ನು ತೊಳೆದು ಒರಸಿ ಮಲಗಿಸಿ, ಮೈತುಂಬ ಹೊದೆಸುತ್ತ ಹೇಳಿದರು,

"ಗೋಪಿ ದುರದೃಷ್ಟವಂತ. ನಿನ್ನಂಥ ಪುಣ್ಯವತಿಯ ಪ್ರೀತಿ ವಿಶ್ವಾಸವನ್ನೆಂದಿಗೂ ಕಾದಿರಿಸಿಕೊಳ್ಳುವ ಪುಣ್ಯ ಪಡೆಯಲಿಲ್ಲ, ಇನ್ನಾದರೂ ಮಿಂಚಿ ಹೋಗಿಲ್ಲ, ತನ್ನ ತಪ್ಪನ್ನು ತಿದ್ದಿ ನಿನ್ನ ಮನಸ್ಸನ್ನು ಸೂರೆಗೊಳ್ಳಬಹುದು. ಹಾಗೆ ಮಾಡಬೇಕಲ್ಲ ಅವನು!"

"ಆ ಭ್ರಮೆಯನ್ನೆ ಬಿಟ್ಟು ಬಿಡಿಯಮ್ಮ! ಅವರು ಹಾಗೆ ಮಾಡುವುದೂ ಇಲ್ಲ, ನನ್ನ ಒಡೆದ ಮನಸ್ಸದಕ್ಕಿನ್ನು ಕೂಡುವುದೂ ಇಲ್ಲ. ಈ ಜನ್ಮದಲ್ಲವರು

ಗಂಡನಾಗಿ ಬಂದದ್ದೆ ಸಾಕು, ಇನ್ನೆಂದೆಂದೂ ಅವರು ನನ್ನ ಗಂಡನಾಗುವುದು ಬೇಡ."

ಅದರಿಂದ ರಂಗಮ್ಮನಿಗೆ ಬೇಸರವಾಗಲಿಲ್ಲ. ಗೋಪಿಯ ಕಟುಕತನ ಕಣ್ಣಿಗೆ ಕಟ್ಟಿ, ಶಾಂತಳಂದ ಮಾತು ಸರಿಯೆನ್ನಿಸಿತು ಉತ್ತರ ಕೊಡಬೇಕೆನ್ನುವಷ್ಟರಲ್ಲಿ ಅತ್ತೆಯ ಮೌನ ಕಂಡು ಹೆದರಿ ಶಾಂತ ಕೇಳಿದಳು,

"ನಾನಂದದ್ದು ನಿಮ್ಮ ಮನಸ್ಸಿಗೆ ನೋವಾಯಿತೆ ಅಮ್ಮ?"

"ನಿನ್ನದು ತಪ್ಪಿಲ್ಲ ಶಾಂತ, ಕಟುಕರಲ್ಲಿ ಯಾರಿಗೂ ಪ್ರೀತಿ–ವಿಶ್ವಾಸವುಂಟಾಗುವುದಿಲ್ಲ" ಎಂದು ನಲ್ಲಿಯ ಬಳಿ ಹೋಗಿ ಮೈಮೇಲೆ ಹಾರಿದ ಕೊಳಕನ್ನು ತೊಳೆದು, ತಟ್ಟೆ ಬಟ್ಟಲನ್ನು ಶುದ್ಧ ಪಡಿಸಿ ತಂದು ಅದರ ಸ್ಥಳದಲ್ಲಿರಿಸಿದರು.

ಶಾಂತಳಿಗೆ ಅವರಲ್ಲಿ ತನ್ನ ತಾಯಿಯ ಪ್ರಸ್ತಾಪವೆತ್ತಬೇಕೆನ್ನುವ ಆಸೆ, ಆತುರ. ಮಾತು ಪ್ರಾರಂಭಿಸುವುದು ಹೇಗೆಂದು ಹಂಚಿಕೆ ಹುಡುಕುತ್ತಿರುವಷ್ಟರಲ್ಲಿ ರಂಗಮ್ಮನೆ ಹೇಳಿದರು,

"ಯಾಕೊ ಇಂದು ಬೆಳಗಿನಿಂದ ನಿಮ್ಮ ತಾಯಿ ಮನಸ್ಸಿಗೆ ಬರುತ್ತಿದ್ದಾರೆ. ಒಂದು ಬಾರಿ ಕರೆಸಿದ್ದರಾಗುತಿತ್ತೊ ಏನೊ!"

ಶಾಂತ ಬದುಕಲಾರಳೆಂಬ ಸಂಶಯ ತಲೆದೋರಿ ಅವರಲ್ಲಿ ಆ ಬಯಕೆಯುಂಟಾಗಿತ್ತು. ಹಾಗಾಗುವುದು ಸ್ವಾಭಾವಿಕ. ಆದರೆ ಶಾಂತ ಅವರೊಡನೆ ಆ ವಿಷಯ ಪ್ರಸ್ತಾಪಿಸಬೇಕೆಂದಿದ್ದ ಸಮಯದಲ್ಲಿ, ಅದೇ ವಿಷಯ ಕುರಿತು ಮಾತಾಡಿದ್ದು ಬೆರಗುಪಡಿಸಿತು. ಅತ್ಯಂತ ಪ್ರೀತಿಸುವವರಲ್ಲಿ ಆತ್ಮದ ಹಂಬಲು ಪರಸ್ಪರ ಗೋಚರಿಸುವುದೆಂದು ಹಿರಿಯರ ಬಾಯಿಂದ ಕೇಳಿ ತಿಳಿದಿದ್ದಳು. ಆ ಮಾತಿಂದು ಅನುಭವಕ್ಕೆ ಬಂತು. ತನಗೆ ಪ್ರಿಯವಾದ ಮಾತು ಅವರ ಬಾಯಿಂದಲೆ ಹೊರಬದ್ದುದನ್ನು ಕೇಳಿ ಸಮಾಧಾನ ಹೊಂದಿ ಹೇಳಿದಳು,

"ನನಗೂ ಹಾಗೆ ಆಗಿದೆಯಮ್ಮ—ಬೆಳಗಿನಿಂದ ಹತ್ತಾರು ಬಾರಿ ಮನಸ್ಸಿಗೆ ಬಂದು ಹೋದರು. ಕಾಗದ ಬರೆದು ಒಮ್ಮೆ ಕರೆಸಿದ್ದರೆ ಚನ್ನಾಗಿತ್ತು. ನಾನೇನಿನ್ನು ಹೆಚ್ಚುಕಾಲ ಬದುಕಲಾರೆ. ಸಾಯುವುದರಲ್ಲಿ ಅವರನ್ನೊಮ್ಮೆ ಕಾಣಬೇಕೆಂಬಾಸೆಯಿದೆ. ನಮ್ಮ ತಂದೆ ಯಾರ ಮಾತಿಗೂ ಬೆಲೆಗೊಡುವುದಿಲ್ಲ. ನೀವೇ ಖುದ್ದು ಕಾಗದ ಬರೆಸಿದರೆ ಕರೆದುಕೊಂಡು ಬಂದಾರು!"

ಶಾಂತಳ ಬಾಯಿಂದ ಸಾವಿನ ಮಾತು ಕೇಳಿ ರಂಗಮ್ಮನ ಕಣ್ಣಲ್ಲಿ ಹನಿ ತುಂಬಿ ಬಂತು. ಬೆರಳಿನಿಂದದನ್ನು ಮಿಡಿದು ಹೇಳಿದರು,

"ನಾಳೆಯೆ ಕಾಗದ ಬರೆಸುವೆನು, ಕೊರಗಬೇಡ. ಅವರೊಮ್ಮೆ ಬಂದು ಹೋದರೆ ನಿನ್ನ ಮನಸ್ಸಿಗೂ ಗೆಲುವಾದೀತು; ಬೇಗ ಗುಣವಾದರೂ ಆಗಬಹುದು !" ಎಂದು ಬರುವಾಗ ತಂದಿದ್ದ ಹಾಲಿನ ಚೆಂಬು ತೆಗೆದುಕೊಂಡು ಹೊರಡಲು ಸಿದ್ಧವಾಗಿ ಮತ್ತೆ ಹೇಳಿದರು "ರಾತ್ರೆ ನಾನು ಬರುವುದು ಸ್ವಲ್ಪ ತಡವಾಗಬಹುದು—ನಾಣಿ ಊರಲ್ಲಿಲ್ಲ. ಚೆನ್ನಿ ಬಂದ ಮೇಲೆ ಬರಬೇಕು. ಗಾಬರಿಯಾಗಬೇಡ" ಎಂದು ಉತ್ತರಕ್ಕೆ ಕಾಯದೆ ಮನೆಯಕಡೆ ಹೊರಳಿದರು.

ರಂಗಮ್ಮ ಪತ್ರ ಬರೆಸಿದ ಮೂರು ನಾಲ್ಕು ದಿನದಲ್ಲೆ ಸೂರಪ್ಪ ಸುಶೀಲಮ್ಮನನ್ನು ಕರೆದುಕೊಂಡು ಬಂದರು. ಶಾಂತಳಾಗಿರುವ ಸ್ಥಿತಿ ಕಂಡು ಎದೆ ಜಗ್ಗೆಂದಿತು. ಹೆಂಡತಿಯನ್ನು ಕರೆದುಕೊಂಡು ಬಂದುದು ಅಪರಾಧವಾಯಿತೆಂದು ಒಳಗೊಳಗೆ ಒದ್ದಾಡಿದರು. ಶಾಂತಳ ಜೀವನದಲ್ಲಿ ಇಷ್ಟೆಲ್ಲ ರಂಪವಾಗಿದ್ದರೂ ಅವರಿಗೊಂದು ಮಾತೂ ತಿಳಿಸಿರಲಿಲ್ಲ. ಮೈಸೂರಿಗೆ ಹೊರಟು ಬರುವಾಗಲೂ ಗುಟ್ಟು ಬಿಟ್ಟಿರಲಿಲ್ಲ. ಮಗು-ಬಾಣಂತಿಯನ್ನು ನೋಡಿಕೊಂಡು ಬರೋಣವೆಂದು ಹೇಳಿಯೆ ಕರೆದುಕೊಂಡು ಬಂದಿದ್ದರು. ಶಾಂತಳಿನ್ನೂ ಆಸ್ಪತ್ರೆಯಲ್ಲಿಯೆ ಇದ್ದುದನ್ನು ಕಂಡು ಸುಶೀಲಮ್ಮ ಕಾರಣ ಕೇಳಿದಾಗ—ನಿತ್ರಾಣಕ್ಕಾಗಿರಿಸಿಕೊಂಡಿದ್ದಾರೆಂದು ಬಾಯಿ ಮುಚ್ಚಿಸಿದ್ದರು. ಮನೆ ಬಿಟ್ಟೆಂದೂ ಹೊರಗೆ ಹೊರಟವರಲ್ಲವಾದುದರಿಂದಲೂ ಆಸ್ಪತ್ರೆಯ ವಿಷಯ ಅಷ್ಟಾಗಿ ತಿಳಿಯದಿದ್ದುದರಿಂದಲೂ ಸೂರಪ್ಪ ಹೇಳಿದ ಮಾತಿಗೊಪ್ಪಿಕೊಳ್ಳಲೆ ಬೇಕಾಯಿತು.

ಸೂರಪ್ಪ ಊರಿನಿಂದ ಬಂದಿಳಿದವರೆ ಸುಶೀಲಮ್ಮನಿಗೆ ತಿಳಿಯದಂತೆ, ಎಲ್ಲರಿಗೂ ಅವರ ಸ್ವಭಾವದ ಪರಿಚಯ ಮಾಡಿಕೊಟ್ಟು, ಯಾರೂ ಅವರ ಮುಂದೆ ಶಾಂತಳ ಜೀವನದ ನೋವೆತ್ತದಂತೆ ಮಾಡಿದರು. ಅವರೆಷ್ಟೆ ಎಚ್ಚರಿಕೆ ವಹಿಸಿದರೂ ಸುಶೀಲಮ್ಮ ಪತ್ತೆ ಮಾಡಿಯೆ ಬಿಟ್ಟರು. ಪರಿಸ್ಥಿತಿಯೂ ಅವರಿಗನುಕೂಲವಾಗಿಯೆ ಹೊಂದಿ ಬಂತು.

ಶಾಂತಳ ರೂಪ, ಮನೆಯವರ ಸಂಶಯಾಸ್ಪದ ನಡವಳಿಕೆ, ಸೂರಪ್ಪನ ಸರ್ಪಕಾವಲಿನಿಂದ ಸುಶೀಲಮ್ಮನಿಗೆ ಸಂದೇಹವುಂಟಾಯಿತು. ಎಲ್ಲರೂ ಸೇರಿ ತಮ್ಮಿಂದ ಯಾವುದೊ ವಿಷಯ ಮುಚ್ಚಿರಿಸುತ್ತಿದ್ದಾರೆಂದು ತಿಳಿದರು. ಆ

ವಿಷಯ ತಿಳಿಯುವ ಕುತೂಹಲ ಕೆರಳಿತು. ಕೇಳುವುದು ಯಾರಲ್ಲಿ? ರಂಗಮ್ಮ ಎಷ್ಟಾದರೂ ಬೀಗರು. ಅವರಾಗಿ ಹೇಳಬೇಕೆ ಹೊರತು ತಾವಾಗಿ ಕೇಳುವುದಷ್ಟು ಮರ್ಯಾದೆಯಲ್ಲ. ಇಷ್ಟಕ್ಕೂ ಒಳಗಡೆ ಏನಿದೆಯೊ? ಮಗನ ಅಪರಾಧವಿದ್ದರೂ ಇರಬಹುದು! ಕೇಳಿ ನೋಯಿಸುವುದು ಸರಿಯಲ್ಲ. ನಾಣಿಯೊಡನೆ ಕೇಳೋಣವೆಂದರೆ ಎಂದೂ ಮಾತಾಡಿದವರಲ್ಲ. ಶಕುಂತಳೆಯಲ್ಲಿ ನಂಬಿಕೆ ಸಾಲದು. ಸೂರಪ್ಪ ತಿಳಿಯುವುದಿದ್ದರೂ ಕಲ್ಲು ಹಾಕುವವರು. ಕೇಳಿದರೆ ಶಾಂತಳನ್ನು ಕೇಳಬೇಕು. ಕೇಳುವುದಾದರೂ ಹೇಗೆ? ಸೂರಪ್ಪ ಸಂಗಡವಿದ್ದೇ ಇರುವರು. ಅವರೆದುರಿಗೆ ಕೇಳೋಣವೆಂದರೆ ಶಾಂತ ಹೆದರಿ ಹೇಳುವಳೊ ಇಲ್ಲವೊ! ಹೊರಡುವ ದಿನವೂ ಹತ್ತಿರ ಬಂತು. ಏನು ಮಾಡುವುದೆಂದೆ ತೋಚಲಿಲ್ಲ. ಅಷ್ಟರಲ್ಲಿ ಅವರಭಿಲಾಷೆ ನೆರವೇರುವ ಗಳಿಗೆ ಕೂಡಿ ಬಂತು.

ನಾಲ್ಕೈದು ತಿಂಗಳಿಂದ ಅನ್ನ-ನಿದ್ರೆ ತೊರೆದು ಹಗಲಿರುಳೂ ವಿಶ್ರಾಂತಿಯಿಲ್ಲದೆ ದುಡಿದಿದ್ದ ರಂಗಮ್ಮನ ಆರೋಗ್ಯ ಹದ ತಪ್ಪಿತು. ನೈ ತುಂಬಾ ಕಾವೇರಿ ಹಾಸಿಗೆ ಹಿಡಿದರು. ಅಂದು ಶಾಂತಳ ಊಟ ತಿಂಡಿಯನ್ನು ಸೂರಪ್ಪ ನೋಡಿಕೊಂಡರು. ರಾತ್ರೆ ಅವಳ ಬಳಿ ಮಲಗುವ ಜನದ ಬಗ್ಗೆ ವಿಚಾರ ನಡೆಯಿತು. ಕೈಗೂಸಿದ್ದುದರಿಂದ ಶಕುಂತಳೆಯನ್ನು ಕಳುಹಿಸಿ ಕೊಡಲು ಸಾಧ್ಯವಿರಲಿಲ್ಲ. ಗಂಡಸರು ಹೋಗಿ ಮಲಗುವಂತಿರಲಿಲ್ಲ. ಸುಶೀಲಮ್ಮನಿಗೆ ಆ ಅವಕಾಶ ಕಲ್ಪಿಸಿ ಕೊಡುವುದು ಯಾರಿಗೂ ಇಷ್ಟವಿರಲಿಲ್ಲ. ಥಟ್ಟನೆ ಸೂರಪ್ಪನ ತಲೆಗೊಂದುಪಾಯ ಹೊಳೆಯಿತು. ಮನೆಗೆಲಸದ ಆಳು ಚೆನ್ನಿಯೆ ಆ ಸಮಸ್ಯೆಯ ಪರಿಹಾರವಾಗಿದ್ದಳು. ಆ ಅಭಿಪ್ರಾಯ ರಂಗಮ್ಮನಿಗೂ ಒಪ್ಪಿತು. ಸುಶೀಲಮ್ಮನಲ್ಲಿ ಮಾತ್ರ ಅವರಾಟ ನಡೆಯಲಿಲ್ಲ. ತಾನೆ ಹೋಗಿ ಮಲಗುವೆನೆಂದು ಹಠ ಹಿಡಿದರು. ನಿತ್ರಾಣವಿದ್ದವರು ಆಸ್ಪತ್ರೆಯಲ್ಲಿ ಹೆಚ್ಚು ಹೊತ್ತಿರಬಾರದೆಂದು ಗಂಟೆಗಟ್ಟಲೆ ಬೋಧಿಸಿದರು, ಸೂರಪ್ಪ. ಸುಶೀಲಮ್ಮನ ನಿರ್ಧಾರದ ಮುಂದೆ ಎಲ್ಲವೂ ವ್ಯರ್ಥವಾಯಿತು. ಸೂರಪ್ಪ ರಂಗಮ್ಮ ತಡೆಯುತ್ತಿದ್ದರೂ ಕೇಳದೆ ಕೈಲಿ ಶಾಲು ಹಿಡಿದು ಹೊರಟೇ ಬಿಟ್ಟರು. ಸೂರಪ್ಪ ಆದದ್ದಾಗಲೆಂದು ಧೈರ್ಯ ತಂದುಕೊಂಡು ಅವರನ್ನು ಆಸ್ಪತ್ರೆಗೆ ಮುಟ್ಟಿಸಿ ಬಂದರು.

ಅದೇ ಸಮಯ ಕಾಯುತ್ತಿದ್ದ ಶಾಂತಳಿಗೆ ತುಂಬಾ ಹಿಗ್ಗಾಯಿತು. ತಾಯಿಯನ್ನು ಅಷ್ಟು ಹತ್ತಿರದಲ್ಲಿ, ಅಷ್ಟು ಹೊತ್ತು ಒಬ್ಬರನ್ನೆ ಕಾಣದೆ ಎಷ್ಟೋ ದಿನವಾಗಿತ್ತು. ತನ್ನ ಬಾಳು ಹದಗೆಟ್ಟಂದಿನಿಂದ ಅವರಲ್ಲಿ ಸ್ವತಂತ್ರವಾಗಿ ಒಂದು ಮಾತೂ ಆಡಗೊಡಿಸುತ್ತಿರಲಿಲ್ಲ ತಂದೆ. ಇಂದು ಸಿಕ್ಕಿದ ಸಮಯ ವನ್ನು ಹಾಗೆಯೆ ನಷ್ಟವಾಗಗೊಡಲು ಅವಳೆಂದೂ ಸಿದ್ಧಳಿರಲಿಲ್ಲ. ತನ್ನಾತ್ಮ ಕಥೆಯನ್ನೆಲ್ಲ ತೋಡಿಕೊಳ್ಳಬೇಕೆಂದಿರುವಷ್ಟರಲ್ಲಿ ತಾಯಿ ತನ್ನ ಲಕ್ಷ್ಯವನ್ನು ಬೇರೆಡೆಗೆ ಸೆಳೆದಳು.

ಸುಶೀಲಮ್ಮ ಬಂದವರೆ ಮಗಳ ಬಳಿ ಹೋಗಿ ಕುಳಿತು, ಜ್ವರದಿಂದ ರಂಗಮ್ಮ ಹಾಸಿಗೆ ಹಿಡಿದುದನ್ನೂ, ತಾವಲ್ಲಿಗೆ ಬರುವುದನ್ನು ತಡೆಯಲು ಮನೆ ಯವರು ಹೂಡಿದ್ದ ಹಂಚಿಕೆಯನ್ನೂ ಹೇಳಿ ನಕ್ಕರು. ಅದರೊಡನೆ ಶಾಂತಳೂ ತನ್ನ ನೀರಸ ನಗೆಯನ್ನು ಬೆರಸಿದಳು. ಅವರು ಹಾಗೆ ಮಾಡಿದುದರ ಕಾರಣ ಅವಳಿಗೆ ಚೆನ್ನಾಗಿ ತಿಳಿದಿತ್ತು. ತನ್ನವರ ಸ್ವಭಾವವನ್ನು ತಂದೆಗೆ ಪರಿಚಯ ಮಾಡಿಕೊಟ್ಟಂದು, ಅವರು ತನ್ನ ತಾಯಿಯ ದೌರ್ಬಲ್ಯ ತಿಳಿಸಿ, ಯಾವ ವಿಷಯವನ್ನೂ ತಿಳಿಸಕೂಡದೆಂದು ಎಚ್ಚರಿಕೆ ಕೊಟ್ಟಿದ್ದರು. ಇಂದೂ ಅದೇ ಕಾರಣಕ್ಕಾಗಿಯೆ ತಡೆದಿದ್ದಾರೆ. ತಂದೆಯ ಈ ವರ್ತನೆಯಿಂದ ತಾಯಿಯಲ್ಲಿ ಇನ್ನೂ ತನ್ನ ಬಾಳಿನ ವಿಷಯವನ್ನು ಮುಚ್ಚಿಡುತ್ತಿದ್ದಾರೆಂದು ಚೆನ್ನಾಗಿ ವ್ಯಕ್ತ ವಾಗುತ್ತದೆ. ಹೀಗಿರುವಲ್ಲಿ ತಾನು ತಿಳಿಸಬೇಕೊ, ತಿಳಿಸಬಾರದೊ? ತಿಳಿಸಿ ದರೆ ತಪ್ಪಾದರೇನು ಮಾಡುವುದು? ತಾನು ಬದುಕಿ ಉಳಿದರೇನೊ ಸರಿ, ಇಲ್ಲದಿದ್ದರೆ........? ಆಗಲಾದರೂ ತನ್ನ ಸಾವು ಅವರ ಮನಸ್ಸಿನ ಮೇಲೆ ಪರಿಣಾಮವುಂಟು ಮಾಡುವುದಿಲ್ಲವೆ? ಒಂದು ಪಕ್ಷ ಹಾಗಾದರೆ, ಅವರಿಗೆ ತನ್ನ ಬಗ್ಗೆ ಎಷ್ಟು ತಿರಸ್ಕಾರವಾಗಲಾರದು! ಮಗಳು ತಾಯಿಯಲ್ಲಿ ತನ್ನ ಜೀವನ ಮುಚ್ಚಿಡುವುದೆಂದರೆ ನಿಜವಾಗಿಯೂ ಅಪರಾಧವೆ ಸರಿ. ತಂದೆ ತನ್ನನ್ನು ತಪ್ಪಾಗಿ ತಿಳಿದರೂ ಸರಿಯೆ, ಇಂದು ತಾಯಲ್ಲಿ ತನ್ನ ದುಃಖವನ್ನೆಲ್ಲ ತೋಡಿಕೊಳ್ಳಲೆ ಬೇಕು—ಹಾಗೆಂದು ಮನಸ್ಸಿನ ಹಿಗ್ಗಾಟ-ಮುಗ್ಗಾಟದಿಂದ ಒಂದು ನಿರ್ಧಾರಕ್ಕೆ ಬಂದಳು. ಮಾತು ಪ್ರಾರಂಭಿಸಬೇಕೆನ್ನುವಷ್ಟರಲ್ಲಿ ತಾಯಿಯೆ ತನ್ನ ಕಥೆಗೆ ದಾರಿ ಮಾಡಿಕೊಟ್ಟರು.

ಶಾಂತಳ ಹಣೆಯ ಮೇಲೆ ಕೂದಲು ಹುಚ್ಚಾಪಟ್ಟೆ ಹರಿದಾಡಿತ್ತು.

ಸುಶೀಲಮ್ಮ ಮೆಲ್ಲನೆ ಹಿಂದೆ ಸರಿಸಿದರು. ಥಟ್ಟನೆ ಅವರ ದೃಷ್ಟಿ ಹಣೆಯಲ್ಲಿದ್ದ ಗಾಯದ ಗುರುತಿನ ಕಡೆ ಹರಿಯಿತು. ಬಂದ ದಿನ ಅವಳನ್ನು ಕೇಳಿದಾಗ ಸೂರಪ್ಪನೆ ಬಿದ್ದ ಗಾಯವೆಂದು ಉತ್ತರವಿತ್ತಿದ್ದರು. ಆ ಉತ್ತರ ಅವರಿಗೆ ಹಿಡಿಸದಿದ್ದರೂ ಸೂರಪ್ಪನ ತೇಜೋವಧೆ ಮಾಡಿ ಶಾಂತಳಲ್ಲಿ ಕೇಳುವುದು ಸರಿಯಲ್ಲವೆಂದು ಸುಮ್ಮನಿದ್ದರು, ಶಾಂತಳೂ ತಂದೆಗೆ ಹೆದರಿ ನಿಜಸಂಗತಿಯನ್ನು ಮುಚ್ಚಿರಿಸಿದಳು. ಇಂದು ಆ ಗಾಯವನ್ನು ಕಂಡ ಕೂಡಲೆ ಅಂದಿನ ಕುತೂಹಲ ಕೆರಳಿತು.

"ಇದೇನಾಗಿದ್ದು ಶಾಂತ, ನಿಜ ಹೇಳು!" ಎಂದು ಗಾಯವನ್ನು ಮೃದುವಾಗಿ ಸವರಿದರು.

ಅದನ್ನೆ ನೆಪವಾಗಿರಿಸಿಕೊಂಡು ಶಾಂತ, ತಾನು ಲಗ್ನವಾಗಿ ಬಂದಂದಿನಿಂದ ಅಲ್ಲಿ ವರೆಗೆ ನಡೆದೆಲ್ಲ ಘಟನೆಗಳನ್ನೂ ಸವಿಸ್ತಾರವಾಗಿ, ಕಣ್ಣೀರಿನ ಹೊಂಡದಲ್ಲಿ ಮಿಯುತ್ತ ತಿಳಿಸಿದಳು. ಮಗಳ ಬಾಳಿನ ದುರಂತ ಕಥೆ ಕೇಳಿ ಸುಶೀಲಮ್ಮನೂ ಆ ಹೊಂಡದಲ್ಲಿ ಮಿಂದು ಬಂದರು ಸ್ವಲ್ಪ ಹೊತ್ತು ಮೂಕ ರೋದನ ಇಬ್ಬರನ್ನೂ ಆವರಿಸಿತು. ಕಣ್ಣಲ್ಲಿ ಶಕ್ತಿಯಿರುವಷ್ಟು ಹೊತ್ತು ನೀರು ಬಸಿದು ಮೌನ ತಾಳಿದರು. ಬಹಳ ಹೊತ್ತಿನ ವರೆಗೆ ಸ್ಮಶಾನ ಮೌನ ಆ ವಾತಾವರಣವನ್ನು ಗಂಭೀರಗೊಳಿಸಿತ್ತು.

ಸುಶೀಲಮ್ಮನ ತಲೆ ಬಿಡುವಿಲ್ಲದೆ ಓಡುತಿತ್ತು. ಬುದ್ಧಿ ವಿವೇಕದ ಭೂತಗನ್ನಡಿಯಿಂದ ಶಾಂತಳ ಬಾಳನ್ನು ಪರಿಶೀಲಿಸುತಿತ್ತು. ಅದರಲ್ಲಿ ಅವರು ಹುಡುಕುತ್ತಿದ್ದುದು ಅಪರಾಧಿಯನ್ನು. ಒಮ್ಮೆ ಗೋಪಿ ಅಪರಾಧಿಯಾದನು. ಒಮ್ಮೆ ಸೂರಪ್ಪ, ಮತ್ತೊಮ್ಮೆ ತಾವು, ಮಗದೊಮ್ಮೆ ವಿಧಿ— ಹೀಗೆ ಕ್ರಮವಾಗಿ ಅಪರಾಧಿ ಸ್ಥಾನದಲ್ಲಿ ಎಲ್ಲರೂ ಬಂದು ನಿಂತರು. ನೋವಿನ ಮೂಲ ಸಿಗದೆ ಮನಸ್ಸು ಗೊಂದಲಕ್ಕಿಟ್ಟಿತು. ಗಳಿಗೆಗೊಮ್ಮೆ ನಿಟ್ಟುಸಿರು ಬಿಡುತ್ತಾ, ಹಾಸಿಗೆಗೆ ಮೈ ತಿಕ್ಕುತ್ತಾ ಮಲಗಿದರು. ತಾಯಿಯ ಹೊಯ್ದಾಟ ಕಂಡು ಶಾಂತಳ ಕರುಳು ಕರಗಿ ಬಂದು ಹೇಳಿದಳು,

"ಮನಸ್ಸನ್ನು ವ್ಯಥೆಯಿಂದ ಕೊಲ್ಲಬೇಡಮ್ಮ. ದೇವರು ಕಣ್ಣು ತೆರೆದು ನೋಡಿದರೆ ಗುಣವಾಗುವುದೇನೂ ದೊಡ್ಡದಲ್ಲ. ಹಾಸಿಗೆ ಬಿಟ್ಟಿದ್ದ ಮೇಲೆ

ನೀನು ಹೇಳಿದಂತೆ ನಡೆದುಕೊಳ್ಳುವೆನು. ಈ ವಿಷಯದಲ್ಲಿ ಮಾತ್ರ ಅಪ್ಪ ನನ್ನು ತಪ್ಪಾಗಿ ತಿಳಿಯಬೇಡ. ಅವನು ಮಾಡಿದ ಪ್ರತಿಯೊಂದು ಕೆಲಸ, ನಡೆದುಕೊಂಡ ನಡವಳಿಕೆಯಲ್ಲೆಲ್ಲ ಅರ್ಥವಿದೆ. ಗಂಡಸರೆಲ್ಲ ಅವನಂತಿದ್ದರೆ ಬಾಳಿನಲ್ಲಿ ಯಾರಿಗೂ ಕಹಿ ಬರುವುದಿಲ್ಲ. ದೇವರಂಥ ಮಾವನನ್ನು ಆದರ್ಶ ವಾಗಿರಿಸಿ ಬದುಕುವ ಪುಣ್ಯ ನಮ್ಮವರ ಹಣೆಯಲ್ಲಿ ಬರೆಯಲಿಲ್ಲ. ಬೇಕೆಂದು ಬದುಕನ್ನು ಸಂಶಯದ ಮುಳ್ಳಿಗೊಡ್ಡಿ ತಮ್ಮ ಹೃದಯದ ರಕ್ತವನ್ನು ಬಸಿದು, ನನ್ನ ಮೈಯಿನ ರಕ್ತವನ್ನೂ ಹೀರಿವರು. ಒಟ್ಟಿನಲ್ಲಿ ನನ್ನ ವಿಧಿ ಚೆನ್ನಾಗಿಲ್ಲ. ಯಾರನ್ನು ಯಾಕೆ ದೂಷಿಸಬೇಕು?"

ಘನರೋಗಕ್ಕೆ ತುತ್ತಾದ ಮಗಳ ಮನಸ್ಸನ್ನು ಹೆಚ್ಚು ಕಲಕಿ ನೋಯಿ ಸುವುದು ಅವರಿಗಿಷ್ಟವಾಗಲಿಲ್ಲ. ತಮ್ಮ ಮನಸ್ಸಿನಲ್ಲುಂಟಾಗುತ್ತಿದ್ದ ಭಾವನೆ ಗಳನ್ನೆಲ್ಲ ಅದುಮಿ ಹಿಡಿದು ಮಾತಿಗೆ ಮುಕ್ತಾಯ ಹಾಕಿದರು.

"ಹಾಗೇ ಸಮಾಧಾನ ಮಾಡಿಕೊಳ್ಳಬೇಕಾಗಿದೆ ಶಾಂತ. ನಿನ್ನ ಗಂಡನ ಕಟುಕತನಕ್ಕೆ ಇನ್ನು ಯಾವ ಶಬ್ದವೂ ಇಲ್ಲ. ಬಂದದ್ದನ್ನನುಭವಿಸುವುದೊಂದೇ ಈಗುಳಿದಿರುವುದು. ನೀನು ಮಾತ್ರ ಎದೆಗುಂದಬೇಡ. ಆರೋಗ್ಯದ ಕಡೆ ಹೆಚ್ಚು ನಿಗವಿಡು. ಬದುಕಿ ಉಳಿದರೆ ನಿನ್ನಂತೆ ನೊಂದ ನಾಲ್ಕಾರು ಹೆಣ್ಣು ಮಕ್ಕಳ ಬಾಳ ಸುಧಾರಣೆಗೆ ಜೀವನ ಮುಡಿಪಿಟ್ಟು ದುಡಿ. ಆಗ ನನ್ನಾತ್ಮಕ್ಕೆ ಎಲ್ಲಿದ್ದರೂ ಶಾಂತಿಯುಂಟಾಗುತ್ತದೆ. ಮಲಗು, ರಾತ್ರೆ ಬಹಳವಾಗಿದೆ. ಆರೋಗ್ಯವಿಲ್ಲದವಳು ಇಷ್ಟು ಹೊತ್ತು ಎಚ್ಚರವಿದ್ದದ್ದೆ ತಪ್ಪು. ಅದರಲ್ಲೂ ಅತ್ತು ಅತ್ತು ಶಕ್ತಿ ಜೀರಿ ಹಾಳು ಮಾಡಿಕೊಂಡಿರುವೆ, ಮಲಗಮ್ಮ. ಭಗವಂತ ಕಾಪಾಡಿಯಾನು, ನೋಡೋಣ!" ಎಂದು ಮಗ್ಗುಲಾದರು. ಶಾಂತಳೂ ನಿದ್ರೆಗೆ ಮೈಕೊಟ್ಟಳು.

ರಂಗಮ್ಮ ಹಾಸಿಗೆಯಿಂದೇಳುವುದು ನಾಲ್ಕಾರು ದಿನ ತಡವಾಯಿತು. ಅವರು ಎದ್ದು ಓಡಾಡುವಂತಾಗುವ ವರೆಗೂ ಸೂರಪ್ಪ, ಸುಶೀಲಮ್ಮ ಶಾಂತಳ ಸೇವೆ ಮಾಡಿ ಅನಂತರ ತಮ್ಮೂರಿಗೆ ಮರಳಿದರು.

## ೨೨

ಮನೆ ಮುಟ್ಟುವ ವೇಳೆಗೆ ರಾತ್ರೆ ಒಂಬತ್ತು ಗಂಟೆಯಾಗಿತ್ತು. ಹಸಿವಿಲ್ಲದ್ದರಿಂದ ಯಾರೂ ಊಟದ ಗೊಡವೆಗೆ ಹೋಗದೆ ಹಾಸಿಗೆ ಹಾಕಿ ಮಲಗಿದರು. ಅಶಾಂತಿಯಿದ್ದದ್ದರಿಂದ ಇಬ್ಬರಿಗೂ ಬೇಗ ನಿದ್ದೆ ಹತ್ತಲಿಲ್ಲ. ಹಾಗೆಂದು ಒಬ್ಬರಿಗೊಬ್ಬರು ಮನಸ್ಸನ್ನು ಕೆಣಕಿ ನೋಡಲೂ ಇಲ್ಲ; ಆ ಧೈರ್ಯವಾಗಲೂ ಇಲ್ಲ. ತಮ್ಮ ನೋವನ್ನು ತಾವೇ ತಿಂದು ಸುಸ್ತಾಗಿ ಕಣ್ಣುಮುಚ್ಚಿದರು.

ಬೆಳಗಾಯಿತು. ಸೂರಪ್ಪನಿಗೆ ಎಚ್ಚರವಾದರೂ ಸುಶೀಲಮ್ಮ ಹಾಸಿಗೆ ಬಿಟ್ಟೇಳಲಿಲ್ಲ. ಅವರೆಂದೂ ಅಷ್ಟು ಹೊತ್ತು ಮಲಗಿದವರಲ್ಲ. ಐದು ಗಂಟೆಗೆಲ್ಲ ಎದ್ದು ಕಸ ಮುಸುರೆಗೆ ಕೈಹಚ್ಚುತ್ತಿದ್ದರು. ಇಂದು ವೈಮರೆತು ಮಲಗಿದ್ದನ್ನು ಕಂಡು, ಶಾಂತಳಿಂದೇನಾದರೂ ವಿಷಯ ತಿಳಿದಿರಬಹುದೇನೊ ಎನ್ನುವ ಸಂದೇಹವಾಯಿತು. ಮರುಕ್ಷಣವೆ ಸುಶೀಲಮ್ಮ ಶಾಂತಳನ್ನು ಏಕಾಂತದಲ್ಲಿ ನೋಡಿದ ಮೇಲೂ ತನ್ನೊಡನೆ ಎಂದಿನಂತಿದ್ದುದನ್ನು ನೆನೆದು, ಹಾಗಾಗಿರಲಾರದೆಂದು ಧೈರ್ಯ ತಂದುಕೊಂಡರು. ಅಲ್ಲದೆ ಅಷ್ಟು ಹೊತ್ತು ಮಲಗಲು ಮತ್ತೊಂದು ಬಲವಾದ ಕಾರಣವೂ ಇತ್ತು. ಅವರು ಐದಾರು ತಿಂಗಳ ಗರ್ಭಿಣಿಯಾಗಿದ್ದರು. ಊರು ಬಿಟ್ಟಂದಿನಿಂದ ಹೊತ್ತು ಹೊತ್ತಿಗೆ ಅನ್ನ-ನಿದ್ದೆ ನೆಟ್ಟಗಿರುತ್ತಿರಲಿಲ್ಲ. ಸಾಲದ್ದಕ್ಕೆ ಪ್ರಯಾಣದ ಅಗಚಾಟಲು ಬೇರೆ. ಎಲ್ಲ ಸೇರಿ ದೇಹವನ್ನು ಸುಸ್ತು ಮಾಡಿದ್ದರೂ ಮಾಡಿರಬಹುದು! ಹಾಗೆಂದು ಸಮಾಧಾನ ತಂದುಕೊಂಡು, ಎಬ್ಬಿಸಲು ಹೋಗದೆ, ತಾವೆದ್ದು ಮುಖ ಮಾರ್ಜನೆ ಮುಗಿಸಿ, ಒಲೆ ಹೊತ್ತಿಸಿ ಕಾಫಿಗಿರಿಸಿದರು.

ಸ್ವಲ್ಪ ಹೊತ್ತಿನಲ್ಲೆ ಸುಶೀಲಮ್ಮ ಎದ್ದು, ನೀರುಮನೆಗೆ ಹೋಗಿ ಮುಖ ಮೈ ತೊಳೆದು, ಅಡಿಗೆ ಮನೆಯ ಕಡೆಗೂ ಹೊರಳಿ ನೋಡದೆ ಪುನಃ ಬಂದು ಹಾಸಿಗೆ ಹಿಡಿದರು ಸೂರಪ್ಪನಿಗಾಗ ಸಂಶಯ ಮೂಡಿತು. ತಾಯಿ—ಮಕ್ಕಳಲ್ಲಿ ವಿಚಾರ-ವಿನಿಮಯ ನಡೆದಿರಲೇ ಬೇಕೆಂದೂಹಿಸಿದರು. ತಮಗೆ ಹೊಳೆದ ಭಾವನೆಯನ್ನು ತೋರ್ಪಡಿಸಿಕೊಳ್ಳಲಿಲ್ಲ. ಮುಖದಲ್ಲಿ ಗೆಲುವು ತಂದು ಕಾಫಿಯನ್ನು ಅವರಿರುವಲ್ಲಿಗೆ ತೆಗೆದುಕೊಂಡು ಹೋದರು. ಸುಶೀಲಮ್ಮ ಕಡೆಗಣ್ಣಿ

ನಿಂದ ಕೂಡ ನೋಡಲಿಲ್ಲ. ಒತ್ತಾಯ ಮಾಡಿ ಅರ್ಧ ಕಪ್ಪಿನಷ್ಟು ಕುಡಿಸ ಬೇಕಾದರೆ ಸೂರಪ್ಪ ಸುಸ್ತಾದರು. ಕಾರಣ ಕೇಳಿದ್ದಕ್ಕೆ ಮೈಯಲ್ಲಿ ಸೌಖ್ಯವಿಲ್ಲ ವೆಂದುತ್ತರ ಬಂತು. ಬಿಡಿಸಿ ಕೇಳಲು ಧೈರ್ಯವಾಗಲಿಲ್ಲ. ಸಂತಾನಕ್ಕೆ ಹಿಡಿದ ಸಾವಿನ ನೋವು ಹೃದಯದಲ್ಲಿ ತುಂಬಿ, ಬೆಂಕಿಯ ಬೆಟ್ಟದಂತೆ ಒಳಗೊ ಳಗೆ ಮೊರೆಯುತ್ತಿರುವಾಗ, ಮಾತಿನ ಕಾವು ತಗುಲಿ ಸಿಡಿದು ಅನಾಹುತವಾದರೆ ಅನುಭವಿಸುವುದು ಕಷ್ಟವೆಂದು ತಿಳಿದು ಹೆಚ್ಚು ಕೆಣಕದೆ, ತಲೆಯಲ್ಲಿ ಚಿಂತೆ ತುಂಬಿಕೊಂಡು ನಿಧಾನವಾಗಿ ಕೊಠಡಿಯಿಂದ ಹೆಜ್ಜೆ ಕಿತ್ತರು.

ನಾಲ್ಕಾರು ದಿನಗಳಲ್ಲಿ ಚೇತರಿಸಿಕೊಳ್ಳಬಹುದೆಂದಿದ್ದ ಸೂರಪ್ಪನ ಊಹೆ ತಲೆಬುಡವಾಯಿತು. ಹತ್ತು-ಹದಿನೈದು ದಿನಗಳೆದರೂ ಸುಶೀಲಮ್ಮ ಮೇಲೇ ಳಲೆ ಇಲ್ಲ. ದಿನ ಹೋದಂತೆ ಅವರ ದೇಹದಲ್ಲಿ, ಸ್ವಭಾವದಲ್ಲಿ ವ್ಯತ್ಯಾಸ ಇಳಿಮುಖವಾಗುತಿತ್ತೆ ಹೊರತು ಉನ್ನತಿ ಕಂಡುಬರಲೇ ಇಲ್ಲ. ಬದುಕಿನ ಪ್ರೇಮ. ಉತ್ಸಾಹ ಮತ್ತೆ ಮರೆಯಾದುವು. ಅನ್ನ-ನೀರು ವಿಷವಾಯಿತು. ಮೈಯನ್ನಲಂಕರಿಸಿದ್ದ ಒಡವೆ-ವಸ್ತ್ರಗಳು ಪೆಟ್ಟಿಗೆಯನ್ನಾಶ್ರಯಿಸಿದುವು. ಆರೋಗ್ಯವನ್ನು ಹದವಾಗಿರಿಸಲುಪಯೋಗಿಸುತ್ತಿದ್ದ ಹಾಸಿಗೆ-ಹಚ್ಚಡವೆಲ್ಲ ಮೂಲೆ ಸೇರಿತು. ಚಾಪೆಯೆ ಹಾಸಿಗೆಯಾಯಿತು. ಒಮ್ಮೊಮ್ಮೆ ಅದೂ ಬೇಸರವೆನಿಸಿದಾಗ ನೆಲಕ್ಕೆ ಮೈಯೊಡ್ಡುತ್ತಿದ್ದರು. ಆಗ ಮೈಯ ಯಾತನೆ ಹೇಳತೀರದು ಎರಡು ಮೂರು ದಿನವಾದರೂ ಹಿಡಿದ ಕೈಕಾಲು ಬಿಡುತ್ತಲೆ ಇರಲಿಲ್ಲ. ಅಷ್ಟಾದರೂ ಹಠ ಬಿಡುತ್ತಿರಲಿಲ್ಲ. ಎಲ್ಲ ವಿಧದಲ್ಲೂ ದೇಹ ದಂಡಿಸಿ ಹಣ್ಣು ಮಾಡುತಿದ್ದರು. ಅವರ ಕರಗಿದ ದೇಹ ಸೂರಪ್ಪನ ಕಣ್ಣು ಕುಕ್ಕಿತು. ಮನಸ್ಸು ತಡೆಯದೆ ಸುಶೀಲಮ್ಮನ ಅಂತರರ್ಥವನ್ನು ತಿಳಿಯುವ ಸಾಹಸ ಮಾಡಿದರು.

ಸುಶೀಲಮ್ಮನಿಗೆ ಆಲೂಗೆಡ್ಡೆ ಬೋಂಡವೆಂದರೆ ಬಹಳ ಪ್ರೀತಿ. ಅಂದಿನ ಕಾಫಿತಿಂಡಿಗೆ ಅದನ್ನೆ ಮಾಡಿ ತಂದು ಹೆಂಡತಿಯ ಮುಂದಿಟ್ಟರು. ಸುಶೀಲಮ್ಮ ಕೈಲಿಸಹ ಮುಟ್ಟಲಿಲ್ಲ. ಸೂರಪ್ಪ ತಾವೆ ಒತ್ತಾಯ ಮಾಡಿ ಒಂದು ಬೋಂಡ ತಿನ್ನಿಸಿ ಸ್ವಲ್ಪ ಕಾಫಿ ಕುಡಿಸಿ ಹೇಳಿದರು,

"ಏನಾಗುತ್ತದೆ ಸುಶೀಲ ನಿನಗೆ ಮೈಯಲ್ಲಿ? ವೈದ್ಯರನ್ನು ಕರೆಸುವೆ ನೆಂದರೆ ಬೇಡವೆಂದು ತಡೆಯುವೆ. ಊಟ ತಿಂಡಿ ಮಾತ್ರ ಮುಟ್ಟುವುದಿಲ್ಲ.

ತಿಂಗಳುಗಟ್ಟಲೆ ಅನ್ನ-ನೀರು ಬಿಟ್ಟರೆ ಯಾಕಾಗುತ್ತವೆ? ಮೈಯಲ್ಲೊಂದಿಷ್ಟು ರಕ್ತವಿಲ್ಲ. ಮೂಳೆಯೆಲ್ಲ ಒಡೆದು ಕಾಣುತ್ತಿವೆ. ಹೀಗೆ ದೇಹ ದಂಡಿಸಿದರೆ ಹೇಗೆ ಹೇಳು!"

ಸೂರಪ್ಪನ ಎದೆ ಕರಗಿ ಬಂದ ಮಾತು ಸುಶೀಲಮ್ಮನೆದೆಯಲ್ಲಿ ದುಃಖದ ಬೆಂಕಿ ಹೊತ್ತಿಸುತಿತ್ತು. ಒತ್ತಿ ಬರುತ್ತಿದ್ದ ದುಃಖವನ್ನು ತುಟಿ ಕಚ್ಚಿ ತಡೆದು, ಎದುರಿಗಿದ್ದ ಮಕ್ಕಳ ಭಾವಚಿತ್ರ ನೋಡುತ್ತ ಕುಳಿತರು. ಆ ನೋಟ ಸೂರಪ್ಪನ ಕರುಳು ಕೊರೆಯಿತು, ಕಣ್ಣು ಕರಗಿಸಿತು. ಬಂದ ದುಃಖವನ್ನು ತಡೆದು ಹೆಂಡತಿಯ ಬಳಿ ಸರಿದು ಅವರ ಎಡಗೈಯನ್ನು ತಮ್ಮ ಕೈಯಲಿಟ್ಟು ಮೃದುವಾಗಿ ಸವರುತ್ತ ತುಂಬಿದ ಕಂಠದಿಂದ ಕೇಳಿದರು,

"ನಿನ್ನೊಡನೆ ಶಾಂತಳ ಜೀವನ ಬಚ್ಚಿರಿಸಿದ್ದೆನೆಂದು ಕೋಪವೆ ?"

ನೀರಾಡುತ್ತಿದ್ದ ಕಣ್ಣಲ್ಲಿ ಹೌದೆನ್ನುವ ಅರ್ಥ ತುಂಬಿ, ಸುಶೀಲಮ್ಮ ಗಂಡನನ್ನು ಮಿಕಿಮಿಕಿ ನೋಡಿದರು. ಆ ನೋಟವನ್ನರ್ಥ ಮಾಡಿಕೊಂಡು ಹೇಳಿದರು ಸೂರಪ್ಪ,

"ನಿನ್ನ ಬೇಸರಕ್ಕೆ ಅದೇ ಕಾರಣವಿರಬಹುದೆಂದು ನನಗಾಗಲೆ ಹೊಳೆಯಿತು. ಏನು ಮಾಡಲಿ ಸುಶೀಲ—ನಿನ್ನ ದೌರ್ಬಲ್ಯಕ್ಕೆ ಹೆದರಿ ಹಾಗೆ ಮಾಡಿದೆ. ಅಲ್ಲಿ ನಡೆದ ವಿಷಯವನ್ನು ಆಗಾಗ ನಿನಗೆ ತಿಳಿಸುತ್ತ ಬಂದಿದ್ದರೆ ಇಷ್ಟು ದಿನವೂ ನೀನು ಬದುಕುತ್ತಿರಲಿಲ್ಲ. ಇನ್ನಾದರೂ ನೀನು ಆ ದೌರ್ಬಲ್ಯವನ್ನು ಹೋಗಲಾಡಿಸಿಕೊಳ್ಳಬೇಕು. ಇಲ್ಲದಿದ್ದರೆ ಇಬ್ಬರ ನೆಮ್ಮದಿಯೂ ಮಣ್ಣುಪಾಲಾಗುವುದು."

ಉಕ್ಕಿ ಬಂದ ದುಃಖವನ್ನು ತಡೆಯಲಾರದೆ ಸುಶೀಲಮ್ಮ ಮುಖಕ್ಕೆ ಕೈ ಮುಚ್ಚಿ ಬಿಕ್ಕಿ ಬಿಕ್ಕಿ ಅತ್ತರು. ಸೂರಪ್ಪನ ಮಾತಿಗೆ ಅದೇ ಉತ್ತರವಾಯಿತು. ಹುಚ್ಚೆದ್ದ ಪ್ರವಾಹದಂತೆ ಮೊರೆಯುತ್ತ ಬರುತ್ತಿದ್ದ ಸುಶೀಲಮ್ಮನ ದುಃಖದ ವೇಗಕ್ಕೆ ಸೂರಪ್ಪನೆದೆ ನಡುಗಿ ಅಲ್ಲಕಲ್ಲೋಲವಾಯಿತು. ಅವರೆಗೆ ಒತ್ತಾಯದಿಂದ ತಡೆದು ಹಿಡಿದಿದ್ದ ದುಃಖದ ಪ್ರವಾಹ ಎಡೆಯ ಕಟ್ಟೆಯನ್ನೊಡೆದು ಹಾರಿತು. ಹೃದಯ ಹಗುರವಾಗುವ ವರೆಗೆ ತಾವೂ ಅತ್ತು, ಕಡೆಗೆ ಸಮಾಧಾನ ತಂದು ಸುಶೀಲಮ್ಮನ ತಲೆ ನೇವರಿಸುತ್ತ ಹೇಳಿದರು,

"ಅಳಬೇಡ ಸುಶೀಲ, ನಮ್ಮ ಬಾಳೆ ದುಃಖದ ಕಡಲಾಗಿರುವಾಗ ಎಷ್ಟು,

ಅತ್ತರೆ ತಾನೆ ಮುಗಿಯುತ್ತದೆ, ಹೇಳು! ಜೀವನ ಇಷ್ಟೆ ಎಂದು ತಿಳಿದ ಮೇಲೆ ನೆಮ್ಮದಿ ತಂದುಕೊಳ್ಳಬೇಕು. ಶಾಂತಳ ಬಾಳು ಹೀಗಾಗುವುದೆಂದು ಕನಸಿನಲ್ಲೂ ಕಂಡಿರಲಿಲ್ಲ. ತಪ್ಪು ಮಾಡಿದ ಗೋಪಿ, ತಿದ್ದಿ ಸರಿಪಡಿಸಿ ಕೊಳ್ಳುವನೆಂದು ನಂಬಿದ್ದೆ. ನನ್ನ ನಂಬಿಕೆ ಕರಗಿ ವಿಚಾರಿಸಿಕೊಳ್ಳುವ ಮೊದಲೆ ಇಷ್ಟೆಲ್ಲ ರಂಪ ನಡೆದು ಹೋಗಿದೆ. ಇದು ವಿಧಿಯ ಕೈವಾಡವೆ ಹೊರತು ಮತ್ತೇನಲ್ಲ. ಹುಟ್ಟಿದ ಸಂತಾನ ಬೆಳೆದು ಬೆಳಗುವ ಪುಣ್ಯ ನಾವು ಪಡೆದು ಬಂದಿಲ್ಲ. ಅದಕ್ಕಾಗಿ ಮರುಗಿ ಕರಗಬೇಡ. ಮನಸ್ಸನ್ನು ಕಲ್ಲು ಮಾಡಿ ಬದು ಕನ್ನು ಎದುರಿಸು, ಸುಶೀಲ!"

ಸುಶೀಲಮ್ಮ ದುಃಖವನ್ನು ಸ್ವಲ್ಪ ಹಿಡಿತಕ್ಕೆ ತಂದು ನಡುಗುತ್ತಿದ್ದ ಧ್ವನಿ ಯಲ್ಲಿಯೆ ಕೇಳಿದರು,

"ಶಾಂತ ಏನಿನ್ನು ಬದುಕಲಾರಳಲ್ಲವೆ ?"

"ಹೇಳಲು ಬರುವುದಿಲ್ಲ—ಬದುಕಿದರೂ ಬದುಕಬಹುದು, ಬದುಕದೆಯೂ ಇರಬಹುದು. ಎರಡು ಸ್ಥಿತಿಯನ್ನೆದುರಿಸಲೂ ಸಿದ್ಧರಿರಬೇಕು ನಾವು."

"ನಮ್ಮ ಸಂಕಟದ ಬಾಳು ಇಲ್ಲಿಗೆ ಮುಗಿಯಲಿಲ್ಲ, ಬೆಳೆಯುತ್ತಿದೆ. ಇವನ್ನು ಸಹಿಸುವುದಾದರೂ ಹೇಗೆ ? ಎಷ್ಟು ದಿನವೆಂದು ಈ ನೋವನ್ನನು ಭವಿಸಲಿ ? ನಿಮಗನ್ಯಾಯ ಮಾಡಬಾರದೆಂದು ಶಕ್ತಿಮೀರಿ ತಡೆಯುತ್ತಿರುವೆನು. ಕಡೆಗೂ ಏನಾಗುವುದೊ ಏನೊ !" ಎಂದು ಬಿಕ್ಕಿಬಿಕ್ಕಿ ಅಳತೊಡಗಿದರು.

"ಇದೊಂದು ಬಾರಿ ಕ್ಷಮಿಸಿ ಬಿಡು ಸುಶೀಲ. ಇನ್ನು ಮರೆತೂ ಇಂದ್ರಿಯ ಸುಖಕ್ಕೆ ಸೋಲು ಬೀಳುವುದಿಲ್ಲ. ನಿನ್ನಾಣೆಗೂ ಸಂಯಮ ಜೀವನ ಪಾಲಿಸು ವೆನು. ನೀನು ಮಾತ್ರ ನನ್ನನ್ನಗಲಿ ಹೋಗಬೇಡ ಸುಶೀಲ! ನೀನಿಲ್ಲದೆ ಬದುಕಲಾರೆ! ಬದುಕಲಾರೆ ಸುಶೀಲಾ... ........ಬದುಕಲಾರೆ!" ಎಂದು ಸೂರಪ್ಪನೂ ಮಕ್ಕಳಂತೆ ಬಿಕ್ಕಿ ಬಿಕ್ಕಿ ಅತ್ತರು. ಕಣ್ಣಿನಿಂದ ನೀರು ಪ್ರವಾಹ ದಂತೆ ಹರಿಯಿತು.

ಸೂರಪ್ಪನ ದೀನ ಮುದ್ರೆ, ನೋವಿನ ನೋಟ ಸುಶೀಲಮ್ಮನ ಕರುಳು ಹಿಂಡಿತು, ಎದೆ ಕರಗಿಸಿತು. ಯಜಮಾನರ ಎರಡು ಕೈಗಳನ್ನೂ ತಮ್ಮ ಕೈಗೆ ತೆಗೆದುಕೊಂಡು, ಕಣ್ಣಲ್ಲಿ ತಮ್ಮೆಲ್ಲ ಪ್ರೀತಿಯನ್ನು ತುಂಬಿ ಗದ್ಗದ ಧ್ವನಿಯಲ್ಲಿ ಹೇಳಿದರು,

"ಬದುಕಲು ಪ್ರಯತ್ನಿಸುವೆನು. ಒಂದು ಪಕ್ಷ ಪ್ರಯತ್ನ ವಿಫಲವಾದರೆ ಕ್ಷಮಿಸಿ ಬಿಡಿ. ಏಳಿ, ನಾನೆ ನಿಮಗೆ ಕಾಫಿ-ತಿಂಡಿ ಕೊಡುವೆನು. ನಿಮ್ಮನ್ನು ನೋಡುವುದಕ್ಕಾಗುವುದಿಲ್ಲ. ಇತ್ತೀಚೆಗಂತೂ ತೀರಾ ಕಂಗೆಟ್ಟು ಹೋಗಿರುವಿರಿ" ಎಂದು ಕಣ್ಣೊರೆಸುತ್ತ ಅಡಿಗೆ ಮನೆಯ ಕಡೆ ಹೊರಳಿದರು.

ಸೂರಪ್ಪ ತಡೆದು ಹೇಳಿದರು,

"ಬೇಡ ಸುಶೀಲ, ಇನ್ನೂ ನಾಲ್ಕು ದಿನ ವಿಶ್ರಾಂತಿ ತೆಗೆದುಕೊ, ನಾನು ಮಾಡಿ ಹಾಕುವೆನು. ನೀನುಂಡು ತಿಂದು ನನ್ನ ಕಣ್ಣೆದುರಿಗೆ ಹಾಯಾಗಿದ್ದರೆ ನನಗೆಷ್ಟೋ ಸಂತೋಷ."

ಆ ಮಾತು ಸುಶೀಲಮ್ಮನ ಹೃದಯವನ್ನರಳಿಸಿತು. ಪವಿತ್ರ ಪ್ರೀತಿಯೆ ಮೂರ್ತಿವೆತ್ತಂತಿರುವವರಿಗೆ ತಮ್ಮಿಂದ ದ್ರೋಹವಾಗುತ್ತಿದೆಯಲ್ಲ ಎಂದು ಒಂದು ಕ್ಷಣ ನಡುಗಿದರು. ಆ ಭಾವವನ್ನು ತೋರ್ಪಡಿಸಿಕೊಳ್ಳುವ ಸಮಯ ವಲ್ಲವಾದ್ದರಿಂದ ತಳ್ಳಿ ಹಾಕಿ, ಅವರ ಬಗ್ಗೆ ತಮ್ಮಲ್ಲಿರುವ ಪ್ರೀತಿಯನ್ನೆಲ್ಲಾ ಮಾತಿನಲ್ಲಿ ತುಂಬಿ ಮಾರ್ದವತೆಯ ರಂಗು ಬಳಿದು ಹೇಳಿದರು,

"ನನ್ನ ದೇವರ ಮನಸ್ಸು ನನಗೆ ಗೊತ್ತಿಲ್ಲವೆ? ನಿಮಗೆ ನನ್ನ ಸೇವೆ ಎಷ್ಟು ಮಾಡಿದರೂ ತೃಪ್ತಿಯಿಲ್ಲ. ಆ ಬಯಕೆ ನನಗೂ ಇದೆಯೆನ್ನುವುದನ್ನು ಮರೆಯಬೇಡಿ. ನನ್ನ ಮೈ ಈಗೆಷ್ಟೊ ಹಗುರವಾಗಿದೆ, ನಿಮ್ಮ ಉಪಚಾರ ವ್ಯರ್ಥವಾಗಲಿಲ್ಲ—ಬನ್ನಿ" ಎಂದು ಮುಂದೆ ಹೆಜ್ಜೆಯಿರಿಸಿದರು.

ಸೂರಪ್ಪ ಕಣ್ಣೀರು ಮಿಡಿದು ಮಗುವಿನಂತೆ ಹಿಂಬಾಲಿಸಿದರು. ಅವರು ಪ್ರೀತಿಯ ಮಧು ತುಂಬಿ, ಕೊಟ್ಟ ಕಾಫಿ–ತಿಂಡಿ ಸ್ವೀಕರಿಸಿ, ಗರಿ ಮೂಡಿದಂ ತಾಗಿ ಅಂಗಡಿಗೆ ಹಾರಿದರು. ಸುಶೀಲಮ್ಮ ಹಾಸಿಗೆ ಹಿಡಿದಂದಿನಿಂದ ಹೊರಗೆ ಹೋದದ್ದು ಇಂದೆ. ಇಂದವರ ಮನಸ್ಸಿಗೆ ಅಪಾರ ನೆಮ್ಮದಿ ಬಂದಿತ್ತು. ಧೈರ್ಯವೂ ಗರಿಯೊಡೆದಿತ್ತು. ಶಾಂತ ಕಷ್ಟಕ್ಕೆ ಸಿಕ್ಕಿದ ಮೇಲೆ ಇಂಥಾ ದಿನ ವನ್ನು ಕಂಡಿರಲಿಲ್ಲ. ಇಂದು ತನ್ನಾಕೆ ಮೊದಲಿನ ತುಂಬು ಪ್ರೀತಿ ಹರಿಸಿ ದ್ದಾರೆ. ಆ ಅಮೃತಮಯ ಪ್ರೇಮ ಎಂದೆಂದಿಗೂ ತಮ್ಮ ಪಾಲಿಗಿರಲಿ. ಸುಶೀಲ ಎಂದೆಂದೂ ತಮ್ಮೊಡನಿದ್ದು ಆತ್ಮವನ್ನರಳಿಸಲಿ—ಎಂದು ದೇವರಲ್ಲಿ ಮೊರೆಯಿಡುತ್ತಾ ಅಂಗಡಿಯ ಹೊಸ್ತಿಲೊಳಗೆ ಕಾಲಿರಿಸಿದರು. ಅವರನ್ನು ಕಂಡೊಡನೆ ಗಲ್ಲಾದ ಮೇಲಿದ್ದ ಕೃಷ್ಣಮೂರ್ತಿ ಸರ್ರನೆದ್ದು ನಿಂತರು. ಸೂರಪ್ಪ

ಮೊದಲು ಆ ಕಡೆ ಲಕ್ಷ್ಯ ಕೊಡದೆ ಹೋಟೇಲಿಗೆಲ್ಲಾ ಒಂದು ಸುತ್ತು ಬಂದು ವ್ಯವಸ್ಥೆ ನೋಡಿ ತೃಪ್ತಿ ಹೊಂದಿ ಕೃಷ್ಣಪ್ಪನ ಬಳಿ ಬಂದು ಲೆಖ್ಖಾಚಾರ ವಿನಿಮಯ ಮಾಡಿಕೊಳ್ಳತೊಡಗಿದರು.

* * * *

ಇತ್ತ ಸುಶೀಲಮ್ಮನೂ ಅದೇ ವಿಚಾರವಾಗಿ ಚಿಂತಿಸುತ್ತಿದ್ದರು. ಬದುಕಿನಲ್ಲಿ ಯಾವ ಸಂಕಟವುಂಟಾದರೂ ಲಕ್ಷ್ಯಕ್ಕೆ ತರದೆ, ತಮ್ಮ ಪತಿಗಾಗಿಯಾದರೂ ಬದುಕಲೆ ಬೇಕೆಂದು ಮನಸ್ಸಿನೊಡನೆ ತುಂಬಾ ಹೋರಾಡುತ್ತಿದ್ದರು. ಆ ಆಶೆಯ ಕುಡಿಯನ್ನುಳಿಸಿ ಬೆಳೆಸಿಕೊಂಡು ಬಂದಂತೆಲ್ಲ, ಗರ್ಭದಲ್ಲಿರುವ ಪಿಂಡ ಚಿವುಟಿ ಹಾಕುತಿತ್ತು. ಕಡೆಗೂ ಏನಾಗುವುದೊ ಏನೊ! ನಮ್ಮ ಬಾಳೀಕೆ ಹೀಗಾಯಿತೆನ್ನುವುದೆ ತಿಳಿಯದು ಸಂತಾನದ ಸಾವಿನಿಂದ ಕಮರಿ ಹೋಗುತ್ತಿದೆಯೆ ಹೊರತು, ನಮ್ಮ ದಾಂಪತ್ಯ ಜೀವನದಲ್ಲಿ ಗಂಡ ಹೆಂಡಿರಿಂದಾಗಿ ಎಂದೂ, ಯಾವುದರಲ್ಲೂ ಕಹಿಯುಂಟಾಗಿರಲಿಲ್ಲ. ಬಾಳು ಹಾಳಾಗಲಿಲ್ಲ.

ನಮ್ಮದು ಆದರ್ಶ ದಾಂಪತ್ಯ. ನಮ್ಮಿಬ್ಬರಲ್ಲೂ ಸಮರಸವೆನ್ನುವುದು ಹಾಲು–ಸಕ್ಕರೆಯಂತೆ ಹೊಂದಿಕೊಂಡು ಬಂದಿದೆ. ಒಬ್ಬರನ್ನು ಬಿಟ್ಟೊಬ್ಬರಿಲ್ಲ. ಕಷ್ಟ–ಸುಖದಲ್ಲಿ ಇಬ್ಬರೂ ಸಮಭಾಗಿಗಳಾಗುವೆವು. ಒಬ್ಬರ ಹೃದಯಕ್ಕೆ ವೇದನೆಯಾದರೆ ಮತ್ತೊಬ್ಬರು ಅದರ ಪರಿಹಾರಕ್ಕೆ ಪ್ರಯತ್ನಿಸುವೆವು. ಬೇಸರಿಸಿ ಮುಖ ತಿರುಗಿಸಿ ಹೋಗುವುದಿಲ್ಲ. ನಮ್ಮ ದೃಷ್ಟಿಯಲ್ಲಿ ಇಬ್ಬರ ಆತ್ಮಕ್ಕೂ ಬೆಲೆಯಿದೆ. ಹೆಂಗಸೆಂದು ಅಲಕ್ಷ್ಯ ಮಾಡಲಿಲ್ಲ, ಗಂಡಸೆಂದು ತಲೆಯ ಮೇಲೆ ಕೂರಿಸಿಕೊಳ್ಳಲಿಲ್ಲ. ಅಮರ ಪ್ರೀತಿಗೆ ಅಮರ ಪ್ರೀತಿದಾನಮಾಡಿ ಆತ್ಮವಿಕಸನ ಮಾಡಿಕೊಂಡಿರುವೆವು.

ಸೇವೆ ಮಾಡುವಾಗ ಇಬ್ಬರಲ್ಲೂ ದೈವಿಕ ಭಾವನೆ ಮೂಡಿರುತ್ತದೆ. ನನ್ನನ್ನವರು ದೇವತೆಯೆಂದು ಪೂಜಿಸಿದ್ದರೆ ನಾನವರನ್ನು ದೇವರೆಂದು ಪೂಜಿಸಿದ್ದೇನೆ. ನಮ್ಮಿಬ್ಬರಲ್ಲೂ ಆ ದೈವಿಕ ಭಾವನೆ ಯಾವಾಗಲೂ ಜಾಗೃತವಾಗಿರುತ್ತದೆ. ಹೀಗಿದ್ದೂ ನಮ್ಮ ಸಂಸಾರ ಮಣ್ಣು ಪಾಲಾಗಿದೆ. ಮಕ್ಕಳು ನಮ್ಮಂತಾದರೂ ಅಳಿಯರು ನಮ್ಮಂತಾಗಲಿಲ್ಲ. ನಮಗೆ ಸಿಕ್ಕಿದ ಇಬ್ಬರೂ ಅಳಿಯಂದಿರು

ಕಟುಕರಂತೆ ನಡೆದುಕೊಂಡಿದ್ದಾರೆ. ಆ ಕಟುಕತನ ಅವರ ಹುಟ್ಟಿನಿಂದಲೆ ಬಂದದ್ದೋ, ನಮ್ಮ ಮಕ್ಕಳಿಂದಾಗಿ ಹುಟ್ಟಿದ್ದೋ, ಯಾವುದೂ ಬಗೆಹರಿಯ ದಾಗಿದೆ.

ನಾವು ಕಂಡಂತೆ ನಮ್ಮಿಬ್ಬರು ಹೆಣ್ಣುಮಕ್ಕಳಲ್ಲಿ ಯಾವ ದೋಷವೂ ಇಲ್ಲ. ಸದ್ಗೃಹಿಣಿಯರಿಗೆ ತಕ್ಕ ಸದ್ಗುಣವೆಲ್ಲವೂ ಅವರಲ್ಲಿತ್ತು. ಹಾಗಿದ್ದೂ ಯಮಯಾತನೆಯನ್ನುಂಡಿದ್ದಾರೆ; ಬಾಳಿಗೆ ಬಲಿಯಾಗಿದ್ದಾರೆ. ಉತ್ತಮರ ಹೊಟ್ಟೆಯಲ್ಲಿ ಹುಟ್ಟಿದರೂ ಉತ್ತಮರಾಗಿ ಬದುಕಿದರೂ ಸುಖವುಣ್ಣಲಿಲ್ಲ; ಶಾಂತಿ ಪಡೆಯಲಿಲ್ಲ. ಹಿಂದಿನ ಜನ್ಮದ ಪಾಪದೋಷವಿರಬೇಕು; ಮಹತ್ತರ ವಾದ ಪಾಪ ಮಾಡಿರುವುದರಿಂದಲೆ ಕಟುಕರ ಕೈ ಹಿಡಿದರು. ಅವರ ಬಾಳು ಬರಿದಾಯಿತು.

ಮಕ್ಕಳ ಬಾಳು ಬರಿದಾಗಲು ನಮ್ಮದೂ ದೋಷವಿದೆ. ಸಂತಾನ ಅವ ರವರ ಕರ್ಮಕ್ಕೆ ತಕ್ಕಂತೆ ನೋವು ನಲಿವಿನಿಂದ ಕೂಡಿರುತ್ತದೆಂದು ಹಿರಿಯರ ಬಾಯಿಂದ ಕೇಳಿರುವೆನು. ನೋವಿನ ಸಂತಾನ ಪಡೆಯಲು ಹಿಂದಿನ ಜನ್ಮದಲ್ಲಿ ನಾವೂ ಯಾವುದೊ ದುಷ್ಕರ್ಮ ಮಾಡಿರಲೆ ಬೇಕು. ಇಲ್ಲದಿದ್ದರೆ ನಮಗೀ ಯಮಯಾತನೆಯುಂಟಾಗಲು ಕಾರಣವೆ ಇಲ್ಲ.

ಏನೊ ಆಯಿತು ಹೋಯಿತು, ಮರೆತು ಬಿಡೋಣ, ಮುಂದಾದರೂ ಸುಖವಾಗಿರೋಣವೆಂದರೆ ಅದೂ ಸಾಧ್ಯವಿಲ್ಲ. ಸಂತಾನಕ್ಕೆ ಹಿಡಿದ ಶಾಪದ ನೋವು ಜೀವವಿರುವ ವರೆಗೆ, ಸಂತಾನದ ಫಲವಿರುವ ವರೆಗೆ ನಮ್ಮನ್ನು ಕಾಡೆ ಕಾಡುವುದು; ಸಾಲದಿದ್ದಕ್ಕೆ ಹುಟ್ಟುವ ಮಕ್ಕಳೆಲ್ಲ ಹೆಣ್ಣೆ. ನನ್ನ ಗರ್ಭದಲ್ಲೀ ಗಿರುವುದೂ ಹೆಣ್ಣೆ. ಕೆಲವು ಲಕ್ಷಣದಿಂದ ನಾನಾಗಲೆ ಅದನ್ನೂಹಿಸಿರುವೆನು. ಹೋಗಲಿ, ಗರ್ಭಪಾತ ಮಾಡಿಕೊಂಡಾದರೂ ಮುಂದಾಗುವ ಯಾತನೆ ಕಳೆದುಕೊಳ್ಳೋಣವೆಂದರೆ ಈಗದೂ ಸಾಧ್ಯವಿಲ್ಲ, ಮಗು ಬೆಳೆದುಹೋಗಿದೆ. ಹುಟ್ಟಿದ ಮೇಲೆ ಅದರುದ್ದಕ್ಕೂ ದುಃಖಪಡಬೇಕು.

ಇಷ್ಟಕ್ಕೂ ಅದರೊಂದಿಗೆ ನಮ್ಮ ಸಂತಾನಫಲ ಮುಕ್ತಾಯವಾಗುವು ದೆಂದು ಹೇಗೆ ತಾನೆ ನಂಬುವುದು? ಅವರೇನೊ ಸಂಯಮ ಜೀವನ ಪಾಲಿ ಸೋಣವೆಂದು ಹೇಳುವರು. ಇದ್ದ ಸಮಯ ಇದ್ದ ಹಾಗೆ ಇರುವುದಿಲ್ಲ. ಇಬ್ಬರ ಮನಸ್ಸೂ ಸೋಲು ಬಿದ್ದು ಸಂತಾನದ ಕಟ್ಟಿಗೆ ಸಿಕ್ಕಿ ಬಿದ್ದರೆ? ಇಬ್ಬರಲ್ಲೂ

ಅಮರ ಪ್ರೇಮವಾಹಿನಿ ಹರಿಯುತ್ತಿರುವುದರಿಂದ ಹಾಗಾಗಲು ಸಾಧ್ಯವಿದೆ. ಬಾಳನ್ನು ಪರೀಕ್ಷೆಗಿರಿಸಿ ದುಃಖಪಡುವುದಕ್ಕಿಂತ ವಿಷಫಲ ಬಿಡುತ್ತಿರುವ ಈ ಮರವನ್ನು ಕಡಿದೊಗೆಯುವುದೆ ಲೇಸು !

ನನ್ನ ಸಾವಿನಿಂದವರು ದುಃಖಕ್ಕೀಡಾಗುವರಲ್ಲ—ಆ ಯಾತನೆಯನ್ನ ವರು ಸಹಿಸಬಲ್ಲರೆ? ಲಗ್ನವಾಗಿ ಬಂದಂದಿನಿಂದ ನನ್ನ ನೆರಳಾಗಿ ಬಾಳಿದ್ದಾರೆ. ಒಂದು ಕ್ಷಣ—ಅವರ ಕಣ್ಣಿಂದ ಮರೆಯಾದರೆ ತತ್ತರಿಸುತ್ತಿದ್ದರು. ಅಂಥವರು ಕಡೆವರೆಗೂ ನನ್ನಗಲಿಕೆಯನ್ನು ಹೇಗೆ ತಾನೆ ಸಹಿಸಬಲ್ಲರು ! ಅವರನ್ನು ಬಿಟ್ಟು ನಾನು ಹೋಗುವುದಾದರೂ ಹೇಗೆ? ಅವರು ದಾನ ಮಾಡಿದ ಪ್ರೀತಿಯಲ್ಲಿ ಎಂಥ ವೈಶಿಷ್ಟ್ಯವಿದೆ! ಗುರು–ತಂದೆ–ಗಂಡ–ಮಗ–ಸೋದರ–ಸ್ನೇಹಿತ–ಎಲ್ಲವೂ ತಾನಾಗಿ, ಆಯಾ ಸಂದರ್ಭಕ್ಕೆ ತಕ್ಕಂತೆ ನಡೆದು ಆತ್ಮವನ್ನರಳಿಸಿರುವ ರಲ್ಲಾ—ಅಂಥವರಿಗೆ ದ್ರೋಹ ಮಾಡಿದರೆ ದೇವರು ಮೆಚ್ಚುವನೆ ?

ಕೂಡದು. ಖಂಡಿತ ಆತ್ಮಹತ್ಯ ಮಾಡಿಕೊಳ್ಳಬಾರದು ! ನಮ್ಮ ಸಂಸಾರ ದುರಂತಕ್ಕೀಡಾದರೆ ಅದಕ್ಕೆ ನಾವು ಹೊಣೆಯಲ್ಲ. ಅವರವರ ಪ್ರಾರಬ್ಧ ಕರ್ಮಕ್ಕೆ ತಕ್ಕ ಫಲವುಂಡಿದ್ದಾರೆ. ಅವರಿಗಾಗಿ ನಮ್ಮ ಸುಖದ ಬದುಕನ್ನು ಕೊನೆಗಾಣಿ ಸುವುದೆಂದಿಗೂ ಸರಿಯಲ್ಲ. ನಾನು ಹುಟ್ಟಿದ್ದು ನನ್ನವರಿಗಾಗಿ, ಬದುಕಿದ್ದು ಅವರ ಹೆಸರಿನಲ್ಲಿ, ಸಾವೂ ಅವರಿಗಾಗೆ ಮೀಸಲಿರಬೇಕು !

ಇದು ಸಾಧ್ಯವೆ! ಅವರ ಅಮರ ಪ್ರೀತಿ ನನ್ನಲ್ಲೀ ನಿರ್ಧಾರ ತಂದರೂ ಕಡೆವರೆಗೂ ಅದು ಜೀವಂತವಾಗುಳಿಯಬಲ್ಲುದೆ ? ಮೊದಲಿನ ಉಲ್ಲಾಸ–ಉತ್ಸಾಹವನ್ನು ವ್ಯಕ್ತಪಡಿಸಬಲ್ಲೆನೆ ? ಎಂದೆಂದಿಗೂ ಅವರೆದೆಗೆ ತುಂಬು ಪ್ರೀತಿಯ ಕ್ಷೀರಾಭಿಷೇಕ ಮಾಡಲು ನನ್ನಿಂದ ಸಾಧ್ಯವಿದೆಯೆ? ಶಾಂತ–ರತ್ನರ ಬಾಳಿನ ದುರಂತ ಕಥೆ ಆಗಾಗ ನೆನಪಾಗಿ ಸೌಜನ್ಯತೆಯ ಕತ್ತು ಮುರಿ ಯಲಾರದೆ ? ಹಿಂದೊಮ್ಮೆ ಹಾಗಾಗಿ ನನ್ನ ಕ್ರೂರತನಕ್ಕೆ ಶಾರದ ಬಲಿಯಾಗ ಲಿಲ್ಲವೆ ? ನನ್ನವರಿಗಾಗಿ ಜೀವ ಉಳಿಸಿಕೊಂಡರೂ ಮುಂದೇನೇನು ಕಾಣ ಬೇಕಾಗುವುದೊ ಕಣ್ಣಿಲ್ಲಿ !

ಶಾಂತ ಏನಾದರೂ ಸಾವಿಗೆ ತುತ್ತಾದರೆ ನನ್ನ ಮನಸ್ಸು ಕೆಡುವುದು ಖಂಡಿತ. ಎಷ್ಟೆ ತಿಳುವಳಿಕೆಯಿದ್ದರೂ ಸಂತಾನಕ್ಕಾದ ನೋವು ತಂದೆ–ತಾಯಿಯ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡೇ ಮಾಡುವುದು !

ಒಂದು ಮಗುವಾದರೆ ಸರಿ, ವಂಶಕ್ಕೆ ವಂಶವೇ ನಿರ್ನಾಮವಾಗುತ್ತಿರುವಾಗ ತಲೆ ಕೆಡುವುದು ಸ್ವಾಭಾವಿಕ. ಇಂದು ನನಗೆ, ನಾಳೆ ಅವರಿಗೆ; ಯಾರಿಗೂ ತಪ್ಪಿದ್ದಲ್ಲ.

ಮನುಷ್ಯತ್ವವನ್ನು ಕಳೆದು ಪಿಶಾಚಿಯಂತೆ ಬಾಳುವುದಕ್ಕಿಂತ ಮನುಷ್ಯತ್ವ ವಿರುವಾಗಲೆ ಈ ದರಿದ್ರ ಪಿಂಡದ ಸಮೇತ ಮಣ್ಣಾಗುವುದೊಳ್ಳೆಯದು. ಸ್ವಲ್ಪ ದಿನ ಅವರಿಗೆ ನೋವಾಗುತ್ತದೆ, ಆಗಲಿ; ಅದಕ್ಕೆ ಮರುಗಿ ಉಳಿದರೆ ಸಾವಿನ ಯಾತನೆಗಿಂತ ಕಠಿಣವಾದ ನೋವನ್ನವರು ಅನುಭವಿಸಬೇಕಾದೀತು! ಜೀವಪ ದುದ್ದಕ್ಕೂ ಆ ಯಮಯಾತನೆಯಿಂದ ಅವರನ್ನು ಕೊರಗಿಸಿ ಕರಗಿಸುವುದಕ್ಕಿಂತ ಸ್ವಲ್ಪ ದಿನ ಹೃದಯವನ್ನು ಹಿಂಡಿ ಮರೆಯಾಗುವ ಸಾವಿನ ನೋವುಂಟು ಮಾಡುವುದೆ ಒಳ್ಳೆಯದು, ಹಾಗೆಂದು ಮನಸ್ಸಿನ ಹೊಯ್ದಾಟಕ್ಕೊಂದು ಕೊನೆ ತಂದರು.

ವಿಷಪಾನ ಮಾಡಿ ಯಜಮಾನರಿಗೆ ಬೇಕಾಗಿ ಸತ್ತೆನೆಂಬ ಚಿಂತೆ ಹುಟ್ಟಿ ಸುವುದು ಸರಿದೋರಲಿಲ್ಲ. ಆ ಅಭಿಪ್ರಾಯವನ್ನು ತಳ್ಳಿಹಾಕಿ, ದಿನಕ್ಕಷ್ಟಷ್ಟೆ ಪ್ರಮಾಣ ಅನ್ನ–ಆಹಾರ ತೊರೆದು ದೇಹವನ್ನು ಕೊಲ್ಲಬೇಕೆಂದು ನಿರ್ಧರಿಸಿ, ಅದರಂತೆ ಮಾಡತೊಡಗಿದರು. ಆ ಬಾರಿ ತಮ್ಮಲ್ಲಾದ ಮಾರ್ಪಾಟನ್ನು ಯಜಮಾನರಿಗೆ ತೋರ್ಪಡಿಸಿಕೊಳ್ಳಲಿಲ್ಲ. ಅವರೆದುರು ತಮ್ಮ ಗೆಲುವು–ಉಲ್ಲಾಸವನ್ನು ಬಹಳ ಪ್ರಯಾಸದಿಂದ ಕಾದಿರಿಸಿಕೊಂಡರು. ದಿನೇ ದಿನೇ ಶಕ್ತಿಗುಂದುತ್ತಿದ್ದರೂ ಆ ಯಾತನೆಯನ್ನು ತೋರಿಸಿಕೊಳ್ಳದೆ ಗಂಡನ ಸೇವೆ ಯನ್ನು ಸಂದೇಹವಾಗದಂತೆ ಪ್ರೀತಿಯಿಂದ ಮಾಡಿಕೊಂಡು ಬರುತ್ತಿದ್ದರು.

ಉಸಿರು ನಿಲ್ಲುವವರೆಗೆ ಆ ಸೇವಾವೃತ್ತಿ ಅದೇ ಮಟ್ಟದಲ್ಲಿ ನಡೆಯ ಬೇಕೆಂದಿದ್ದವರ ಇಚ್ಛೆ ಕರಗಿ ಹೋಯಿತು. ಅನ್ನ ನೀರು ಬಿಟ್ಟವರಿಂದ ಹೆಚ್ಚು ದಿನ ಕೆಲಸ ಬೊಗಸೆ ನಡೆಯಲಿಲ್ಲ. ವಿಧಿಯಿಲ್ಲದೆ ಹಾಸಿಗೆ ಹಿಡಿದರು. ಹೊಟ್ಟೆ ಹಿಂಡಿ ಹಿಂಡಿ ಬರುತ್ತಿತ್ತು. ಗಳಿಗೆಗೊಂದು ಬಾರಿ ಆ ಯಾತನೆ ಸಹಿಸಲಾರದೆ ಮಿಲಮಿಲನೆ ಒದ್ದಾಡತೊಡಗಿದರು.

ಸೂರಪ್ಪ ಕಂಗಾಲಾದರು. ದಿನೇದಿನೇ ಕರಗುತ್ತಿದ್ದ ಸುಶೀಲಮ್ಮನ ದೇಹಸ್ಥಿತಿಯಿಂದ ಮೊದಲೆ ಗಾಬರಿಯಾಗಿದ್ದವರಿಗೆ, ಆ ಘಟನೆಯಿಂದ ಕೈಕಾಲು ಕುಸಿದು ಬಿದ್ದಂತಾಯಿತು. ಒಂದು ಕ್ಷಣ ಏನು ಮಾಡಲೂ ದಿಕ್ಕು ತೋರ

ಲಿಲ್ಲ. ಒಲೆಯ ಮೇಲೆ ಕಾಫಿಗಿರಿಸಿ ಹೆಂಡತಿಯ ಬಳಿಗೂ ಒಲೆಯ ಹತ್ತಿರಕ್ಕೂ ಹೆಜ್ಜೆಯಾಡುತ್ತಾ ತಲೆ ಕಾಯಿಸತೊಡಗಿದರು.

ಥಟ್ಟನೆ ಸೂಲಗಿತ್ತಿಯ ನೆನಪಾಯಿತು. ಕಾಫಿ ಕಷಾಯ ಸೋಸಿ ಹಾಲು ಹುಯ್ದು ಸುಶೀಲಮ್ಮನಿಗೆ ಒಂದು ಕಪ್ಪಿನಷ್ಟು ಒತ್ತಾಯ ಮಾಡಿ ಕುಡಿಸಿ, ಮುಂಬಾಗಿಲನ್ನು ಮುಂದಕ್ಕೆಳೆದು ಸೂಲಗಿತ್ತಿಯ ಮನೆಗೆ ಹಾರಿದರು. ಅದೃಷ್ಟಕ್ಕೆ ಆಕೆ ಮನೆಯಲ್ಲಿದ್ದರು. ಸೂರಪ್ಪನ ಅವಸರದ ಕರೆಗೊಪ್ಪಿ ನಿಂತ ಮೆಟ್ಟಿನಲ್ಲಿ ಅವರ ಹಿಂದೆ ಹೊರಟುಬಿಟ್ಟರು.

ಆಕೆಯನ್ನು ಕಂಡು ಸುಶೀಲಮ್ಮನಿಗೆ ಹಿಂದಿನ ನೆನಪುಂಟಾಯಿತು. ಅದಕ್ಕೆ ಸರಿಯಾಗಿ ಎರಡು-ಮೂರು ದಿನಗಳಿಂದ ರತ್ನಳ ನೆನಪು ಎದೆಯಲ್ಲಿ ಮೂಡಿ ನೋವನ್ನು ಕೆರಳಿಸಿತ್ತು. ಯಾರಲ್ಲಾದರೂ ಆ ನೋವಿನ ಕಥೆಯನ್ನು ತೋಡಿಕೊಳ್ಳುವವರೆಗೆ ಯಾತನೆ ನಂದುವಂತಿರಲಿಲ್ಲ. ಗಂಡನಲ್ಲಿ ಹೇಳಿ ಕೊಳ್ಳಲು ಹೆದರಿಕೆ; ಮನೆಯಲ್ಲಿ ತನ್ನವರಾಗಿನ್ನಾರೂ ಇಲ್ಲ; ಹಾಗಾಗಿ ಆ ಸಮಯಕ್ಕೆ ಸೂಲಗಿತ್ತಿ ಬಂದುದು ಎಷ್ಟೋ ನೆಮ್ಮದಿ ತಂದಿತು. ಸಂತೋಷ ದಿಂದ ಸ್ವಾಗತಿಸಿದರು.

ಆಕೆ ಬಂದವರೆ ಮೊದಲು ಸುಶೀಲಮ್ಮನ ದೇಹ ಪರೀಕ್ಷಿಸಿ ಹೇಳಿದರು,

"ವೈದ್ಯರಿಗೆ ತೋರಿಸಬೇಕಮ್ಮ, ನನಗ್ಯಾಕೊ ಸಂದೇಹವಾಗಿದೆ. ಹಾಗೆಂದು ಹೆರಿಗೆಯ ಭೀತಿಯೇನೂ ಇಲ್ಲ. ಇನ್ನೂ ಒಂದೂವರೆ ತಿಂಗಳು ತಡೆಯಬಹುದು. ಆದರೂ ದೇಹದಲ್ಲೇನೊ ವ್ಯತ್ಯಾಸವಾದಂತಿದೆ. ಯಾಕಾ ಸಂಶಯ ? ಒಮ್ಮೆ ಪರೀಕ್ಷೆ ಮಾಡಿಸಿ ಬಿಡಿ" ಎಂದು ತೊಳೆದ ಕೈಯನ್ನು ಕರ ವಸ್ತ್ರದಿಂದ ಒರೆಸುತ್ತ ಮಾತು ಮುಂದುವರಿಸಿದರು, "ಊಟ ತಿಂಡಿ ನೆಟ್ಟಗೆ ಮಾಡುತ್ತಿರುವಿರಾ ?"

"ಯಾಕೆ ಹೇಳಿ ?"

"ನಿಮ್ಮ ಮುಖ ನೋಡಿದರೆ ಎಷ್ಟೋ ದಿನದಿಂದ ಅನ್ನ ಬಿಟ್ಟವರಂತಿದೆ–ಅದಕ್ಕೆ ಕೇಳಿದೆ."

ಸುಶೀಲಮ್ಮ ಮನಸ್ಸಿನಲ್ಲೆ ಅವರ ಜಾಣ್ಮೆಗೆ ಮೆಚ್ಚಿ ಹೇಳಿದರು,

"ನಿಮ್ಮ ಮಾತು ನಿಜ—ಸರಿಯಾಗಿ ಊಹಿಸಿದಿರಿ."

"ಯಾಕೆ ಹಾಗೆ ?"

"ನನಗೆ ಬದುಕು ಬೇಡವೆನಿಸಿದೆ."

"ಜೀವನದಲ್ಲಿಷ್ಟು ಜುಗುಪ್ಸೆ ಬರಲು ಕಾರಣ ? ಯಜಮಾನರಿಂದೇನಾದರೂ ತೊಂದರೆಯಿದೆಯೇನು ?"

"ಛೆ ಛೆ, ಅವರು ದೇವರಂಥ ಮನುಷ್ಯರು. ಅವರನ್ನು ದೂರಿದರೆ ಬಾಯಲ್ಲಿ ಹುಳು ಬೀಳುವುದೆ ಸರಿ. ಕೈಹಿಡಿದಂದಿನಿಂದ ಇಂದಿನ ವರೆಗೆ ತಲೆಗೂದಲು ಚುಳ್ಳೆನಿಸದಿದ್ದಂತೆ ನೋಡಿಕೊಂಡು ಬಂದಿದ್ದಾರೆ. ಅವರ ಪ್ರೀತಿಯನ್ನು ನೆನೆಸಿಕೊಂಡರೆ ಎಂದೆಂದೂ ಬದುಕಿರಬೇಕೆನಿಸುವುದು. ಏನು ಮಾಡುವುದು, ನಮ್ಮ ಸಂತಾನವೆಲ್ಲ ದುರಂತಕ್ಕೀಡಾಗಿ ಬದುಕಿನ ಆಶೆಯನ್ನು ಹಿಂಡಿ ಬಿಟ್ಟಿದೆ."

"ಅಂದ ಹಾಗೆ ಅದೇನಮ್ಮ ಆ ವಿಷಯ ? ಅಂದಿನಿಂದ ನನಗೂ ಬಂದು ಕೇಳಬೇಕೆನ್ನುವ ಕುತೂಹಲ—ಬಿಡುವೆ ಆಗುವುದಿಲ್ಲ."

"ನನಗೂ ಯಾಕೊ ಇಂದು ಯಾರಲ್ಲಾದರೂ ಹೇಳಿಕೊಳ್ಳಬೇಕೆನಿಸಿದೆ, ಎದೆಯಲ್ಲಿರುವ ದುಃಖ ತೋಡಿಕೊಂಡರಾದರೂ ಸ್ವಲ್ಪ ನೆಮ್ಮದಿ ಬರಬಹುದೇನೊ !" ಎಂದು ಬಾಗಿಲ ಕಡೆಗೊಮ್ಮೆ ಹೊರಳಿ ನೋಡಿದರು.

ಅಷ್ಟರಲ್ಲಿ ಸೂರಪ್ಪ ಕದ ತಟ್ಟಿದರು. ಸೂಲಗಿತ್ತಿ ಹೋಗಿ ತೆರೆದು ಬಂದರು. ಇಬ್ಬರ ಮುಂದೂ ಕಾಫಿಯನ್ನಿರಿಸಿ ಉತ್ತರಕ್ಕಾಗಿ ಸೂಲಗಿತ್ತಿಯ ಮುಖವನ್ನು ಮಿಟಿ ಮಿಟಿ ನೋಡುತ್ತ ನಿಂತರು. ಅವರ ನೋಟವನ್ನಾಕೆ ಅರ್ಥ ಮಾಡಿ ಹೇಳಿದರು,

"ತುಂಬಾ ನಿತ್ರಾಣರಾಗಿದ್ದಾರೆ. ನನಗಷ್ಟಾಗಿ ಅವರ ದೇಹಸ್ಥಿತಿ ಅರ್ಥವಾಗಲಿಲ್ಲ. ವೈದ್ಯರನ್ನು ಕರೆದು ತೋರಿಸಲೆ ಬೇಕು. ಆದಷ್ಟು ಬೇಗ ಆ ಕೆಲಸ ಮಾಡಿದರೆ ಒಳ್ಳೆಯದು."

"ನಿಮಗೆ ಬಿಡುವಿದೆಯೆ ?"

"ಯಾಕೆ ಹೇಳಿ."

"ಸ್ವಲ್ಪ ಹೊತ್ತು ನೀವಿಲ್ಲಿದ್ದರೆ ಬೇಗ ಹೋಗಿ ವೈದ್ಯರನ್ನು ಕರೆತರುತ್ತಿದ್ದೆ. ಒಬ್ಬಳನ್ನೆ ಬಿಟ್ಟು ಹೋಗಲು ಹೆದರಿಕೆ. ಹಾಗಾಗಿ ನಿಮಗೆ ತೊಂದರೆ ಕೊಡುತ್ತಿರುವೆನು."

ಮೊದಲಿಂದಲೂ ಇದ್ದವರ ಸಾವಿನ ಭೀತಿ ಮತ್ತೆ ತಲೆ ಹಾಕಿದ್ದರಿಂದಲೂ ಸೂಲಗಿತ್ತಿ–ಆರೋಗ್ಯದ ಬಗ್ಗೆ ಅನುಮಾನ ಹೊಂದಿದ್ದರಿಂದಲೂ ಯಾವ ಗಳಿಗೆ ಯಲ್ಲಿ ಏನಾಗುವುದೊ ಎಂದು ಹೆದರಿ ಅವರ ನೆರವು ಬೇಡಿದ್ದರು. ಅದಕ್ಕಾಕೆ ಒಪ್ಪಿಕೊಳ್ಳಲು ಒಂದು ಗಳಿಗೆಯೂ ತಡಮಾಡದೆ ವೈದ್ಯರ ಮನೆಗೆ ಜಾರಿದರು.

ಸೂರಪ್ಪ ಆ ಸಮಯದಲ್ಲಿ ಹೊರಬಿದ್ದದ್ದು ಸುಶೀಲಮ್ಮನಿಗೆ ತುಂಬಾ ಸಹಾಯವಾಯಿತು. ತಡಮಾಡಿದರೆ ಆ ಅವಕಾಶ ಜಾರಿಹೋಗಬಹುದೆಂದು ಹೆದರಿ ಕಥೆಗೆ ಪ್ರಾರಂಭಿಸಿಯೆ ಬಿಟ್ಟರು.

"ಮೊದಲು ನಮಗೆ ಹೆಣ್ಣುಮಕ್ಕಳೆಂದರೆ ಬಹಳ ಪ್ರೀತಿ. ಹುಟ್ಟಿದ್ದೂ ಹೆಣ್ಣೆ. ನಾವಿಬ್ಬರೂ ಕಣ್ಣಲ್ಲಿ ಮುಚ್ಚಿಟ್ಟು ಆ ಮಗುವನ್ನು ಸಾಕಿದೆವು. ಹುಡು ಗಿಯೂ ತುಂಬಾ ಚುರುಕಿದ್ದಳು. ಗುಣದಂತೆ ಚೆಲುವೆ! ಅವಳ ಹದಿನಾಲ್ಕನೆ ವರ್ಷದಲ್ಲೆ ಲಗ್ನಕ್ಕೆ ಪ್ರಯತ್ನಿಸಿದರು. ಅಲ್ಲಿ ಇಲ್ಲಿ ಹುಡುಕಿ ಕಡೆಗೆ ಎರಡನೆಯ ಸಂಬಂಧಕ್ಕೆ ಗಂಟು ಹಾಕಿದರು. ಹುಡುಗನಿಗೆ ಅಷ್ಟೇನೂ ವಯಸ್ಸಾಗಿರಲಿಲ್ಲ. ಸುಮಾರು ಮೂವತ್ತೆರಡು ವರ್ಷವಿರಬಹುದು, ಅಷ್ಟೆ. ಇದ್ದುದರಲ್ಲಿ ಅನು ಕೂಲವಾಗಿದ್ದ. ನೋಡಲು ಲಕ್ಷಣವಾಗಿದ್ದ. ಮನೆತನವೂ ಒಳ್ಳೆಯದೆಂದು ಯಾರೊ ಕಿವಿಯಲ್ಲೂದಿದರು. ಹಾಗಾಗಿ ನಾನೂ ಒಪ್ಪಿದೆ.

"ಲಗ್ನವಾದೊಡನೆಯೆ ಹುಡುಗಿಯನ್ನು ಲೋಕಾಚಾರದಂತೆ ತವ್ಮೊಡನೆ ಕರೆದುಕೊಂಡು ನಾನೂ ಹೋದೆ. ಅಲ್ಲಿಗೆ ಹೋದ ನಂತರ ಅವರ ಮನೆ ತನದ ಬಗ್ಗೆ ತಳೆದಿದ್ದ ತೃಪ್ತಿಯೆಲ್ಲ ಒಡೆದು ಚೂರಾಯಿತು. ತುಂಬಾ ಒರಟು ಜನ ಅವರು. ಹೆಂಗಸರಂತೂ ಪಶುಗಳಂತಿದ್ದರು. ನಡೆ ನುಡಿ ಯಾವುದೂ ಅಷ್ಟು ಶುದ್ಧವಾಗಿದ್ದಂತೆ ಕಂಡುಬರಲಿಲ್ಲ. ಗಂಡಸರು ಎಳೆದತ್ತ ಹೋಗುತ್ತಿ ದ್ದರು.

"ಅವರ ನಡವಳಿಕೆಯಾದರೂ ಅನುಕರಣೀಯವಾಗಿತ್ತೆ? ಅದೂ ಇಲ್ಲ. ತೀರ ಅಸಹ್ಯವಾಗಿತ್ತು. ಕುಡುಕತನ, ಜೂಜುಗಾರಿಕೆ, ಸೂಳೆಗಾರಿಕೆಯಲ್ಲಿ ಕೊಳೆಯುತಿದ್ದರು. ತಂದೆಯೆ ಗಟ್ಟಿಗರೆಂದರೆ ಮಗ ಮತ್ತೂ ಗಟ್ಟಿಗ. ಅವನ ಕಾಮದಾಹವನ್ನಡಗಿಸಲು ಮನೆಯಲ್ಲಿ ಅನ್ಯ ಜಾತಿಯ ಸ್ತ್ರೀಯರಿಬ್ಬರು ಸದಾ ಸಿದ್ಧರಿರುತ್ತಿದ್ದರು. ಅದನ್ನು ಕಂಡು ಮೈ 'ಜುಂ' ಎಂದಿತು. ಅವರು ಬ್ರಾಹ್ಮ ಣರು ಹೌದೊ ಅಲ್ಲವೊ ಎನ್ನುವಷ್ಟರ ಮಟ್ಟಿಗೆ ಸಂದೇಹ ಬಂದಿತು. ಅವರ

ವಿಷಯವನ್ನು ಕೂಲಂಕಷವಾಗಿ ತಿಳಿಯಲು ಸಮಯ ಸಂದರ್ಭ ನೋಡಿ, ಅಕ್ಕ-ಪಕ್ಕದವರ ನೆರವು ಪಡೆದೆ. ಅವರಿಂದ ತಿಳಿದುಬಂದ ವಿಷಯ ಭಯಂಕರವಾಗಿತ್ತು.

"ನನ್ನ ಅಳಿಯನೆನಿಸಿಕೊಂಡವನು ಪಕ್ಕಾ ತಲೆಹಿಡುಕ. ಕಾಳಸಂತೆ ವ್ಯಾಪಾರದ ಸಂಗಡ ಹೆಣ್ಣನ್ನು ಬೇರೆ ಗುತ್ತಿಗೆಗೆ ಕೊಡುತ್ತಿದ್ದ. ತನ್ನ ಮೊದಲನೆ ಹೆಂಡತಿಯನ್ನು ಬಂದ ಹೊಸದರಲ್ಲಿ ದುರುಪಯೋಗಪಡಿಸಿಕೊಳ್ಳಲು ಪ್ರಯತ್ನಿಸಿದ. ಉತ್ತಮ ವಾತಾವರಣದಲ್ಲಿ ಬೆಳೆದಿದ್ದವಳಿಗೆ ಆ ನಡವಳಿಕೆ ಅಸಹ್ಯವಾಗಿ ವಿರೋಧಿಸಿದಳು. ಆ ದುಷ್ಟ ಅವಳನ್ನು ತನ್ನ ದಾರಿಗೆ ಸೆಳೆದುಕೊಳ್ಳಲು ಮೈಮೇಲೆ ಹಿಂಸೆಯ ಮುಳ್ಳೆಳೆದ. ಕಡೆಗೆ ಹಿಂಸೆ ತಾಳಲಾರದೆ ಅವನು ಹೇಳಿದಂತೆ ನಡೆದುಕೊಂಡಳು. ಅತ್ಯಾಚಾರ ಮಾಡಿದುದರ ಫಲವಾಗಿಯೊ ಏನೊ, ಒಂದು ಹಡೆಯುವುದರಲ್ಲೆ ಕಣ್ಣು ಮುಚ್ಚಿದಳು. ಅವಳು ಸತ್ತ ಆರು ತಿಂಗಳಲ್ಲೆ ಮೋಸ ಮಾಡಿ ನನ್ನ ಮಗಳ ಕುತ್ತಿಗೆ ಕುಯ್ದರು.

"ಅಕ್ಕ-ಪಕ್ಕದವರಿಂದ ಅಳಿಯನ ಪ್ರವರ ಕೇಳಿ ತಲೆ ತಿರುಗಿಹೋಯಿತು. ಅಲ್ಲಿಂದ ಕಾಲು ಕೀಳುವುದರಲ್ಲವಸರವಾಯಿತು. ಹೊರಡಲು ನಿಶ್ಚಯಿಸಿದೆ. ಹುಡುಗಿಯನ್ನಲ್ಲಿ ಬಿಡಲು ಮನಸ್ಸೊಪ್ಪಲಿಲ್ಲ. ಸಂಗಡ ಕಳುಹಿಸಿಕೊಡಿರೆಂದು ಕೇಳಿದೆ. ಮೊದಲೆ ಒರಟು ಜನ, ನನ್ನ ಮಾತಿಗೆ ಬೆಲೆ ಕೊಡುವರೆ? ಈಗ ಸಾಧ್ಯವಿಲ್ಲ, ಮುಂದೆ ನೋಡೋಣವೆಂದು ಬೇಡಿಕೆಯನ್ನು ತಳ್ಳಿ ಹಾಕಿದರು. ಯಜಮಾನರನ್ನು ಕಳುಹಿಸಿ ಕರೆಸಿಕೊಳ್ಳುವುದೆಂದು ಸಮಾಧಾನ ತಂದುಕೊಂಡು, ಹೋದಂತೆ ಮನೆಗೆ ಹಿಂದಿರುಗಿ ಬಂದೆ. ವಿಷಯವನ್ನವರ ಕಿವಿಗೆ ಮುಟ್ಟಿಸಿದೆ. ನಮ್ಮವರು ಆ ಸುದ್ದಿಯನ್ನು ನಂಬಲೆ ಇಲ್ಲ. ಆಗವೆ ಇದ್ದವರು ಯಾರೊ ಸುಳ್ಳು ಹೇಳಿರಬೇಕೆಂದು ಮಾತನ್ನು ತಳ್ಳಿಹಾಕಿದರು. ಇರಬಹುದೇನೊ ಎಂದು ನಾನೂ ಸುಮ್ಮನಾದೆ.

"ಮೊದಲ ಸಲ ಬಹಳ ದಿನ ಬಿಡಬಾರದೆಂದು, ಒಂದೆರಡು ತಿಂಗಳಾದ ನಂತರ ನಮ್ಮವರು ಹುಡುಗಿಯನ್ನು ಕರೆಯಲು ಹೋದರು. ಮನೆಯ ತಾಪತ್ರಯವನ್ನು ಮುಂದಿರಿಸಿ ಬೀಗರು ಅವರ ಬೇಡಿಕೆಯನ್ನು ನಿರಾಕರಿಸಿದರು. ನಮ್ಮವರಕ್ಲಿದ್ದಂತೆ ಅವಸರವಾಗಿ ನಿಷೇಕಕ್ಕೆ ದಿನವಿರಿಸಿ ಆ ಶಾಸ್ತ್ರವನ್ನು ಮುಗಿಸಿಬಿಟ್ಟರು. ಎಷ್ಟಾದರೂ 'ಕೊಟ್ಟ ಹೆಣ್ಣು ಕುಲದ ಹೊರಗೆ' ಎಂಬ ಗಾದೆ

ಯಂತೆ, ಅವರು ಮಾಡಿದ್ದಕ್ಕೆ ತಲೆ ಹಾಕಲಿಬೇಕೆಂದು ಸಮಾಧಾನ ತಂದು, ಹೆಚ್ಚಿಗೆ ಒತ್ತಾಯ ಪಡಿಸದೆ ಹಾಗೆ ಹಿಂದಿರುಗಿದರು.

"ಆ ಬಾರಿ ಮಗಳ ಮನೆಗೆ ಹೋಗಿ ಬಂದಂದಿನಿಂದ ಯಾಕೊ ಅವರಿಗೆ ಮನಸ್ಸು ಸ್ವಲ್ಪ ಪೆಚ್ಚಾಗಿತ್ತು. ಎಲ್ಲೊ ಅವರ ನಡವಳಿಕೆ ಸ್ಥೂಲವಾಗಿ ಕಣ್ಣಿಗೆ ಬಿದ್ದಿರಬಹುದು. ನನ್ನಲ್ಲಂತೂ ಏನೂ ಹೇಳಲಿಲ್ಲ ಅಂತೂ ಆ ಮನೆತನದ ಬಗ್ಗೆ ಅವರಿವರಿಂದ ವಿಷಯ ಹೆಕ್ಕುತ್ತಿರುವುದು ಒಂದೆರಡು ಬಾರಿ ನನ್ನ ಗಮ ನಕ್ಕೆ ಬಿದ್ದಿತ್ತು. ಅದರಿಂದ ಅವರಿಗೆ ಅಲ್ಪ-ಸ್ವಲ್ಪ ವಿಷಯ ಗೊತ್ತಾಗಿರಬಹು ದೆಂದೂಹಿಸಿದೆ.

"ಹೀಗೆ ಸುಮಾರು ಏಳೆಂಟು ತಿಂಗಳು ಕಳೆದಿರಬಹುದು. ಒಂದು ದಿನ ಇದ್ದಕ್ಕಿದ್ದಂತೆ ಮಗಳಿಂದ ಕಾಗದ ಬಂತು. ಕೂಡಲೆ ಹೊರಟು ಬರಬೇಕೆಂದೂ ಕಾಗದ ಬರೆದ ಸುದ್ದಿ ಗುಪ್ತವಾಗಿರಬೇಕೆಂದೂ, ಮುಖತಃ ಎಲ್ಲ ವಿಷಯವನ್ನು ತಿಳಿಸುವೆನೆಂದೂ ಬರೆದಿದ್ದಳು. ನಮ್ಮವರು ನಿಂತ ಮೆಟ್ಟಿನಲ್ಲಿ ಮಗಳ ಮನೆಗೆ ಪ್ರಯಾಣ ಬೆಳೆಸಿದರು.

"ಅವರಿದ್ದದ್ದು ಬೆಂಗಳೂರಿನ ಹತ್ತಿರದ ಒಂದು ಹಳ್ಳಿಯಲ್ಲಿ. ಹೋಗಿ ಸೇರಲು ಬರಾಬರಿ ಒಂದು ದಿನ ಹಿಡಿಯಿತು. ಹೊಸ್ತಿಲೊಳಗೆ ಕಾಲಿರಿಸಿದಾಗ ಉಪ್ಪರಿಗೆಯಿಂದ ಕೇಕೆ ಕಿರಿಚಾಟ ಅಬ್ಬರಿಸಿ ಬಂದು ನಮ್ಮವರೆದೆಯನ್ನು ನಡು ಗಿಸಿತಂತೆ. ತಮ್ಮೆದೆಯಲ್ಲುಂಟಾದ ನಡುಕವನ್ನು ಹಿಡಿತಕ್ಕೆ ತಂದು ಹಜಾರ ವನ್ನು ತಲುಪಿ, ಕೈಚೀಲವನ್ನು ಬದಿಗಿರಿಸಿ ಅತ್ತಿತ್ತ ಹೊರಳಿ ನೋಡಿದರು. ಅಷ್ಟರಲ್ಲಿ ಒಳಗಿಂದಲೆ ರತ್ನ ಇವರ ಕಣ್ಣಿಗೆ ಬಿದ್ದು ಕುಳಿತುಕೊಳ್ಳುವಂತೆ ಕೈಸನ್ನೆ ಮಾಡಿ ಮರೆಯಾದಳು.

"ಅವಳ ಹಿಂದೆಯೆ ಬೀಗರು ಬಂದು ಎದುರುಗೊಂಡರು. ಇದ್ದಕ್ಕಿದ್ದಂತೆ ಬಂದ ನಮ್ಮವರನ್ನು ಕಂಡು ಆಶ್ಚರ್ಯದೊಡನೆ ಹಿಂಸೆಯೂ ಅವರಿಗೆ ಆಗಿರ ಬೇಕು. ಕಂಡೊಡನೆಯೆ ಮುಖ ಕಿವುಚಿಕೊಂಡರಂತೆ. ಮಾತಿನಲ್ಲಿ ಮಾತ್ರ ಬೇಸರಿಕೆ ತೋರಿಸಿಕೊಳ್ಳಲಿಲ್ಲ. ಸ್ವಲ್ಪ ಹೊತ್ತು ಅವರೊಡನಿದ್ದು ಕ್ಷೇಮ ಸಮಾಚಾರವಾದ ನಂತರ ಎದ್ದು ನಡೆದರು.

"ಅವರು ಹೋದ ಕೆಲವು ನಿಮಿಷಗಳಲ್ಲಿ, ಉಪ್ಪರಿಗೆಯಿಂದ ಅಲೆ ಅಲೆ ಯಾಗಿ ಎದ್ದು ಬಂದ ಕೇಕೆ–ಕೂಗಾಟ–ಕಿರಿಚಾಟ ಮನೆಯನ್ನೆಲ್ಲಾ ನಡುಗಿಸಿ

ತಂತಿ. ನಮ್ಮವರು ಆ ಅಬ್ಬರದ ಅರ್ಥವಾಗದೆ ಗಾಬರಿಯಿಂದ ತತ್ತರಿಸಿ ಹೋದರು. ಸ್ವಲ್ಪ ಹೊತ್ತು ತಲೆಯೋಡಿಸಿ ಅದು ಕುಡಿತದ ಮೋಜಾಗಿರ ಬಹುದೆಂದೂಹಿಸುವುದರಲ್ಲೆ ಬೀಗರು ಬಂದು, ತಾವು ಹೊರಗೆ ಹೋಗುವ ರೆಂದೂ, ಬರುವುದರಲ್ಲಿ ಸ್ನಾನಾಹ್ನಿಕ ಮುಗಿಸಿರಬೇಕೆಂದೂ ತಿಳಿಸಿ, ಬಂದವ ರೊಡನೆ ಎಲ್ಲೊ ಹೊರಗೆ ಜಾರಿದರು. ನಮ್ಮವರು ಬಂದ ಸುದ್ದಿ ತಂದೆಯಿಂದ ಮಗನಿಗೆ ತಿಳಿದಿತ್ತು. ಅವರೆದುರಿಗೆ ಹಾದು ಹೋದರೂ ತಿರುಗಿ ಸಹ ನೋಡದೆ ಹೋಗಿದ್ದಾನೆ. ಅಳಿಯನ ಉದ್ಧಟತನದಿಂದ ಮನಸ್ಸಿಗೆ ತುಂಬಾ ನೋವಾ ಯಿತು. ಮಗಳಿಗಾಗಿ ತಮಗಾದಪಮಾನವನ್ನೆಲ್ಲ ನುಂಗಿ ಅವಳ ದಾರಿ ಕಾಯುತ್ತ ಕುಳಿತರು.

"ಮನೆಯಿಂದ ಗಂಡಸರು ಹೊರಬಿದ್ದ ಸ್ವಲ್ಪ ಹೊತ್ತಿನಲ್ಲೆ ತನ್ನತ್ತೆಯ ಕಣ್ಣು ತಪ್ಪಿಸಿ ರತ್ನ ತಂದೆಯ ಬಳಿ ಬಂದು, ಉಪ್ಪರಿಗೆಯಲ್ಲಿದ್ದೊಂದು ರಹಸ್ಯ ಕೋಣೆಗೆ ಮೆಲ್ಲಗೆ ಕರೆದೊಯ್ದು ಕದವಿಕ್ಕಿದಳು. ಅನಂತರ ತಂದೆಯನ್ನು ಅಲ್ಲಿ ದ್ದೊಂದು ಕುರ್ಚಿಯಲ್ಲಿ ಕೂರಿಸಿ ಕೇಳಿದಳು,

'ನಮ್ಮಲ್ಲಿಯ ನಡವಳಿಕೆಯೆಲ್ಲ ನಿನಗೆ ಸಮಸ್ಯೆಯಾಗಿ ಕಾಣುತ್ತಿದೆಯ ಲ್ಲವೆ ಅಪ್ಪ?'

'ಹೌದು ಮಗು, ಈ ಜನರ ನಡವಳಿಗೆ ನನಗರ್ಥವೆ ಆಗುತ್ತಿಲ್ಲ. ಕಂಡ-ಕಂಡವರನ್ನು ಕಟ್ಟಿಕೊಂಡು ಆ ಕೂಗಾಟವೇನು, ಕಿರಿಚಾಟವೇನು, ಸಂಸಾರಿಕರ ಮನೆಯಲ್ಲಿ ನಡೆಯುವ ಆಚರಣೆಯೆ ಇದು? ಥೂ ಥೂ, ಒಂದು ಗಳಿಗೆಗೆ ನನ್ನ ತಲೆ ಚಿಟ್ಟು ಹಿಡಿದು ಹೋಯಿತು. ನೀನು ಹ್ಯಾಗೆ ಅನುಭವಿಸು ವೆಯೊ ದೇವರಿಗೆ ಗೊತ್ತು!'

'ಈ ನರಕದ ಬಾಳನ್ನನುಭವಿಸಿ ಬದುಕಿರುವೆನಲ್ಲ, ನೋಡಿ! ಇಲ್ಲಿಗೆ ಲಗ್ನವಾಗಿ ಬಂದ ಮೇಲೆ ಕಾಣಬಾರದುದನ್ನೆಲ್ಲ ಕಂಡೆ, ಕೇಳಬಾರದುದನ್ನೆಲ್ಲ ಕೇಳಿದೆ, ಅನುಭವಿಸಬಾರದುದನ್ನೆಲ್ಲ ಅನುಭವಿಸಿದೆ. ಇವರು ಮನುಷ್ಯರ ಗುಂಪಿಗೆ ಸೇರಿದವರಲ್ಲ. ದುಡ್ಡಿಗಾಗಿ ಹೆಂಡತಿಯನ್ನೂ ಮಾರಿಕೊಳ್ಳುವ ಜನ. ಇವರ ಮನೆಗೆ ಬರುವವರೆಲ್ಲ ಕೇಡಿಗರು. ಕುಡಿತ, ಸೂಳೆಗಾರಿಕೆ, ಜೂಜು —ಎಲ್ಲದರಲ್ಲೂ ಪ್ರವೀಣರಾಗಿದ್ದಾರೆ. ನೀಚ ಕಾರ್ಯಗಳಿಗೆಲ್ಲ ಇವರ ಮನೆ ತೌರಾಗಿದೆ. ನಾನು ಇಲ್ಲಿಗೆ ಮದುವೆಯಾಗಿ ಬಂದದ್ದು ಗರತಿಯಾಗಿ ಬಾಳಿ

ವಂಶ ಹೆಚ್ಚಿಸುವುದಕ್ಕಲ್ಲ, ವೇಶ್ಯೆಯಾಗಿ ಇವರ ಮನೆ ಸಂಪತ್ತಿನಿಂದ ತುಂಬು ವುದಕ್ಕೆ!' ಆ ಮಾತು ಕೇಳಿ ನಮ್ಮವರಿಗೆ ಮೈಯೆಲ್ಲ ಉರಿಯಿತು. ಕಟ ಕಟ ಹಲ್ಲು ಕಡಿಯುತ್ತ ಅದರರ್ಥವೇನೆಂದು ಗುಡುಗಿದರು. ರತ್ನ ತಂದೆಯ ಅಬ್ಬರ ವನ್ನರಗಿಸಿಕೊಂಡು ಹೇಳಿದಳು,

'ಸಿಟ್ಟಾಗಬೇಡಪ್ಪ. ಈಗ ಮಾತಾಡಿ ಏನೂ ಪ್ರಯೋಜನವಿಲ್ಲ. ಕಲ್ಲು ಮನಸ್ಸು ಮಾಡಿ ಸಮಾಧಾನದಿಂದ ನನ್ನ ಕಥೆಯನ್ನೆಲ್ಲ ಕೇಳಿ ಆಮೇಲೆ ಅದಕ್ಕೆ ತಕ್ಕ ಪರಿಹಾರ ಸೂಚಿಸು. ಲಗ್ನವಾಗಿ ಬಂದ ಸ್ವಲ್ಪ ದಿನದ ವರೆಗೂ ನನ್ನನ್ನು ಅಲಕ್ಷ್ಯವಾಗಿ ಕಾಣುತ್ತಿದ್ದರು. ಊಟ ಉಡಿಗೆ ಯಾವುದರಲ್ಲೂ ತೃಪ್ತಿಯಾಗಿ ಇರುತ್ತಿರಲಿಲ್ಲ. ಶಕ್ತಿಯಿದ್ದಷ್ಟು ಕೆಲಸ ಬೊಗಸೆ ತೆಗೆದುಕೊಳ್ಳುತ್ತಿದ್ದರು. ಋತುಮತಿಯಾದೊಡನೆ ನನ್ನನ್ನು ನೋಡಿಕೊಳ್ಳುವ ರೀತಿಯೆ ಬೇರೆಯಾ ಯಿತು. ಊಟ-ತಿಂಡಿಯಲ್ಲಿ ತುಂಬಾ ನಿಗ ಕೊಡತೊಡಗಿದರು. ನವಿರಾದ ಬಟ್ಟೆಬರೆಗಳು ಮೈಯನ್ನಾಶ್ರಯಿಸಿ ಬೆಡಗು ಬೀರತೊಡಗಿದುವು. ನಕಾಸಿನ ಒಡವೆ ವಸ್ತುಗಳು ಮೈ ತುಂಬಿ ಕಾಂತಿಯನ್ನಿಮ್ಮಡಿಗೊಳಿಸಿದುವು. ಮೊದಲು ನನಗದರರ್ಥವಾಗಲಿಲ್ಲ. ಮನೆಗ್ಯಾರ್ಯಾರೂ ಶ್ರೀಮಂತರು ಬರುತ್ತಿದ್ದುದರಿಂದ ಅವರ ಮುಂದೆ ತಮ್ಮ ಘನತೆ ತೋರಿಸಿಕೊಳ್ಳಲಿರಬಹುದೆಂದೂಹಿಸಿದ್ದೆ. ನಿಜ ವಾದ ಅರ್ಥ ತಿಳಿದಾಗ ನನ್ನೆದೆ ಒಡೆಯಿತು. ದೇವರ ಮೇಲೆ ಭಾರ ಹಾಕಿ ಬಂದ ತೊಡಕುಗಳನ್ನೆಲ್ಲ ಎದುರಿಸಲು ನಿಂತೆ.

'ಆ ಮಾರ್ಪಾಟಾಗಿ ಸುಮಾರು ತಿಂಗಳಾಗಿರಬಹುದು. ಅಂದು ರಾತ್ರೆ ನಮ್ಮವರು ಮಲಗಲು ಬಂದಾಗ ಹಾಸಿಗೆ ಹಿಡಿಯದೆ ನನ್ನಲಂಕಾರದ ಕಡೆ ನಿಗ ಕೊಡತೊಡಗಿದರು. ಕೈಲಿ ತಂದಿದ್ದ ಮಲ್ಲಿಗೆ ಹೂವಿನ ದಂಡೆಯನ್ನು ತಾವೆ ತಲೆಗೆ ಮುಡಿಸಿ, ಮುಖಕ್ಕೆ ಸುವಾಸನೆ ಪುಡಿ ಸವರಿ, ಮೈಯನ್ನು ಸುಗಂಧ ದ್ರವ್ಯದಿಂದ ತೊಯಿಸಿದರು. 'ಇವರು ತುಂಬಾ ರಸಿಕರು. ತಮ್ಮ ಪ್ರೀತಿಗಾಗಿಯೆ ಇಷ್ಟೆಲ್ಲ ಅಣಿ ಮಾಡುತ್ತಿರುವರೆಂದು ನಂಬಿದ್ದೆ. ನನ್ನ ಊಹೆ ಸುಳ್ಳಾಯಿತು. ಅಲಂಕಾರವೆಲ್ಲ ಮುಗಿದ ಮೇಲೆ ಕೈಹಿಡಿದು ಎಲ್ಲಿಗೊ ಕರೆದು ಕೊಂಡು ಹೊರಟರು. ಎಲ್ಲಿಗೆಂದವರೂ ಹೇಳಲಿಲ್ಲ, ನಾನೂ ಕೇಳಲಿಲ್ಲ. ನಾವು ಬಂದು ಮುಟ್ಟಿದ್ದು ಮಲಗುವ ಕೋಣೆಯ ಎದುರು ಭಾಗದ ಕೋಣೆಗೆ. ಕೋಣೆ ಹತ್ತಿರವಾದಂತೆ ನನ್ನನ್ನು ಮುಂದು ಬಿಟ್ಟು ಅವರು ಹಿಂದಾದರು. ಆಗ

ನನಗೆ ಸ್ವಲ್ಪ ಸಂದೇಹವಾಯಿತು. ವಿಷಯ ತಿಳಿದುಕೊಳ್ಳಲೆಂದು ಹೊರಳುವು ದರಲ್ಲಿ ನಮ್ಮವರು ಬಾಗಿಲೆಳೆದುಕೊಂಡು ಹೊರಗಾಗಿದ್ದರು. ನಾನೊಳಗುಳಿದೆ.

'ಕೊಠಡಿ ಸುಂದರವಾಗಲಂಕರಿಸಲ್ಪಟ್ಟಿತ್ತು. ನನ್ನ ಬಲಪಕ್ಕದ ಗೋಡೆಯ ಬಳಿಯಿರುವ ಮಂಚದಲ್ಲಿ ಒಬ್ಬ ಇಳಿವಯಸ್ಸಿನ ವ್ಯಕ್ತಿ ಮಲಗಿ, ಹಲ್ಲು ಬಿಡುತ್ತಾ ತನ್ನ ಪಾಪದ ಕೈನೀಡಿ ಕರೆಯುತಿತ್ತು. ಆ ನೋಟ ಕಂಡು ಮೈ ನಡುಗಿತು. ಹೊರಗೆ ಓಡಿಹೋಗಬೇಕೆಂದು ಕದ ತೆರೆಯಲು ಪ್ರಯತ್ನಿಸಿದೆ. ನನ್ನವರು ಹೊರಗಿನಿಂದ ಬಲವಾಗಿ ಕದವಿಕ್ಕಿ ಹೋಗಿದ್ದರು. ಅವರು ಇಚ್ಛೆಪಟ್ಟೆ ನನ್ನನ್ನು ಆ ನರಕದ ಗುಂಡಿಯಲ್ಲಿ ತಳ್ಳಿದ್ದಾರೆಂದು ಆಗ ನನಗೆ ತಿಳಿಯಿತು. ಅವರ ಪಾಪಕೃತ್ಯ ನೆನೆದು ಮನಸ್ಸು ರೊಚ್ಚಿಗೆದ್ದಿತು. ಹೃದಯದಲ್ಲಿ ಅವರಿಗೆಂದು ಕಾದಿರಿಸಿದ್ದ ಸ್ಥಾನವನ್ನು ಆ ಕ್ಷಣ ಕಿತ್ತೆಸೆದೆ. ಅಲ್ಲಿಂದ ಪಾರಾಗಲು ಜೀವ ದೇಹವೆಲ್ಲ ಹಾತೊರೆಯುತ್ತಿತ್ತು. ಏನು ಮಾಡಲೂ ತೋಚದೆ ಹುಚ್ಚಿಯಂತೆ ಅತ್ತಿತ್ತ ನೋಡುತ್ತ ನಿಂತೆ.

' ನನ್ನ ಹೊಯ್ದಾಟ ಅಸಹಾಯಕತೆಯನ್ನು ಕಂಡು, ಠೀವಿಯಿಂದ ಮೀಸೆ ಹುರಿ ಮಾಡುತ್ತ ಕೂತಿದ್ದ ಆ ವ್ಯಕ್ತಿ ಖೊಳ್ಳೆಂದು ನಕ್ಕಿತು. ನನ್ನ ಮೈಯಲ್ಲಿದ್ದ ಉರಿ ಮತ್ತಷ್ಟು ಜೋರಾಯಿತು. ಆ ಸಿಟ್ಟಿಗೆ ಮೈಮೇಲಿದ್ದ ಒಡವೆಗಳನ್ನೆಲ್ಲ ಪಟಪಟನೆ ಕಿತ್ತೆಸೆದೆ. ಅದನ್ನು ಕಂಡು ಆ ವ್ಯಕ್ತಿ ಕುಳಿತ ಸ್ಥಳದಿಂದೆದ್ದು ಬಂದು ರಮಿಸತೊಡಗಿತು. ಅವನು ರಮಿಸಿದಂತೆಲ್ಲ ರೋಷ ತುಂಬಿದ ಹುಲಿಯಂತಾಗುತಿದ್ದೆ—ಮೈಮುಟ್ಟಗೊಡಿಸಲಿಲ್ಲ. ಅವನಲ್ಲಿ ಸ್ವಲ್ಪ ಮನುಷ್ಯತ್ವವಿತ್ತೆಂದು ತೋರುತ್ತದೆ, ಬಲವಂತ ಪಡಿಸಲಿಲ್ಲ. ಬದಲಾಗಿ ನನ್ನವರನ್ನು ಕೂಗು ಹಾಕಿ ಅವರ ಕಿವಿಗೆ ನಡೆದ ವಿಷಯ ಮುಟ್ಟಿಸಿದ.

' ಅವರು ರೊಚ್ಚಿಗೆದ್ದರು. ಧಡಾರನೆ ಕದವನ್ನು ತೆರೆದು, ನನ್ನನ್ನು ತಮ್ಮ ಕೋಣೆಗೆ ದರದರ ಎಳೆದುಕೊಂಡು ಹೋಗಿ ದನ ಬಡಿಯುವಂತೆ ಬಡಿದರು. ಹೀಗೆ ಎರಡು-ಮೂರು ಬಾರಿಯಾಯಿತು. ಎಂದೂ ಯಾರಿಗೂ ನಾನು ಸಗ್ಗಲಿಲ್ಲ; ಅವರೂ ತಮ್ಮಾಸೆ ಬಿಡಲಿಲ್ಲ.

' ಹಠಮಾರಿಯಾದ ನನ್ನನ್ನು ಆ ವ್ಯಕ್ತಿಗೆ ಒಳಗಿಸತೊಡಗಿದರು. ಮೊದಲು ಮೃದು ಮಾತಿನ ಬಲೆ ಬೀಸಿದರು—ಬಲೆ ಬೀಳಲಿಲ್ಲ. ವಿಫಲವಾಗಿ ನನ್ನ ಸುತ್ತ ಹಿಂಸೆಯ ಬೇಲಿಯೆಬ್ಬಿಸಿದರು—ಮೈ ಬತ್ತಲೆಮಾಡಿ ಬಾಸುಗೋಲು

ನಿಂದ ಬಿಗಿದು ಬಾಸುಂಡೆ ಬರಿಸಿದರು; ಕಬ್ಬಿಣದ ಸಲಾಕೆ ಕಾಸಿ ಬರೆಯೆಳೆದು ಚರ್ಮ ಸುಲಿದರು; ಮೈತುಂಬಾ ಮುಳ್ಳಾಡಿಸಿ ರಕ್ತದ ಕೋಡಿ ಹರಿಸಿದರು; ಒಣ ಮೆಣಸಿನಕಾಯಿ ಹೊಗೆಯಿತ್ತು ಕಣ್ಣನ್ನು ಉರಿಯಲ್ಲಿ ಅದ್ದಿ ತೆಗೆದರು. ಅನ್ನ ನೀರು ನಿಲ್ಲಿಸಿ ನೆತ್ತರು ಒಣಗಿಸಿದರು ' ಎಂದು ಮೈಯಲ್ಲಾದ ಗಾಯದ ಗುರುತನ್ನು ತಂದೆಗೆ ತೋರಿಸಿ ಮಾತು ಮುಂದುವರಿಸಿದಳು,

' ಏನು ಮಾಡಿದರೂ ನಾನವರಿಗೆ ಬಗ್ಗಲಿಲ್ಲ. ಅವರು ಸೋತರು— ತಮ್ಮಾಶೆ ಬಿಡಲಿಲ್ಲ. ಪುಷ್ಟಿಕರವಾದ ಆಹಾರವಿತ್ತು ಮೈಯನ್ನು ಪುಷ್ಟಿಗೊಳಿಸಿ ಒತ್ತಾಯವಾಗಿ ಕಂಡವರ ಬಳಿ ಬಿಡುತ್ತಿದ್ದರು. ಬಂದವರಿಗೂ ಅದೇ ಮಂತ್ರದ ಬೋಧೆಯಾಯಿತು. ಅವರ ಪಶುಬಲದ ಮುಂದೆ ನನ್ನ ನೈಜ ಬಲ ಕುಸಿಯಿತು. ಹೋರಾಡಿ ಸೋತ ದೇಹದ ಮೇಲೆ ಅತ್ಯಾಚಾರ ನಡೆಸಿಯೆ ಬಿಟ್ಟರು. ಒಂದೆರಡು ಬಾರಿ ಹಾಗಾಗಿರಬಹುದು. ಇಂದು ಮೂರನೆಯ ಬಾರಿ ಮಹಾ ಗಂಡಾಂತರವನ್ನೆದುರಿಸುವುದು ಕಾದಿದೆ. ನೀನು ಬಂದಾಗ ಕೇಕೆ ಹಾಕಿ ನಗುತ್ತಿದ್ದರಲ್ಲ—ಅವರೇ ಆ ಧೂರ್ತರು !'

ಮಗಳ ಕರ್ಣಕಠೋರ ಕಥೆ ಕೇಳಿ ಗೋಳಿಟ್ಟು ಹೇಳಿದರು,

' ಇವರು ನೀಚರೆಂದು ಗೊತ್ತಾಗಲಿಲ್ಲ ರತ್ನ ! ತಿಳಿಯದೆ ನಿನ್ನ ಕತ್ತು ಮುರಿದೆ. ನಿನ್ನನ್ನೀ ನರಕದಲ್ಲಿ ಕೊಳೆ ಹಾಕಿದುದಕ್ಕೆ ನನಗೆಷ್ಟು ಶಿಕ್ಷೆಯಿತ್ತರೂ ಸ್ವಲ್ಪವೆ !'

' ದುಃಖ ಪಡಬೇಡಪ್ಪ, ನನ್ನ ಪ್ರಾರಬ್ಧಕರ್ಮ ಹೀಗಿರುವಾಗ ನೀನೇನು ತಾನೆ ಮಾಡುವೆ ! ಮತ್ತೊಂದು ವಿಷಯ ಕೇಳಿದರೆ ನಿನ್ನೆದೆ ಇನ್ನೂ ಕುಸಿಯಬಹುದು ನಿನ್ನಳಿಯನಾಗಿರುವವರು ನಮ್ಮತ್ತೆಯ ಸ್ವಂತ ಮಗನಲ್ಲ, ನಮ್ಮ ಮಾವನ ಸೂಳೆಯ ಮಗ. ಅವರ ತಾಯಿ ಸೋಲಿಗರವಳು. ನಮ್ಮ ಮಾವನವರಿಗೆ ಧರ್ಮಪತ್ನಿಯಲ್ಲಿ ಮಕ್ಕಳಿಲ್ಲದ್ದರಿಂದ ಅವರನ್ನೆ ಸಾಕಿ ಸಲಹಿ ಮುಂದೆ ತಂದಿದ್ದಾರೆ. ಈ ರಹಸ್ಯ ನಮ್ಮ ನಾಲ್ವರ ಹೊರತು ಉಳಿದ್ಯಾರಿಗೂ ತಿಳಿದಿಲ್ಲ. ಊರಿನ ಜನವೆಲ್ಲ ಅವರನ್ನು ನಮ್ಮತ್ತೆಯ ಮಗನೆಂದೆ ತಿಳಿದಿದ್ದಾರೆ. ಅವರು ಜನ್ಮ ತಾಳಿದ, ಗರ್ಭ ಬೆಳೆದ ವಾತಾವರಣ—ಸುತ್ತುಗಟ್ಟಿರುವ ಸಂಸ್ಕೃತಿಗೆ ಆ ನಡವಳಿಕೆಯೇನೂ ಅಚ್ಚರಿಯಲ್ಲ. ಒಟ್ಟಿನಲ್ಲಿ ನನ್ನ ವಿಧಿ ಚೆನ್ನಾಗಿಲ್ಲ. ಇಂಥವರ ಕೈಹಿಡಿದು ಜೀವನ ಹೀಗೆಲ್ಲ ಆಗಬೇಕೆಂದಿತ್ತು—ಆಗಿ

ಹೋಯಿತು. ಕಳೆದ ಬಾಳಿಗೆ ಚಿಂತಿಸಿ ಫಲವಿಲ್ಲ. ಮುಂದೇನು ಮಾಡಬೇಕೆಂದಿರುವೆ ? ನನ್ನ ಕಥೆಯನ್ನೆಲ್ಲ ಸಾದ್ಯಂತವಾಗಿ ತಿಳಿಸಿರುವೆನು. ನನ್ನನ್ನು ಕರೆದುಕೊಂಡು ಹೋಗಿ ನಿನ್ನೊಡನಿರಿಸಿ ಸಾಕುವ ಧೈರ್ಯ ನಿನಗಿದೆಯೆ ? ಇದ್ದರೆ ಹೇಳು—ಈ ಕ್ಷಣ ನಿನ್ನೊಡನೆ ಹೊರಡುವೆನು.'

ಕಂಬನಿ ಮಿಡಿದು ಹೇಳಿದರು,

' ನಿನ್ನಂಥ ಪುಣ್ಯವತಿಯನ್ನು ಸಾಕುವ ಪುಣ್ಯ ಸುಮ್ಮನೆ ಬರುವುದಿಲ್ಲ ರತ್ನ. ಹೆಸರಿಗೆ ತಕ್ಕಂತೆ ನೀನು ರತ್ನವೆ ಆಗಿರುವೆ. ನಿನ್ನ ಸೇವೆ ದೇವರಿತ್ತ ವರವೆ ಸರಿ ! ಈಗಲೆ ಹೊರಡು, ಈ ನರಕದ ಮನೆಯಲ್ಲಿನ್ನೊಂದು ಗಳಿಗೆಯೂ ಇರುವುದು ಬೇಡ. ನಿನ್ನನ್ನು ಕಣ್ಣಲ್ಲಿ ಮುಚ್ಚಿರಿಸಿ ಸಾಕುವೆನು.'

' ಹಾಗೆಲ್ಲಾ ದುಡುಕಲಾಗುವುದಿಲ್ಲ; ಇವರು ತುಂಬ ನೀಚ ಜನ. ಸಮಯ ಬಿದ್ದರೆ ಖೂನಿ ಮಾಡಲು ಕೂಡ ಹೇಸುವುದಿಲ್ಲ. ಅವರಿಗರಿಯದಂತೆ ಇಲ್ಲಿಂದ ಜಾರಬೇಕು. ಬಂದವರಿಗೆ ಬೇಟೆಯಾಡುವ ಹುಚ್ಚು ಬಹಳ. ಮಧ್ಯಾಹ್ನ ಊಟ-ತಿಂಡಿಯಾದ ನಂತರ ಮತ್ತೆ ಹೊರಗೆ ಹೋಗುವರು, ಹೋದವರು ಮನೆಗೆ ಮರಳುವುದು ಕತ್ತಲೆ ಮೂಡಿದ ಮೇಲೆಯೆ. ಅಷ್ಟರಲ್ಲಿ ನಾವಿಲ್ಲಿಂದ ಮರೆಯಾಗೋಣ. ನೀನು ಮಾತ್ರ ಬಹಳ ಹುಷಾರಾಗಿರಬೇಕಪ್ಪ. ಇಂದು ನೀನಿಲ್ಲಿರುವುದರಿಂದ ಅವರ ಕೆಲಸಕ್ಕಡ್ಡಿಯಾಗಬಹುದೆಂದು ಪ್ರಾಣಕ್ಕಪಾಯ ಮಾಡಿದರೂ ಮಾಡಬಹುದು. ಊಟವಾದವನೆ ಕೆಳಬೀದಿಯಲ್ಲಿರುವ ಶಾನುಭೋಗರ ಮನೆಗೆ ಹೋಗಿ ಬಿಡು. ನಾನು ಅಲ್ಲಿಗೇ ಬಂದು ನಿನ್ನನ್ನು ಕಾಣುವೆನು ! '—ಎಂದು ಹೇಳಿ ರತ್ನ ಸರಸರನೆ ಇಳಿದು ಬಂದು ಒಳಗೆ ಜಾರಿದಳು.

' ನಮ್ಮವರೂ ಸದ್ದಾಗದಂತೆ ಇಳಿದು ಬಂದು ಮೊದಲಿನ ಸ್ಥಳದಲ್ಲೇ ಹೋಗಿ ದೇಹವೂರಿದರು. ಸ್ವಲ್ಪ ಹೊತ್ತಿನೊಳಗೆಲ್ಲ ಹೊರಗೆ ಹೋಗಿದ್ದವರು ನಕ್ಕು ನಲಿದು ಬಂದರು. ಬಂದವರೆ ಊಟಕ್ಕೆದ್ದರು. ನಮ್ಮವರಿಗೆ ಅನ್ನವೆ ರುಚಿಸಲಿಲ್ಲ; ಆ ನರಕದಲ್ಲಿ ಉಣ್ಣಬೇಕೆನಿಸಲೂ ಇಲ್ಲ. ಅನುಮಾನಕ್ಕಾಸ್ಪದವಾಗುವುದೆಂದು ಹೆದರಿ ಊಟದ ಶಾಸ್ತ್ರ ಮಾಡಿ ಕೈತೊಳೆದವರೆ ಅಲ್ಲಿಂದ ಹೊರಬಿದ್ದರು. ರತ್ನ ಮೊದಲೆ ಶಾನುಭೋಗರಿಗೆ ಸುದ್ದಿ ಕೊಟ್ಟಿದ್ದಳೇನೊ ಬಾಗಿಲ ಬಳಿ ಅವರನ್ನು ಕಂಡೊಡನೆಯೆ ಓಡಿ ಬಂದು ಮರ್ಯಾದೆಯಿಂದ ಒಳಗೆ ಕರೆದು

ಕೊಂಡು ಹೋಗಿ ಸತ್ಕರಿಸಿದರಂತೆ. ಸತ್ಕಾರ ಮುಗಿದ ನಂತರ ಹೊತ್ತನ್ನು ವ್ಯರ್ಥ ಮಾಡದೆ ಅವರಿಂದಲೂ ಅಳಿಯನಿಗೆ ಸಂಬಂಧಪಟ್ಟ ವಿಷಯಗಳನ್ನು ಹೆಕ್ಕತೊಡಗಿದರು.

"ರತ್ನ ಅಲ್ಲಿಗೆ ಬಂದಾಗ ಸುಮಾರು ಸಂಜೆ ಏಳು ಗಂಟೆಯಿರಬಹುದು. ಕೈಯಲ್ಲಿ ತಂದೆಯ ಕೈಚೀಲ ಹಿಡಿದೆ ಬಂದಿದ್ದಳು. ತನ್ನದಾಗಿ ಏನೂ ತಂದಿರ ಲಿಲ್ಲ. ನೋಡಲು ವಿರಾಗಿಣಿಯಂತಿದ್ದಳು. ಮೈಮೇಲೆ ಒಡವೆಯ ಹೆಸರಿರ ಲಿಲ್ಲ. ಉಟ್ಟ ಸೀರೆಯೂ ಸಾಮಾನ್ಯವಾಗಿತ್ತು. ಆ ನೋಟ ಕಂಡು ನಮ್ಮ ವರಿಗೆ ತುಂಬಾ ಹಿಗ್ಗಾಯಿತು, ಹೆಮ್ಮೆಯೂ ತುಂಬಿ ಬಂತು. ಆ ತ್ಯಾಗ ಮೂರ್ತಿಯನ್ನು ಕಣ್ಣಲ್ಲಿ ಪ್ರತಿಷ್ಠಿಸಿ ಮೆಚ್ಚಿಕೆಯ ಪುಷ್ಪವೇರಿಸಿದರು.

"ಅಷ್ಟರಲ್ಲಿ ಹೊರಡುವ ಗಡಿಬಿಡಿಯಾಯಿತು. ಮನೆಯ ಮುಂದೆ ಎತ್ತಿನ ಗಾಡಿಯೂ ಬಂದು ನಿಂತಿತು. ರತ್ನ ಶಾನುಭೋಗರಲ್ಲಿ ತನ್ನ ರುದ್ರ ಪರಿಸ್ಥಿತಿಯನ್ನು ತಿಳಿಸಿ ಸಹಾಯ ಬೇಡಿದ್ದಳೇನೊ ಅವಳು ತಂದೆಯೊಡನೆ ಹೊರಟ ಕೂಡಲೆ, ಶಾನುಭೋಗರು ಅವರೊಡನೆ ನಾಲ್ಕಾರು ನಂಬಿಕೆಗರ್ಹ ರಾದ ಸೈತರನ್ನು, ಮಾಡಬೇಕಾದ ಕೆಲಸ ಸೂಚಿಸಿ ಕಳುಹಿಸಿ ಕೊಟ್ಟರು. ಅವ ರೆಲ್ಲರೂ ದೃಢಕಾಯರಾಗಿದ್ದರು. ಕೈಲಿ ಕುಡುಗೋಲು ದೊಣ್ಣೆಗಳನ್ನಿರಿಸಿ ಕೊಂಡಿದ್ದರು.

"ಆ ಊರಿನಿಂದ ಬೆಂಗಳೂರಿನ ವರೆಗೆ ಸುಮಾರು ನಾಲ್ವತ್ತೆರಡು ಮೈಲಿ ಗಳ ಅಂತರವಿತ್ತು. ನಡುವೆ ಎರಡು ಹಳ್ಳಿಯಲ್ಲಿ ತಂಗಿದ್ದು ಮುಂದೆ ಹೋಗು ವುದೆಂದು ನಿಶ್ಚಯಿಸಿ ಹೊರಬಿದ್ದರು. ಆ ಹಳ್ಳಿಗಳಲ್ಲೂ ಅವರಿಗೆ ಬೇಕಾದ ಸಹಾಯ ಸೌಕರ್ಯಗಳನ್ನೊದಗಿಸುವಂತೆ ಮೊದಲೆ ಶಾನುಭೋಗರು ಏರ್ಪಾಡು ಮಾಡಿದ್ದರು. ಅವರು ಅಲ್ಲಿಂದ ಸರಾಗವಾಗಿ ಪಾರಾಗಲು ಮಾಡಿಕೊಂಡಿದ್ದ ಎಲ್ಲ ವ್ಯವಸ್ಥೆಗಳೂ ಭದ್ರವಾಗಿದ್ದುವು. ಆ ಭರವಸೆ ಬಂದಿದ್ದರಿಂದಲೆ ಅಂದು ಅಲ್ಲಿಂದ ಪ್ರಯಾಣ ಬೆಳೆಸಿದ್ದು, ಆದರೆ ವಿಧಿಯ ಬೆಂಬಲ ಅವರ ಕಡೆಗಿರಲಿಲ್ಲ.

"ಸುಮಾರು ಹದಿನೈದು-ಇಪ್ಪತ್ತು ಮೈಲಿ ದೂರ ಹೋಗಿರಬಹುದು ತಂಗಲು ಗೊತ್ತುಪಡಿಸಿಕೊಂಡಿದ್ದ ಮೊದಲನೆ ಹಳ್ಳಿಯನ್ನು ತಲಪಲು ಇನ್ನೂ ನಾಲ್ಕಾರು ಮೈಲಿಗಳಿದ್ದುವು. ಅಷ್ಟರಲ್ಲಿ ಆ ನೀಚರು ಅವರನ್ನಟ್ಟಿಕೊಂಡು ಬಂದೇ ಬಿಟ್ಟರು. ಆ ಸುಳಿವು ತಿಳಿದು ಗಾಡಿಯವನು ಎತ್ತುಗಳ ಬೆನ್ನು ಚಪ್ಪ

ರಿಸಿದ. ಅವು ನಾಗಾಲೋಟ ಕಿತ್ತುವು. ಯಂತ್ರವಾಹನದ ಮುಂದೆ ಅವು ಗಳ ಓಟ ಯಾವ ಮೂಲೆಗೆ ?

"ಆ ನೀಚರು ಕಾರಿನಲ್ಲಿ ಬಂದಿದ್ದರು. ಕಣ್ಣು ಮುಚ್ಚಿ ಬಿಡುವುದರಲ್ಲಿ ನಮ್ಮವರ ಗಾಡಿಗೆ ಮುತ್ತಿಗೆ ಹಾಕಿ ಒಳಗಿದ್ದವರನ್ನು ಈಚೆಗೆಳೆಯತೊಡಗಿದರು. ತಂದೆ-ಮಗಳನ್ನು ನಡುವೆ ಕೂರಿಸಿ ಸುತ್ತಲೂ ಶಾನುಭೋಗರ ಕಡೆಯವರು ರಕ್ಷಣೆಯಿತ್ತಿದ್ದರು. ಹಾಗಾಗಿ ಮೊದಲು ಆ ನೀಚರ ಕೈಗೆ ಸಿಕ್ಕಿಬಿದ್ದವರವರೆ.

"ಅವರೇನೊ ರತ್ನಳಿಗಾಗಿ ಪ್ರಾಣದ ಹಂಗು ತೊರೆದು ಬಂದವರೊಡನೆ ಹೋರಾಡಲು ಸಿದ್ಧರಿದ್ದರು. ಆಧುನಿಕ ಶಸ್ತ್ರಾಸ್ತ್ರಗಳ ಮುಂದೆ, ಕುಡಗೋಲು ದೊಣ್ಣೆ ಏನೂ ಕೆಲಸ ಮಾಡುವುದಿಲ್ಲ. ಆ ನೀಚರ ಕೈಲಿದ್ದ ಪಿಸ್ತೂಲಿಗೆ ಹೆದರಿ ಆ ರೈತ ಜನ ನಾಯಿ ಮರಿಯಂತಾಗಿ, ಗಾಡಿಯನ್ನವರ ವಶಕ್ಕೆ ಬಿಟ್ಟು ಹಿಂದೆ ಸರಿದು ನಿಂತರು. ಅದನ್ನು ಕಂಡು ರತ್ನ ತಂದೆಯ ಪ್ರಾಣವುಳಿಸುವ ಸಲುವಾಗಿ ಗಾಡಿಯಿಂದ ಜಗ್ಗನೆ ಹಾರಿ ತಾನೆ ಅವರ ಕೈವಶವಾದಳು. ಆ ನರ-ರಾಕ್ಷಸರು ಅದೇ ಪಿಸ್ತೂಲಿನಿಂದ ಅವಳ ದೇಹವನ್ನು ಗುದ್ದಿ ಗುದ್ದಿ ಹಣ್ಣು ಮಾಡಿದರು. ಅವರ ನಿಗ ಆ ಕಡೆಯಿರುವಂತೆಯೆ, ಶಾನುಭೋಗರ ಕಡೆಯ ವರು ನಮ್ಮವರನ್ನು ಆ ಹಂತಕರಿಂದ ಉಳಿಸುವ ಸಲುವಾಗಿ, ಅವರು ತಡೆಯು ತ್ತಿದ್ದರೂ ಕೇಳದೆ ಎತ್ತುಗಳನ್ನು ನಾಗಾಲೋಟದಿಂದ ಓಡಿಸಿಕೊಂಡು ಹೊರ ಟರು. ಆ ನೀಚರು ನಮ್ಮವರನ್ನು ಕೊಲೆ ಮಾಡಲು ಧಾವಿಸಿ ಬರುತ್ತಿದ್ದ ರೇನೊ, ದೂರದಲ್ಲಿ ಬರುತ್ತಿದ್ದ ಕಾರಿನ ಕೂಗೊಂದು ಭೀತಿ ಹುಟ್ಟಿಸಿ ಅವರ ಆ ಪ್ರಯತ್ನವನ್ನು ತಡೆಗಟ್ಟಿತು. ಗಾಡಿ ಹೊರಟು ಹೋದುದನ್ನು ಕಂಡು ರತ್ನ ಗಾಡಿಯ ಕಡೆ ಮುಖ ಮಾಡಿ ಗೋಳಿಟ್ಟಳು.

'ಅಪ್ಪಾ........ನನ್ನನ್ನು........ಮರೆತು ಬಿಡಿ........ಇನ್ನು ಈ ಜನ್ಮ.... ....ನಿಮ್ಮ........ಮುಖ........ಲಾರೆ........ಈ ಧೂರ್ತರಿಂದ............ ಬೇಗ ಬಿಡು........ದೇವರ........ಸೇರುವೆನು........ನನ್ನಾತ್ಮಕ್ಕೆ........ ಶಾಂತಿ... .... ಬಯಸಿ........ಅಮ್ಮ........ಕಡೆಯ........ನಮಸ್ಕಾರ........'

"ಇನ್ನೂ ಏನೇನು ಹೇಳಿದಳೊ, ಬಾಯಿ ಅದುಮಿ ಹಿಡಿಯುತ್ತಿದ್ದರೆಂದು ತೋರುತ್ತದೆ; ಗಾಳಿಯ ಹೊಡೆತವು ಜೋರಾಗಿತ್ತು. ಹಾಗಾಗಿ ಮಾತ

ಅಸ್ಪಷ್ಟವಾಗಿತ್ತು. ಒಂದೆರಡು ನಿಮಿಷದಲ್ಲಿ ಆ ಅಸ್ಪಷ್ಟ ಧ್ವನಿಯೂ ನಿಂತು ಹೋಯಿತು.

"ನಮ್ಮವರು ರಕ್ಷಣಾ ಶಾಖೆಯ ಸಹಾಯ ಪಡೆದು ಹೋಗಿ ಕರೆದು ಕೊಂಡು ಬರುವ ನಿರ್ಧಾರ ಮಾಡಿ, ಅವಸರದಲ್ಲಿ ಊರು ತಲುಪಿದರು. ಎಲ್ಲ ಅನುಕೂಲಗಳನ್ನು ಹೊಂದಿಸಿಕೊಂಡು ಹೊರಡಬೇಕೆಂದಿರುವಷ್ಟರಲ್ಲೇ ಶಾನು ಭೋಗರಿಂದ ಪತ್ರ ಬಂತು. ರತ್ನ ಆ ನೀಚರಿಂದ ಕ್ರೂರ ಸಾವಿಗೆ ತುತ್ತಾದ ಳೆಂದೂ, ಅವಳ ದೇಹವನ್ನು ಚೂರಿಯಿಂದ ಚೂರು ಚೂರಾಗಿ ಮಾಡಿ ಹೊಂಡದಲ್ಲಿ ತುಂಬಿ ಮಣ್ಣು ಮುಚ್ಚಿದ್ದಾರೆಂದೂ, ಕೇಸು ಹಾಕುವುದಾದರೆ ತಮ್ಮಿಂದ ಸಾಧ್ಯವಿದ್ದಷ್ಟು ನೆರವು ನೀಡಲು ಸಿದ್ಧರಿದ್ದೇವೆಂದೂ ಬರೆದಿದ್ದರು.

"ನಮ್ಮವರು ಅದಕ್ಕೆ ಮನಸ್ಸು ಹಾಕಲಿಲ್ಲ. ನಮ್ಮ ವಸ್ತು ಹೋದ ಮೇಲೆ ಏನು ಮಾಡಿ ತಾನೆ ಪ್ರಯೋಜನವೇನು! ಅವರವರ ಕರ್ಮಕ್ಕೆ ಈಶ್ವರನಿಂದ ತಕ್ಕ ಪ್ರತಿಫಲ ಹೊಂದುವರೆಂದು ಸುಮ್ಮನಾಗಿ ಬಿಟ್ಟರು. ರತ್ನಳ ಬಾಳಿನ ದುರಂತ—ನಮ್ಮಿಬ್ಬರೆದೆಯನ್ನೂ ಹುಳುವಿನಂತೆ ಕೊರೆಯತೊಡಗಿತು. ನ್ಯಾಯವಾಗಿ ಬೆಳೆದು ಬಂದ ಶಾಂತಳಿಂದ ಆ ನೋವು ಮರೆಯಬೇಕಿತ್ತು. ನಾವು ನತದೃಷ್ಟರು—ಆ ಪುಣ್ಯ ಪಡೆದು ಬರಲಿಲ್ಲ. ಅವಳು ಲಗ್ನವಾಗಿ ಹೋದಂದಿನಿಂದ ನಮ್ಮ ಯಾತನೆ ಇನ್ನೂ ಹೆಚ್ಚಿದೆ" ಎಂದು ಶಾಂತ ಲಗ್ನವಾ ದಂದಿನಿಂದ ಅಂದಿನ ವರೆಗೆ ಪಟ್ಟ ಯಮಯಾತನೆಯನ್ನೆಲ್ಲ ಕರುಳು ಸುಡು ವಂತೆ ವಿವರಿಸಿ, ಆ ಯಾತನೆಯ ಫಲವಾಗಿ ತಮ್ಮಿಂದ ಬಾರದೆ ಕೊಲೆಗೀಡಾ ದುದನ್ನೂ ಮುಚ್ಚಿಡದೆ ತಿಳಿಸಿ, ಹೇಳಿದರು "ಈಗ ಹೇಳಿ, ಅನ್ನವುಂಡು ಈ ದೇಹ ಬೆಳೆಸಬೇಕೊ, ಕಟ್ಟೆ ಕೊಲೆ ಮಾಡಬೇಕೊ! ಕಣ್ಣೆದುರಿಗೆ ಹುಟ್ಟಿದ ಸಂತಾನವೆಲ್ಲಾ ಸುಟ್ಟುರಿದು ಹೋಗುತ್ತಿರುವಾಗ ತಮ್ಮ ದಾಂಪತ್ಯಜೀವನ ದಲ್ಲೆಷ್ಟೆ ಸುಖವಿದ್ದರೂ ಯಾವ ತಂದೆ-ತಾಯಿ ನೆಮ್ಮದಿಯಿಂದಿರುವರು?"

ಸುಶೀಲಮ್ಮನ ಸಂತಾನದ ಕಥೆ ಸೂಲಗಿತ್ತಿಯ ಎದೆಯನ್ನು ನಡುಗಿಸಿ ಹಿಂಡಿ ನೀರು ತೆಗೆಯಿತು. ಬಂದ ಕಣ್ಣೀರು ಮಿಡಿಯುತ್ತ ಹೇಳಿದರು,

"ಈ ಬಗೆಯ ಜೀವನ ನಾನೆಲ್ಲೂ ನೋಡಿಲ್ಲಾಮ್ಮ. ಹುಟ್ಟಿದ ಮಕ್ಕ ಳೆಲ್ಲಾ ದುರಂತಕ್ಕೀಡಾಗುವುದನ್ನೂ ಕೇಳಿಲ್ಲ. ಸಂತಾನದ ಸಾವಿನ ಗಾಣಕ್ಕೆ ಸಿಕ್ಕಿದ ನಿಮ್ಮ ಮನಸ್ಸು ಸಾವನ್ನು ಬಯಸುವುದು ಸ್ವಾಭಾವಿಕ. ಆ ಯಾತನೆ

ಯಿಂದ ಬಿಡುಗಡೆ ಹೊಂದಬೇಕು. ಬದುಕು ಅವರವರ ಪ್ರಾರಬ್ಧ ಕರ್ಮಕ್ಕೆ ತಕ್ಕಂತಿರುತ್ತದೆ. ಸಂತಾನಕ್ಕೆ ಸುಖದ ಬದುಕುಂಟಾಗಲಿಲ್ಲವೆಂದು ನಿಮ್ಮಣಿಯಾದ ಬದುಕನ್ನು ಸುಡುವುದು ನನಗೇನು ಒಳಿತಾಗಿ ಕಾಣುವುದಿಲ್ಲ. ದುಡುಕಿ ಅನರ್ಥ ಮಾಡಿಕೊಳ್ಳಬೇಡಿ."

"ಆ ಬಗ್ಗೆ ನಾನೀಗ ಏನೂ ಹೇಳಲಾರೆ, ತಾಯ್ತನವೆ ಅದನ್ನು ನಿರ್ಧರಿಸಬೇಕು. ಯಾವುದೂ ನೀವು ಮತ್ತೊಮ್ಮೆ ಬಂದಾಗ ತಿಳಿಯುವುದು" ಎಂದು ಬಲಮುಗ್ಗುಲಾದರು.

ಸ್ವಲ್ಪ ಪೊತ್ತು ಕೊಠಡಿಯ ತುಂಬ ಮೌನ ವ್ಯಾಪಿಸಿತು. ಅಷ್ಟರಲ್ಲಿ ವೈದ್ಯರನ್ನು ಕರೆದುಕೊಂಡು ಸೂರಪ್ಪನೂ ಬಂದರು. ವೈದ್ಯರು ಪರೀಕ್ಷಿಸಿ, ಸೂಲಗಿತ್ತಿಯಿಂದ ಕೆಲವು ಪ್ರಶ್ನೆಗಳಿಗೆ ಉತ್ತರ ತೆಗೆದುಕೊಂಡು ಹೇಳಿದರು,

"ಮೈಯಲ್ಲೇನೂ ರೋಗವಿಲ್ಲ, ತೀರಾ ನಿತ್ರಾಣರಾಗಿದ್ದಾರೆ. ಎಲ್ಲೋ ಆಹಾರ ಕಟ್ಟಿರಬೇಕು, ಅದಕ್ಕೆ ಹೀಗಾಗಿದೆ. ಪುಷ್ಟಿಕರವಾದ ಆಹಾರ ಬಿದ್ದರೆ ಸರಿಹೋಗುವುದು "— ಎಂದು ಗ್ಲೂಕೋಸ್ ಇಂಜೆಕ್ಷನ್ ಕೊಟ್ಟು ಸೋಪಿನಿಂದ ಕೈತೊಳೆದು ಒರೆಸಿ, ಸೂರಪ್ಪನಿತ್ತ ರೊಕ್ಕವನ್ನು ಕಿಸೆಗೆ ತುಂಬಿ "ವಿಶ್ರಾಂತಿ ಕೊಡಬೇಕು. ತಿಂಗಳ ವರೆಗಾದರೂ ಹಾಸಿಗೆ ಬಿಟ್ಟೇಳಬಾರದು. ಆಮೇಲೆ ಬಂದು ಔಷಧ ತೆಗೆದುಕೊಂಡು ಹೋಗಿ" ಎಂದು ಚರ್ಮದ ಚೀಲ ಹಿಡಿದು ತಮ್ಮ ದಾರಿ ತುಳಿದರು. ಅವರ ಬೆನ್ನ ಹಿಂದೆಯೇ ಸೂಲಗಿತ್ತಿಯೂ ನಡೆದರು.

ಸೂರಪ್ಪ ವೈದ್ಯರ ಸಲಹೆಯಂತೆಯೆ ನಡೆದುಕೊಳ್ಳತೊಡಗಿದರು. ಸ್ವಲ್ಪವೂ ವ್ಯತ್ಯಾಸವಾಗಗೊಡಲಿಲ್ಲ. ಊಟ-ತಿಂಡಿ ಮಾಡುವ ಸಮಯದಲ್ಲಂತೂ ಕಡ್ಡಾಯವಾಗೆದುರಿಗಿರುತ್ತಿದ್ದರು. ಔಷಧ ಕುಡಿಸುವ ಹೊಣೆಯನ್ನೂ ತಾವೆ ಹೊತ್ತಿದ್ದರು. ಮಲಗಿದಲ್ಲಿಂದ ಏಳಲು ಬಿಡುತ್ತಿರಲಿಲ್ಲ. ಪುನಃ ಮನೆಗೆಲಸವೆಲ್ಲ ಅವರಿಗೆ ಬಿತ್ತು. ಹಿಂದಿನ ಉತ್ಸಾಹ, ಲವಲವಿಕೆಯಿರಲಿಲ್ಲ. ಅಡಿಗೆ ಮನೆಗೆ ಕಾಲಿರಿಸುವುದೆ ಬೇಡವಾಗುತಿತ್ತು. ಸೋಮಾರಿತನದಿಂದಲ್ಲ, ಹೆದರಿಕೆಯಿಂದ.

ಹೆಂಡತಿಯೊಬ್ಬರನ್ನೆ ಬಿಟ್ಟಿರಲು ಮನಸ್ಸೊಪ್ಪುತ್ತಿರಲಿಲ್ಲ, ಅವರಲ್ಲಿ ನಂಬಿಕೆಯೆ ಇರಲಿಲ್ಲ. ಅಂದು ಸೂಲಗಿತ್ತಿ ಹೋಗುವಾಗ ಸುಶೀಲಮ್ಮನ ನಿರ್ಧಾರ

ವನ್ನು ಕಿವಿಯಲ್ಲುಸುರಿ, ಎಚ್ಚರಿಕೆಯಾಗಿರಬೇಕೆಂದು ಹೇಳಿ ಹೋಗಿದ್ದರು. ಆ ಮಾತು ಕೇಳಿದಂದಿನಿಂದ ಸೂರಪ್ಪನವರ ಎದೆಯಲ್ಲಿ ಗಾಬರಿ ಮನೆ ಮಾಡಿತು. ಪತ್ನಿಯಲ್ಲಿ ವೇದನೆ ತೋಡಿಕೊಳ್ಳುವುದರಿಂದ ಏನೂ ಪ್ರಯೋಜನವಾಗಲಾರ ದೆಂದು ತಿಳಿದು ಅವರ ಬಳಿ ಬಲವಾದ ಕಾವಲು ಹಾಕಲು ನಿಶ್ಚಯಿಸಿದರು. ಕಾರ್ಯರೂಪಕ್ಕೆ ಬರಲು ಸುಂದರಿಯ ನೆರವು ಆವಶ್ಯಕವಾಯಿತು. ಅವಳಲ್ಲಿ ಕಷ್ಟವನ್ನು ತೋಡಿಕೊಂಡು ಸಹಾಯ ಬೇಡಿದರು.

ಸುಂದರಿಯಲ್ಲಿ ಹಿಂದೆ ತನ್ನ ದುಡುಕಿನಿಂದಾದ ಅಪರಾಧದ ನೆನಪು ಜಾಗೃತವಾಗಿದ್ದೆ ಇತ್ತು. ಹೇಗಾದರೂ ಅವರ ಸಂಸಾರ ನೇರ ಮಾಡಿ ಆ ಪಾಪ ಕಳೆದುಕೊಳ್ಳಬೇಕೆಂದು ಸಮಯ ಕಾಯುತ್ತಿದ್ದಳು. ಇಂದು ತಾನಾಗಿ ಒದಗಿ ಬಂದ ಅವಕಾಶವನ್ನು ಬಿಟ್ಟು ಕೊಡಲಿಲ್ಲ. ಮರುಮಾತಾಡದೆ ಸೂರ ಪ್ಪನ ಕರೆಗೊಪ್ಪಿಕೊಂಡಳು.

ಸೂರಪ್ಪ ಮನೆಯ ಸಂಪೂರ್ಣ ಜವಾಬ್ದಾರಿಯನ್ನು ಸುಂದರಿಗೆ ವಹಿಸಿ, ತಾವು ಹಗಲಿರುಳೂ ಸುಶೀಲಮ್ಮನನ್ನು ಕಾಯತೊಡಗಿದರು. ಕೆಲಸ-ಬೊಗಸೆ ಮುಗಿಸಿ ಸುಂದರಿಯೂ ಅವರ ಬಳಿ ಬಂದು ಕೂರುತ್ತಿದ್ದಳು. ಸದ್ಗ್ರಂಥ ಗಳನ್ನು ಓದಿ ಮನಸ್ಸನ್ನು ಪ್ರಸನ್ನವಾಗಿರಿಸಲು ಪ್ರಯತ್ನಿಸುತಿದ್ದಳು. ಸುಶೀ ಲಮ್ಮ ಅವರಿಬ್ಬರ ಅನವರತ ಸೇವೆ ಮಧುರೋಕ್ತಿಗಳಿಂದ ನೋವನ್ನು ಮರೆತು ಮುಖದಲ್ಲಿ ಆಗಾಗ ನಗೆಯಾಡುತಿದ್ದರು.

ಅಷ್ಟಾದರೂ ಸೂರಪ್ಪನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಮನೆಯಲ್ಲಿ ತಮಗಿಂತ ಹಿರಿಯರಾದವರೊಬ್ಬರಿರಬೇಕೆಂದು ಮನಸ್ಸು ಚೀರಿಟ್ಟಿತು. ತಮ್ಮವ ರಾಗಿ ಸಹಾಯ ಮಾಡಲು ಯಾರಿದ್ದಾರೆ? ಇರುವ ಒಬ್ಬಕ್ಕನಿಗೆ ಸಂಸಾರ ತಾಪತ್ರಯ. ವಯಸ್ಸಾದ ಗಂಡನನ್ನುಬಿಟ್ಟು ಎಲ್ಲೂ ಕದಲುವಂತಿರಲಿಲ್ಲ. ಸಾಲ ದಿದ್ದಕ್ಕೆ ಮನೆ ತುಂಬ ಮಕ್ಕಳು ಮರಿ ಬೇರೆ. ಕಾಗದ ಬರೆದು 'ಈಗ ಬರಲು ಸಾಧ್ಯವಿಲ್ಲ' ವೆನ್ನುವ ಉತ್ತರವನ್ನೂ ಪಡೆದಾಯಿತು. ಅವರನ್ನುಳಿದರೆ ಆಪ ತ್ತಿಗೆ ಆಗುವವರು ಭಟ್ಟರೊಬ್ಬರೆ. ಸ್ವಲ್ಪ ದಿನ ಹತ್ತಿರ ಕರೆಸಿಟ್ಟುಕೊಳ್ಳ ಬೇಕೆಂದು ಮನಸ್ಸು ತುಂಬ ಹಂಬಲಿಸಿತು. 'ಕೂಡಲೆ ಹೊರಟು ಬರ ಬೇಕೆ'ಂದು ತಾರು ಬಿಟ್ಟರು.

ಭಟ್ಟರು ಆಸ್ಪತ್ರೆಯಿಂದ ಬಂದು ಎರಡು–ಮೂರು ತಿಂಗಳಾಗಿದ್ದರೂ ಹೊರಗೆಲ್ಲಾ ಹೆಚ್ಚಾಗಿ ಓಡಾಡುತ್ತಿರಲಿಲ್ಲ. ಕುಂಟುಹಾಕಿ ನಡೆಯಲು ನಾಚಿಕೆಯಾಗುತಿತ್ತು, ನೋವೂ ಆಗುತಿತ್ತು. ಅಷ್ಟಿದ್ದರೂ ಸೂರಪ್ಪನ ಕರೆಯನ್ನು ಮನ್ನಿಸಿ, ಮಿತ್ರತ್ವಕ್ಕೆ ಮರ್ಯಾದೆಯಿತ್ತು ಹೊರಟೆ ಬಿಟ್ಟರು. ಮನೆಗೆ ಬಂದು ದಂಪತಿಗಳನ್ನು ಕಾಣುವ ವರೆಗೆ ಜೀವದಲ್ಲಿ ಜೀವವಿರಲಿಲ್ಲ. ವಿಷಯವೆಲ್ಲವನ್ನು ತಿಳಿದು ಗಾಬರಿಯಾಗುವುದು ಬೇಡವೆಂದು ಧೈರ್ಯ ತುಂಬಿದರು.

ಸೂರಪ್ಪನ ಧೈರ್ಯಕ್ಕಾಗಿ ಆ ಮಾತಾಡಿದ್ದರೂ ಸುಶೀಲಮ್ಮನ ಸ್ವಭಾವದ ಬಗ್ಗೆ ಅಳುಕಿದ್ದೆ ಇತ್ತು. ಮೊದಲು ಅವರ ದೌರ್ಬಲ್ಯವನ್ನು ಹೋಗಲಾಡಿಸಿಕೊಂಡ ಹೊರತು ಯಾವ ಪ್ರಯತ್ನವೂ ಫಲಿಸಲಾರದೆಂದು ತಿಳಿದು, ಕಲಿತ ಬುದ್ಧಿಯನ್ನೆಲ್ಲ ವೆಚ್ಚ ಮಾಡಿದರು.

ಸುಶೀಲಮ್ಮನ ತಾಯ್ತನದ ನಿರ್ಧಾರದ ಕಾವಿನ ಮುಂದೆ ಭಟ್ಟರಿತ್ತ ತಿಳುವಳಿಕೆಯೆಲ್ಲ ಮಂಜಿನಂತೆ ಕರಗಿ ಹೋಯಿತು. ಸಾಲದ್ದಕ್ಕೆ, ಅವರು ಬಂದ ದಿನ ಶಾಂತಳ ಆರೋಗ್ಯದ ಬಗ್ಗೆ ಸೂರಪ್ಪನ ಕಿವಿಯಲ್ಲುಸುರಿದ್ದ 'ಶಾಂತ ಬದುಕಲಾರಳೆಂದು ವೈದ್ಯರು ಹೇಳಿದ್ದಾರೆ'ನ್ನುವ ಮಾತು ಅವರ ಕಿವಿಗೆ ಬಿದ್ದು ಸಾವಿನ ಚಟವನ್ನಿಮ್ಮಡಿಗೊಳಿಸಿತ್ತು.

ಅನ್ನ. ಕಟ್ಟಿ ಕೊಲೆಗೀಡಾಗುವ ಪ್ರಯತ್ನ ತಮ್ಮ ಪತಿಯ ಬಳಿ ನಡೆಯದೆಂದೂ ವಿಷ ಪ್ರಯೋಗದಿಂದಲೆ ಕೊನೆಗಾಣಿಸಬೇಕೆಂದೂ ನಿರ್ಧರಿಸಿ ಸಮಯ ಕಾಯತೊಡಗಿದರು. ಭಟ್ಟರು ಬಂದ ನಾಲ್ಕಾರು ದಿನಗಳಲ್ಲೆ ಬಹಳ ದಿನದಿಂದ ನಿರೀಕ್ಷಿಸುತ್ತಿದ್ದ ಆ ಸಮಯ ತಾನಾಗಿ ಒದಗಿ ಬಂತು.

ಪ್ರಾತಃಕಾಲ ಆರೂವರೆ ಸಮಯ. ಸೂರಪ್ಪ ಸ್ನಾನಕ್ಕಿಳಿದಿದ್ದರು. ಭಟ್ಟರು ಶೌಚಕ್ಕೆ ಹೋಗಿದ್ದರು. ಸುಂದರಿ ಮನೆಯಿಂದಿನ್ನೂ ಬಂದಿರಲಿಲ್ಲ. ಅಂದು ವಿಧಿಯೆಸೆದ ಮಾಯೆಗೆ ಪೈ ಸೋತು, ಸೂರಪ್ಪ ಬೀಗದ ಕೈಗೊಂಚಲನ್ನು ಜೇಬಿನಲ್ಲೆ ಮರೆತು ಸ್ನಾನಕ್ಕಿಳಿದಿದ್ದರು. ಅದೇ ಸಮಯವನ್ನು ಕಾಯುತ್ತಿದ್ದ ಸುಶೀಲಮ್ಮ ಥಟ್ಟನೆದ್ದು, ಬೀಗದ ಕೈಗೊಂಚಲನ್ನು ಜೇಬಿನಿಂದ ಸದ್ದಾಗದಂತೆ ತೆಗೆದು, ಕಾಲಮೇಲೆ ಕಾಲು ಹಾಕಿ ಮೆಲ್ಲನೆ ಹೋಗಿ ಕಬ್ಬಿಣದ ಪೆಟ್ಟಿಗೆಯಲ್ಲಿರಿಸಿದ್ದ ವಜ್ರದ ಮೂಗುತಿಯನ್ನು ತೆಗೆದುಕೊಂಡಳು. ಸದ್ದಾಗದಂತೆ ಕದವಿಕ್ಕಿ ಗೊಂಚಲನ್ನು ಯಥಾಸ್ಥಾನದಲ್ಲಿರಿಸಿ, ದೇವರ ಮುಂದಿದ್ದ ಸಾಣೆ

ಕಲ್ಲನ್ನೂ ಒಂದು ಕಪ್ಪಿನಲ್ಲಿ ಸ್ವಲ್ಪ ಹಾಲನ್ನೂ ತೆಗೆದುಕೊಂಡು ಬಂದು, ಹಾಸಿಗೆಯ ಮೇಲೆ ಕುಳಿತು ವಜ್ರ ತೇಯತೊಡಗಿದರು.

ಸೂರಪ್ಪ ತೇಯುತ್ತಿದ್ದ ಶಬ್ದವನ್ನು ಕೇಳಿ ಬಚ್ಚಲು ಮನೆಯಿಂದಲೆ "ಏನು ಕರಪರ ಮಾಡುತ್ತಿದ್ದೀಯೆ ?" ಎಂದು ಗೊಣಗಿದರು.

"ತಲೆ ತುಂಬಾ ನೋಯುತ್ತಿದೆ, ಪಟ್ಟು ಹಾಕಲು ಬಜೆ ತೇಯುತ್ತಿದ್ದೇನೆ" ಎಂದು ಸುಳ್ಳು ಹೇಳಲು ಮನಸ್ಸು ಒದ್ದಾಡಿದರೂ ವಿಧಿಯಿಲ್ಲದೆ ಹೇಳಿ ತಮ್ಮ ಕೆಲಸ ಮುಂದುವರಿಸಿದರು.

ಇತ್ತೀಚೆಗೆ ಸುಶೀಲಮ್ಮ ಬದುಕಿನಲ್ಲಾಸಕ್ತಿ ತೋರಿ ತಮ್ಮ ಮಾತನ್ನು ಅಕ್ಷರಶಃ ಪಾಲಿಸುತ್ತಿದ್ದುದರಿಂದ ಸಂಶಯಕ್ಕಾಸ್ಪದ ಕೊಡದೆ ಸೂರಪ್ಪ ಇರಬಹುದೇನೊ ಎಂದು ನಂಬಿ ಸುಮ್ಮನಾದರು.

ವಜ್ರ ತೇದಾಯಿತು. ಕುಡಿಯುವ ಸಮಯ ಬಂದಾಗ ಮನಸ್ಸು ಮತ್ತೆ ಜೋಲಿ ಹೊಡೆಯಿತು. ಬಾಯಿಗಿಟ್ಟ ಕೈ ಸತ್ಯವಂತ ಪತಿಗೆ ದ್ರೋಹ ಮಾಡಲು ಹೆದರಿ ನಡುಗಿ ನೆಲಕ್ಕಿಳಿಯಿತು. ಗರ್ಭದಲ್ಲಿದ್ದ ಪಿಂಡ ನೋವಿನ ಬೆಂಕಿಯುಂಡೆಯಂತಾಗಿ ಬೆಳೆದು ತನ್ನ ಭವಿಷ್ಯದಲ್ಲಿ ಸಾವಿನ ಭೀತಿಗಿಂತ ಮಹತ್ತರವಾದ ಭೀತಿ ಹುಟ್ಟಿಸಿ, ಬದುಕಿನಾಶೆಯನ್ನು ಕೊಂದು ಎದೆಯಲ್ಲಿ ಇಲ್ಲದ ಧೈರ್ಯ ತುಂಬಿ ಸಾವಿಗೆ ಪ್ರೇರೇಪಿಸಿತು; ಶಾಂತಳ ಬದುಕಿನ ದುರಂತತೆಯೂ ಪುಟವಿಟ್ಟಿತು. ಆ ಕ್ಷಣ ಪತಿಯನ್ನು ಮರೆತು ಎದೆಯನ್ನು ಕಲ್ಲಾಗಿ ಮಾಡಿ ನಡುಗುತ್ತಿರುವ ಕೈಯನ್ನು ಬಲವಂತವಾಗಿ ಬಾಯ ಬಳಿ ತೆಗೆದುಕೊಂಡು ಹೋದರು.

ವಜ್ರದ ರಸವನ್ನು ಕುಡಿದು ಮಲಗುವುದಕ್ಕೂ ಸೂರಪ್ಪನ ಸ್ನಾನ ಮುಗಿಯುವುದಕ್ಕೂ ಸಮನಾಯಿತು. ದೇವರ ಪೂಜೆಗೆ ಗಂಧ ತೇಯಲು ಸಾಣೆಕಲ್ಲು ಬೇಕಾಯಿತು. ತೆಗೆದುಕೊಂಡು ಹೋಗಲು ಹೆಂಡತಿಯ ಬಳಿ ಬಂದರು. ಸುಶೀಲಮ್ಮ ಸಂಶಯಕ್ಕಾಸ್ಪದವಾಗದಂತೆ ಸ್ವಲ್ಪ ಬಜೆಯನ್ನೂ ತೇದು ಸಾಣೆಕಲ್ಲನ್ನು ಚೊಕ್ಕಟವಾಗಿ ತೊಳೆದಿರಿಸಿದ್ದರು. ಯಜಮಾನರಿಗೆ ಕಲ್ಲು ತೆಗೆದುಕೊಳ್ಳುವಂತೆ ಹೇಳಿ, ಸಂಶಯ ಬರದಿರಲೆಂದು ತುಟಿಯಲ್ಲಿ ಕೃತಕ ನಗೆ ತುಂಬಿ ಮುಖ ತೊಳೆಯಲು ಬಚ್ಚಲು ಮನೆಗೆ ನಡೆದರು.

ಮೊದಲೆ ಅನ್ನ-ನೀರು ಬಿಟ್ಟು ಕೃಶವಾಗಿತ್ತು ದೇಹ. ತನ್ನ ಪ್ರಭಾವ

ಬೀರಲು ವಜ್ರದ ರಸಕ್ಕೆ ಹೆಚ್ಚು ಸಮಯ ಹಿಡಿಯಲಿಲ್ಲ. ಆಗಲೆ ದೇಹ ಹಿಡಿತ ತಪ್ಪುತಿತ್ತು. ಕರುಳು ಕತ್ತರಿಸಿ ಬೀಳುವಷ್ಟು ವೇದನೆಯಾಗತೊಡಗಿತು. ಹೇಗೋ ಮುಖ ತೊಳೆದು ತೂರಾಡಿಕೊಂಡು ಬಂದು ಹಾಸಿಗೆಯಲ್ಲುರುಳಿದರು. ಕ್ಷಣಕ್ಷಣಕ್ಕೂ ಸಂಕಟ ಹೆಚ್ಚುತಿತ್ತು. ಉಳಿಯಲಾರರೆಂದು ಖಚಿತವಾಯಿತು. ಯಜಮಾನರಲ್ಲಿ ತಪ್ಪಿಗಾಗಿ ಕ್ಷಮಾಪಣೆ ಬೇಡುವ ಮನಸ್ಸಾಯಿತು. ಸಾವಿಗೆ ಮೊದಲೊಮ್ಮೆ ಅವರ ಪವಿತ್ರ ಸಾನ್ನಿಧ್ಯವನ್ನೂ ಬಯಸಿತು. ಆತುರ ತಡೆಯು ಲಾರದೆ ಕೂಗು ಹಾಕಿದರು. ಸೂರಪ್ಪ, ಸುಶೀಲಮ್ಮನ ನಡುಕು ಧ್ವನಿಯನ್ನು ಕೇಳಿ ಏನೊ ಅಪಾಯ ಸಂಭವಿಸಿರಬೇಕೆಂದೂಹಿಸಿ, ಗಾಬರಿಯಾಗಿ ಪೂಜೆ ಯನ್ನರ್ಧದಲ್ಲೆ ಬಿಟ್ಟು, ಬೀಳುವುದನ್ನೂ ಗಮನಕ್ಕೆ ತರವೆ ಓಡಿ ಬಂದರು.

ನೀರಿನಿಂದ ಹೊರಗೆಳೆದು ಹಾಕಿದ ಮೀನಿನಂತೆ ಮಿಲಮಿಲನೆ ಒದ್ದಾ ಡುತ್ತ—'ಅಯ್ಯೋ........ದೇವರು........ಅಪ್ಪ....... ಅಮ್ಮ........ರಾಮಾ' ಎಂದು ಕರುಳು ಕತ್ತರಿಸಿ ಬರುವಂತೆ ಕೂಗುತ್ತಾ ಸಂಕಟಪಡುತ್ತಿದ್ದ ಪತ್ನಿ ಯನ್ನು ಕಂಡು ಛಂಗನೆ ಬಳಿ ಹಾರಿ, ಬಿರುಗಾಳಿಗೆ ಸಿಕ್ಕ ಮರದಂತೆ ನಡುಗು ತ್ತಿದ್ದ ದೇಹವನ್ನು ಒತ್ತಾಯವಾಗಿ ಹಿಡಿತಕ್ಕೆ ತಂದುಕೊಳ್ಳುತ್ತ, ನಡುಗುವ ಕೈಯಲ್ಲಿ ಪತ್ನಿಯ ತಲೆಯನ್ನೆತ್ತಿ ತೊಡೆಯಲ್ಲಿರಿಸಿಕೊಂಡರು. ತಲೆ ನೇವರಿ ಸುತ್ತ ನಡುಗುವ ಧ್ವನಿಯಲ್ಲಿ ಕೇಳಿದರು,

"ಏನಾಯಿತು........ಸುಶೀಲ....... ನಿನಗೆ........? ಈಗ ತಾನೆ........ ನೆಟ್ಟಗಿದ್ದೆಯಲ್ಲಾ........ವೈದ್ಯರನ್ನು........ಕರೆದುಕೊಂಡು...... ಬರಲೆ....?"

ಸುಶೀಲಮ್ಮ ಪತಿಯ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಕಣ್ಣಲ್ಲಿ ಹನಿಯೊಡನೆ ಪ್ರೀತಿ ತುಂಬಿ, ಧ್ವನಿಯಲ್ಲಿ ನಡುಕದೊಡನೆ ಮಾರ್ದವತೆಯನ್ನು ತುಂಬಿ ಹೇಳಿದರು,

"ಬೇಡಿ........ದೇವರು........ಯಾರು..... .. ಬಂದು........ಏನೂ........ ಮಾಡಲಾ........ರರು........ಜೀವನ.....ಯಾ.....ತ್ರೆ........ಮು........ಗಿಯಿತು. ........ಕಡೆಗೂ........ನಿಮಗೆ........ದ್ರೋಹ........ಕ್ಷಮಿಸಿ........ ಮಕ್ಕಳ.... ....ದುರಂತ........ ಬಾ........ಳಿನ........ ನೆನಪು ........ಬಾಳ........ಗೊಡಿಸ ಲಿಲ್ಲ........ ಮುಂದಿನ........ಜನ್ಮ........ ದಲ್ಲಿ........ ಮತ್ತೆ ........ನಾ........ ವಿಬ್ಬರೂ........ಸೇ........ರೋಣ........ ಎಂದೆಂದೂ........ನೀವೆ........ನನ್ನ

........ಪತಿ........ಯಾಗ........ಬೇಕು....... ಅಳ........ಬೇಡಿ........ನ....ನ್ನ ....ದೇವರು....... ನಗುತ್ತ........ಕಳುಹಿಸಿ........ ನನ್ನ........ವಿಧಿ ........ಹೀ ....ಗಿತ್ತು........ಅದಕ್ಕೆ........ನನಗೀ........ ಮನ... ....ಸ್ಸಾ....ಯಿತು........ ಸತ್ತ....ಬಗೆ....ಹೊರಗೆ....ಹಾ....ಕಬೇ....ಡಿ........ ನಿಮಗೆ....ತೊಂದರೆಯಾ ........ವಜ್ರ.... ...ತೇದು........ಈ....ಅಪರಾ....ಧ....ಮಾಡಬಾ........ರೆ.... ದೆಂದು........ಹೋ........ರಾ....ಡಿದೆ........ವಿ....ವೇಕ........ಸೋತು........ ಪ....ಶುಬ....... ಲಿ....... ಗೆ........ !"

ಸಂಕಟ ತೀವ್ರವಾಯಿತು. ಕೈಕಾಲು ಕತ್ತರಿಸಿ ಬೀಳುವಂತೆ ಒದ್ದಾಡಿದರು. ತಲೆಗೂದಲು ಕಿತ್ತು ಹಾರುವಂತೆ ತಲೆ ತಿಕ್ಕಿದರು. ನಡುನಡುವೆ ಹೊರಬೀಳುತ್ತಿದ್ದ 'ರಾಮಾ, ಕೃಷ್ಣಾ' ಎನ್ನುವ ನೋವಿನ ನುಡಿ ಮನೆಯನ್ನು ಸೀಳಿ ಬರುವಂತಿತ್ತು. ಆ ವಿಕಾರ ಕೂಗನ್ನು ಕೇಳಿ ಸ್ನಾನಕ್ಕಿಳಿದಿದ್ದ ಭಟ್ಟರು ಮೈಕೂಡ ಒರೆಸಿಕೊಳ್ಳದೆ, ಹೇಗೊ ಬಟ್ಟೆಯುಟ್ಟು ಸುಶೀಲಮ್ಮನ ಬಳಿ ಓಡಿ ಬಂದರು. ಅವರ ಸಂಕಟ ಕಂಡು ಭಟ್ಟರಿಗೂ ಅನುಮಾನ ಬಂತು. ದೃಷ್ಟಿಯಲ್ಲಿ ಗಾಬರಿ ತುಂಬಿ, ಸೂರಪ್ಪನ ಕಡೆ ತಿರುಗಿ ವಿಷಯವೇನೆಂದು ಕೇಳಿದರು,

ಸೂರಪ್ಪನ ಬಾಯಿಂದ ಮಾತೇ ಹೊರಡಲಿಲ್ಲ. ಅದಕ್ಕುತ್ತರವಾಗಿ ಕರುಳು ಕಿತ್ತು ಬರುವಂಥ ರೋದನ ಅವರೆದೆ ಸೀಳಿ ಹೊರಟಿತು. ಭಟ್ಟರು ಸೂರಪ್ಪನ ಸಂಕಟ, ಸುಶೀಲಮ್ಮನ ನರಳಾಟದ ಮೇಲೆ ನಡೆದ ವಿಷಯವನ್ನು ಸುಮಾರಾಗಿ ಊಹಿಸಿಕೊಂಡು ಒಳಗೆ ಹಾರಿ, ಕಾಯಲಿರಿಸಿದ್ದ ಹಾಲನ್ನು ಸ್ವಲ್ಪ ಲೋಟಕ್ಕೆ ಬಗ್ಗಿಸಿ ಸಕ್ಕರೆ ಬೆರೆಸಿ ಹವಣು ಮಾಡಿ ತಂದು, ಸೂರಪ್ಪನ ಕೈಗಿತ್ತರು. ಸೂರಪ್ಪ ನಡುಗುವ ಧ್ವನಿಯಿಂದ 'ಆ' ಯೆನ್ನು ಸುಶೀಲ ಎಂದು ಹಿತವಾಗಿ ಹೇಳಿ ಬಾಯಗೆರಡು ತೊಟ್ಟು ಹಾಲು ಬಿಟ್ಟರು. ಹಾಕಿದ ಹಾಲು ಹಾಗೇ ಈಚೆಗೆ ಬಂತು. ಒಂದು ಬಾರಿ ಸುಶೀಲಮ್ಮ ಮುಚ್ಚಿದ ಕಣ್ಣನ್ನು ತೆರೆದು, ದೊಡ್ಡದಾಗಿ ಅರಳಿಸಿ ಸೂರಪ್ಪನನ್ನು ಹೀರಿಕೊಳ್ಳುವಂತೆ ನೋಡಿ, ಕಣ್ಣು ಮುಚ್ಚಿದರು. ತಲೆ ಪಕ್ಕಕ್ಕಾಯಿತು. ಗಂಡನ ತಲೆಯ ಮೇಲಿರಿಸಿದ್ದ ಕೈ ನೆಲಕ್ಕೆ ಬಿತ್ತು.

ಸೂರಪ್ಪ ತನ್ನ ದಾಂಪತ್ಯ ಜೀವನದ ಸವಿನೆನಪನ್ನು ನೆನೆದು, ಹಣೆಯನ್ನು ಸುಶೀಲಮ್ಮನ ಹಣೆಗೆ ಹಚ್ಚಿ ತಿಕ್ಕಿ ತಿಕ್ಕಿ ಗೋಳಿಟ್ಟರು; ಮೈಮೇಲೆ

ಬಿದ್ದು ಬಿದ್ದು ಹೊರಳಾಡಿದರು. ಭಟ್ಟರಿಂದವರನ್ನು ಸಮಾಧಾನ ಪಡಿಸಲು ಸಾಧ್ಯವೆ ಆಗಲಿಲ್ಲ.

ಅಷ್ಟರಲ್ಲಿ ಸುಂದರಿ ಬಂದಳು. ಭಟ್ಟರಿಂದ ವಿಷಯ ತಿಳಿದು ಎದೆ ಒಡೆಯಿತು. ಸೂರಪ್ಪನ ದನಿಗೆ ತನ್ನ ದನಿಗೂಡಿಸಿ ಸೂರು ಹಾರುವಂತೆ ಗೋಳಿಟ್ಟಳು. ಸುಶೀಲಮ್ಮನ ಸಾವಿಗೆ ತಾನು ಪ್ರತ್ಯಕ್ಷವಾಗಿ ಕಾರಣಳಲ್ಲದಿದ್ದರೂ, ಅಪರೋಕ್ಷವಾಗಿ ತನ್ನಿಂದ ಅಪರಾಧವಾಗಿದೆಯೆಂದು ಮನಸ್ಸು ಚೀರಿಡುತಿತ್ತು. ಶಾಂತಳ ಜೀವನದ ಬೇನೆಯನ್ನು ತಿಳಿಸದಿದ್ದಿದ್ದರೆ ಸುಶೀಲಮ್ಮ ಮಗಳನ್ನು ಕೆಣಕಿ ಕೇಳುತ್ತಿದ್ದರೊ ಇಲ್ಲವೊ; ತಾಯಿಯ ಸ್ವಭಾವದ ಪರಿಚಯವಿದ್ದ ಶಾಂತಳೂ ತಾನಾಗಿ ಹೇಳುತ್ತಿದ್ದಳೊ ಇಲ್ಲವೊ! ನಾನು ......ದ ಪಾಪಿ, ಅಣಿಯಾದ ಸಂಸಾರಕ್ಕೆ ಹುಳಿ ಹಿಂಡಿದೆನೆಂದು ತನಗೆ ತಾನೇ ಶಾಪ ಹಾಕಿ ಅತ್ತಳು.

ಭಟ್ಟರ ಕಣ್ಣೀರೂ ತಡೆಬಡೆಯಿಲ್ಲದೆ ಸುರಿಯಿತು. ಗೋಳಿನ ಬೀಡಾಯಿತು ಮನೆ. ಸ್ವಲ್ಪ ಹೊತ್ತಿನಲ್ಲೆ ಪರಿಸ್ಥಿತಿಯ ಅರಿವಾಗಿ ಭಟ್ಟರು ಸಮಾಧಾನ ತಂದುಕೊಂಡರು. ಸುಶೀಲಮ್ಮ ವಿಷಕುಡಿದು ಪ್ರಾಣ ಬಿಟ್ಟಿದ್ದರಿಂದ ಹೆಚ್ಚು ಹೊತ್ತು ಹೆಣವಿದ್ದರೆ ಅಪಾಯ ಸಂಭವಿಸಬಹುದೆಂದೂಹಿಸಿ ಸಾಗಿಸುವ ಪ್ರಯತ್ನಕ್ಕೆದ್ದರು.

ಅವರು ಪರಸ್ಥಳದವರಾದ್ದರಿಂದ ಸುಂದರಿಯ ತಂದೆ ಮತ್ತು ಕೃಷ್ಣಮೂರ್ತಿಯ ಸಹಾಯ ಪಡೆದು, ಅಂತ್ಯಕ್ರಿಯೆಯ ಏರ್ಪಾಡಿಗೆ ತೊಡಗಿದರು.

## ೨೩

ಭಟ್ಟರು ಸೂರಪ್ಪನಿಗಾಗಿ ತಮ್ಮ ಪ್ರಯಾಣವನ್ನು ಮುಂದುವರಿಸಿದರು. ಆವರ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು. ಯಾವ ಕ್ಷಣದಲ್ಲಿ ಏನಾಗುವುದೆಂದು ಹೇಳಲು ಬರುವಂತಿರಲಿಲ್ಲ. ಅವರಿಂದ ಸುಶೀಲಮ್ಮನ ದಿನ ಕರ್ಮಗಳನ್ನು ಮಾಡಿಸಿ ಮುಗಿಸಬೇಕಾದರೆ ಸಾಕುಸಾಕಾಯಿತು. ಮೊದಲಿಷ್ಟು

ಚುರುಕು–ಚಟವಟಿಕೆ, ಹುರುಪು–ಹುಮ್ಮಸ್ಸು, ಧೈರ್ಯ–ಸ್ಥೈರ್ಯಗಳೆಲ್ಲ ಸುಶೀಲಮ್ಮನ ಹಿಂದೆಯೆ ಹೊರಟುಹೋಗಿದ್ದುವು. ಅವರು ಕಣ್ಮರೆಯಾದಂ ದಿನಿಂದ ಹಾರಿಬಿಟ್ಟ ಗಾಳಿಪಟದಂತಾಗಿ ಹೋದರು. ಭಟ್ಟರು ಸೂತ್ರಧಾರಿ ಯಂತೆ, ಚಿಂತೆಯಿಂದಾಗಾಗ ಬಿಗಿಯಾಗುತ್ತಿದ್ದವರ ಮನಸ್ಸನ್ನು ಸಮಯೋ ಚಿತ ಅನುಭವದ ಹಿತ ನುಡಿಯಿಂದ ಸಡಿಲಗೊಳಿಸಿ ಚಲನೆಯುಂಟು ಮಾಡು ತಿದ್ದರು. ಅವರು ಅತ್ತಿತ್ತ ಸರಿದರೆಂದರೆ ಸಾಕು, ಯಥಾಸ್ಥಿತಿಗೆ ಬರುತ್ತಿದ್ದರು.

ಸೂರಪ್ಪ ಈಗ—ಮಾತಿಲ್ಲ, ಕತೆಯಿಲ್ಲ, ನಗುವಿಲ್ಲ, ಗೆಲುವಿಲ್ಲ—ತಲೆಗೆ ಕೈಕೊಟ್ಟು ಯಾವುದಾದರೂ ಮೂಲೆ ಹಿಡಿದು ಸುಮ್ಮನೆ ಚಿಂತಿಸುತ್ತ ಕುಳಿತು ಬಿಡುವರು. ಮನಃಪಟಲದ ಮೇಲೆ ದಿನಕ್ಕೆ ಹಲವಾರು ಬಾರಿ ಬಾಳು ಚಿತ್ರ ಪಟದಂತೆ ಮೂಡಿ ತಲೆ ಕಾಯಿಸುತಿತ್ತು. ಬಾಳನ್ನೆಲ್ಲ ಸೋಸಿ ಅಪರಾಧ ಯಾರದು, ಅಪರಾಧಿ ಯಾರೆಂದು ಪತ್ತೆ ಹಚ್ಚುತ್ತಿದ್ದರು.

‘ಬಾಳಿನಲ್ಲಿ ಸಂಸಾರದ ಸಾವಿನ ನೋವು ಬಿಟ್ಟರೆ ಮತ್ತೆ ಯಾವ ನೋವೂ ಇರಲಿಲ್ಲ. ನಮ್ಮ ದಾಂಪತ್ಯ ಜೀವನದಲ್ಲಿ ಸುಖ ತುಂಬಿ ತುಳುಕು ತಿತ್ತು. ಎಲ್ಲೋ ಒಂದೆರಡು ಪ್ರಸಂಗ ಬಿಟ್ಟರೆ, ಮತ್ತೆ ಯಾವುದರಲ್ಲೂ ಎಂದೂ ನಾವು ಮುಖ ಮುನಿಸು ಮಾಡಿಕೊಂಡದ್ದು ಕಂಡುಬರಲಿಲ್ಲ. ಕಷ್ಟ-ಸುಖ ದಲ್ಲಿ ಒಬ್ಬರಿಗೊಬ್ಬರು ನೆರಳಾಗಿ ಬಾಳಿದ್ದೇವೆ. ಬಾಳಿನುದ್ದಕ್ಕೂ ನಮ್ಮಿಬ್ಬರ ನಡುವೆ ಅಮರ ಪ್ರೇಮ ಕ್ಷೀರಸಾಗರದಂತೆ ಹರಿದು ಹಾಡಿದೆ. ಇಷ್ಟಿದ್ದರೂ ಸುಶೀಲ ದ್ರೋಹ ಮಾಡಿ ಹೊರಟು ಹೋದಳು. ಮಕ್ಕಳ ವ್ಯಾಮೋಹದ ಕಾವಿನ ಮುಂದೆ ನಾನು ಹರಿಸಿದ್ದ ಅಮರ ಪ್ರೇಮವೆಲ್ಲ ಬತ್ತಿ ಹೋಯಿತು. ದಾಂಪತ್ಯ ಜೀವನ ಉಳಿದು ಸುಖಮಯವಾಗಬೇಕಾದರೆ, ಹುಟ್ಟಿದ ಸಂತಾನ ಯಾವ ನೋವೂ ಇಲ್ಲದೆ ಬೆಳೆದು ಬೆಳಗಬೇಕೆಂಬುದನ್ನು ಅನುಭವ ಸಿದ್ಧಾಂತ ಮಾಡಿ ತೋರಿಸಿದೆ. ಈ ಅರಿವು ಮೊದಲೆ ಆಗಿದ್ದಿದ್ದರೆ ಪ್ರಾಣವನ್ನು ಬಲಿ ಗೊಟ್ಟಾದರೂ ಸಾವಿನ ನಷ್ಟವನ್ನು ತಡೆಯಬಹುದಿತ್ತು. ಈಗ ಸಮಯ ಕೈಮಿಂಚಿ ಹೋಗಿದೆ, ಏನು ಮಾಡಲೂ ಆಗುವುದಿಲ್ಲ. ಮಾಡಿ ಪ್ರಯೋ ಜನವೂ ಇಲ್ಲ.’

‘ಇಷ್ಟಕ್ಕೂ ಸಂತಾನದ ಸಾವು ನನಗೆ ತಿಳಿದದ್ದು ಕೊನೆ ಗಳಿಗೆಯಲ್ಲಿ. ರತ್ನಳ ಬಾಳಿನ ನೋವು ತಿಳಿವ ಮೊದಲೆ ಸುಟ್ಟು ಹೋಯಿತು; ಶಾಂತಳ

ಬಾಳು ತಿಳಿದಿದ್ದರೂ ಸರಿಪಡಿಸಬೇಕೆಂದಿರುವಷ್ಟರಲ್ಲಿ ದುರಂತಕ್ಕೀಡಾಗಿದೆ.'

'ಇದರಲ್ಲಿ ನನ್ನ ತಪ್ಪಾದರೂ ಏನಿದೆ ?'

'ಕರ್ತವ್ಯವನ್ನು ಸರಿಯಾಗಿ ಪಾಲಿಸಲಿಲ್ಲವೆ ?'

'ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದಿದ್ದರೆ ಅದು ನನ್ನ ತಪ್ಪೆ ?'

'ಸುಶೀಲ ಅದನ್ನು ಯೋಚಿಸಬಾರದಿತ್ತೆ ?'

'ಒಂದು ಕ್ಷಣದ ನೋವಿನಿಂದಾಗಿ ಅವಿವೇಕಕ್ಕೆ ಬಲಿಯಾಗಿ, ನನ್ನನ್ನು ಕಡೆವರೆಗೂ ದುಃಖದ ಹೊಂಡದಲ್ಲಿ ಕೈ ತೊಳೆಯುವಂತೆ ಮಾಡಿ ಹೋದಳಲ್ಲಾ !'

'ಸಂತಾನದ ಸಾವಿನ ನೋವು ಅವಳಿಗೆ ಮಾತ್ರ ಮೀಸಲೆ ? ನನಗಿಲ್ಲವೆ ?'

'ನಾನೂ ಯಾಕೆ ಆತ್ಮಹತ್ಯ ಮಾಡಿಕೊಳ್ಳಬಾರದಿತ್ತು ?'

'ಆತ್ಮಹತ್ಯ ಮಾಡಿಕೊಳ್ಳುವುದೆಂದರೆ ಸುಮ್ಮನಾಗಲಿಲ್ಲ, ಅದಕ್ಕೂ ಬದುಕಿನಷ್ಟೇ ಸ್ಥೈರ್ಯ–ಧೈರ್ಯ ಬೇಕು. ತ್ಯಾಗದ ಬಲವಿರಬೇಕು.'

'ಆ ಗುಣಗಳು ನನ್ನಲ್ಲಿಲ್ಲದೆ ಇರಬಹುದು. ಆ ಚೈತನ್ಯವಿಲ್ಲದೆ ಇರುವುದರಿಂದಲೆ ಬಾಳೆಲ್ಲ ಬರಿದಾಗಿದ್ದರೂ ಜೀವ ಹಿಡಿದು ನಿಂತಿರುವೆನು.'

'ಅಲ್ಲದೆ ಸಂತಾನದ ಸಾವು-ನೋವು, ತಾಯಿ ಹೃದಯದ ಮೇಲೆ ಪರಿಣಾಮವುಂಟು ಮಾಡುವಷ್ಟು ತಂದೆಯ ಮೇಲೆ ಮಾಡುವುದಿಲ್ಲವೆಂದು ತೋರುತ್ತದೆ. ಅದಕ್ಕೆ ಬದುಕಿನಲ್ಲಿ ಈ ಭಂಡತನ. ನೋವು ನೆನಪಾದಾಗ ಮಾತ್ರ ದುಃಖಪಟ್ಟು ಅನಂತರ ಮರೆತು ಬಿಡುತ್ತಿದ್ದೆ. ಹಾಗಾಗಲು ನನ್ನ ಸ್ವಾರ್ಥ, ಪಶುತನವೆರಡೂ ಕಾರಣವಿರಬಹುದು.'

'ತಾಯಿ ಹೃದಯ ಹಾಗಲ್ಲ. ಅದು ಗಗನದಂತೆ ವಿಶಾಲವಾದದ್ದು. ಅಲ್ಲಿ ಮಾನವೀಯತೆ ಯಾವಾಗಲೂ ಜಾಗೃತವಾಗಿರುತ್ತದೆ. ಅವಳು ಹರಿಸುವ ತುಂಬು ಪ್ರೀತಿಯಲ್ಲಿ ತ್ಯಾಗವಿದೆ, ಔದಾರ್ಯವಿದೆ. ಸ್ವಾರ್ಥ–ಪರಾರ್ಥವೆರಡೂ ಸಮನಾಗಿ ಬೆರೆತಿವೆ ಬದುಕಿನಲ್ಲಿ. ತನಗೆ ಸೇರಿದವರಲ್ಲಿ ಯಾರೊಬ್ಬರಿಗೆ ನೋವುಂಟಾದರೂ ತನ್ನದೆಂದೆ ಭಾವಿಸಿ, ಅವರ ನೋವಿನ ನೆನಪಿನಲ್ಲಿ ಸರ್ವಸ್ವವನ್ನೂ ತೊರೆಯುವಳು. ಅದಕ್ಕೆ ಸುಶೀಲಳಿಗಿಂತ ಬೇರೆ ನಿದರ್ಶನ ಬೇಕಿಲ್ಲ.'

ಸುಶೀಲ ತನ್ನ ಸಂತಾನಕ್ಕೆ ಸುಖ ಸಿಗಲಿಲ್ಲವೆಂದು ತನ್ನ ಚಿನ್ನದಂಥ ಸುಖವನ್ನು ಸ್ಮಶಾನದಲ್ಲಿ ಸುಟ್ಟು ಹೊರಟಳು. ಅವಳು ಸಾವಿಗೀಡಾಗಲು ನಾನೂ ಕಾರಣವಲ್ಲ, ಅವಳೂ ಅಲ್ಲ; ಅವಳ ಬಾಳಿನ ಬೆಳಕಾಗಿದ್ದ ಶಾಂತ ಳನ್ನು ಕೊಲೆಗೀಡು ಮಾಡಿದ ಗೋಪಿಯೆ ಕಾರಣನು. ಅವನಿಂದಲೆ ವಂಶ ಬರಿದಾದದ್ದು. ಅವನು ಶಾಂತಳನ್ನು ನೆಟ್ಟಗೆ ಬಾಳಿಸಿದ್ದರೆ ಸಂಸಾರವೆಂದಿಗೂ ಸ್ಮಶಾನವಾಗುತ್ತಿರಲಿಲ್ಲ. ಅವನಿಗೆ ನಮ್ಮ ಸುಖ ಸಹಿಸಲಿಲ್ಲ; ಏಳಿಗೆ ಹಿಡಿಸ ಲಿಲ್ಲ. ಅದಕ್ಕೆ ಶಾಂತಳಲ್ಲಿ ಕಟುಕನಂತೆ ವರ್ತಿಸಿ ವಂಶವನ್ನೆ ನಿರ್ನಾಮ ಮಾಡಹೊರಟಿದ್ದಾನೆ. ಜೀವಸಹಿತವಿದ್ದರೆ ನಾನೆಂದೂ ಅವನನ್ನು ಸುಮ್ಮನೆ ಬಿಡುವುದಿಲ್ಲ. ಯಾವುದಕ್ಕೂ ಶಾಂತ ಏನಾಗುವಳೆಂದು ನೋಡಿಕೊಳ್ಳು ವೆನು.'

'ಅದು ಸರಿ. ಅವನಿಂದಲೆ ನನ್ನ ಬಾಳು ಬರಿದಾಯಿತೆಂದು ಹೇಗೆ ನಂಬುವುದು? ನಾನೂ ತಪ್ಪಿತಸ್ಥನಿರಬಹುದು, ಸುಶೀಲಳೂ ತಪ್ಪಿತಸ್ಥಳಿರ ಬಹುದು, ಮಕ್ಕಳೂ ತಪ್ಪಿತಸ್ಥರಿರಬಹುದು! ಅವರವರ ಪ್ರಾರಬ್ಧ ಕರ್ಮಕ್ಕೆ ತಕ್ಕಂತೆ ಬಾಳಿರುತ್ತದೆಂದಮೇಲೆ ಯಾರನ್ನು ಯಾಕೆ ದೂರಬೇಕು! ತಪ್ಪಿತಸ್ಥ ರನ್ನಾಗಿ ಮಾಡಬೇಕು! ಪೂರ್ವಜನ್ಮದಲ್ಲಿ ನಾವು ಮಾಡಿದ ಕರ್ಮ ಮಹಾ ಪಾಪದಿಂದ ಕೂಡಿರಬೇಕು! ಅದಕ್ಕೆ ಇಂದು ನಮ್ಮ ವಂಶ ಬೇರು ಸಹಿತ ನಾಶವಾಗಿದೆ.'

'ಇಷ್ಟಕ್ಕೂ ಅಲ್ಲಿಯವರೆಗೇಕೆ ಹೋಗಬೇಕು? ಇಂದಿನ ಜನ್ಮದಲ್ಲಿ ನಾವು ಮಾಡಿದ ಕರ್ಮವೆ ಸಾಲದೆ, ಬಾಳು ಬರಿದಾಗಲು! ಯಾವ ಸಂಶಯ ಭೂತಕ್ಕೆ ಬಲಿಯಾಗಿ ಗೋಪಿ ಶಾಂತಳನ್ನು ಬಲಿ ತೆಗೆದುಕೊಳ್ಳುತ್ತಿರುವನೊ, ಅದೇ ಸಂಶಯ ಪಿಶಾಚಿ ಹಿಂದೊಮ್ಮೆ ನನ್ನಲ್ಲೂ ತಲೆದೋರಲಿಲ್ಲವೆ? ಅದರಿಂದ ಪವಿತ್ರಾತ್ಮಳಾದ ಸಾಧ್ವಿ ಸುಶೀಲ ಬೆಂದು ಬಾಡಲಿಲ್ಲವೆ? ಆ ಅಪರಾಧವೆ, ಆ ಸಾಧ್ವಿಯನ್ನು ಕಣ್ಣೀರಿನಲ್ಲಿ ಕೈತೊಳಿಸಿದ ಆ ಪಾಪವೆ, ಮಹಾಪಾತಕವಾಗಿ ಬೆಳೆದು ಅಳಿಯನಲ್ಲುಳಿದು ಮಗಳನ್ನು ಸಾವಿಗೆ ಗುರಿ ಮಾಡಿದ್ದರೂ ಮಾಡಿರ ಬಹುದು! ಯಾರಿಗೆ ಗೊತ್ತು?'

'ಒಟ್ಟಿನಲ್ಲಿ ಬದುಕು ಹಾಳಾಗಲು ಎಲ್ಲ ಕಾರಣಗಳೂ ಸೇರಿವೆ. ಯಾವು ದಕ್ಕೆಂದು, ಯಾರಿಗೆಂದು ಶಿಕ್ಷೆ ಕೊಡುವುದು? ಆಗ–ಹೋಗದ ಮಾತು!

ಯಾವುದಕ್ಕೂ ನನ್ನ ತಲೆ ನೆಮ್ಮದಿಯಿಂದಿದ್ದರೆ ಸಾಕಾಗಿದೆ. ಬಾಳು ಇಷ್ಟೆಲ್ಲ ಹಾಳಾಗಿರುವಾಗ ಯಾವ ಕ್ಷಣದಲ್ಲಿ ಏನಾಗುವುದೊ! ಶಾಂತ ಬದುಕಿ ಉಳಿದರೆ ನನ್ನ ಬಾಳಿಗೊಂದು ನೆಲೆಯಿರುವುದು, ಮನಸ್ಸಿಗೆ ನೆಮ್ಮದಿಯೂ ಬರುವುದು. ಇಲ್ಲದಿದ್ದರೆ............? ಕೇಳುವವರೆ ಇರುವುದಿಲ್ಲ, ಬೀದಿಯ ನಾಯಿಯಾಗಿ ಬಾಳಬೇಕಾಗುವುದು. ಊಟ ಎಲ್ಲೊ, ಬದುಕು ಎಲ್ಲೊ, ಸಾವು ಎಲ್ಲೊ ........?''

'ಸುಶೀಲಾ, ನನ್ನನ್ನು ಬಿಟ್ಟ್ಯಾಕೆ ಹೋದೆ ಸುಶೀಲಾ? ನೀನಿಲ್ಲದೆ ಬದುಕಲಾರೆನಲ್ಲಾ! ನೈ ಮನಸ್ಸೆಲ್ಲ ದುಃಖದಿಂದ ತಪ್ತವಾಗುತ್ತಿದೆ—ಸಂತೈಸುವುದಿಲ್ಲವೆ ಬಂದು? ಹಿಂದೆ ಜೀವಕ್ಕೆ ಸ್ವಲ್ಪ ಸೋಲಾದರೆ ಸಾಕು, ಓಡಿ ಬರುತ್ತಿದ್ದೆಯಲ್ಲ! ನಿನ್ನಾ ಪ್ರೀತಿ, ಕರುಣೆ, ಉದಾರತೆಯೆಲ್ಲ ಎಲ್ಲಿ ಹೋಯಿತು? ಎಲ್ಲಿ ಹೋಯಿತು ಸುಶೀಲಾ, ಎಲ್ಲಿ ಹೋಯಿತು?'' ಎಂದು ಸುಶೀಲಮ್ಮನನ್ನು ನೆನೆನೆನೆದು ಗೋಳಾಡಿದರು.

ಅವರು ಮಾಡಿದ ಸೇವೆ, ತೋರಿದ ಪ್ರೀತಿ, ಹರಿಸಿದ ಕರುಣೆಯೆಲ್ಲ ಜೀವ ತಾಳಿ ಕಣ್ಣಮುಂದೆ ನಲಿಯತೊಡಗಿದುವು. ಒಂದೊಂದಾಗಿ ಅವುಗಳನ್ನು ಮೆಲಕು ಹಾಕಿ ತೃಪ್ತಿಪಡತೊಡಗಿದರು.

ರತ್ನ ಆರು ತಿಂಗಳು ಮಗುವಾಗಿದ್ದಾಗ ಸೂರಪ್ಪ ಆಮಶಂಕೆಯಿಂದ ಹಾಸಿಗೆ ಹಿಡಿದರು. ಆ ರೋಗ ತಿಂಗಳುಗಟ್ಟಲೆ ಮಲಗಿದಲ್ಲಿಂದ ಏಳಲು ಬಿಡಲಿಲ್ಲ. ಪ್ರಾರಂಭದಲ್ಲಿ ನಾಲ್ಕಾರು ದಿನ ಯಾವ ತೊಂದರೆಯೂ ಇಲ್ಲದೆ ಕಳೆದು ಹೋಯಿತು. ಕಡೆಕಡೆಗೆ ಮಗ್ಗುಲಾಡಲೂ ಆಗುತ್ತಿರಲಿಲ್ಲ. ಜಲ ಮಲವೆಲ್ಲ ಹಾಸಿಗೆಯಲ್ಲೆ. ಹೊಟ್ಟೆಕೊಳೆತ ನಾತ ಅಷ್ಟು ಜಾಗಕ್ಕೂ ವ್ಯಾಪಿಸಿ ಮೂಗಿನ ಸೊಳ್ಳೆಯನ್ನೊಡೆಯುತಿತ್ತು. ಹತ್ತಿರ ಬರಲು ಎಂಥವರಿಗೂ ಹೇಸಿಕೆಯಾಗುತಿತ್ತು. ಸುಶೀಲಮ್ಮ ಸ್ವಲ್ಪವೂ ಬೇಸರಿಸಿಕೊಳ್ಳಲಿಲ್ಲ. ಅನ್ನ-ನಿದ್ರೆ ತೊರೆದು ಹಗಲಿರುಳೂ ಸೂರಪ್ಪನ ಸೇವೆ ಮಾಡಿದರು.

ಒಮ್ಮೊಮ್ಮೆ ಮಲಬಾಧೆ ಹಿಡಿತಕ್ಕೆ ಸಿಗದೆ ಹಾಸಿಗೆಯೆಲ್ಲ ಕೊಳಕಾಗುತಿತ್ತು. ಕೆಲಸದವಳು ಆ ಕೊಳಕು ಬಟ್ಟೆಯನ್ನೂ, ಮಲವಿಸರ್ಜನೆ ಮಾಡಿದ ಬಟ್ಟಲನ್ನೂ ಕೈಲಿ ಸಹ ಮುಟ್ಟುತ್ತಿರಲಿಲ್ಲ. ಸುಶೀಲಮ್ಮನೆ ತೊಳೆದು ಒಗೆದು ಶುದ್ಧ ಮಾಡುತ್ತಿದ್ದರು. ಹೊತ್ತುಹೊತ್ತಿಗೆ ಔಷಧ ಗಂಜಿ ಕುಡಿಸುವುದು,

ವೈಗೆ ಪೆಟ್ಟಾಗದಂತೆ ಮಲಗಿದಲ್ಲಿಂದಲೆ ಹಾಸಿಗೆ ಸರಿಪಡಿಸುವುದು, ದಿನಬಿಟ್ಟು ದಿನ ಒಗೆದ ಬಟ್ಟೆ ತೊಡಿಸುವುದು—ಈ ಎಲ್ಲ ಕೆಲಸವೂ ಅವರೊಬ್ಬರ ಮೇಲೆಯೆ ಬಿತ್ತು. ಎದೆಗುಂದದೆ ಎದುರಿಸಿದರು. ಸೇವೆಯಲ್ಲಿ ಶ್ರದ್ಧೆ ಭಕ್ತಿ ಉಕ್ಕುತ್ತಿತ್ತು.

ನಡುವೆ ಒಂದು ದಿನ ಇದ್ದಕಿದ್ದಂತೆ ಮಲಬಾಧೆ ಹೆಚ್ಚಾಯಿತು. ಗಂಟೆ ಗೊಮ್ಮೆ ಮಲಪಾತ್ರೆಯನ್ನು ಕೊಡಬೇಕಾಗುತಿತ್ತು. ರಾತ್ರೆಯೆಲ್ಲ ಹತ್ತುತಿದ್ದ ಕಣ್ಣನ್ನು ನೀರು ಸವರಿ ಎಚ್ಚರವಾಗಿಟ್ಟು ಕುಳಿತರು. ಅವರ ಸ್ಥಿತಿ ಕಂಡು ಸೂರಪ್ಪನೆದೆ ಕರಗಿತು. ಕಣ್ಣಲ್ಲಿ ನೀರು ಕಾರುತ್ತಾ ಹೇಳಿದರು,

"ನಿನ್ನನ್ನು ನೋಡಿದರೆ ಹೊಟ್ಟೆ ಸುಟ್ಟು ಹೋಗುತ್ತದೆ ಸುಶೀಲ. ಹೊತ್ತುಹೊತ್ತಿಗೆ ಅನ್ನವಿಲ್ಲ, ನಿದ್ರೆಯಿಲ್ಲ. ಇನ್ನೂ ಈ ಹಾಳು ರೋಗ ಎಷ್ಟು ದಿನ ನಿನ್ನ ಪ್ರಾಣ ಹಿಂಡಬೇಕೊ ನಾನು ಬೇರೆ ಕಾಣೆ. ನನ್ನಿಂದ ನಿನಗೇನೂ ಸುಖವಿಲ್ಲ. ನಿನ್ನನ್ನು ಕತ್ತೆಯಂತೆ ದುಡಿಸಿಕೊಳ್ಳುತ್ತಿರುವೆನು. ನಾನು ನಿರ್ದಯಿ, ಕಟುಕ!"

"ಛೆ ಛೆ, ಎಂಥ ಮಾತು ನೀವಾಡುವುದು! ಎಲ್ಲ ಸಮಯವೂ ಒಂದೆ ಸಮನಾಗಿರುತ್ತದೆಯೆ? ರೋಗ ಮನುಷ್ಯನಿಗೆ ಬರದೆ ಮಣ್ಣಿಗೆ ಬರುವುದಿಲ್ಲ. ಬಂದದ್ದು ವಾಸಿಯಾಗಬೇಡವೇನು! ನಿದ್ದೆ ಮಾಡುವುದಿದ್ದೆ ಇದೆ. ನಿಮ್ಮ ಸೇವೆ ಮಾಡುವುದೆಂದು ಹೇಳಿ! ಸೇವೆಯ ಅವಶ್ಯಕತೆ ಇರುವುದೆ ಈಗ. ಕೈ ಕಾಲು ಗಟ್ಟಿಯಿದ್ದಿದ್ದರೆ ನನ್ನಿಂದ ಹೀಗೆಲ್ಲ ಮಾಡಿಸಿಕೊಳ್ಳುತಿದ್ದಿರಾ? ಸುಮ್ಮನೆ ಇಲ್ಲದ್ದನ್ನೆಲ್ಲ ಮನಸ್ಸಿಗೆ ಹಚ್ಚಿ ಕೊರಗಬೇಡಿ. ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ನಿದ್ದೆ ಮಾಡಿ, ಯಾತನೆ ಕಡಿಮೆಯಾಗುವುದು!" ಎಂದವರ ಬಾಯಿ ಕಟ್ಟಿಸಿ ಅತ್ತಿತ್ತ ಹೋಗಿದ್ದ ಹೊದಿಕೆಯನ್ನು ಸರಿಪಡಿಸಿ ಕಾಲು ತಿಕ್ಕುತ್ತ ಕುಳಿತರು.

ಅವರ ಆದರ ಉಪಚಾರಗಳಿಂದ ಹಾಗಾದ ನಾಲ್ಕಾರು ದಿನಗಳಲ್ಲೆ ಸೂರಪ್ಪ ಎದ್ದು ಓಡಾಡುವಂತಾದರು.

ಸೂರಪ್ಪ ಮದುವೆಗೆ ಮುನ್ನ ಹೋಟೆಲೊಂದರ ಮ್ಯಾನೇಜರರಾಗಿ ದುಡಿ ಯುತಿದ್ದರು. ಕ್ರಮೇಣ ಆ ಕೆಲಸ ಬೇಸರ ತಂದಿತು. ತಾವೂ ಒಂದು ಹೋಟೆಲಿನ ಮಾಲಿಕರಾಗಬೇಕೆಂಬಾಸೆಯುಂಟಾಯಿತು. ತಕ್ಕಷ್ಟು ಅನು

ಭವವೂ ಇತ್ತು. ಸುಶೀಲಮ್ಮ ಲಗ್ನವಾಗಿ ಮನೆಗೆ ಬಂದ ಮೇಲೆ ಆ ಆಸೆ ಪ್ರಬಲವಾಯಿತು.

ಸುಶೀಲಮ್ಮ ಶ್ರೀಮಂತ ಮನೆತನದಲ್ಲಿ ಹುಟ್ಟಿ ಬೆಳೆದವರು. ಅವರ ಮುಂದೆ ತಮ್ಮ ಅಂತಸ್ತು ಕಡಿಮೆಯಾಗಿರುವುದು ಸೂರಪ್ಪನಿಗೆ ಸಹಿಸಲಿಲ್ಲ. ಏನಾದರೂ ಮಾಡಿ ಸ್ವಂತ ಹೋಟೇಲೊಂದನ್ನು ತೆಗೆಯಲೆಬೇಕೆಂದು ನಿರ್ಧಾರ ಮಾಡಿದರು. ಕೈಲಿದ್ದ ಹಣ ಸಾಕಾಗುತ್ತಿರಲಿಲ್ಲ. ಕಡಿಮೆ ಬೀಳುವ ಹಣಕ್ಕೆ ಯಾರ ಸಹಾಯವಾದರೂ ಪಡೆಯಬೇಕೆಂದು ನೆನೆಸಿದರು. ಯಾರಲ್ಲಿ ಪಡೆಯ ಬೇಕು, ಹೇಗೆ ಪಡೆಯಬೇಕೆನ್ನುವ ವಿಷಯದಲ್ಲಿ ಹಂಚಿಕೆ ನಡೆಯುತಿತ್ತು. ಅಷ್ಟರಲ್ಲಿ ಆ ಸುದ್ದಿ ಸೂರಪ್ಪನಕ್ಕನಿಂದ ಸುಶೀಲಮ್ಮನಿಗೆ ಹೋಗಿ ಮುಟ್ಟಿತು.

ಸುಶೀಲಮ್ಮ ಸಂಜೆ ಯಜಮಾನರು ಮನೆಗೆ ಬಂದಾಗ ಕೈಲಿ ಒಂದು ಟಿನ್ನಿನ ಡಬ್ಬಿ ಹಿಡಿದು ಎದುರುಗೊಂಡರು. ಕೋಣೆಗೆ ಹೋಗುವ ವರೆಗೂ ಸುಮ್ಮನಿದ್ದು ಅನಂತರ ಪೆಟ್ಟಿಗೆಯನ್ನು ಕೈಗಿತ್ತು, ಕಣ್ಣಲ್ಲಿ ಪ್ರೀತಿ ತುಂಬಿ, ತುಟಿ ಯಲ್ಲಿ ತೆಳುನಗೆ ತಂದು ಗಂಡನನ್ನು ಪಿಳಿಪಿಳಿ ನೋಡುತ್ತ ನಿಂತರು.

ಸೂರಪ್ಪ ಮುಚ್ಚಳ ತೆಗೆದು ನೋಡಿ ಉಂಟಾದ ಆಶ್ಚರ್ಯವನ್ನು ಹತ್ತಿಕ್ಕಿ ಕೇಳಿದರು,

"ಇದನ್ನೆಲ್ಲ ನನ್ನ ಕೈಯಲ್ಲ್ಯಾಕಿತ್ತೆ ಸುಶೀಲಾ, ಬೀರುವಿನಲ್ಲಿರಿಸ ಬೇಕೇನು ?"

"ಅಲ್ಲ, ನನ್ನವರು ಹೋಟೇಲಿನ ಮಾಲಿಕರಾಗಬೇಕೆಂದು ನನ್ನಿಚ್ಛೆ; ಅದ ಕ್ಕೆಂದೆ ಕೊಟ್ಟಿರುವೆನು."

"ಚಿನ್ನಕ್ಕೂ ಹೋಟೇಲಿಗೂ ಯಾವ ಸಂಬಂಧ ? ಸರಾಫ ಅಂಗಡಿ ಇಡುವುದಾಗಿದ್ದರೆ ಉಪಯೋಗಕ್ಕೆ ಬರುತ್ತಿತ್ತು." ಎಂದು ಬೊಳ್ಳನೆ ನಕ್ಕು ಪೆಟ್ಟಿಗೆಯನ್ನು ಸುಶೀಲಮ್ಮನ ಕೈಲಿತ್ತು ಬಟ್ಟೆ ಸ್ಟ್ಯಾಂಡಿನ ಬಳಿ ಹೊರಟಿದರು.

ಸುಶೀಲಮ್ಮನ ಮುಖ ಪೆಚ್ಚಾಯಿತು. ನೋಟದಲ್ಲಿ ದೈನ್ಯತೆ ತುಂಬಿ ಹತ್ತಿರ ಹೋಗಿ ಕೇಳಿದರು,

"ನಿಮ್ಮ ಬಯಕೆಯಲ್ಲಿ ಭಾಗ ತೆಗೆದುಕೊಳ್ಳುವ ಪುಣ್ಯ ನನಗಿಲ್ಲ ?"

"ಇಲ್ಲನೆಂದು ಹೇಳಿನವರು ಯಾರು ? ನಿನ್ನ ಪ್ರೀತಿಯ ಬೆಂಬಲವಿಲ್ಲದೆ ನನ್ನ ಬಯಕೆ ಪೂರ್ಣವಾಗುವುದೆ ಇಲ್ಲ."

"ಹಾಗಿದ್ದ ಮೇಲೆ ಉಪಯೋಗಿಸಿಕೊಳ್ಳಿ. ಅದನ್ನು ಮಾರಿ ಬಂದ ಹಣವನ್ನು ನಿಮ್ಮಲ್ಲಿರುವ ಹಣದ ಜತೆ ಸೇರಿಸಿ ಸ್ವಂತ ಹೊಟೇಲು ಪ್ರಾರಂಭ ಮಾಡಿ, ಹಿಡಿಯಿರಿ" ಎಂದು ಒಡವೆಯ ಪೆಟ್ಟಿಗೆಯನ್ನು ಒತ್ತಾಯವಾಗಿ ಅವರ ಕೈಲಿತ್ತರು.

ಸೂರಪ್ಪ ಸ್ವಲ್ಪ ಹೊತ್ತು ಯೋಚಿಸಿ, ಆ ಪೆಟ್ಟಿಗೆಯನ್ನಲ್ಲೆ ಇದ್ದ ಒಂದು ಮೇಜಿನ ಮೇಲಿರಿಸಿ ಬಂದು ಕುರ್ಚಿಯಲ್ಲಿ ಕೂರುತ್ತಾ ಹೇಳಿದರು.

"ಅದು ಸಾಧ್ಯವೆ ಇಲ್ಲ ಸುಶೀಲ. ಒಡವೆ ಮಾಡಿಸಿಕೊಡುವ ಯೋಗ್ಯತೆ ಯಂತೂ ಇಲ್ಲ; ತೌರಿನಲ್ಲಿಟ್ಟ ಒಡವೆಯನ್ನಳಿಸುವ ಪುಣ್ಯವಾದರೂ ಬೇಡವೆ ? "

"ದೇವರು ಕಣ್ಣು ತೆರೆದು ನೋಡಿದರೆ, ಇದಕ್ಕೆ ನಾಲ್ಕರಷ್ಟು ಒಡವೆ ಮಾಡಿಸಿ ಹಾಕುವ ಚೈತನ್ಯ ಬರುವ್ರದು. ಆ ಶಕ್ತಿ ನಿಮಗುಂಟಾಗಲೆಂದೇ ಇಂದು ಅದನ್ನು ಕೊಡುತ್ತಿರುವುದು. ಒಡವೆಯ ಸಾರ್ಥಕತೆ ಇರುವುದೆ ಇಂಥ ಅವಕಾಶದಲ್ಲಿ. ಆಪತ್ತಿಗೆ ಅನುವಾಗಲೆಂದೆ ಮಾಡಿಸಿ ಹಾಕುವುದು ಹಿರಿ ಯರು, ಶ್ರೀಮಂತಿಕೆಯ ರಂಗಿನ ಪ್ರದರ್ಶನಕ್ಕಲ್ಲ. ನೀವು ಖಂಡಿತ ಅದ ನ್ನುಪಯೋಗಿಸಿಕೊಳ್ಳಬೇಕು—ಇಲ್ಲದಿದ್ದರೆ ನನ್ನ ಮನಸ್ಸಿಗೆ ನೋವಾಗು ವುದು. "

ಸುಶೀಲಮ್ಮನ ಶುದ್ಧ ಪ್ರೀತಿಗೆ ಕಟ್ಟು ಬೀಳಲೆ ಬೇಕಾಯಿತು ಸೂರಪ್ಪ. ಅವರು ತುಂಬುಪ್ರೇಮದಿಂದಿತ್ತ ನಿಧಿಯಿಂದ ಸ್ವಂತ ಹೊಟೇಲೊಂದನ್ನು ತೆರೆದೆ ಬಿಟ್ಟರು. ಇರಿಸಿ ವರ್ಷವಾಗುವುದರಲ್ಲೆ ಅವರ ಪ್ರೀತಿಯಂತೆ ಉತ್ಪತ್ತಿಯೂ ಉಕ್ಕಿ ಬಂತು. ಸೂರಪ್ಪ ಆ ಸಂಪತ್ತಿನ ಹಿನ್ನೆಲೆಯನ್ನು ಮರೆಯಲಿಲ್ಲ. ಪತ್ನಿ ತಮಗಿತ್ತ ಆಭರಣವನ್ನು ಅದರಂತೆಯೆ ಮಾಡಿಸಿ, ಸಂಗಡ ತಮ್ಮದಾಗಿ ಒಂದು ಜತೆ ಚಿನ್ನದ ಬಳೆಯನ್ನು ಸೇರಿಸಿ ತಂದು ಅವರ ಮುದ್ದಾದ ದೇಹ ವನ್ನಲಂಕರಿಸಿದರು.

ಪ್ರೀತಿಯಿದ್ದಲ್ಲಿ ಕರುಣೆ ಕುಡಿಯೊಡೆಯುತ್ತದೆನ್ನುವದು ಸುಳ್ಳಲ್ಲ. ಸುಶೀ ಲಮ್ಮ ತುಂಬಾ ದಯಾರ್ದ್ರ ಹೃದಯರು. ಅವರಿಂದ ಯಾರ ನೋವೂ ನೋಡಿ ಸಹಿಸಲಾಗುವುದಿಲ್ಲ. ಹಾಗೆಂದು ಮುಖ ತಿರುಗಿಸಿ ಹೋಗುವುದೂ ಇಲ್ಲ. ತಮ್ಮಿಂದ ಸಾಧ್ಯವಿದ್ದಷ್ಟು ಆ ನೋವಿನ ಪರಿಹಾರಕ್ಕೆ ಪ್ರಯತ್ನಿಸುತ್ತಿ

ದ್ದರು. ಪತಿಯ ವಿಷಯದಲ್ಲಂತೂ ಹೇಳಬೇಕಾಗಿಯೆ ಇಲ್ಲ.

ಅವರು ಅತ್ತೆಮನೆಗೆ ಬಂದು ವರ್ಷವಾಗುವುದರಲ್ಲೆ ಅತ್ತೆ ಕಾಲವಾದರು. ಆಗ ಸೂರಪ್ಪನಿಗೆ ಇಪ್ಪತ್ತಾರು ವರ್ಷವಾಗಿತ್ತಷ್ಟೆ. ಚಿಕ್ಕ ವಯಸ್ಸಾದುದ ರಿಂದಲೂ ತಾಯನ್ನು ಹೆಚ್ಚು ಹಚ್ಚಿಕೊಂಡಿದ್ದರಿಂದಲೂ ಸೂರಪ್ಪ ಅತ್ಯಂತ ದುಃಖಕ್ಕೀಡಾದರು. ಅನ್ನ ನೀರು ಕಟ್ಟಿತು, ನಗು–ನಲಿವು ಬತ್ತಿತು, ನಿದ್ರೆ ಹತ್ತಿರಕ್ಕೂ ಸುಳಿಯದಂತಾಯಿತು, ಮುಖ ಮುಂಕುತನದ ಮುಸುಕೆಳೆದು ನೋಡುವವರ ಮನಸ್ಸನ್ನು ಕರಗಿಸುವಂತಿತ್ತು.

ಸುಶೀಲಮ್ಮ ಚಿಕ್ಕವರಾದರೂ ತುಂಬಾ ಬುದ್ಧಿವಂತರು. ಯಜಮಾನರ ಸ್ಥಿತಿಯನ್ನು ಕಂಡು ಮರುಗಿ ಹಿಂದುಮುಂದು ಓಡಾಡಿ ರಮಿಸತೊಡಗಿದರು. ಅವರ ತಾಯಿ ಮಮತೆಯಿಂದ ಮಗನಿಗೆ ಮಾಡುತ್ತಿದ್ದ ಸೇವೆಯನ್ನು ತಾವು ಕೈಗೊಂಡು, ಸ್ವಲ್ಪವೂ ಲೋಪವಾಗದಂತೆ ಅದೇ ಪ್ರೀತಿ, ಅಷ್ಟೇ ನಿಷ್ಠೆಯಿಂದ ಮಾಡಿ ದುಃಖ ತಣಿಸಲು ಪ್ರಯತ್ನಿಸುತ್ತಿದ್ದರು.

ಅವರತ್ತೆಗೆ ಮಗನ ಬಟ್ಟೆ–ಬರೆ ಒಗೆದು ಕೊಡುವುದು, ತಲೆ ಬಾಚಿ ಗಂಟು ಹಾಕುವುದು, ಹಾಸಿಗೆ ಹಾಸಿ ಕೊಡುವುದೆಂದರೆ ತುಂಬಾ ಆನಂದ. ಎಷ್ಟೆ ಕೆಲಸವಿದ್ದರೂ ಆ ಸಮಯಕ್ಕೆ ಬಿಡುವು ಮಾಡಿಕೊಂಡು ಮಗನ ಸೇವೆ ತಾವೆ ಮಾಡುತಿದ್ದರು; ಸೊಸೆಗೆ ಮಾತ್ರ ಬಿಡುತ್ತಿರಲಿಲ್ಲ. ಎಷ್ಟೋ ಬಾರಿ ಮಗನ ಮೇಲಿನವರ ಪ್ರೀತಿಯನ್ನು ಕಂಡು ಸುಶೀಲಮ್ಮನಿಗೆ ಆಶ್ಚರ್ಯವಾಗಿತ್ತು ಇದ್ದರೆ ಇಂಥ ತಾಯಿಯಿರಬೇಕೆಂದು ಮನಸ್ಸಿನಲ್ಲೆ ಮೆಚ್ಚಿಕೊಂಡಿದ್ದರು. ಅಷ್ಟು ಮಮತೆ ಹರಿಸಿದ್ದ ತಾಯಿ ಕಣ್ಮರೆಯಾದುದರಿಂದ ದುಃಖವಾಗುವುದು ಸ್ವಾಭಾ ವಿಕವೆಂದರಿತು, ತಮ್ಮಲ್ಲಿರುವ ತಾಯ್ತನವನ್ನು ಹೊಮ್ಮಿಸಿ ಆ ಬೆಟ್ಟದಂಥ ದುಃಖವನ್ನು ಹತ್ತಾರು ದಿನಗಳಲ್ಲೆ ಕರಗಿಸಿಬಿಟ್ಟರು.

ಸೂರಪ್ಪನ ತಾಯಿ ಹಾಸಿಗೆ ಹಿಡಿದು ಮಲಗಿದ ದಿನ ಅವರ ಕಷ್ಟ ಹೇಳ ತೀರದು. ಊಟದ ಶಾಸ್ತ್ರ ಹಾಗೂ ಹೀಗೂ ಮಾಡಿ, ಕೊಠಡಿಗೆ ಕಾಲೆಳೆದು ಕೊಂಡು ಹೋಗಿ ಮಲಗುವ ಸಿದ್ಧತೆ ಮಾಡತೊಡಗಿದರು. ಹಾಸಿಗೆಗೆ ಕೈ–ಯಿಟ್ಟೊಡನೆ ತಾಯಿಯ ನೆನಪಾಗಿ ಕಣ್ಣಲ್ಲಿ ದಳದಳನೆ ನೀರು ಸುರಿಯತೊಡ ಗಿತು. ತಾಯಿ ಮಮತೆಯಿಂದ ಮಾಡಿದ ಮಾಡುತ್ತಿದ್ದ ಸೇವೆಯನ್ನೆಲ್ಲ ಮೆಲಕು ಹಾಕುತ್ತ ಸುಮ್ಮನೆ ಕುಳಿತುಬಿಟ್ಟರು.

ಸುಶೀಲಮ್ಮ ಆಗ ಒಳಗಡೆ ಕೆಲಸದಲ್ಲಿದ್ದರು. ಯಜಮಾನರು ಕೊಠಡಿಗೆ ಹೋದೊಡನೆಯೆ, ಅವರತ್ತೆ ಹಾಸಿ ಕೊಡುತ್ತಿದ್ದುದು ನೆನಪಾಗಿ ಆ ಕೆಲಸ ತಾವು ಮಾಡುವ ಉದ್ದೇಶ ಹೊತ್ತು, ಹಿಡಿದ ಕೆಲಸವನ್ನಲ್ಲೆ ಬಿಟ್ಟು ಕೊಠಡಿಗೆ ಬಂದರು. ಸೂರಪ್ಪನ ಸ್ಥಿತಿ ಕಂಡು ಕರುಣೆ ಹೊಮ್ಮಿ ಬಂತು. ಹತ್ತಿರ ಬಂದು ಕೈ ಒರೆಸುತ್ತಾ ಹೇಳಿದರು,

“ಏಳಿ ಹಾಸಿ ಕೊಡುವೆನು. ನಿಮ್ಮ ತಾಯಿ ಹಾಸಿಗೆ ಬಿಟ್ಟೇಳುವವರೆಗೆ ಆ ಕೆಲಸ ನನ್ನದು.”

ಹಾಸಲೆಂದು ಬಗ್ಗಿದವರನ್ನು ತಡೆದು ಹೇಳಿದರು ಸೂರಪ್ಪ,

“ಬೇಡ ಸುಶೀಲ, ನಾನು ಹಾಸಿಕೊಳ್ಳುವೆನು. ನಿನಗೆ ಒಳಗಿನ ಕೆಲಸವೆ ಸಾಕಾಗಿರುತ್ತದೆ; ಇದಕ್ಕೆಲ್ಲ ಯಾಕೆ ಕೈಹಚ್ಚಲು ಬರುವೆ ಹೇಳು. ”

“ಎಷ್ಟು ಕೆಲಸವಿದ್ದರೂ ನಿಮ್ಮ ತಾಯಿ ನಿಮಗಾಗಿ ಬಿಡುವು ಮಾಡಿಕೊಂಡು ಈ ಸೇವೆಯೆಲ್ಲ ಮಾಡುತ್ತಿರಲಿಲ್ಲವೆ ?”

“ಹೌದು. ಆದರೆ........? ”

ಅರ್ಧದಲ್ಲಿ ತಡೆದು ಹೇಳಿದರು ಸುಶೀಲಮ್ಮ,

“ನನಗೆ ಗೊತ್ತು—ಅದವರ ತಾಯ್ತನದ ತೃಪ್ತಿಗಾಗೆಂದಲ್ಲವೆ ನೀವು ಹೇಳುವುದು ?”

ಸೂರಪ್ಪ ಏನು ಹೇಳಲೂ ತೋಚದೆ ಮುಗ್ಧ ಮಗುವಿನಂತೆ ಸುಶೀಲಮ್ಮನನ್ನು ಮಿಕಿ ಮಿಕಿ ನೋಡುತ್ತ ಕುಳಿತುಬಿಟ್ಟರು. ಸುಶೀಲಮ್ಮ ಸಂದಿಗ್ಧ ಮನೋಭಾವನೆಯನ್ನರಿತುಕೊಂಡು ಅದನ್ನು ಹೋಗಲಾಡಿಸುವ ಸಲುವಾಗಿ,

“ಹೆಂಡತಿಯೂ ಸಮಯ ಬಿದ್ದಾಗ ತಾಯಿಯಾಗುವಳೆನ್ನುವುದನ್ನು ಮರೆಯಬೇಡಿ. ನಿಮ್ಮ ಸೇವೆಯನ್ನು ಅದೇ ತಾಯ್ತನದ ತುಂಬು ಮಮತೆಯಿಂದ ಮಾಡುವೆನು—ಏಳಿ” ಎಂದು ಸೂರಪ್ಪನನ್ನು ಸಮಾಧಾನ ಮಾಡಿ ಎಬ್ಬಿಸಿ, ಹಾಸಿ ಹೋದರು.

ಅವರ ಒಂದೊಂದು ಮಾತೂ ಒಂದೊಂದು ಕೆಲಸವೂ ಹತ್ತಾರು ಬಾರಿ ಮನಸ್ಸಿನ ಮುಂದೆ ಜೀವ ತಾಳಿ ನಿಂತು, ಸೂರಪ್ಪನ ಸತ್ವ ಹೀರತೊಡಗಿದುವು. ಸುಶೀಲಮ್ಮನ ಸಾನ್ನಿಧ್ಯಕ್ಕಾಗಿ ಮೈ-ಮನಸ್ಸು-ಜೀವವೆಲ್ಲ ಚೀರಿಡುತಿತ್ತು. ಗಳಿಗೆ ಕಳೆದಂತೆ ಆ ಬಯಕೆಯೂ ಬೆಟ್ಟದಂತೆ ಬೆಳೆಯಿತು. ಆ ವೇಗ ಉಕ್ಕಿ ಬರುವ

ನೆರೆಯಂತೆ ಕ್ಷಣಕ್ಷಣಕ್ಕೂ ಹೆಚ್ಚಿ ಮಿದುಳನ್ನು ಹಿಡಿದು ಅಲ್ಲಾಡಿ[illegible] ಚಿಂತೆಯ ಸಾಣೆಕಲ್ಲಿನಲ್ಲಿ ತಿಕ್ಕಿ ತಿಕ್ಕಿ ಸವೆದು ಹೋಗಿದ್ದ ಮಿದುಳು, [illegible] ಚಿಂತೆಯ ವೇಗವನ್ನು ತಡೆಯದೆ ಹೊರಳಿ ಸ್ಥಳಪಲ್ಲಟವಾಗಿಯೇ ಬಿಟ್ಟಿ[illegible] [illegible]ಂದರಿ–ಭಟ್ಟರ ಪರಿಶ್ರಮವೆಲ್ಲ ಹೊಳೆಯಲ್ಲಿ ಹುಳಿ ಕದರಿಟ್ಟಂತಾಯಿತು. ಸೂರಪ್ಪನ ಸ್ಥಿತಿಗಾಗಿ ಇಬ್ಬರೂ ಗೋಳಿಟ್ಟರು. ಮುಂದೆ ಏನು ಮಾಡಬೇಕೆಂದೆ ಹೊಳೆಯಲಿಲ್ಲ. ಸುಂದರಿ ಶ್ರೀನಿವಾಸ ಪಂಡಿತರಿಗೊಮ್ಮೆ ತೋರಿಸಿ ಅವರ ಸಲಹೆಯಂತೆ ನಡೆದುಕೊಳ್ಳುವುದೊಳ್ಳೆಯದೆಂದು ಸೂಚಿಸಿದಳು.

ಭಟ್ಟರು ಪಂಡಿತರ ಮನೆಗೆ ಹಾರಿದರು. ಪಂಡಿತರು ಬಂದು ಪರೀಕ್ಷಿಸಿ ಗುಣಪಡಿಸುವೆನೆಂದು ಭರವಸೆಯಿತ್ತರು. ಔಷಧ ಪಥ್ಯಕ್ಕೆ ಪ್ರಾರಂಭವಾಯಿತು. ಸುಂದರಿ–ಭಟ್ಟರಿಬ್ಬರೂ ಉಪಚಾರಕ್ಕೆ ನಿಂತರು. ಸೂರಪ್ಪನ ಹುಚ್ಚಾಟ ತಡೆಯುವುದವರಿಗೆ ಬಲು ಕಷ್ಟವಾಗುತಿತ್ತು.

ಅಂದು ಬೆಳಿಗ್ಗೆ ಭಟ್ಟರು ಔಷಧ ಕುಡಿಸಲೆಂದು ಹತ್ತಿರ ಬಂದಾಗ, ಸೂರಪ್ಪ ಹಲ್ಲು ಮುಡಿ ಕಚ್ಚಿ ಅವರ ಮೇಲೆ ಹಾರಿ ರಟ್ಟೆಯನ್ನು ಬಲವಾಗಿ ಹಿಡಿದು ಜಗ್ಗಿಸುತ್ತ "ಸೂಳೆಮಗನೆ........ ಇಲ್ಲದ್ದನ್ನೆಲ್ಲ ಕಲ್ಪಿಸಿ ಶಾಂತಳನ್ನು ಸಾವಿಗೀಡು ಮಾಡಿದೆಯಾ? ಭ್ರಷ್ಟ! ಅದಕ್ಕೆ ತಕ್ಕ ಪ್ರತಿಫಲವನ್ನುಣ್ಣು— ಇದೇ ನಿನಗೆ ತಕ್ಕ ಶಿಕ್ಷೆ!" ಎಂದು ಕತ್ತು ಹಿಸುಕಿದರು.

ಭಟ್ಟರು ಹೆದರಲಿಲ್ಲ. ಮೆಲ್ಲನೆ ಅವರ ಕೈಯಿಂದ ಕುತ್ತಿಗೆ ಬಿಡಿಸಿಕೊಂಡು ಆ ಉದ್ವೇಗ ಕರಗುವ ವರೆಗೂ ಅತ್ತಿತ್ತ ಸುತ್ತಾಡಿ, ಅನಂತರ ಔಷಧ ಕುಡಿಸಿ ಹೊರಬಂದರು.

ಈ ಅನುಭವ ಅವರೊಬ್ಬರಿಗೆ ಅಲ್ಲ, ಸುಂದರಿಗೂ ಆಯಿತೊಮ್ಮೆ. ಆದರೆ ಬೇರೊಂದು ರೂಪದಲ್ಲಿ. ಒಂದು ದಿನ ಹಗಲಲ್ಲಿ ಸುಂದರಿ ಅಡಿಗೆಯ ಸಿದ್ಧತೆಯಲ್ಲಿದ್ದಳು. ಮನಸ್ಸು ಯಾವುದೊ ಗೊಂದಲದಲ್ಲಿ ಸಿಕ್ಕಿಬಿದ್ದಿದ್ದುದರಿಂದ ಸೂರಪ್ಪ ಅಡಿಗೆ ಮನೆಯಲ್ಲಿ ಕಾಲಿರಿಸಿದುದು ಗೊತ್ತಾಗಲೆ ಇಲ್ಲ. ಅವರು ಮೆಲ್ಲನೆ ಹಿಂದಿನಿಂದ ಬಂದು ಸುಂದರಿಯನ್ನು ತಬ್ಬಿ ಹಿಡಿದು,

"ಸುಶೀಲ, ಪೂರ್ವಜನ್ಮದಲ್ಲಿ ಯಾರ ಮಕ್ಕಳ ಬಾಳೊ ಕೆಡಿಸಿರಬೇಕು. ಅದಕ್ಕೆ ಈ ಜನ್ಮದಲ್ಲಿ ನಮ್ಮ ಮಕ್ಕಳ ಬಾಳು ದುರಂತವಾಯಿತು [illegible] ನಮ್ಮ ವಿಧಿ; ಪಡೆದು ಬಂದದ್ದನ್ನುಣ್ಣಲೆ ಬೇಕು. ಅದಕ್ಕಾಗಿ ಮರುಗಿ ಆತ್ಮಹತ್ಯ

ಮಾಡಿಕೊಳ್ಳಬೇಡ ಸುಶೀಲ! ನೀನಿಲ್ಲದೆ ಬದುಕಲಾರೆ........ ನನಗಾಗಿಯಾದರೂ ಬದುಕು ಸುಶೀಲ, ಬದುಕು........!" ಎಂದು ಕಣ್ಣೀರಿಟ್ಟು ಗೋಳಾಡಿದರು.

ಸುಂದರಿ ತುಂಬಾ ಜಾಣೆ. ಸಮಯಕ್ಕೆ ತಕ್ಕಂತೆ ನಡೆದುಕೊಳ್ಳುವ ಚತುರತೆ–ಎದೆಗಾರಿಕೆ ಎರಡೂ ಅವಳಲ್ಲಿವೆ. ಆದ್ದರಿಂದಲೆ ಸುಶೀಲಮ್ಮನಂತೆ ಒಂದು ಗಳಿಗೆ ನಟಿಸಿ, ಸೂರಪ್ಪನನ್ನು ಸವಿನುಡಿಯಿಂದ ಸಮಾಧಾನ ಮಾಡಿ ಅವರ ಹಿಡಿತದಿಂದ ಅನಾಯಾಸವಾಗಿ ಪಾರಾದಳು.

ಸೂರಪ್ಪನಿಗೆ ಬಾಳು ಬರಿದು ಮಾಡಿದ ಎಲ್ಲ ಘಟನೆಗಳೂ ತಲೆಯಲ್ಲಿ ತಿರುಗು–ಮುರುಗಾಗಿ ಚಕ್ರಾಕಾರದಂತೆ ಸುತ್ತುತ್ತಿದ್ದುವು. ಒಮ್ಮೆ ಆಯಾ ನೆನಪಿಗೆ ತಕ್ಕಂತೆ ಎದುರಿಗೆ ಸಿಕ್ಕಿದವರೊಡನೆ ಗುದ್ದಾಡುತ್ತಿದ್ದು, ಗೋಳಾಡುವುದು ಮಾಡಿದರೆ, ಮತ್ತೊಮ್ಮೆ ಬಟ್ಟೆಯಲ್ಲಿ ಆಕೃತಿ ಮಾಡಿಕೊಂಡೊ, ಎದುರಿಗಿದ್ದಂತೆ ನೆನೆಸಿಕೊಂಡೊ, ತಮ್ಮ ಹಾವ ಭಾವ ವ್ಯಕ್ತಪಡಿಸುತ್ತಿದ್ದರು.

ಅವರ ಹುಚ್ಚಿನ ಉದ್ವೇಗ ಹೆಚ್ಚಿ ಕೆರಳಿದಾಗ ಶಾಂತಳ ಭವಿಷ್ಯದ ಬಗ್ಗೆ ಉದ್ದುದ್ದ ಭಾಷಣವಾಗುತಿತ್ತು. ನರಕ ಜೀವನದಲ್ಲಿ ಸಿಕ್ಕಿಬಿದ್ದ ರತ್ನಳನ್ನು ತನ್ನೊಡನೆ ಕರೆದುಕೊಂಡು ಹೋಗಲು ಪ್ರಯತ್ನಿಸಿ ವಿಫಲರಾಗಿ ಎದೆ ಬಿರಿಯುವಂತೆ ಗೋಳಿಡುತ್ತಿದ್ದರು. ಸತ್ತ ಶಾರದೆಯನ್ನು ಮೌನವಾಗಿ ಸ್ಮಶಾನಕ್ಕೆ ಸಾಗಿಸಿ ಹೊಂಡ ತೋಡಿ ಹೂಳುತ್ತಿದ್ದರು. ಈ ಎಲ್ಲ ನಟನೆಯೂ ಆಯಾ ಸಂದರ್ಭಕ್ಕೆ ತಕ್ಕ ಸಿಟ್ಟು-ಸೆಡವು, ನೋವು-ನಲಿವು, ಅಳು ನಗು, ಕಠೋರತನ-ರೌದ್ರತೆಯಿಂದ ತುಂಬಿ ಕಂಡವರೆದೆ ನಡುಗಿಸುತಿತ್ತು.

ದಿನಗಳೆದಂತೆ ಹುಚ್ಚು ಏರುತಿತ್ತೆ ವಿನಹ ಕಡಿಮೆಯಾಗುವ ಲಕ್ಷಣವೆ ಕಂಡುಬರಲಿಲ್ಲ. ಮೊದಲು ಸ್ವಲ್ಪವಾದರೂ ಹಿಡಿತಕ್ಕೆ ಸಿಕ್ಕುತ್ತಿದ್ದರು––ಕಡೆ ಕಡೆಗೆ ಅದೂ ಇಲ್ಲ. ಎದುರಿಗೆ ಬಂದವರ ಮೇಲೆ ಕೈಗೆ ಸಿಕ್ಕಿದ್ದನ್ನು ತೆಗೆದೆಸೆಯುತಿದ್ದರು. ಕಣ್ಣಿಗೆ ಕಂಡದ್ದನ್ನು ಕುಟ್ಟುವುದು, ಮುರಿಯುವುದು, ಒಡೆಯುವುದು ಜೋರಾಯಿತು. ಇದರ ನಡುವೆ ಮನೆಯಿಂದ ಆಗಾಗ ಜಾರಿಕೊಳ್ಳುತಿದ್ದುದು ಬೇರೆ. ಏನಾದರೂ ಅಪಾಯವಾದೀತೆಂದು ಹೆದರಿ ಭಟ್ಟರು ಅವರ ಮೇಲೆ ಸರ್ಪ ಕಾವಲಿಟ್ಟರು. ಕೃಷ್ಣಮೂರ್ತಿ, ಸುಂದರಿಯ ತಂದೆ ಇಬ್ಬರೂ ಅವರೊಡನೆ ಸಹಕರಿಸಿದರು.

ಪಂಡಿತರ ಔಷಧಿಯಲ್ಲಿದ್ದ ನಂಬಿಕೆ ಕರಗಿ ಹೋಯಿತು. ಬೆಂಗಳೂರಿನ ಹುಚ್ಚಾಸ್ಪತ್ರೆಗೆ ಸಾಗಿಸುವುದೆಂದು ನಿರ್ಧರಿಸಿ ಬೇಕಾದ ಅನುಕೂಲತೆಗಳನ್ನು ಹೊಂದಿಸಿಕೊಳ್ಳತೊಡಗಿದರು. ಬೆಳಗಾದರೆ ಪ್ರಯಾಣ ಬೆಳೆಸಬೇಕು—ಅಷ್ಟ ರಲ್ಲಿ ಗೂಡಿನಿಂದ ಹಕ್ಕಿ ಹಾರಿಯೆ ಹೋಯಿತು.

ಪ್ರತಿನಿತ್ಯ ಸುಂದರಿ ಬೆಳಿಗ್ಗೆ ಬಂದು ಸಂಜೆಯುವರೆಗಿದ್ದು, ಸೂರಪ್ಪ–ಭಟ್ಟ ರಿಬ್ಬರಿಗೂ ರಾತ್ರಿಯ ಊಟಕ್ಕೆ ಅಣಿಮಾಡಿಟ್ಟು ಮನೆಗೆ ಹೊರಟುಹೋಗುತ್ತಿ ದ್ದಳು; ರಾತ್ರಿ ಮಾತ್ರ ಉಳಿಯುತ್ತಿರಲಿಲ್ಲ. ಅಂದೂ ಹಾಗೆಯೆ ಮಾಡಿದಳು. ಅವಳು ಹೋದ ಮೇಲೆ ಭಟ್ಟರು, ಸೂರಪ್ಪನವರೊಬ್ಬರನ್ನೆ ಬಿಟ್ಟುಹೋಗಲು ಧೈರ್ಯವಿಲ್ಲದೆ ಅವರಿದ್ದ ಕೊಠಡಿಯ ಕದವಿಕ್ಕಿ ಕೈಕಾಲು ತೊಳೆದು, ಮಡಿ ಯುಟ್ಟು ಆಹ್ನಿಕಕ್ಕೆಂದು ದೇವರ ಮನೆಗೆ ನಡೆದರು. ಸೂರಪ್ಪ ಸ್ವಲ್ಪ ಹೊತ್ತಿ ಗೆಲ್ಲಾ ಬಾಗಿಲನ್ನು ದಬದಬ ಬಡಿದರು. ಚಿಲಕ ಸಡಿಲವಾಗಿದ್ದುದರಿಂದ ನಾಲ್ಕೇಟು ಬಡಿಯುವುದರಲ್ಲೆ ಕಳಚಿತು. ಅದೇ ಸಮಯ ಕಾಯುತ್ತಿದ್ದ ಸೂರಪ್ಪ ಕೊಠಡಿಯಿಂದ ಈಚೆ ಬಂದು ಹೊರಗಿನ ಕದ ತೆರೆದು ಛಂಗನೆ ಹಾರಿದರು.

ಜಪದಲ್ಲಿ ತಲ್ಲೀನರಾಗಿದ್ದ ಭಟ್ಟರಿಗೆ ಮೊದಲು ಗೊತ್ತಾಗಲಿಲ್ಲ. ಹೊರ ಗಿನ ಕದ ತೆರೆದ ಮೇಲೆ ವಿಷಯ ಹೊಳೆದು, ಸಂಧ್ಯಾವಂದನೆಯನ್ನು ಮೊಟಕು ಮಾಡಿ ಗಾಬರಿಯಿಂದ ಹೊರಗೆ ಓಡಿ ಬಂದರು. ಅವರು ಬರುವುದರಲ್ಲಿ ಸೂರಪ್ಪ ಹೊರಟೆ ಹೋಗಿದ್ದರು. ಭಟ್ಟರೂ ಉಟ್ಟ ಮಗುಟದಲ್ಲೆ ಅತ್ತಿತ್ತ ಹುಡುಕಾಡಿದರು. ಎಲ್ಲಿಯೂ ಸೂರಪ್ಪನ ಸುಳಿವು ಸಿಗಲಿಲ್ಲ. ಮುಖ ಸೋಲು ಬಿಟ್ಟು ಮನೆಗೆ ಹಿಂದುರಿಗಿದರು. ಹಿಂದೆ ಒಂದೆರಡು ಬಾರಿ ಹೀಗೆ ಮಾಡಿದ್ದರು ಸೂರಪ್ಪ. ಹೋದ ಸ್ವಲ್ಪ ಹೊತ್ತಿಗೆಲ್ಲ ಮನೆಗೆ ಹಿಂದಿರುಗಿದ್ದರು. ಅದರಂತೆ ಈ ಬಾರಿಯೂ ಬರಬಹುದೆಂದು ತಮಗೆ ತಾವೆ ಸಮಾಧಾನ ತಂದುಕೊಂಡು ಮಲಗಿದರು. ಮಾಡಿದ ಅಡಿಗೆಯೆಲ್ಲ ಹಾಗೆ ಉಳಿಯಿತು. ಸೂರಪ್ಪನಿಲ್ಲದ್ದರಿಂದ ಭಟ್ಟರಿಗೂ ಊಟ ಮಾಡಲು ಮನಸ್ಸಾಗಲಿಲ್ಲ.

ಬೆಳಗಾಯಿತು, ಸೂರಪ್ಪನ ಸುಳಿವೆ ಇಲ್ಲ. ವಿಷಯವನ್ನು ಕೃಷ್ಣ ಮೂರ್ತಿಗೂ ಸುಂದರಿಯ ತಂದೆಗೂ ತಿಳಿಸಿ, ತಮ್ಮೊಡನೆ ಅವರನ್ನೂ ಕರೆದು ಕೊಂಡು ನಾಲ್ಕಾರು ಬಾರಿ ಊರನ್ನೆಲ್ಲ ಸೋಸಾಡಿದರು; ಎಲ್ಲಿಯೂ ಸೂರಪ್ಪ

ಕಣ್ಣಿಗೆ ಬೀಳಲಿಲ್ಲ. ನಿರಾಶರಾಗಿ ನಾಲ್ಕಾರು ಪತ್ರಿಕೆಗಳಲ್ಲಿ ಸೂರಪ್ಪನ ದೇಹ–ಸ್ಥಿತಿ, ಮೈ–ಮುಖದ ಮಾಟವನ್ನು ತಿಳಿಸಿ, ಎಲ್ಲಿದ್ದರೂ ತಮ್ಮ ವಿಳಾಸಕ್ಕೆ ತಂದು ಮುಟ್ಟಿಸಬೇಕೆಂದೂ, ಹಾಗೆ ಮಾಡಿದವರಿಗೆ ಉಚಿತ ಬಹುಮಾನ ಕೊಡಲಾಗುವುದೆಂದೂ ಪ್ರಕಟಣೆ ಹೊರಡಿಸಿದರು. ಸ್ನೇಹಿತರು-ಬಂಧು ಬಳಗವಿರುವ ಕಡೆಗೆಲ್ಲ ಕಾಗದ ಬರೆದು ಸಿಕ್ಕಿದರೆ ತಮ್ಮ ಬಳಿ ಕರೆತಂದು ಮುಟ್ಟಿಸಬೇಕೆಂದು ತಿಳಿಸಿದರು.

ಅವರ ಗಮನ ಶಾಂತಳ ಕಡೆ ಹರಿಯಿತು. ಏನಾದರೂ ಮಾಡಿ ಅವಳನ್ನಾದರೂ ಉಳಿಸಿಕೊಳ್ಳಬೇಕೆಂದು ಜೀವ ಒದ್ದಾಡಿತು. ಹೆಚ್ಚು ಹಣ ವೆಚ್ಚ ಮಾಡಿದರೆ ಆ ಇಚ್ಛೆ ನೆರವೇರಿದರೂ ನೆರವೇರಬಹುದೆಂದು ಆಶೆ ತಲೆದೋರಿತು. ಕೂಡಲೆ ಕೃಷ್ಣಮೂರ್ತಿಯನ್ನು ಕಂಡು ತಾವು ಪುನಃ ಬಂದು ಆಸ್ತಿಗೊಂದು ವ್ಯವಸ್ಥೆ ಮಾಡುವ ವರೆಗೆ ವೈವಟ್ಟನ್ನವರೆ ನೋಡಿಕೊಳ್ಳುತ್ತಿರಬೇಕೆಂದು ತಿಳಿಸಿ, ಮನೆಗೆ ತಕ್ಕ ಬಂದೋಬಸ್ತು ಮಾಡಿ ಊರಿಗೆ ಹೊರಟು ನಿಂತರು.

ಅವರು ಹೊರಟದ್ದನ್ನು ಕಂಡು ಸುಂದರಿಗೆ ದುಃಖ ಒತ್ತರಿಸಿ ಬಂತು. ಆ ಸಂಸಾರದ ನಾಶಕ್ಕೆ ತನ್ನಿಂದಲೂ ಆದ ತಪ್ಪನ್ನು ನೆನೆನೆನೆದು ಅತ್ತಳು. ಅವಳ ದುಃಖ [illegible] ಕುತ್ತಿಗೆಯೂ ಬಿಗಿದು ಬಂತು. ಕಣ್ಣು ನೀರಾಡಿತು. ಬಂದ [illegible] ತಡೆದು ಗದ್ಗದ ಧ್ವನಿಯಲ್ಲಿ ಹೇಳಿದರು,

[illegible] ಸಂದರ್ಭದಲ್ಲಿ ಸಣ್ಣ ಪುಟ್ಟ ತಪ್ಪೂ ಅಪರಾಧವಾಗಿ ಕಂಡು, ಸಾವು-[illegible] ನಾವೂ ಕಾರಣರಾಗಿದ್ದೆವೊ ಏನೊ, ಎನ್ನುವ ಸಂಶಯ ಭಾವನೆ [illegible]ಯರಾಗಿದ್ದವರಲ್ಲಿ ತಲೆದೋರಿ ವೇದನೆಯಾಗುವುದು ಸ್ವಾಭಾವಿಕ. ಅ[illegible] ನಮ್ಮ ಭ್ರಮೆ ಸುಂದರಿ. ಸುಸಂಸ್ಕೃತ ವ್ಯಕ್ತಿಗಳ ಬದುಕು ಹೀಗೆ [illegible] ಸಾವಿಗೆ, ಹುಚ್ಚಿಗೆ ಗುರಿಯಾಗಬೇಕಾಗಿದ್ದರೆ ಜನ್ಮಾಂತರದ ಪಾಪದೋಷವೆ ಸರಿ. ಇದಕ್ಕೆ ಯಾರೂ ಹೊಣೆಯಲ್ಲ. ಅಲ್ಲದೆ, ಕಳೆದು ಹೋದುದಕ್ಕೆ ಚಿಂತಿಸಿ ಏನೂ ಫಲವಿಲ್ಲ. ಮುಂದೆ ಮಾಡುವ ಕೆಲಸವಿನ್ನೂ ಬಹಳವಿದೆ. ನಿನ್ನಿಂದ ಈ ಸಂಸಾರಕ್ಕೆ ದ್ರೋಹವಾಯಿತೆಂದು ನೋವಾಗಿದ್ದರೆ ಅದನ್ನಿವರ ಮನೆಯ ದೀಪ ಉರಿಯುವಂತೆ ಮಾಡಿ ಕಳೆದುಕೊ. ನಾನು ಊರಿಗೆ ಹೋದವನೆ ಸಮಯ ಸಾಧಿಸಿ ಗೋಪಿಗೆಲ್ಲ ವಿಷಯವನ್ನೂ ತಿಳಿಸಿ, ಸೂರಪ್ಪನಾಸ್ತಿ ವೈವಟ್ಟನ ವ್ಯವಹಾರವನ್ನು ಅವನ ತಲೆಗೆ ಕಟ್ಟುವೆನು; ಶಾಂತಳ

ಮಗುವನ್ನು ತಂದು ಇಲ್ಲಿ ಬಿಡುವೆನು. ನೀನು ಆ ಮಗುವಿನ ಸಾಕು ತಾಯಿ ಯಾಗಿ, ಅವನಲ್ಲಿ ಎಲ್ಲ ಸದ್ಗುಣ ತುಂಬಿ-ಬೆಳೆಸಿ, ವಿದ್ಯಾವಂತನನ್ನಾಗಿ ಮಾಡಿ ಈ ಮನೆಯ ಋಣ ತೀರಿಸಿಕೊ !"

ದುಃಖ ತುಂಬಿದ್ದ ಸುಂದರಿಯಲ್ಲಿ ಮಾತು ಹೊರಡಲಿಲ್ಲ. ನಡುಗುತಿದ್ದ ತುಟಿಯನ್ನು ಕಚ್ಚಿ ಹಿಡಿದು, 'ಅಗತ್ಯವಾಗಿ ಮಾಡುವೆನೆ'ಂಬ ಅರ್ಥ ಬರುವಂತೆ ತಲೆ ಹಾಕಿದಳು. ಭಟ್ಟರು ಅದನ್ನೆ ಉತ್ತರವಾಗಿ ತೆಗೆದುಕೊಂಡು ಹೆಜ್ಜೆ ಮುಂದಿರಿಸಿದರು.

## ೨೪

ಅವರು ಮೈಸೂರು ತಲ್ಪಿದಾಗ ರಾತ್ರಿ ಹತ್ತು ಗಂಟೆಯಾಗಿ ಹೋಗಿತ್ತು. ಆಗಲೆ ಗೋಪಿಯನ್ನು ಕಾಣಲು ಮನಸ್ಸು ತವಕಿಸಿದರೂ ಅವೇಳೆಯಾದ್ದರಿಂದ ಆ ಬಯಕೆಯನ್ನು ಹಾಗೆ ಹತ್ತಿಕ್ಕಿ ನೆಟ್ಟಗೆ ಮನೆಯ ಹಾದಿ ಹಿಡಿದರು.

ಸುಶೀಲಮ್ಮನಿಗಾಗಲೆ ಒಂದು ಸಣ್ಣ ನಿದ್ದೆಯಾಗಿ ಹೋಗಿತ್ತು. ಕದ ತಟ್ಟಿದ ಶಬ್ದ ಕೇಳಿ 'ಬಂದೆ' ಎಂದು ದಿಗ್ಗನೆದ್ದು ಸರಸರನೆ ಹೋಗಿ ಕದ ತೆರೆದರು. ಯಜಮಾನರ ಕೈಲಿದ್ದ ತುಂಬಿದ ಕೈಚೀಲವನ್ನು ತಮ್ಮ ಕೈಗೆ ತೆಗೆದುಕೊಂಡು, ಸುದ್ದಿ ತಿಳಿಯುವ ಕುತೂಹಲದಿಂದ ಮುಖದ ಕಡೆ ಕಣ್ಣಾಡಿಸಿದರು. ಯಜಮಾನರ ಕಂದಿದ ಮುಖ, ನೀರಾಡುತಿದ್ದ ಕಣ್ಣು ಪರಿಸ್ಥಿತಿಯನ್ನು ತಕ್ಕ ಮಟ್ಟಿಗೆ ಪರಿಚಯ ಮಾಡಿಕೊಟ್ಟಿತು.

ಸೂರಪ್ಪನ ವಿಷಯ ಹೊರತು ಉಳಿದೆಲ್ಲ ಸಂಗತಿ ಕಾಗದದ ಮುಖಾಂತರ ಅವರಿಗಂದೆ ತಿಳಿದಿತ್ತು. ಸುಶೀಲಮ್ಮನಿಗೆ ಕಣ್ಣೀರಿನ ಶ್ರದ್ಧಾಂಜಲಿಯನ್ನರ್ಪಿಸಿದ್ದರು. ಗೋಪಿಯಿಂದಾಗಿ ಆ ಮನೆತನ ಹೊಟ್ಟೆದ್ದು ಹೋಗುತ್ತಿರುವುದನ್ನು ಕಂಡು ಹೊಟ್ಟೆ ಸುಟ್ಟು ಹೋಗಿತ್ತು. ಇಂದು ಯಜಮಾನರ ಬಾಯಿಂದ ಸೂರಪ್ಪ ಹುಚ್ಚು ಹಿಡಿದು ಕಣ್ಮರೆಯಾದ ಸುದ್ದಿ ಕೇಳಿ ಭೂಮಿಗಿಳಿದು ಹೋದರು. ಒಂದು ಮನೆತನ ಪೂರ್ತಿ ವಿನಾಶದ ಹಾದಿ ಹಿಡಿದದ್ದನ್ನು ಅವ

ರೆಂದೂ ಕಂಡಿರಲಿಲ್ಲ; ಕೇಳಿಯೂ ಇರಲಿಲ್ಲ. ಆ ಸುದ್ದಿ ದಿಗ್ಭ್ರಮೆಗೊಳಿಸಿತು; ಗಾಬರಿ ತುಂಬಿ ಮೈಯ್ಯ ರಕ್ತವನ್ನೊಣಗಿಸಿತು. ನಡುಗುವ ಮೈಯನ್ನು ಹಿಡಿತಕ್ಕೆ ತಂದು, ಕದವಿಕ್ಕಿ ಮೌನವಾಗಿಯೇ ಯಜಮಾನರನ್ನು ಹಿಂಬಾಲಿಸಿದರು.

ಭಟ್ಟರು ಊಟ ಮಾಡದೆ ಹಾಗೆ ಹೋಗಿ ಹಾಸಿಗೆ ಹಿಡಿದರು. ಅವರ ತಲೆ ತುಂಬ 'ಮುಂದೆ ಹೇಗೆ, ಏನು ಮಾಡಬೇಕು, ಯಾವ ರೀತಿ ನಡೆದುಕೊಳ್ಳಬೇಕು?'—ಎನ್ನುವ ವಿಷಯವೆ ತುಂಬಿ ಮೊರೆಯುತಿತ್ತು. ಉತ್ತರ ಹುಡುಕುವ ಗಡಿಬಿಡಿಯಲ್ಲಿ ಕಣ್ಣು ಹತ್ತಲೆ ಇಲ್ಲ. ಅವರ ಸಿಟ್ಟುಸಿರು, ಸಂತಾಪ ಕಂಡು ವಿಶಾಲಾಕ್ಷಮ್ಮನಿಗೂ ವೇದನೆಯಾಯಿತು. ಅವರೂ ನಿದ್ದೆ ಮಾಡದೆ ಹಾಸಿಗೆಯಲ್ಲಿ ಅತ್ತಿತ್ತ ಹೊರಳಾಡಹತ್ತಿದರು. ಅದನ್ನು ಕಂಡು ಭಟ್ಟರ ಹೊಟ್ಟೆ ಚುರುಕ್ಕೆನ್ನಿಸಿ ಹೇಳಿದರು,

"ನನ್ನ ವಿಚಿತ್ರ ನಡತೆ ಕಂಡು ನಿನಗೆ ಬೇಸರವಾಗಿರಬಹುದಲ್ಲವೆ ವಿಶಾಲಿ! ಬಂದವನು ನೆಟ್ಟಗೆ ಮಾತು ಸಹ ಆಡಿಸಲಿಲ್ಲ. ಏನು ಮಾಡಲಿ? ಸೂರಪ್ಪನ ಸಂಸಾರ ಸ್ಮಶಾನವಾದದ್ದನ್ನು ಕಂಡು ನನಗೇನೂ ಬೇಡವಾಗಿದೆ. ಎಷ್ಟು ಪ್ರಯತ್ನಿಸಿದರೂ ಆ ಸಂಸಾರದ ಸಾವು-ನೋವನ್ನು ತಪ್ಪಿಸಲು ಸಾಧ್ಯವಾಗಲೆ ಇಲ್ಲ. ಆ ನೋವು ನನ್ನೆದೆಯನ್ನು ಗಾಣದಂತೆ ಹಿಂಡುತ್ತಿದೆ. ಆ ಸಂಸಾರ ತಿದ್ದುವ ಗಡಿಬಿಡಿಯಲ್ಲಿ ನಿನ್ನಲ್ಲೇನಾದರೂ ತಪ್ಪಾಗಿ ನಡೆದಿದ್ದರೆ ಕ್ಷಮಿಸಿ ಬಿಡು."

"ಛೆ ಛೆ, ಎಂಥ ಮಾತು ನೀವಾಡುವುದು! ನಿಮ್ಮನ್ನು ತಿಳಿದುಕೊಳ್ಳದಷ್ಟು ಮೂಢಳೆ ನಾನು! ನನಗೂ ಆ ಸಂಸಾರದ ಬಗ್ಗೆ ತುಂಬಾ ಸಂತಾಪವಾಗುತ್ತದೆ. ಆ ಮನೆತನದಲ್ಲಿ ಹೆಸರು ಹೇಳಲು ಒಬ್ಬರೂ ಇಲ್ಲದಂತಾಯಿತು. ದೇವರು ಶಾಂತಳ ಆ ಎರಡು ಮಕ್ಕಳಿಗಾದರೂ ಆಯುರಾರೋಗ್ಯವನ್ನಿತ್ತು ಆ ಮನೆಯನ್ನು ಬೆಳಗಿಸಿದ್ದರೆ ಚೆನ್ನಾಗಿತ್ತು."

"ಏನು ಬೆಳಗಿಸುವನೊ ಏನೊ! ಈ ವರೆಗೆ ನಡೆದದ್ದನ್ನೆಲ್ಲ ನೆನೆಸಿಕೊಂಡರೆ ಮಕ್ಕಳ ಭವಿಷ್ಯದ ಬಗ್ಗೆ ಭರವಸೆಯೆ ಬರುವುದಿಲ್ಲ. ಇದಕ್ಕೆ ನೋಡು ವಿಶಾಲಿ, ಪ್ರತಿಯೊಬ್ಬರೂ ಜೀವನದಲ್ಲಿ ಶುದ್ಧರಾಗಿ ಬಾಳಬೇಕೆಂದು ಹೇಳುವುದು. ನಾವೆಷ್ಟು ವಿವೇಕಿಗಳಾಗಿ, ಶುದ್ಧರಾಗಿ ಬಾಳುವೆಯೋ ಅಷ್ಟೂ

ನಮ್ಮಾತ್ಮ—ಸಂತಾನ, ಸುಖ–ಶಾಂತಿಯಲ್ಲಿ ಮಿಂದು ವಿಕಸಿತಗೊಳ್ಳುವುದು. ಇಂದು ನಾವು ನೆಟ್ಟ ಕರ್ಮವೃಕ್ಷ ಇಂದೆ ಫಲ ಕೊಡುವುದಿಲ್ಲ; ಮುಂದಕ್ಕೆ ಕಟ್ಟಿಟ್ಟ ಬುತ್ತಿಯಾಗುಳಿಯುವುದು. ಕಹಿಯೊ ಸಿಹಿಯೊ ಅದನ್ನುಣ್ಣಲೆ ಬೇಕು. ಈ ಮಾತು ಸತ್ಯವೆನ್ನಲು ಸೂರಪ್ಪನ ಸಂಸಾರವೊಂದೆ ಸಾಕು. ನಾನು ಕಂಡಂತೆ ಆ ದಂಪತಿಗಳಿಬ್ಬರೂ ಶುದ್ಧರಾಗಿ ಬಾಳಿದ್ದಾರೆ. ಆದರೂ ಸಂಸಾರ ಸುಟ್ಟು ಭಸ್ಮವಾಗಿ ಹೋಗಿದೆ. ಜನ್ಮಾಂತರದ ಯಾವುದೊ ಪಾಪ ದೋಷವೆ ಅದಕ್ಕೆ ಕಾರಣವಿರಬೇಕು. ಸುಮ್ಮನೆ ಎಂದಿಗೂ ಸಂಸಾರ ಬರಿದಾಗುವುದಿಲ್ಲ. ವಿವೇಕ ಬೆಳೆದ ಮೇಲೆ ನಾವು ನಮ್ಮ ಸಣ್ಣ-ಪುಟ್ಟ ತಪ್ಪಿಗೂ ಹೆದರಿ ನಡೆಯ ಬೇಕು."

ಆ ಮಾತನ್ನು ಭಟ್ಟರು ತಮ್ಮ ಪರವಾಗಿಯೂ ಅಂದುಕೊಂಡಿದ್ದರು. ವಿಶಾಲಾಕ್ಷಮ್ಮನ ಬಗ್ಗೆಯೂ ಹೇಳಿದ್ದರು ಅವರಿಗೆ ಜೀವನ ಎಷ್ಟು ಶುದ್ಧವಾಗಿ ದ್ದರೆ ಅಷ್ಟು ಹಿಗ್ಗು. ಅದನ್ನು ತೊಳೆದಷ್ಟೂ ತೃಪ್ತಿಯಿರುತ್ತಿರಲಿಲ್ಲ. ಒಮ್ಮೊಮ್ಮೆ ವಿಶಾಲಾಕ್ಷಮ್ಮ ಸಂಪತ್ತಿನ ದಾಹದಿಂದ ಸಣ್ಣತನ ತೋರಿಸುತ್ತಿದ್ದರು. ಭಟ್ಟರಿ ಗದು ಹಿಡಿಸುತ್ತಿರಲಿಲ್ಲ. ಸಮಯ ಸಂದರ್ಭ ಸಾಧಿಸಿ, ಮತ್ತೊಬ್ಬರ ಜೀವನದ ಉದಾಹರಣೆಯಿಂದ ಧರ್ಮಸೂಕ್ಷ್ಮವನ್ನು ಮನಸ್ಸಿಗೆ ನಾಟುವಂತೆ ಬೋಧಿಸಿ ಹುಟ್ಟುತ್ತಿದ್ದ ದುರ್ಗುಣವನ್ನು ಮೊಳಕೆಯಲ್ಲೇ ಕಿತ್ತೆಸೆಯುವಂತೆ ಮಾಡು ತಿದ್ದರು.

ವಿಶಾಲಾಕ್ಷಮ್ಮನೂ ಯಜಮಾನರು ಬೋಧಿಸುತ್ತಿದ್ದ ಧರ್ಮಸೂಕ್ಷ್ಮ ವನ್ನು ಮಂದಟ್ಟು ಮಾಡಿಕೊಂಡು ತಮ್ಮ ಸಂಪತ್ತಿನ ಲಾಲಸೆಯನ್ನು ಅದು ಮುತ್ತಲೆ ಬರುತ್ತಿದ್ದರು. ಆದರೂ ಒಮ್ಮೊಮ್ಮೆ ಆ ದಾಹ ಭಟ್ಟನೆ ತಲೆಯೆತ್ತಿ ಅವರ ವಿವೇಕವನ್ನು ಸೆರೆಹಿಡಿದು ತನ್ನ ದಾಹವನ್ನಡಗಿಸಿಕೊಂಡೆ ಬಿಡುತ್ತಿತ್ತು. ಆಗವರ ಮನಸ್ಸಿಗೇನೂ ಅನ್ನಿಸುತ್ತಿರಲಿಲ್ಲ. ಮತ್ತೆಂದಾದರೂ ಯಜಮಾನರು ಪಾಪಪುಣ್ಯದ ಪರಿಚಯ ಮಾಡಿಕೊಟ್ಟಂದು ತಮ್ಮಿಂದಾದ ಅಪರಾಧಕ್ಕೆ ಮರು ಗುತ್ತಿದ್ದರು. ಇಂದು ಹಾಗೆಯೆ ಮಾಡಿದರು.

ಭಟ್ಟರು ಊರಿಗೆ ಹೊರಡುವ ದಿನ ಒಂದು ಘಟನೆ ನಡೆಯಿತು. ಆಗ ಲಗ್ನಕಾಲವಾದ್ದರಿಂದ ಅಕ್ಕಿ–ಕಾಯಿ ಮೂಟೆಗಟ್ಟಲೆ ಬಂದು ಬಿದ್ದಿತ್ತು. ನಾಡಿ ನಲ್ಲೆಲ್ಲ ತುಟ್ಟಿ ಭತ್ಯದ ಸಮಯ. ಸರಕಾರ ಕೊಡುವ ಅಕ್ಕಿ ಎಷ್ಟೊ ಸಂಸಾರ

ಗಳಿಗೆ ಸಾಲುತ್ತಿರಲಿಲ್ಲ. ಹಣವಿದ್ದವರು ಹೆಚ್ಚು ಹಣಕೊಟ್ಟು ಕೊಂಡುಕೊಳ್ಳು ವುದೊ, ಅಥವಾ ತುಟ್ಟಿ ಭತ್ಯದ ಇಲಾಖೆಗೆ ಸಂಬಂಧಪಟ್ಟ ಅಧಿಕಾರಿಗಳನ್ನು ಕೈಯಲ್ಲಿ ಹಾಕಿಕೊಂಡೋ, ಅಂತೂ ತಮ್ಮ ದಿನವನ್ನು ಸುಖವಾಗಿ ದಬ್ಬುತ್ತಿ ದ್ದರು.

ಸರಕಾರದ ಈ ಕ್ರಮ ಮಧ್ಯಮ ವರ್ಗದವರಿಗೆ, ಬಡವರಿಗೆ ಬಹಳ ಕಷ್ಟ ತಂದೊಡ್ಡಿತ್ತು. ಹೊಟ್ಟೆಗೆ ಸಾಲದೆ ಹಾಹಾಕಾರವೆಬ್ಬಿಸುತಿದ್ದರು. ಅದೇ ಸಮಯ ಕಾಯುತ್ತಿದ್ದ ವ್ಯಾಪಾರಸ್ಥರು ಹಣ ದೋಚಿಕೊಳ್ಳುವ ಉದ್ದೇಶ ಹೊತ್ತು ಕಾಳಸಂತೆಯನ್ನು ತೆರದರು. ಆ ಮಾರ್ಗ ಹಣದ ದಾಹವಿದ್ದ ಅನೇಕ ಸಣ್ಣ ಪುಟ್ಟ ವ್ಯಕ್ತಿಗಳನ್ನು ತನ್ನ ಕಡೆ ಸೆಳೆಯಿತು. ಎಷ್ಟೋ ಹೆಣ್ಣು ಮಕ್ಕಳು ಮನೆಯಲ್ಲಿ ಕಾಳಸಂತೆಯನ್ನು ಕದ್ದುಮುಚ್ಚಿ ನಡೆಸುತ್ತಿದ್ದರು. ಕೆಲ ವರು ಸಂಪತ್ತಿನ ದಾಹದಿಂದ ಕಾಳಸಂತೆಗೆ ಶರಣು ಹೋಗಿದ್ದರೆ, ಕೆಲವರು ಬರುವ ಉತ್ಪತ್ತಿ ಊಟಕ್ಕೆ ಸಾಲದೆ ನಡೆಸುತ್ತಿದ್ದರು.

ವಿಶಾಲಾಕ್ಷಮ್ಮನೂ ಕಾಳ ಸಂತೆಗೆ ಕಟ್ಟುಬಿದ್ದಿದ್ದರು. ಅವರ ಮನೆಗೆಲ ಸದ ನಿಂಗಿ—ಆ ವ್ಯಾಪಾರ ಒಬ್ಬರಿಗೂ ತಿಳಿಯದಂತೆ ಅನಾಯಾಸವಾಗಿ ನಡೆಸಿ ಕೊಡುತ್ತಿದ್ದಳು. ಅಂದವಳ ಕಡೆಯಿಂದ ಅಕ್ಕಿ ಕೊಂಡು ಹೋಗಲು ಬಂದಿದ್ದ ವ್ಯಕ್ತಿ ಕಡುಬಡವ. ವೇಷ-ಭೂಷಣಗಳಿಂದಲೆ ಸ್ಥಿತಿ-ಗತಿಯನ್ನರಿತುಕೊಳ್ಳಬಹು ದಿತ್ತು. ಹೆಂಡತಿ—ಮಕ್ಕಳು ಕಾಹಿಲೆಯಲ್ಲಿದ್ದುದರಿಂದ ಕಾಳಸಂತೆಗೆ ವಿಧಿಯಿಲ್ಲದೆ ಬಲಿಯಾಗಿದ್ದ.

ರೂಪಾಯಿಗೆ ಸೇರಿನಂತಾದರೂ ಮಾಡಿ ಕೊಳ್ಳಬೇಕೆಂದು ಹಲ್ಲು-ಬಾಯಿ ಗಿಂಜಿದ. ವಿಶಾಲಾಕ್ಷಮ್ಮ ಹಿಡಿದ ಪಟ್ಟು ಬಿಡಲಿಲ್ಲ. ಕಡೆಗೆ ಮೂರುವರೆ ಪಾವಿನಂತೆ ಎರಡು ರೂಪಾಯಿಗಳ ಅಕ್ಕಿ ಕೊಂಡು ಹೋಗಬೇಕಾದರೆ ಸಾಕು ಬೇಕಾಯಿತು.

ಈ ನೋಟ ಭಟ್ಟರ ಕಣ್ಣಿಗೆ ಬಿತ್ತು. ಹೆಂಡತಿಯ ನಿಷ್ಕರುಣೆಯಿಂದ ಕೂಡಿದ ಆ ವ್ಯವಹಾರ ಕಂಡು ಸಂತಾಪಪಟ್ಟರು. ಸೂರಪ್ಪನ ಮನೆಗೆ ಹೊರಡುವ ಗಡಿಬಿಡಿಯಲ್ಲಿದ್ದುದರಿಂದ ಅಂದು ಆ ವಿಷಯ ಪ್ರಸ್ತಾಪಿಸಲಿಲ್ಲ. ಇಂದದನ್ನು ಮನಸ್ಸಿನಲ್ಲಿಟ್ಟೆ ಆ ಮಾತಾಡಿದ್ದರು. ವಿಶಾಲಾಕ್ಷಮ್ಮನಿಗೂ ಯಜಮಾನರು ಕುರಿತು ಹೇಳಿದ ಸಂದರ್ಭ ಮನಸ್ಸಿಗೆ ಹೊಳೆಯಿತು. ಹಾಗೆ

ಮಾಡಬಾರದಿತ್ತೆಂದು ತುಂಬಾ ಪಶ್ಚಾತ್ತಾಪ ಪಟ್ಟರು. ಸೂರಪ್ಪನ ಸಂಸಾರದ ಪ್ರಲಯ ನರ್ತನ ಕಣ್ಣಿಗೆ ಕಟ್ಟಿ ಮುಂದೆಂದೂ ಆ ಬಗೆಯ ಸಣ್ಣತನಕ್ಕೆ ಕೈ ಹಾಕಕೂಡದೆಂದು ನಿರ್ಧರಿಸಿ ಹೇಳಿದರು,

"ನೀವಂದದ್ದು ಸರಿ. ನಾವು ನಮ್ಮ ಸಣ್ಣ-ಪುಟ್ಟ ತಪ್ಪಿಗೂ ಹೆದರಿ ನಡೆಯಬೇಕು. ನನ್ನಲ್ಲೂ ಒಂದೆರಡು ದುರ್ಗುಣಗಳಿವೆ. ಅದನ್ನು ಬೇರು ಸಹಿತ ಕಿತ್ತು ಬಿಸಾಡಲು ಪ್ರಯತ್ನಿಸುವೆನು. ನೀವೂ ಆಗಾಗ್ಗೆ ಎಚ್ಚರಿಸುತ್ತಿರಿ."

ವಿಶಾಲಾಕ್ಷಮ್ಮನ ಮಾತಿನಿಂದ ಭಟ್ಟರಿಗೆ ತೃಪ್ತಿ ಬಂದು ಹೇಳಿದರು,

"ಹಾಗೆ ಆಗಲಿ. ದುರ್ಗುಣ ಯಾರಲ್ಲಿ ತಾನೆ ಇಲ್ಲ ಹೇಳು, ಪ್ರತಿಯೊಬ್ಬರಲ್ಲೂ ಇರುತ್ತದೆ. ಆದರದನ್ನು ತಿದ್ದಿಕೊಂಡು ಹೋಗಬೇಕು; ಅದರಲ್ಲೇ ಇರುವುದು ಮನುಷ್ಯತ್ವ. ಮಲಗು, ಹೊತ್ತು ತುಂಬಾ ಆಗಿದೆ" ಎಂದು ಮಾತಿಗೆ ಮುಕ್ತಾಯ ಹಾಕಿದರು. ವಿಶಾಲಾಕ್ಷಮ್ಮನೂ ಮಗ್ಗುಲಾದರು.

ನಸುಕತ್ತಲೆ ಇರುವಲ್ಲೆ ಎದ್ದು ಸ್ನಾನಾಹ್ನಿಕ ಮುಗಿಸಿ, ಕಾಫಿ-ತಿಂಡಿಯಿಂದ ಹೊಟ್ಟೆ ತಣಿಸಿ ಭಟ್ಟರು ಗೋಪಿಯ ಮನೆಹಾದಿ ತುಳಿದರು. ಮನೆ ಮುಟ್ಟುವವರೆಗೂ ತಮ್ಮ ಸಂಧಾನದಲ್ಲಿ ನಂಬಿಕೆಯಿತ್ತು; ಅವನ ರುದ್ರಮುಖ ಕಂಡೊಡನೆ ಆ ನಂಬಿಕೆಯೆಲ್ಲ ಕರಗಿ ನೀರಾಯಿತು. ಭಟ್ಟರು ಬಂದಾಗ ಗೋಪಿ ವೆರಾಂಡದಲ್ಲಿ ವರ್ತಮಾನ ಪತ್ರಿಕೆಯೋದುತ್ತ ಕುಳಿತಿದ್ದ. ಅವರ ಮುಖ ಕಂಡೊಡನೆ ಎಲ್ಲಿಲ್ಲದ ಸಿಟ್ಟು ಮೈತುಂಬಿ ಬಂತು. ಕೈಲಿ ಹಿಡಿದಿದ ಪತ್ರಿಕೆಯನ್ನು ರೊಯ್ಯನೆಸೆದು, ಯಾವ ಮಾತೂ ಆಡದೆ ಬುಸುಗುಟ್ಟುತ್ತ ನೆಲ ನಡುಗುವಂತೆ ಹೆಜ್ಜೆಯಿಡುತ್ತ ಕೊಠಡಿಯ ಕಡೆ ಹೊರಳಿದ.

ಅವನ ಒರಟು ನಡವಳಿಕೆಯಿಂದ ಪರಿಚಿತರಾಗಿದ್ದ ಭಟ್ಟರು ಮೊಂಡು ಹಿಡಿದು ಅವನಿದ್ದಲ್ಲಿಗೆ ಹೋಗಿ, ಅಸಹನೆ ವ್ಯಕ್ತಪಡಿಸುತ್ತಿದ್ದರೂ ಲಕ್ಷಿಸದೆ, ಎದೆಗುಂದದೆ ಪ್ರಸ್ತಾಪವೆತ್ತಿದರು.

ಶಾರದೆ ಸತ್ತದ್ದು, ಸುಶೀಲಮ್ಮ ಆತ್ಮಹತ್ಯೆ ಮಾಡಿಕೊಂಡದ್ದು, ಸೂರಪ್ಪನಿಗೆ ಹುಚ್ಚು ಹಿಡಿದು ಕಣ್ಮರೆಯಾದದ್ದು, ಶಾಂತ ಸಾವಿನ ವಜ್ರಮುಷ್ಟಿಯಲ್ಲಿ ಸಿಕ್ಕಿ ನರಳುತ್ತಿರುವುದು—ಎಲ್ಲ ವಿಷಯವನ್ನೂ ಸಮೂಲಾಗ್ರವಾಗಿ ತಿಳಿಸಿ, ಶಾಂತಳ ಶುದ್ಧತೆಯ ಬಗ್ಗೆ ತಕ್ಕ ಪ್ರಮಾಣವಿತ್ತು, ಮುಂದೆ ಆ ಮನೆ, ಮನೆ

ತನವೆರಡೂ ಅವನಿಂದಲೆ ಬೆಳಗಬೇಕೆಂದೂ, ಯಾರ ತಪ್ಪು ಏನೆ ಇದ್ದರೂ ಕ್ಷಮಿಸಿ ದೊಡ್ಡ ಮನಸ್ಸು ಮಾಡಿ ಸೂರಪ್ಪನ ವಹಿವಾಟನ್ನು ವಹಿಸಿಕೊಂಡು, ಶಾಂತ ಮತ್ತು ಮಕ್ಕಳಲ್ಲಿ ಪ್ರೀತಿ–ವಿಶ್ವಾಸವಿರಿಸಿ ಹೊಂದಿಕೊಂಡು ಹೋಗಬೇಕೆಂದೂ ಗಂಟಿಗಟ್ಟಲೆ ಬೋಧಿಸಿದರು. ಅವರ ಅನುಭವಸಿದ್ಧವಾದ ಪ್ರಮಾಣ, ಧರ್ಮಸೂಕ್ಷ್ಮದ ಸಲಹೆ, ವ್ಯವಸ್ಥಿತವಾದ ವ್ಯವಹಾರ ಚಾತುರ್ಯ ಇವು ಯಾವುದೂ ಅವನ ಅಶುದ್ಧ ಮನಸ್ಸನ್ನು ಪರಿವರ್ತನೆಗೊಳಿಸಲು ಶಕ್ತವಾಗಲಿಲ್ಲ. ದೊಡ್ಡವರೆನ್ನುವುದನ್ನು ಮರೆತು ಅಭಿಮಾನ ತ್ಯಾಗ ಮಾಡಿ, ಕಣ್ಣೀರಿನ ಕಾವಿತ್ತು ಕಾಲು ಹಿಡಿದು ಗೋಳಾಡಿದರು. ಆಗಲೂ ಅವನೆದೆ ತುಂಬಿ ನಿಂತಿದ್ದ ಕಠಿಣತೆ ಕರಗಲಿಲ್ಲ; ಮನಸ್ಸನ್ನು ಹೊಕ್ಕಿದ್ದ ಸಂಶಯ ಭೂತ ದೇಹದಿಂದ ಬೇರೆಯಾಗಲಿಲ್ಲ. ನಾಣಿಯಂತಿದ್ದ ಚೊಚ್ಚಿಲು ಮಗುವಿನ ಸಾಕ್ಷಿಯಿತ್ತು ಶಾಂತಳ ಶುದ್ಧತೆಯ ಬಗ್ಗೆ ಅವರಿತ್ತ ಪ್ರಮಾಣವನ್ನೆಲ್ಲ ಕರಗಿಸಿ, ಸೂರಪ್ಪ–ಸುಶೀಲಮ್ಮನ ಬಗ್ಗೆ ಸ್ವಲ್ಪವೂ ಸಹಾನುಭೂತಿ ಅನುಕಂಪ ತೋರದೆ, 'ಪಾಪಕ್ಕೆ ತಕ್ಕ ಫಲವುಂಡರೆಂ'ಬ ಚುಚ್ಚು ನುಡಿಯ ಬಾಣ ಬಿಟ್ಟು ಒಂದು ಕ್ಷಣವೂ ಅಲ್ಲಿ ನಿಲ್ಲದೆ, ಭಟ್ಟರ ಮುಖದ ಮೇಲೆ ರಾಚಿ ಹೊಡೆದಂತೆದ್ದು ತನ್ನ ಕೋಣೆಯ ಬಲಮಗ್ಗುಲಿನ ಕೋಣೆಗೆ ಬಾಣದಂತೆ ಸರ್ರನೆ ನುಗ್ಗಿ ರಪ್ಪನೆ ಕದ ವಿಕ್ಕಿಕೊಂಡ.

ಭಟ್ಟರು ಮನಸ್ಸು ಪರಿವರ್ತನೆಯಾಗಿ ತಮ್ಮ ಬೇಡಿಕೆಯನ್ನು ಮನ್ನಿಸುವನೇನೊ ಎಂದು ಬಹಳ ಹೊತ್ತಿನ ವರೆಗೆ ಕಾದಿದ್ದು ನೋಡಿದರು. ಅವರ ನಿರೀಕ್ಷೆ ಫಲಿಸಲಿಲ್ಲ. ಒಂದೆರಡು ಬಾರಿ ತಾವೆ ಕದ ತಟ್ಟಿ ಮಾತಿಗೆ ಆಹ್ವಾನವಿತ್ತು ನೋಡಿದರು. ಅದೂ ವ್ಯರ್ಥವಾಯಿತು. ಪೆಚ್ಚು ಮುಖ ಹಾಕಿ ಅಲ್ಲಿಂದ ಹೊರಬಿದ್ದರು.

ಮುಂದೇನು ಮಾಡಬೇಕೆಂದೆ ಹೊಳೆಯಲಿಲ್ಲ. ಗೋಪಿಗೆ ತಿಳುವಳಿಕೆಯಿತ್ತು ಬೇಸತ್ತಿದ್ದರು. ಅವನನ್ನು ತಿದ್ದಲು ಮಾಡಿದ ಪ್ರಯತ್ನವೆಲ್ಲ ನೀರಿನಲ್ಲಿ ಹೋಮ ಮಾಡಿದಂತಾಗಿತ್ತು. ಯಾವುದರಿಂದಲೂ ದಾರಿಗೆ ಬರುವಂತೆ ಕಂಡುಬರಲಿಲ್ಲ; ಶಾಂತ ಮಕ್ಕಳನ್ನು ಕರೆದಿಟ್ಟು ಬಾಳಿಸುವ ಆಶೆಯ ಸುಳಿವೂ ಹತ್ತಲಿಲ್ಲ. ಮನುಷ್ಯತ್ವವಿಲ್ಲದವನಲ್ಲಿ ಆಶೆಯಿರಿಸಿ ತಲೆ ಕೆಡಿಸಿಕೊಳ್ಳುವುದಕ್ಕಿಂತ ಬಿಟ್ಟದ್ದು ಬಿಟ್ಟು ಹೋಗಲಿಯೆಂದು ಅವನಾಶೆ ತೊರೆದು ಸೂರಪ್ಪನ ವಹಿ

ವಾಟನ್ನೂ ಮಕ್ಕಳ ಹೊಣೆಗಾರಿಕೆಯನ್ನೂ ನಾಣಿಗೆ ಏಕೆ ವಹಿಸಿಬಿಡಬಾರ ದೆಂದು ವಿಚಾರಿಸತೊಡಗಿದರು.

ಹೇಗೂ ಅವನ ಚಿಕ್ಕಪ್ಪ, ಸಾಕುವ ಅಧಿಕಾರವೂ ಇದೆ, ಚೈತನ್ಯವೂ ಇದೆ, ಅನುಸರಿಸಿ ನಡೆಯಲು ಯೋಗ್ಯವಾದ ಆದರ್ಶ ಗುಣಗಳೂ ಇವೆ. ಅದೇ ಸರಿಯೆಂದು ಮನಸ್ಸಿನೊಂದು ಮುಖ ಬೆನ್ನು ಚಪ್ಪರಿಸಿದರೆ, ಮತ್ತೊಂದು ಮುಖ, ತಂದೆ ಜೀವ ಸಹಿತ ಕಣ್ಣೆದುರಿಗಿದ್ದು ದುಡಿಮೆ ಮಾಡುತಿದ್ದೂ ಆ ಮಕ್ಕಳ ಹೊಣೆಯನ್ನು ಚಿಕ್ಕಪ್ಪ ಹೊತ್ತರೆ ಜನರಿಗೆ ಆಡಿಕೊಳ್ಳಲು ಮತ್ತಷ್ಟು ಆಸ್ಪದ ಮಾಡಿಕೊಟ್ಟಂತಾಗುವುದೆಂದು ಬೆಜ್ಜರಿಕೆ ಹಾಕಿತು. ಆ ವಿಚಾರ ಗೊಂದಲದಲ್ಲಿ ಸಿಕ್ಕಿ ತಬ್ಬಿಬ್ಬಾದರು. ಏನು ಮಾಡಲೂ ತೋರದೆ ಅಲ್ಲಿಗೆ ಕೈ ಬಿಟ್ಟು ಸ್ವಲ್ಪ ದೂರ ಹಾಗೆ ಸಾಗಿದರು.

ಮನಸ್ಸು ಅವರ ಹಿಡಿತಕ್ಕೆ ಸಿಗದೆ ಮತ್ತೆ ಆ ವಿಚಾರಕ್ಕೆ ಜೋತು ಬಿದ್ದಿತು. ಎಷ್ಟು ಯೋಚಿಸಿದರೂ ತಕ್ಕ ಪರಿಹಾರ ದೊರಕಲೆ ಇಲ್ಲ. ಏನಾ ದರೊಂದು ತೊಡಕು ಬಂದು 'ಧುತ್ತೆಂ'ದು ನಿಲ್ಲುತಿತ್ತು. ಆ ಧರ್ಮಸಂಕಟ ದಿಂದ ಬಿಡುಗಡೆಯೂ ಆಗದೆ, ತಕ್ಕ ಪರಿಹಾರವೂ ದೊರೆಯದೆ ಜೀವ ಚಡಪಡಿ ಸುತ್ತಿರುವುದನ್ನು ಕಂಡು ತಮ್ಮಲ್ಲೆ ತಮಗೆ ಬೇಸರ ಬಂದು ಗೊಣಗುಟ್ಟುತ್ತ ನಡೆದರು.

'ಮಾನವನ ಜೀವಮಾನ ವಿಧಿಯ ಕೈಯಲ್ಲಿದೆಯೆಂದು ಗೊತ್ತಿದ್ದೂ ನಾನ್ಯಾಕೆ ಲಚ್ಚಪ್ಪನಿಗೆ ವಾಗ್ದಾನವಿತ್ತೆ ? ಸೂರಪ್ಪನಿಗೆ ಭರವಸೆಯಿತ್ತೆ ? ಹಾಗೆ ಮಾಡಿದ್ದು ತಪ್ಪಲ್ಲವೆ ? '

'ವಿದ್ಯೆಯ ಗರ್ವದಲ್ಲಿ, ಪ್ರಾಯದ ಮದದಲ್ಲಿ, ಸ್ನೇಹದ ಮಮತೆಯಲ್ಲಿ ನನ್ನಿಂದೆಲ್ಲವೂ ಸಾಧ್ಯ, ಏನು ಮಾಡಲೂ ಶಕ್ತನಿರುವೆನು ಎನ್ನುವ ಅಹಂ ಭಾವಕ್ಕೆ ಬಲಿಯಾಗಿ ಏನೆಲ್ಲ ಮಾಡಿ ಬಿಟ್ಟೆ; ಏನೆಲ್ಲ ನಡೆದು ಹೋಯಿತು.'

'ನಾನು ಯಃಕಶ್ಚಿತ್ ಮನುಷ್ಯ. ವಿಧಿಯ ಕೈವಾಡದ ಮುಂದೆ ನನ್ನ ದೇನೂ ನಡೆಯಲಿಲ್ಲ. ಅಂದ ಮೇಲೆ ಆ ಸಂಸಾರದ ವಿಷಯವನ್ನಲ್ಲಿಗೆ ಯಾಕೆ ಕೈ ಬಿಡಬಾರದು ?'

'ಎಷ್ಟೋ ಕರ್ಮಗಳಿಗೆ ಮೊದಲು ಸೋಲಾದರೂ ಅಂತ್ಯದಲ್ಲಿ ಗೆಲುವು ಸುಖ ಇದ್ದೇ ಇರುವುದು. ಹಾಗೆ ಇದಕ್ಕೂ ಇದ್ದರೆ ? ಇಷ್ಟೆಲ್ಲ ಸಹನೆಯಿಂದ

ದುಡಿದು ಸ್ವಲ್ಪದರಲ್ಲಿ ಕೆಡಿಸಿಕೊಳ್ಳುವುದೆ ?'

'ದುಃಖಕ್ಕೆ ಗೋಪಿ ಕಾರಣಕರ್ತನಾದಂತೆ, ಸುಖಕ್ಕೆ ನಾನು ಕಾರಣ ಕರ್ತನಾಗಿದ್ದರೂ ಇರಬಹುದು !'

'ದೇವರು ನನ್ನ ಸಹನೆಯನ್ನಳೆದು ನೋಡುತ್ತಿರುವನು. ಸತ್ಯಕ್ಕೆ ಜಯ ಖಂಡಿತವೆನ್ನುವುದೆಂದಿಗೂ ಸುಳ್ಳಾಗಲಾರದು. ನನ್ನ ಪ್ರಯತ್ನದಲ್ಲಿ ನಂಬಿಕೆ ಯಿರಿಸಿ ಅವರನ್ನು ಯಾವುದಾದರೊಂದು ದಡ ಮುಟ್ಟಿಸಲೆ ಬೇಕು.'

'ಹೇಗೂ ತಪ್ಪು ಕಲ್ಪನೆಯಿಂದಾದ ಅನಾಹುತವನ್ನು ಗೋಪಿಯ ತಲೆ ಯಲ್ಲಿ ತುಂಬಿ ಬಂದಿರುವೆನು. ತನ್ನಿಂದಾಗಿ ಸೂರಪ್ಪನ ಮನೆತನಕ್ಕುಂಟಾದ ಸಾವು–ನೋವು ಅವನ ಮನಸ್ಸನ್ನು ತಿದ್ದದೆ ಎಂದಿಗೂ ಇರಲಾರದು. ನನ್ನೊ ಡನೆ ಒರಟುತ್ತರವಿತ್ತಿದ್ದರೂ ನಾಲ್ಕಾರು ದಿನಗಳಲ್ಲಿ ತನ್ನ ತಪ್ಪನ್ನು ತಿದ್ದಿಕೊಂಡು ಶಾಂತಳನ್ನು ಕಾಣಲು ಬಂದೆ ಬರುವನು. ಒಂದು ಸಮಯ ಬರದಿದ್ದರೆ, ಲೋಕ ಆಡಿದಂತೆ ಆಡಿಕೊಳ್ಳಲಿಯೆಂದು ಎಲ್ಲವನ್ನೂ ನಾಣಿಗೆ ವಹಿಸಿ ಬಿಡು ವೆನು—' ಹಾಗೆಂದು ಸುತ್ತಿ ಸುತ್ತಿ, ಅದೇ ನಿರ್ಧಾರಕ್ಕೆ ಬಂದು ನಾಣಿ ಮನೆಯ ಹೊಸ್ತಿಲು ತುಳಿದರು.

ಅಳುತ್ತಿದ್ದ ತನ್ನ ಮಗುವನ್ನೆತ್ತಿಕೊಂಡು ಸಮಾಧಾನಪಡಿಸುತ್ತ ಅತ್ತಿಂ ದಿತ್ತ ಲಾಲಿ ಹೊಡೆಯುತ್ತಿದ್ದ ನಾಣಿ, ಬಾಗಿಲಲ್ಲಿ ಭಟ್ಟರನ್ನು ಕಂಡೊಡನೆ ಅವರ ಬಳಿ ಜಿಗಿದು ಹಾರಿ ಭಕ್ತಿಪೂರ್ವಕವಾದ ಸ್ವಾಗತ ನೀಡಿದ. ಹೊರಗೆ ಭಟ್ಟರ ಧ್ವನಿ ಕೇಳಿಸಿದ್ದೆ ತಡ, ಕೆಲಸದಲ್ಲಿದ್ದ ರಂಗಮ್ಮನೂ ಮಾಡುತ್ತಿದ್ದ ಕೆಲಸವನ್ನಲ್ಲೆ ಬಿಟ್ಟು, ಸೂರಪ್ಪನ ಮನೆಯ ಸುದ್ದಿಯನ್ನು ವಿವರವಾಗಿ ತಿಳಿ ಯಲು ಹೊರಗೆ ಹಾರಿ ಬಂದರು.

ಅವರನ್ನು ಕಂಡೊಡನೆ ಭಟ್ಟರ ದುಃಖದ ಕಟ್ಟೆಯೊಡೆಯಿತು. ಬಿಕ್ಕಳಿಸಿ ಅಳತೊಡಗಿದರು. ರಂಗಮ್ಮನ ಕಣ್ಣೂ ನೀರು ಕಾರಿತು. ನಾಣಿಯ ಮುಖವೂ ವ್ಯಸನದಿಂದ ಮುದುಡಿತು. ಸ್ವಲ್ಪ ಹೊತ್ತು ಮೂಕರೋದನ ತನ್ನ ರುದ್ರ ನರ್ತನದಿಂದ ಆ ವಾತಾವರಣವನ್ನು ಮಂಕುಗೊಳಿಸಿತು.

ಅತ್ತು ಅತ್ತು ಹೃದಯ ಹಗುರವಾದ ಮೇಲೆ ಭಟ್ಟರು ತಾವು ಊರು ಬಿಟ್ಟು ಹೋದಂದಿನಿಂದ ಅಂದಿನ ವರೆಗೆ ನಡೆದ ಎಲ್ಲ ವಿಷಯವನ್ನೂ ಕಣ್ಣೀರಿ ನಲ್ಲಿ ಅದ್ದಿ ಅದ್ದಿ ಅವರ ಮುಂದಿಟ್ಟರು. ಮತ್ತೆ ಆ ವಾತಾವರಣ ಗೋಳಿನ

ಬೀಡಾಯಿತು; ಕಣ್ಣೀರಿನ ಪ್ರವಾಹ ಒಂದಕ್ಕೊಂದು ಕಲೆತು ಮೊರೆಯುತ್ತ ಹರಿಯಿತು.

ನಾಣಿಯಿಂದ ಆ ರುದ್ರನೋಟ ನೋಡಲು ಸಾಧ್ಯವಿಲ್ಲ. ಆ ಸಾವು—ನೋವಿಗೆ ಕಾರಣಕರ್ತನಾದ ಅಣ್ಣನ ಮೇಲೆ ಕೋಪ ಕಾರತೊಡಗಿದ. ಭಟ್ಟ ರೊಡನೆ ತನ್ನ ಬಗ್ಗೆ ಅಂದ ಮಾತಂತೂ ಪಿತ್ಥ ಕೆರಳಿಸಿತ್ತು. ಥಟ್ಟನೆ ಏನೊ ನೆನಪಾದಂತಾಗಿ ಹೆಜ್ಜೆ ಮುಂದಿರಿಸಿದ. ಮುಖ ರುದ್ರ ಗಂಭೀರವಾಯಿತು. ಕಣ್ಣೀರಿನ ನದಿಗೆ ಅಡ್ಡಗಟ್ಟೆ ಕಟ್ಟಿ ಕೋಪದಿಂದ ನಡುಗುತ್ತಿರುವ ಕೈಗಳಲ್ಲಿ ಮಗುವನ್ನೆತ್ತಿ ಭಟ್ಟರ ಕಣ್ಣ ಮುಂದೆ ಹಿಡಿದು ಹೇಳಿದ,

“ಇದಕ್ಕೇನುತ್ತರ ಕೊಡುವನಂತೆ ? ಈ ಮಗು ತದ್ರೂಪು ಅವನನ್ನೆ ಹೊತ್ತಿದೆ; ಕಣ್ಣು—ಕಿವಿ—ಮೂಗು - ಬಣ್ಣ ಯಾವುದರಲ್ಲೂ ವ್ಯತ್ಯಾಸವಿಲ್ಲ. ಅವನಂತೆ ನಾನೂ ತಪ್ಪು ತಿಳಿದು ಸರಸುವನ್ನು ಅಪವಾದಕ್ಕೆ ಗುರಿಪಡಿಸಬಹುದಲ್ಲ. ಮೂರ್ಖ ಎಲ್ಲೊ ! ತಲೆಯಲ್ಲಿ ಸ್ವಲ್ಪವಾದರೂ ಬುದ್ಧಿಯಿದ್ದಿದ್ದರೆ ಬಾಳೆಂದಿಗೂ ಹೀಗಾಗುತ್ತಿರಲಿಲ್ಲ. ಹಾಳಾಗಿ ಹೋಗಲಿ, ಇನ್ನೆಂದೂ ಅವನಲ್ಲಿ ಹಲ್ಲು ಬಾಯಿ ಗಿಂಜಬೇಡಿ. ಆ ಮಕ್ಕಳ ಜವಾಬ್ದಾರಿ ನನಗಿರಲಿ, ಅವುಗಳಿಗೆ ನಾನೆ ತಂದೆಯಾಗಿ ನಿಲ್ಲುವೆನು—” ಎಂದು ಮಗುವನ್ನು ಹೆಗಲಿಗೆ ಹಾಕಿ ಅತ್ತಿತ್ತ ಅಲೆಯ ತೊಡಗಿದ.

ಭಟ್ಟರಿಗೆ ‘ಈ ಮಗು ತದ್ರೂಪು ಅವನನ್ನೆ ಹೊತ್ತಿದೆ’ ಎನ್ನುವುದನ್ನು ಕೇಳಿ ಪರಮ ಸಂತೋಷವಾಯಿತು. ಉಳಿದ ಯಾವ ಮಾತನ್ನೂ ಕಿವಿಗೆ ಹಾಕಿಕೊಳ್ಳದೆ ಮೈಯೆಲ್ಲ ಕಣ್ಣಾಗಿ, ಬಿಟ್ಟ ಕಣ್ಣು, ಬಿಟ್ಟ ಬಾಯಂತೆ ಮಗುವನ್ನು ಮನಸ್ಸಿನಲ್ಲೆ ಗೋಪಿಗೆ ಹೋಲಿಸಿ ನೋಡಿ ತೃಪ್ತಿ ತಳೆದು, ತಲೆ ಕುಣಿಸುತ್ತ ಥಟ್ಟನೆ ಮೇಲೆದ್ದು, ನಾಣಿಯ ಕೈಯಿಂದ ಮಗುವನ್ನೆತ್ತಿಕೊಂಡು ಸೊಂಟಕ್ಕೇರಿಸಿ ಸಂತೋಷದಿಂದ ಹೇಳಿದರು,

“ಆ ಮೂರ್ಖನ ಪ್ರಶ್ನೆಗೆ ದೇವರೆ ಉತ್ತರವಿತ್ತಿದ್ದಾನೆ. ಇದರಿಂದಲೂ ದಾರಿಗೆ ಬರದಿದ್ದರೆ ಮನುಷ್ಯನಲ್ಲವೆಂದು ಕೈ ಸಡಿಲು ಬಿಟ್ಟುಬಿಡುವುದು” ಎಂದು ರಂಗಮ್ಮ ನಾಣಿ ‘ಊಟ ಮಾಡಿಕೊಂಡು ಹೋಗಿಯೆಂ’ದು ಒತ್ತಾಯಪಡಿಸುತ್ತಿದ್ದರೂ ಕೇಳದೆ, ‘ಈಗ ಬಂದೆ’ ಎಂದು ಹೋಗಹೋಗುತ್ತಲೆ ಅಂದು, ಹೆಜ್ಜೆಗೆ ವೇಗ ತುಂಬಿದರು.

ಅಂದು ರವಿವಾರವಾದ್ದರಿಂದ ಗೋಪಿ ಮನೆಯಲ್ಲೆ ಇದ್ದನು. ದೂರದಲ್ಲಿ ಕುಂಟುಹಾಕಿ ಬರುತ್ತಿದ್ದ ಭಟ್ಟರನ್ನು ಕಂಡು ಅಂದೇಕೊ ಅವನ ಹೊಟ್ಟೆಯಲ್ಲಿ ಸಂಕಟವೆದ್ದಿತು. ತನ್ನ ಆ ಪಾಪವನ್ನು ನೆನೆದು ಒಮ್ಮೆ ಮೈ ಚುಂಗರಿಸಿದ. ತನಗೆ ಬುದ್ಧಿ ತಿಳಿದಂದಿನಿಂದ ಅಂದಿನ ವರೆಗೆ ತಮ್ಮಭಿವೃದ್ಧಿಗಾಗಿ ಅವರು ಪಡುತ್ತಿದ್ದ ಶ್ರಮ, ತೋರಿಸುತಿದ್ದ ಸಹಾನುಭೂತಿಯನ್ನು ನೆನೆದು ಕಣ್ಣು ಒದ್ದೆಯಾಯಿತು. ಅಷ್ಟರಲ್ಲಿ ಭಟ್ಟರು ಮನೆಯ ಹತ್ತಿರ ಬಂದು ಬಿಟ್ಟಿದ್ದರು. ತನ್ನ ದೌರ್ಬಲ್ಯವನ್ನು ತೋರಿಸಿಕೊಳ್ಳಲು ನಾಚಿ, ಕಣ್ಣು ಒರೆಸಿಕೊಳ್ಳುತ್ತ ಏನೂ ತಿಳಿಯದವನಂತೆ ಹೋಗಿ ತನ್ನ ಕೊಠಡಿಯಲ್ಲಿರುವ ಮಂಚದ ಮೇಲೆ ದೇಹವೂರಿದನು.

ಭಟ್ಟರು ಬಂದವರೆ ಗೋಪಿಯ ಅನುಮತಿಯನ್ನು ಪಡೆಯದೆ ಕೊಠಡಿಗೆ ಕಾಲಿಟ್ಟರು. ಆ ಮಗುವಿನಿಂದ ಅವರಿಗೆ ಎಲ್ಲಿಲ್ಲದ ಉತ್ಸಾಹ-ಧೈರ್ಯ ತುಂಬಿ ಬಂದಿತ್ತು.

ಗೋಪಿಗೂ ಹಾಗೆ, ಅಂದು ಬೆಳಿಗ್ಗೆ ಭಟ್ಟರಿತ್ತು ಹೋಗಿದ್ದ ತಿಳುವಳಿಕೆಯಿಂದ ಮನಸ್ಸು ಸ್ವಲ್ಪ ಹಣ್ಣಾಗಿತ್ತು. ಅವರೆಗೆ ಸುಪ್ತವಾಗಡಗಿದ್ದ ಸಂಸ್ಕೃತಿ ಸಭ್ಯತೆ ಮೆಲ್ಲನೆ ತಲೆಯೆತ್ತುತ್ತಿದ್ದವು. ಅವರ ಬರುವಿಕೆಯನ್ನು ತಡೆಯಲಿಲ್ಲ; ಆದರಿಂದ ಭಟ್ಟರಿಗೆ ಮತ್ತಷ್ಟು ಧೈರ್ಯ ಬಂತು. ದಿಟ್ಟತನದಿಂದ ಹೋಗಿ ಅವನೆದುರಿಗಿದ್ದ ಆಸನವೊಂದರಲ್ಲಿ ದೇಹವೂರಿ ಗಂಟಲು ಸರಿಪಡಿಸಿಕೊಂಡು ಮಾತಿಗೆ ಮೊದಲಿಟ್ಟರು,

"ನಿನ್ನ ಪ್ರಶ್ನೆಗುತ್ತರ ತಂದಿರುವೆನು ಗೋಪಿ, ಇನ್ನು ತಿಪ್ಪರಲಾಗ ಹಾಕಿದರೂ ನನ್ನ ಬಾಯಿ ಕಟ್ಟಿಸಲು ನಿನ್ನಿಂದ ಸಾಧ್ಯವಾಗುವುದಿಲ್ಲ" ಎಂದು ಮಗುವನ್ನು ಅವನ ಮುಖಕ್ಕೆದುರಾಗಿ ಕೂರಿಸಿಕೊಂಡು ಮಾತು ಮುಂದುವರಿಸಿದರು, "ಈ ಮಗುವನ್ನು ಚೆನ್ನಾಗಿ ದೃಷ್ಟಿಯಿರಿಸಿ ನೋಡು, ನಿನ್ನ ಬದುಕಿನ ಸಮಸ್ಯೆಯನ್ನದೆ ಬಿಡಿಸುವುದು."

ಭಟ್ಟರ ಮಾತು ಗೋಪಿಯ ಕಿವಿಗೆ ಬಿತ್ತು. ಮಗುವನ್ನು ನೋಡದೆಯೆ ಆ ಮಾತಿನ ಅರ್ಥ ತಿಳಿಯಲು ಪ್ರಯತ್ನ ಮಾಡಿ ಸೋತ. ನೋಡುವ ಧೈರ್ಯವೂ ಆಗಲಿಲ್ಲ. ತನ್ನ ಮನಸ್ಸನ್ನು ಬದಲಾಯಿಸಲು ಏನೋ ಒಳ

ಸಂಚು ನಡೆಸುತ್ತಿರಬಹುದೆಂದು ಹೆದರಿದ. ಅತ್ತ ಕಡೆಗೆ ಮರೆತೂ ಕಣ್ಣಾಡಿಸ ಲಿಲ್ಲ.

ಅವನ ಹೊಯ್ದಾಟವನ್ನರ್ಥ ಮಾಡಿಕೊಂಡು ಹೇಳಿದರು ಭಟ್ಟರು,

"ಹೆದರಬೇಡ, ಇದು ನಿನ್ನ ಮಗನಲ್ಲ, ನಾಣಿಯದು; ಧೈರ್ಯವಾಗಿ ಅದರ ರೂಪನ್ನಳೆದು ನೋಡು. ಉದಾಸೀನ ಮಾಡಿದೆಯೆಂದರೆ ನಿನ್ನ ಸಮಸ್ಯೆ ಹಾಗೇ ಉಳಿದು ಕಡೆವರೆಗೂ ದುಃಖಪಡಬೇಕಾದೀತು! ಇಂಥಾ ಸಮಯವನ್ನು ಕಳೆದುಕೊಳ್ಳಬೇಡ. ಮಿಥ್ಯಾ ಊಹೆಯಿಂದ ಈವರೆಗಾದ ಸಾವು–ನೋವೆ ಸಾಕು; ಇನ್ನಾದರೂ ಎಲ್ಲರ ಬಾಳಿನಲ್ಲಿ ಸ್ವಲ್ಪ ಶಾಂತಿಯುಂ ಟಾಗಲಿ."

ನಾಣಿಯ ಮಗುವೆಂದು ಕೇಳಿ ಸ್ವಲ್ಪ ಧೈರ್ಯ ಬಂತು. ಏನಿರಬಹು ದೆಂದು ತಿಳಿಯಲು ನೋಡುವ ಮನಸ್ಸು ಮಾಡಿದ. ಮಗುವಿನಲ್ಲಿ ನೆಟ್ಟ ಕಣ್ಣು ಚಲಿಸದೆ ಹಾಗೆ ನಿಂತಿತು. ರೂಪನ್ನಳೆದು ನೋಡುತ್ತಿದ್ದಂತೆ ಕುತೂ ಹಲ ಕೆರಳಿತು. ಭಟ್ಟರ ಮಾತು ನಿಜವಾಗಿತ್ತು. ಆ ಮಗು ತನ್ನ ಸಮಸ್ಯೆ ಗುತ್ತರವಿತ್ತಿದೆ. ತದ್ರೂಪು ತನ್ನನ್ನೆ ಹೋಲುತ್ತಿರುವ ಮಗು ನಾಣಿಯದಾಗಿ ದ್ದರೆ, ಶಾಂತಳಲ್ಲಿ ತಾನು ತಳೆದ ಭಾವನೆ ಸುಳ್ಳಾಗಿ ಕಡುಪಾಪಿಯಾಗುಳಿಯ ಬೇಕಾಗುವುದು. ಹಾಗಿಲ್ಲದೆ ತನ್ನ ಬಾಯಿ ಕಟ್ಟಿಸಲು ತನ್ನದೆ ಆದ ಮಗು ವನ್ನು ತೆಗೆದುಕೊಂಡು ಬಂದು ನಾಣಿಯದೆಂದು ಸುಳ್ಳಾಡಿದ್ದರೆ? ಹಾಗಾಗಲು ಅವಕಾಶವೂ ಇದೆ. ಇಬ್ಬರೂ ಹೆಚ್ಚು ಕಡಿಮೆ ಒಂದೆ ಕಾಲದಲ್ಲಿ ಹಡೆದಿದ್ದಾರೆ. ಹೇಗೆ ನಿರ್ಣಯಿಸುವುದು? ಎಂದು ಅಳೆದು ಹುಯಿದು ಮಾಡುವುದರಲ್ಲೇ ಭಟ್ಟರು ಅವನಿಂಗಿತವನ್ನು ಮುಖ ನೋಡಿಯೆ ತಿಳಿದು, ಅವನು ಮಾತನಾ ಡುವ ಮೊದಲೆ ಬೆಜ್ಜರಿಕೆ ಹಾಕಿ ಹೇಳಿದರು,

"ನಾಣಿ ಹೇಳಿದ್ದಾನೆ—'ನಮ್ಮಣ್ಣ ನನ್ನ ಪೇಲಿಲ್ಲದ ಅಪರಾಧ ತುಂಬಿ ಒಂದು ಸಂಸಾರವನ್ನೆ ನಾಶ ಮಾಡಿರುವನು. ಅವನನ್ನು ನಾನೆಂದಿಗೂ ಸುಮ್ಮನೆ ಬಿಡುವುದಿಲ್ಲ. ಈ ಮಗುವನ್ನು ಸಾಕ್ಷಿಯಿರಿಸಿ, ನನ್ನ ಹೆಂಡತಿಯಲ್ಲಿ ಅತ್ಯಾಚಾರ ಮಾಡಿದ್ದಾನೆಂದು ಕೋರ್ಟಿನಲ್ಲಿ ದೂರುಹಾಕುವೆನೆಂ'ದು. ಇದಕ್ಕೆ ನೀನೇನನ್ನುವೆ?"

ಆ ಮಾತಿನಿಂದ ಗೋಪಿ ಭೂಮಿಗಿಳಿದು ಹೋದ. ವಿಷಯ ಅಲ್ಲಿವರೆಗೆ

ಹೋಗಿ ಮುಟ್ಟುವುದೆಂದು ಕನಸು-ಮನಸಿನಲ್ಲೂ ತಿಳಿದಿರಲಿಲ್ಲ. ತನ್ನಿಂದ ನೊಂದ ನಾಣಿ ಹಾಗೆ ಮಾಡಿದರೂ ಮಾಡಬಹುದು! ಎಲ್ಲಕ್ಕಿಂತ ಹೆಚ್ಚಾಗಿ ಆ ಮಗು ನಾಣಿಯದೆ ಹೌದೆಂದು ಆ ಮಾತಿನಿಂದ ವ್ಯಕ್ತವಾಗುವುದು. ಅವನು ನಿರಪರಾಧಿಯೆನ್ನಲು ಇದಕ್ಕಿಂತ ಸಾಕ್ಷಿ ಬೇಕಿಲ್ಲ. ಅಲ್ಲದೆ ಅಂದು ನಡೆದ ಘಟನೆಯೂ ಅವನ ಸಜ್ಜನಿಕೆಯನ್ನು ಎತ್ತಿ ಹಿಡಿಯುವುದು.

ಅಂದು ನಾನವನನ್ನು ಕೊಲ್ಲುವ ಬಯಕೆ ಹೊತ್ತು ಹೋದಂದು, ತನ್ನ ಬಗ್ಗೆ ಎಷ್ಟು ಪ್ರೀತಿ ವಾತ್ಸಲ್ಯ ತೋರಿದ. ತನ್ನ ಬಾಳು ಹಾಳಾದ ಬಗ್ಗೆ ಅವನಲ್ಲೆಷ್ಟು ಮರುಕವಿತ್ತು! ಅವನ-ಶಾಂತಳ ಶುದ್ಧತೆಯ ಬಗ್ಗೆ ಹೇಗೆ ಹೃದಯ ಬಿಚ್ಚಿ ತೆರೆದಿಟ್ಟ! ಅವನ ನಡವಳಿಕೆಯಲ್ಲಿ ಮೋಸ-ಕಪಟದ ಚಿಹ್ನೆಯೆ ಇರಲಿಲ್ಲ. ಅದಕ್ಕೆ ಸಾಕ್ಷಿ ತನ್ನ ಮನಸ್ಸು ಕರಗಿದ್ದೆ; ನಾನು ಹೊತ್ತು ಹೋದ ದುರ್ಭಾವನೆ ಕಳೆದು ಬಂದದ್ದೆ!

ಈಗ ಹಿಂದೆ ಹಿಂದೆ ಎಲ್ಲ ಮಗುಚಿ ನೋಡಿದರೆ ನಾನೆ ಅಪರಾಧಿಯಾಗಿ ನಿಲ್ಲುವೆನು. ಕೇವಲ ಊಹೆಯ ಮೇಲಿಷ್ಟು ಬೆಳೆಸಿಕೊಂಡು ಬಂದದ್ದೆ ತಪ್ಪು. ಬೇಕೆಂದು ನನ್ನ ಜೀವನದಲ್ಲಿ ನಾನೆ ಕಲ್ಲು ಹಾಕಿಕೊಂಡೆ. ಈಗ ಯಾವ ಬಾಯಲ್ಲಿ ತಪ್ಪನ್ನೊಪ್ಪಿಕೊಳ್ಳಲಿ? ಒಪ್ಪಿಕೊಳ್ಳದಿದ್ದರೆ ಅನ್ಯಾಯವಾಗಿ ನಾನು ಎಲ್ಲರೆದುರಿನಲ್ಲಿ ಅಪವಾದಕ್ಕೆ ಗುರಿಯಾಗಬೇಕಾಗುವುದು; ಮಕ್ಕಳೂ ಕೈಬಿಟ್ಟು ಹೋಗುವರು. ಏನು ಮಾಡಲಿ? ಹೀಗೆಂದು ಯೋಚಿಸುತ್ತಿರುವಲ್ಲೇ ಭಟ್ಟರು,

"ಏನು, ಇಷ್ಟಾದರೂ ಶಾಂತಳಲ್ಲಿ ಶುದ್ಧತೆ ಕಾಣಲು ನಿನ್ನ ಮನಸ್ಸೊಪ್ಪುವುದಿಲ್ಲವೆ? ನಾಣಿಯು ಇಚ್ಛೆಯಂತೆ ವಿಷಯ ಕೋರ್ಟಿನಲ್ಲೆ ತೀರ್ಮಾನವಾಗಲಿಯೆಂದು ನಿನ್ನಭಿಪ್ರಾಯವೋ?" ಎಂದು ಮತ್ತೊಂದು ಬೆದರು ಬಾಣ ಬಿಟ್ಟರು.

ಗೋಪಿಗೆ ಉಭಯ ಸಂಕಟಕ್ಕಿಟ್ಟಿತು. ಥಟ್ಟನೆ ಯಾವುದೊಂದು ನಿರ್ಧರಕ್ಕೂ ಬರಲಾರದೆ ಹೇಳಿದ,

"ಯಾವುದೂ ನಾಳೆ ನಿಮಗೆ ತಿಳಿಸುವೆನು. ಯೋಚಿಸದೆ ಥಟ್ಟನೆ ಉತ್ತರ ಕೊಡುವಂಥ ವಿಷಯುವಲ್ಲ, ಅದು."

"ಹಾಗೆ ಮಾಡು, ನಾಳೆ ಎಷ್ಟು ಹೊತ್ತಿಗೆ ಬಂದು ಕಾಣಲಿ?"

"ನೀವು ಶ್ರಮ ತೆಗೆದುಕೊಳ್ಳಬೇಡಿ, ನಾನೇ ಬಂದು ನಿಮ್ಮನ್ನು ಕಾಣು ವೆನು."

"ಹಾಗೆ ಆಗಲಿ, ನಾನಿನ್ನು ಬರುವೆನು" ಎಂದು ಮಗುವನ್ನು ಹೆಗಲಿಗೆ ಹಾಕಿ ಹೊರಟರು.

## ೨೫

ಭಟ್ಟರು ಹೋದನಂತರ ಗೋಪಿ ಕದವಿಕ್ಕಿ ಬಂದು ಹಾಸಿಗೆಯಲ್ಲಿ ಧೊಪ್ಪನೆ ಉರುಳಿದ. ಊಟ-ತಿಂಡಿ ಏನೂ ಬೇಡವಾಯಿತು. ಬೇಕೆಂದು ಬದುಕನ್ನು ಸಾವಿಗೊಯ್ದು ತನ್ನಲ್ಲಿ ತನಗೆ ತಿರಸ್ಕಾರವುಂಟಾಯಿತು. ಮೊದಲು ತನ್ನ ಬದುಕಿಗೆ ಅಳಿವೊ ಉಳಿವೊ ಎನ್ನುವುದನ್ನು ನಿರ್ಧರಿಸಿ ಮುಂದಿನ ಕೆಲಸ ಮಾಡುವುದೆಂದು ತಲೆಗೆ ಒಂದೆ ಸಮನೆ ಕೆಲಸ ಕೊಟ್ಟ. ಹಿಂದೆಂದೂ ಇಷ್ಟು ತಲೆ ಕಾಯಿಸಿರಲಿಲ್ಲ. ಒಮ್ಮೊಮ್ಮೆ ತನ್ನ ನಡವಳಿಕೆ ಬಗ್ಗೆ ತನಗೇ ಹೇಸಿಗೆ ಬಂದು ಅದರ ವಿಚಾರಣೆಗಾಗಿ ತಲೆಗೆ ಕಾವು ಕೊಡುತ್ತಿದ್ದ. ಸ್ನೇಹಿತರ ಚಾಡಿ ನುಡಿ, ತನ್ನ ದೌರ್ಬಲ್ಯದಿಂದಾಗಿ ಒಂದು ನಿರ್ಧಾರಕ್ಕೆ ಬರಲಾರದೆ ಆ ಕಾವು ಹಾಗೆ ಕರಗುತಿತ್ತು. ತನ್ನ ಹಿಡಿತಕ್ಕೆ ಸಿಗದೆ ಬೆಳೆದು ಬಂದ ಆ ಪೈಶಾಚಿಕ ಭಾವನೆಯನ್ನು ಕೊಲ್ಲಲಾರದೆ ಅದರ ಬೆಳವಣಿಗೆಗೇ ಪ್ರೋತ್ಸಾಹ ಕೊಡುತ್ತ ಬಂದ.

ತನ್ನ ಪಾಪದ ಕಣ್ಣಿಗೆ ನಿರಪರಾಧಿನಿಯಾದ ಶಾಂತಳ ಚಲನ–ವಲನ ವೆಲ್ಲ ತಪ್ಪಾಗಿ ಕಾಣುತ್ತಿದ್ದವು. ಅವಳ ಶುದ್ಧತೆಯ ಬಗ್ಗೆ ಭಟ್ಟರು, ಮಾವ ಆಗಾಗ್ಗೆ ಭರವಸೆ ಕೊಡುತ್ತಲೆ ಬಂದಿದ್ದರು. ತನ್ನ ರಾಕ್ಷಸ ನಿರ್ಧಾರದ ಕಾವಿನ ಮುಂದೆ ಅವರಿತ್ತ ಭರವಸೆಯೆಲ್ಲ ಮಂಜಿನಂತೆ ಕರಗಿ ಹೋಗಿತ್ತು. ಶಾಂತಳ ಸುಖಕ್ಕಾಗಿ, ತಮ್ಮ ಮರ್ಯಾದೆ ಮುಚ್ಚಿಕೊಳ್ಳುವ ಸಲುವಾಗಿ, ಸುಳ್ಳಾಡುತ್ತಿ ರುವರೆಂದೆ ತಿಳಿದಿದ್ದ. ನಾಣಿಯ ಮಗು ತನ್ನಂತೆ ಹುಟ್ಟಿ ಈವರೆಗೆ ಬೆಳೆಸಿ ಕೊಂಡು ಬಂದಿದ್ದ ಭಾವನೆಯನ್ನೆಲ್ಲ ತಲೆಬುಡ ಮಾಡಿತ್ತು. ಈಗೇನು ಮಾಡ ಬೇಕೆಂದೆ ಗೊತ್ತಾಗಲಿಲ್ಲ. ನಿರಪರಾಧಿಯಾದ ನಾಣಿಯ ಮೇಲೆ ಅತ್ಯಾಚಾರದ

ಅಪರಾಧ ಹೇರಿ, ಬೇಕೆಂದು ಅವನ ಶತ್ರುತ್ವವನ್ನು ಬೆಳೆಸಿಕೊಂಡು ಬಂದಿದ್ದ. ಅದು ಬೆಟ್ಟದಂತೆ ಬೆಳೆದು ನಿಂತಿದೆ, ಕರಗಿಸುವುದಾದರೂ ಹೇಗೆ? ತಾನಿತ್ತ ನೋವು ಮರ್ಮವನ್ನು ಸುಟ್ಟು ಹಾಕಿದೆಯೆನ್ನುವುದರಲ್ಲಿ ಸಂದೇಹವಿಲ್ಲ, ಅದನ್ನ ವನು ಮರೆಯಬಲ್ಲನೆ? ತಾನೀಗ ಏನು ಮಾಡಿದರೆ ತಾನೆ ಆ ಪಾಪ ಹೋದೀತು? ಆ ನೋವು ಕರಗೀತು? ನಾಣಿಯೊಡನೆ ನಾನ್ಯಾಕೆ ಹಾಗೆ ನಡೆದುಕೊಂಡೆ? ಚಿಕ್ಕಂದಿನಿಂದಲೂ ವಿಧೇಯನಾಗಿಯೆ ನಡೆದುಕೊಂಡು ಬಂದಿರುವನು! ಎಂದೂ ನನ್ನಲ್ಲಿ ಅಗೌರವ ತೋರಿಲ್ಲ. ಎಷ್ಟೋ ಬಾರಿ ಅವನ ಸರಳತನ ವಿಶಾಲ ಭಾವನೆಗಳಿಗೆ ನಾನೆ ಅಸೂಯೆ ಪಟ್ಟಿರುವೆನು. ಹಾಗೆಂದುಕೊಂಡಾಗ ನಾಣಿಯ ಹಿರಿಯ ಗುಣವನ್ನು ಪರಿಚಯ ಮಾಡಿ ಕೊಡುವ ನಾಲ್ಕಾರು ಘಟನೆಗಳು ಸಜೀವವಾಗಿ ಕಣ್ಣ ಮುಂದೆ ಹಾದು ಹೋದುವು.

ಗೋಪಿಗೆ ಚಲನಚಿತ್ರ ನೋಡುವ ಹುಚ್ಚು ಬಹಳ. ಅವನ ಅಭಿರುಚಿ ತಿಳಿದು ಆಗಾಗ ಲಚ್ಚಪ್ಪ ಪಿಕ್ಚರಿಗೆ ಕರೆದುಕೊಂಡು ಹೋಗುತಿದ್ದರು. ಆದರೂ ಅವನಾಶೆ ಹಿಂಗಲಿಲ್ಲ. ಬದಲಾವಣೆಯಿಂದ ಪ್ರತಿಯೊಂದು ಚಿತ್ರವನ್ನು ನೋಡಲು ಹಾತೊರೆಯುತಿತ್ತು ಜೀವ. ತಣಿಸಿಕೊಳ್ಳಲು ಉಪಾಯ ಹುಡುಕ ತೊಡಗಿದ, ಸ್ವಲ್ಪ ಹೊತ್ತು ಕಸರತ್ತು ಮಾಡಿದಮೇಲೆ ಯುಕ್ತಿ ಹೊಳೆಯಿತು. ತಕ್ಷಣ ಕಾರ್ಯರೂಪದಲ್ಲಿ ತಂದ.

ಲಚ್ಚಪ್ಪ ಸ್ನಾನಕ್ಕೆ ಹೋದ ಸಮಯ ನೋಡಿ, ಅವರ ಕೊಠಡಿಗೆ ಹೋಗಿ ಮೆಲ್ಲನೆ ಕದವಿಕ್ಕಿ ಜೇಬನ್ನು ಶೋಧಿಸಿದ. ಬೀಗದ ಕೈಗೊಂಚಲು ಸಿಕ್ಕಿತು. ಮೆಟ್ಟಿಂಗಾಲು ಹಾಕಿ ಹಣದ ಪೆಟ್ಟಿಗೆಯ ಬಳಿ ಹೋಗಿ ಗಾಬರಿ ಯಿಂದ ನಡುಗುತ್ತಿರುವ ಕೈಗಳಿಂದ ಬೀಗ ತೆರೆದು, ಹತ್ತು ರೂಪಾಯಿನ ನೋಟೊಂದನ್ನು ಜೇಬಿಗಿಳಿಸಿ ಬಿಟ್ಟು ಹಾಗೆ ಬೀಗ ಹಾಕಿ, ಯಥಾಸ್ಥಾನದಲ್ಲಿ ರಿಸಿ ಕದ ತೆರೆದುಕೊಂಡು ಬಂದು ತನ್ನ ಕೊಠಡಿಗೆ ತೂರಿದ.

ಲಚ್ಚಪ್ಪ ಪ್ರತಿದಿನ ಅಂಗಡಿಗೆ ಹೋಗುವ ಮುನ್ನ ಹಣವನ್ನು ಎಣಿಸಿ ತಮಗೆ ಬೇಕಾದಷ್ಟನ್ನು ತೆಗೆದುಕೊಂಡು ಉಳಿದದ್ದನ್ನಲ್ಲೆ ಇಟ್ಟು ಹೋಗುವುದು ವಾಡಿಕೆಯಾಗಿತ್ತು. ಇಂದೂ ಹಾಗೆ ಮಾಡಿದ್ದರು. ಆಶ್ಚರ್ಯ---ಇಟ್ಟ ಹಣ ದಲ್ಲಿ ಹತ್ತು ರೂಪಾಯಿ ಮಾಯವಾಗಿತ್ತು. ಗಾಬರಿಯಾಗಿ ಹೆಂಡತಿಯನ್ನು

ಕರೆದು ಕೇಳಿದರು. ಗೊತ್ತಿಲ್ಲವೆಂದು ಉತ್ತರ ಬಂತು. ಗೋಪಿಯ ಮೇಲೆ ಸಂಶಯ ಬಂದು ಅವನನ್ನು ಕರೆದು ಕೇಳಿದರು. ಲಚ್ಚಪ್ಪ ಪ್ರೀತಿ ಮಾಡಿದಂತೆ ತಪ್ಪಿದಾಗ ಹಾಗೆ ಶಿಕ್ಷೆಯನ್ನೂ ಕೊಡುತ್ತಿದ್ದರು. ಅವರ ಸಿಟ್ಟಿನ ಪರಿಚಯ ಚೆನ್ನಾಗಿದ್ದ ಗೋಪಿ ಏಟಿಗೆ ಹೆದರಿ ನಾಣಿಯ ಮೇಲೆ ಹಾಕಿ ತಾನು ಮೆಲ್ಲನೆ ನುಣುಚಿಕೊಂಡ.

ಲಚ್ಚಪ್ಪನ ಸಿಟ್ಟು ಮೇರೆ ಮೀರಿತು. ಕೈಲಿ ಬೆತ್ತವನ್ನು ಹಿಡಿದು ಓದುತ್ತ ಕುಳಿತಿದ್ದ ನಾಣಿಯ ಬಳಿ ಹೋಗಿ, 'ಎಷ್ಟು ದಿನದಿಂದ ಮಾಡುತ್ತಿರುವೆ ಈ ಕಸುಬನ್ನು! ಮುಠ್ಠಾಳ, ಮೊದಲು ದುಡ್ಡು ಕೊಡು, ಇಲ್ಲದಿದ್ದರೆ ನಿನ್ನ ಮೈ ಮೂಳೆ ಮುರಿದು ಬಿಡುವೆನು' ಎಂದು ನಾಲ್ಕೇಟು ಥಳಿಸಿದರು.

ಹಿಂದು-ಮುಂದು ಗೊತ್ತಿಲ್ಲದೆ ತಬ್ಬಿಬ್ಬಾದ ನಾಣಿ ತನಗೇನೂ ಗೊತ್ತಿಲ್ಲವೆಂದು ಗೋಳಾಡಿದ. ಸುಳ್ಳು ಹೇಳುತ್ತಿರುವನೆಂದು ಮತ್ತಷ್ಟು ರೇಗಿ ಕೋಲಿನಿಂದ ಬಾಸುಂಡೆ ಬರುವಂತೆ ಬಾರಿಸಿದರು. ಏಟು ತಾಳಲಾರದೆ ತಪ್ಪನ್ನು ತನ್ನ ಮೇಲೆ ಹಾಕಿಕೊಂಡ. ಹಣ ಕೊಡೆಂದು ಕೇಳಿದರು. ಆಗ ತಬ್ಬಿಬ್ಬಾದ. ಏನು ಮಾಡಲೂ ತೋರದೆ "ಪುಸ್ತಕದಲ್ಲಿರಿಸಿದ್ದೆ—ಕಳೆದು ಹೋಯಿತೆಂದು ಸುಳ್ಳು ಬಿಟ್ಟ. "ಸುಳ್ಳು ಬೊಗಳುವೆಯಾ" ಎಂದು ಮತ್ತೂ ನಾಲ್ಕೇಟು ಬಿಗಿದರು. ಎಷ್ಟು ಹೊಡೆದರೂ ಅದೇ ಉತ್ತರ. ಬೇಸರ ಬಂದು "ಇನ್ನು ಮೇಲೇನಾದರೂ ಹೀಗೆ ಮಾಡಬೇಕಂತೆ, ಮೈ ಚರ್ಮ ಸುಲಿದು ಬಿಡುವೆನು" ಎಂದು ಬೆತ್ತವನ್ನಲ್ಲೆ ಮೂಲೆಗೆಸೆದು ತಮ್ಮ ಕೊಠಡಿಗೆ ನಡೆದರು.

ಮಾರನೆ ದಿನ ಗೋಪಿ ಅವನ ಕೈಗೆ ಸಿಕ್ಕಿಬಿದ್ದ. ರಬ್ಬರಿಗಾಗಿ ಅವನ ಪೆಟ್ಟಿಗೆ ಶೋಧಿಸುತ್ತಿದ್ದಾಗ ಪುಸ್ತಕದಡಿ ಮುಚ್ಚಿರಿಸಿದ್ದ ಹತ್ತು ರೂಪಾಯಿನ ನೋಟು ಕಣ್ಣಿಗೆ ಬಿತ್ತು. ಹಿಂದಿನ ದಿನ ಅದೇ ಹಣಕ್ಕಾಗಿ ತಂದೆಯಿಂದ ಮೈ ಮುರಿಯ ಪೆಟ್ಟು ತಿಂದಿದ್ದ. ಅಣ್ಣನ ಕುತಂತ್ರಕ್ಕೆ ಸಿಟ್ಟು ಬಂದು, ತಂದೆಗೆ ತಿಳಿಸಿ ಬಿಡಲೆ ಎಂದೊಮ್ಮೆ ಯೋಚಿಸಿದ. 'ಛೆ—ಹಾಗೆ ಮಾಡುವುದರಲ್ಲಿ ಏನೂ ಅರ್ಥವಿಲ್ಲ. ಹೇಗೂ ನನಗೆ ಶಿಕ್ಷೆಯಾಗಿ ಹೋಗಿದೆ. ಆ ವಿಷಯವನ್ನಲ್ಲಿಗೆ ಬಿಡುವುದೊಳ್ಳೆಯದು' ಎಂದು ತನ್ನ ಮನಸ್ಸಿಗೆ ತಾನೆ ಬುದ್ಧಿ ಹೇಳಿ ಹೊರಡುವುದರಲ್ಲೆ ಸ್ನಾನಕ್ಕೆಂದು ಹೋಗಿದ್ದ ಗೋಪಿ ಎದುರಾದ.

ತನ್ನ ಕೊಠಡಿಯಲ್ಲಿ ನಾಣಿಯನ್ನು ಕಂಡು ಅವನೆದೆ ಝಲ್ಲೆಂದಿತು. ವಿಷಯ ತಿಳಿದುಹೋಗಿದೆಯೆಂದು ಅವನ ಮುಖ ನೋಡಿ ಊಹಿಸಿಕೊಂಡ. ಏನು ಮಾಡಲೂ ತೋಚದೆ ಕಣ್ಣಲ್ಲಿ ಗಾಬರಿ ತುಂಬಿ ಅತ್ತಿತ್ತ ಓಡಾಡತೊಡಗಿದ. ನಾಣಿ ನೋಡಿಯೂ ನೋಡದವನಂತೆ ಹೆಜ್ಜೆ ಮುಂದಿರಿಸಿದ. ಗೋಪಿಯ ಗಾಬರಿ ಮತ್ತೂ ಹೆಚ್ಚಾಯಿತು, ಮೌನ ಕರಗಿತು. ಹೋಗುತ್ತಿದ್ದ ನಾಣಿಯನ್ನು ಕೂಗು ಹಾಕಿ ಕರೆದು, ತನ್ನಲ್ಲಿ ಹಣವಿರುವ ವಿಷಯವನ್ನು ತಂದೆಗೆ ತಿಳಿಸಕೂಡದೆಂದು ಅಂಗಲಾಚಿ ಬೇಡಿಕೊಂಡ. ನಾಣಿಗೆ ಕರುಳು ಚುರುಕ್ಕೆನಿಸಿ ಹೇಳಿದ,

"ಹೆದರಬೇಡಣ್ಣ, ಖಂಡಿತ ಅಪ್ಪನಿಗೆ ತಿಳಿಸುವುದಿಲ್ಲ. ಇನ್ನು ಮೇಲೆ ಹೀಗೆಲ್ಲ ಮಾಡಬೇಡ. ನಿನಗೆ ಬೇಕಾದರೆ ಅಪ್ಪನನ್ನೆ ಕೇಳಿ ತೆಗೆದುಕೊ. ನೆನ್ನೆಯ ಪೆಟ್ಟನ್ನು ನೆನೆಸಿಕೊಂಡರೆ ಎಂದೆಂದಿಗೂ ಕದಿಯಬಾರದೆಂದು ಮಾಡಿದವರಿಗಾದರೂ ಅನ್ನಿಸುವುದೆ ಸರಿ."

ಅವನ ಹಿರಿತನ ಗೋಪಿಯಲ್ಲಿ ತೃಪ್ತಿಯನ್ನುಂಟು ಮಾಡುವ ಬದಲು ಈರ್ಷ್ಯೆ ಮೊಳೆಸಿತು. ಮೂರುದ್ದ ಗಂಟಲು ಮಾಡಿ,

"ನೀನೇನೂ ನನಗೆ ಬುದ್ಧಿ ಹೇಳಿಕೊಡಬೇಕಾಗಿಲ್ಲ, ನನಗೂ ತಲೆಯಲ್ಲಿ ಬುದ್ಧಿಯಿದೆ. ಹೇಳಿದಷ್ಟು ಮಾಡುವುದು ಬಿಟ್ಟು ತಲೆಯೆಲ್ಲ ಹರಟುವನು" ಎಂದು ಅಬ್ಬರಿಸಿದ.

ಗೋಪಿಯ ಕೂಗು ಲಚ್ಚಪ್ಪನ ವರೆಗೂ ಹೋಗಿ ಮುಟ್ಟಿತು. ಅಲ್ಲಿಂದಲೆ "ಮತ್ತೇನು ಕೀಟಲೆ ಮಾಡಿದೆಯೊ?" ಎಂದು ನಾಣಿಯನ್ನಬ್ಬರಿಸುತ್ತಲೆ ಬಂದರು.

ನಾಣಿಗೆ ಏನು ಹೇಳಲೂ ತೋಚಲಿಲ್ಲ. 'ಇಂಥಾ ಸಂದಿಗ್ಧ ಪರಿಸ್ಥಿತಿಯಲ್ಲಿ ನನ್ನನ್ನು ಸಿಕ್ಕಿಸಿದೆಯಲ್ಲಾ—ನಾನೀಗೇನು ಮಾಡಬೇಕೆ'ನ್ನುವ ಭಾವವನ್ನು ಕಣ್ಣಲ್ಲಿ ತುಂಬಿ, ಉತ್ತರ ಬಯಸಿ ಅಣ್ಣನ ಕಡೆ ದೃಷ್ಟಿ ಹಾಯಿಸಿದ. ತನ್ನ ಮೇಲಿನ ಕೋಪದಿಂದ ಎಲ್ಲಿ ಗುಟ್ಟು ರಟ್ಟು ಮಾಡುವನೊ ಎಂಬ ಗಾಬರಿಯಿಂದ ಗೋಪಿ ಮೊದಲೆ ತಮ್ಮನ ಬಳಿಗೆ 'ನಿನ್ನ ದಮ್ಮಯ್ಯ, ಹೇಳಬೇಡ—' ಎನ್ನುವ ದೀನಭಾವ ತುಂಬಿದ ಕರುಣಾಜನಕ ನೋಟವನ್ನಿಟ್ಟಿದ್ದ.

ಆ ನೋಟಕ್ಕೆ ಕರಗಿ ನಾಣಿ 'ಪಾಠ ಪ್ರವಚನದ ಬಗ್ಗೆ ತನಗೂ ಅವ

ನಿಗೂ ಚರ್ಚೆಯಾಯಿತೆಂ'ದು ತಂದೆಗೆ ಸುಳ್ಳು ಬಿಟ್ಟು ತನ್ನ ಹಿರಿತನ ಕಾದಿರಿಸಿ ಕೊಂಡ.

"ನೆನ್ನೆ ಹೊಡೆದದ್ದು ನೆನಪಿರಲಿ, ಮತ್ತೇನಾದರೂ ಮಾಡಿದೆಯೆಂದರೆ ಹಲ್ಲುದುರಿಸಿ ಬಿಟ್ಟೇನು!" ಎಂದು ಲಚ್ಚಪ್ಪ ತಮ್ಮ ಕೊಠಡಿಗೆ ನಡೆದರು.

ನಾಣಿ ಕಣ್ಣಲ್ಲಿ ತನ್ನೆಲ್ಲ ನೋವು ತುಂಬಿ ಅಣ್ಣನನ್ನೊಮ್ಮೆ ನೋಡಿ ಬಾಣದಂತೆ ಸರ್ರನೆ ಹೊರ ನುಗ್ಗಿದ.

ಗೋಪಿ ಮಾಧ್ಯಮಿಕ ಶಾಲೆಯ ಎಂಟನೆಯ ತರಗತಿಯಲ್ಲಿ ಒಂದು ವರ್ಷ ಉತ್ತೀರ್ಣನಾಗದೆ ಉಳಿದು ಬಿಟ್ಟ. ಆ ವರ್ಷ ನಾಣಿಯೂ ಅವನ ಜತೆ ಬಂದು ಸೇರಿದ. ಅದನ್ನು ಕಂಡು ಹುಡುಗರು ಗೋಪಿಯನ್ನು ಗೇಲಿ ಮಾಡತೊಡಗಿದರು. ಗೋಪಿಗೆ ಅಪಮಾನವಾಯಿತು, ಸಂಗಡ ತಮ್ಮನ ಬಗ್ಗೆ ಮಾತ್ಸರ್ಯವೂ ಮೊಳೆಯಿತು. ನಾಣಿಯ ಚುರುಕು ಚಟುವಟಿಕೆ ಅದನ್ನು ಮತ್ತಷ್ಟು ಬೆಳೆಸಿಕೊಂಡು ಬಂತು. ತಮ್ಮನ ಮೇಲೆ ವಿಷ ಕಾರತೊಡಗಿದ.

ಅಣ್ಣನ ಸಿಟ್ಟು ತಿರಸ್ಕಾರದ ಕಾರಣ ಹೊಳೆಯಿತು. ಏನು ಮಾಡ ಬೇಕೆಂದೆ ತೋಚಲಿಲ್ಲ. ಕರ್ತವ್ಯಚ್ಯುತನಾಗದಂತೆ ನಿತ್ಯ ವಿಧಿಯನ್ನು ಪಾಲಿ ಸುವುದು ಮೈಗಂಟಿ ಹೋಗಿತ್ತು; ತನ್ನ ಅಭ್ಯಾಸನಿಷ್ಠೆ, ಚುರುಕು, ಉತ್ಸಾಹ ಅಣ್ಣನ ಪಾಲಿಗೆ ಕಣ್ಣೀರು ತರುವಂತಾದುವು. ಪಾಠ ಪ್ರವಚನದಲ್ಲಿ ಅವನಿ ಗಿಂತ ಹಿಂದುಳಿಯಲು ಸಾಧ್ಯವಿಲ್ಲ. ಅಣ್ಣನ ಸಂಕಟ ಕಂಡು ಎಷ್ಟೋ ಬಾರಿ ಅದಕ್ಕೂ ಪ್ರಯತ್ನಿಸಿ ನೋಡಿದ. ಪ್ರಶ್ನೆಗೆ ಉತ್ತರ ಕೊಡುವಾಗ, ಬರೆಯು ವಾಗ ಆ ಮಾತು ಮರೆತು ಹೋಗುತಿತ್ತು. ಅವನಿಗಾಗಿ ಶಾಲೆ ಬಿಟ್ಟುಳಿ ಯುವುದೆಂದರೆ ಅರ್ಥವಿಲ್ಲ, ಸಾಧ್ಯವೂ ಇಲ್ಲ. ಏನು ಮಾಡಲೂ ತೋಚದೆ ಅಣ್ಣನ ನಂಜಿನ ನೋವು ತಿಂದು ಹಾಗೆ ದಿನ ದಬ್ಬುತ್ತಿದ್ದ. ಒಂದು ದಿನದ ಗೋಪಿಯ ಅಸಭ್ಯ ನಡವಳಿಕೆ ಮೂಕ ಸಂಕಟವನ್ನು ದೂರ ಮಾಡಿತು.

ಅಂದು ನಾಣಿ ತನ್ನ ಸ್ನೇಹಿತನ ಮನೆಗೆ ಯಾವುದೊ ಪಾಠ ತಿಳಿದು ಬರಲೆಂದು ಹೋಗಿದ್ದ. ಅದೇ ಸಮಯ ನಿರೀಕ್ಷಿಸುತ್ತಿದ್ದ ಗೋಪಿ ಅವನ ಪುಸ್ತಕ ಕಪಾಟಿನ ಬಳಿ ಬಂದು, ಆವರೆಗೆ ತಲೆ ವೆಚ್ಚ ಮಾಡಿ ಬರೆದಿರಿಸಿದ್ದ ಪಠ್ಯ ಪುಸ್ತಕದ ಸಾರ ಸಂಗ್ರಹವನ್ನೆಲ್ಲ ರಾಶಿ ಹಾಕಿ, ಯಾವ ವಿಕಾರವನ್ನೂ ಹೊಂದದೆ ಸುಟ್ಟು ತೆಗೆದ.

ನಾಣಿ ಮನೆಗೆ ಬಂದವನು ಪೆಟ್ಟಿಗೆ ತೆರೆದು ನೋಡುತ್ತಾನೆ, ಖಾಲಿ! ಪಠ್ಯ ಪುಸ್ತಕವಲ್ಲದೆ ಮತ್ತಾವುದೂ ಇರಲಿಲ್ಲ. ಊರೆಲ್ಲ ಹುಡುಕಾಡಿದ. ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಒಂದು ಮೂಲೆಯಲ್ಲಿ ಮಾತ್ರ ಯಾವುದೊ ಕರುಕು ಕಣ್ಣಿಗೆ ಬಿತ್ತು. ಹತ್ತಿರ ಹೋಗಿ ಬಗ್ಗಿ ಹುಡಿಯನ್ನು ಕೈಗೆ ತೆಗೆದು ನೋಡುತ್ತಾನೆ, ಕಾಗದ ಸುಟ್ಟ ಕರುಕು. ತಲೆಯೋಡಿಸಿ ತನ್ನ ಪುಸ್ತಕವೆಲ್ಲವನ್ನೂ ಸುಟ್ಟು ಹಾಕಿದ್ದಾರೆಂದೂ ಆ ಕೆಲಸವನ್ನು ಅಣ್ಣನೆ ಮಾಡಿದ್ದಾನೆಂದೂಹಿಸಿಕೊಂಡ. ಹೋಗಿ ವಿಚಾರಿಸಲೂ ಇಲ್ಲ, ತಂದೆ ತಾಯಿಗೆ ನಡೆದ ವಿಷಯವನ್ನು ತಿಳಿಸಲೂ ಇಲ್ಲ. ಆ ಸಂಕಟವನ್ನು ತಾಳಲಾರದೆ ಕೊಂಚ ಹೊತ್ತು ಮುಸಮುಸನೆ ಅತ್ತು, ಕಡೆಗೆ ತನ್ನಲ್ಲೆ ಯಾವುದೊ ನಿರ್ಧಾರಕ್ಕೆ ಬಂದು ಸುಮ್ಮನಾದ.

ಮಾರನೆ ದಿನದಿಂದ ಶಾಲೆಯಲ್ಲಿ ಯಾವ ಪ್ರಶ್ನೆ ಕೇಳಿದರೂ ಗೊತ್ತಿಲ್ಲವೆಂದು ಸುಮ್ಮನಾಗಿ ಬಿಡುತ್ತಿದ್ದ. ಅವನ ಬಾಯಿ ಬಿಡಿಸಲು ಉಪಾಧ್ಯಾಯರು ಇನ್ನಿಲ್ಲದ ಪ್ರಯತ್ನ ಮಾಡಿದರು. ಏನೂ ಪ್ರಯೋಜನವಾಗಲಿಲ್ಲ. ಮೂಕನಂತೆ ಕುಳಿತಿರುತಿದ್ದ. ಮಾಸ ಪರೀಕ್ಷೆಗಳಲ್ಲೂ ಚೆನ್ನಾಗಿ ಮಾಡುತ್ತಿರಲಿಲ್ಲ. ಬೇಕೆಂದು ತರಗತಿಯಲ್ಲಿ ಎಲ್ಲರಿಗಿಂತ ಹಿಂದುಳಿದ; ತಮ್ಮನಿಗಿಂತ ಅಣ್ಣ ಮುಂದಾದ. ಎಲ್ಲರೂ 'ಶಬ್ಬಾಷ್' ಎಂದು ಅವನ ಬೆನ್ನು ಚಪ್ಪರಿಸಿದರು. ಗೋಪಿಗೆ ಕೆನ್ನೆಯೆಲ್ಲಾ ಬಾಯಾಯಿತು.

ನಾಣಿಗೆ ಅದರಿಂದ ನೋವಾಗಲಿಲ್ಲ. ತನ್ನ ಶಕ್ತಿಯಲ್ಲಿ ಭರವಸೆಯಿರಿಸಿ ಮೌನದಿಂದ ಸಾಗುತ್ತಿದ್ದ. ಪರೀಕ್ಷೆಯ ಫಲಿತಾಂಶ ಹೊರಬಿದ್ದಾಗ ಎಲ್ಲರಿಗೂ ಆ ಮೌನದ ಅರ್ಥವಾಯಿತು. ತರಗತಿಗೆಲ್ಲಾ ನಾಣಿಯೆ ಮೊದಲಿನವನಾಗಿ ಉತ್ತೀರ್ಣನಾಗಿದ್ದ. ಬುದ್ಧಿವಂತರ ಲಕ್ಷಣವೆ ಹಾಗೆಂದು ಅವನನ್ನು ಎಲ್ಲರೂ ಕೊಂಡಾಡಿದರು.

ನಾಣಿಯ ಹೆಂಡತಿಗೆ ತಲೆಕೂದಲಿನಷ್ಟು ಬಳಗ. ಲಗ್ನದ ಸಮಯದಲ್ಲಿ ಆ ಬಳಗವನ್ನು ಸುಧಾರಿಸಬೇಕಾದರೆ ಗೋಪಿಗೆ ಮುಖ ದಪ್ಪವಾಯಿತು. ಅವನ ಲಗ್ನಕ್ಕೆ ರಂಗಮ್ಮ ಎರಡು ಸಾವಿರ ರೂಪಾಯಿ ವೆಚ್ಚ ಮಾಡಿದ್ದರು. ಅಷ್ಟೇ ಹಣದಲ್ಲಿ ತಮ್ಮನಿಗೂ ಆಗಬೇಕೆಂದು ಗೋಪಿಯ ಅಭಿಪ್ರಾಯ. ಎಷ್ಟೇ ಕೈಹಿಡಿದು ವೆಚ್ಚ ಮಾಡಿದರೂ ಮೇಲೆ ನೂರಿನ್ನೂರು ರೂಪಾಯಿ ಹಾಕಲೆ ಬೇಕಾಗಿ ಬಂತು.

ಗೋಪಿ ಸಿಡಿದು ಹಾರಿದ. ' ಮರ್‍ಯಾದೆ ಹೋದರೂ ಚಿಂತೆಯಿಲ್ಲ, ಹೆಚ್ಚಿನ ಹಣ ಹಾಕಲು ಖಂಡಿತ ಸಾಧ್ಯವಿಲ್ಲ'ವೆಂದು ಕಟ್ಟುನಿಟ್ಟಾಗಿ ನುಡಿದ. ಇನ್ನೂ ಕೆಲವರಿಗೆ ಉಡುಗೊರೆ ಉಚಿತ ಕೊಡುವುದು ಹಾಗೆ ಉಳಿದು ಹೋಯಿತು. ನಾಣಿ ರಂಗಮ್ಮ ಅಪಮಾನದಿಂದ ಭೂಮಿಗಿಳಿದು ಹೋದರು.

ವಿಷಯ ನಾಣಿಯ ಮಾವನ ಕಿವಿವರೆಗೂ ಹೋಯಿತು. ಅವರು ಅಳಿಯನ ಪರವಾಗಿ ಆ ವೆಚ್ಚವನ್ನು ತಾವು ವಹಿಸಿಕೊಳ್ಳಲು ಸಿದ್ಧರಾದರು. ಹಣ ಕೊಡಲು ಮುಂದೆ ಬಂದ ಶಂಕರಪ್ಪ ( ನಾಣಿಯ ಮಾವ ) ನವರನ್ನು ತಡೆದು, ಅವರ ಉದಾರತೆಗೆ ಕೃತಜ್ಞತೆ ಸಲ್ಲಿಸಿ, ಗೋಪಿಯನ್ನು ಒಳ್ಳೆ ಮಾತಿನಿಂದೊಪ್ಪಿಸಿಕೊಂಡು ಆ ಮಂಗಳ ಕಾರ್ಯವನ್ನು ಮರ್ಯಾದೆಯಿಂದ ಮುಗಿಸಿಕೊಳ್ಳಬೇಕಾದರೆ ತಾಯಿ-ಮಗನಿಗೆ ಸಾಕುಬೇಕಾಯಿತು.

ಅಣ್ಣ ಮಾಡಿದ ಅಪಮಾನದಿಂದ ನಾಣಿ ತುಂಬಾ ದುಃಖಿತನಾದ. ಮಾತಾಡಲಿಲ್ಲ, ಸುಮ್ಮನಿದ್ದ. ಮೈಸೂರಿಗೆ ಬಂದವನೆ ಚೆನ್ನಪ್ಪನವರ ಅಂಗಡಿಯಲ್ಲಿ ಗೋಪಿಗೆ ತಿಳಿಯದಂತೆ ದಿನಕ್ಕೆರಡು ಗಂಟೆಗಳ ಕಾಲ ಕಾರಕೂನಗಿರಿ ಮಾಡಿದ. ಏಳೆಂಟು ತಿಂಗಳೊಳಗೆಲ್ಲ ತನ್ನ ಮದುವೆಗೆ ವೆಚ್ಚವಾದ ಹೆಚ್ಚಿನ ಹಣವನ್ನು ಸಂಪಾದಿಸಿ ಲೆಖ್ಖಕ್ಕೆ ಹಾಕಿಕೊಳ್ಳಬೇಕೆಂದು ಅಣ್ಣನ ಮುಂದೆ ತಂದಿರಿಸಿದ.

ಅದನ್ನು ಕಂಡು ಗೋಪಿಗಾಶ್ಚರ್ಯವಾಯಿತು; ಸಂಗಡ ಮಾತ್ಸರ್ಯವೂ ಮೊಳೆಯಿತು. ಚುಚ್ಚಿ ಮಾತಾಡಿದ,

"ಮನೆ ಹಣವನ್ನು ಕೊಡುವುದರಲ್ಲಿ ನಿನ್ನದೇನು ಹೆಚ್ಚುಗಾರಿಕೆ? ನಾನೆ ತೆಗೆದುಕೊಳ್ಳುತಿದ್ದೆ."

ನಾಣಿ ಕೋಪಿಸಿಕೊಳ್ಳಲಿಲ್ಲ, ಸಮಾಧಾನದಿಂದಲೆ ಹೇಳಿದ,

"ಅದು ಮನೆ ಹಣವಲ್ಲ, ನನ್ನ ಸ್ವಂತ ದುಡಿಮೆಯ ಹಣ."

ಧ್ವನಿಯಲ್ಲಿ ತಿರಸ್ಕಾರ ತುಂಬಿ ಗೋಪಿ ಹೇಳಿದ,

"ಸ್ವಂತ ದುಡಿಮೆ! ಅದ್ಯಾವುದಪ್ಪ ಅದು ಸ್ವಂತ ದುಡಿಮೆ, ನಾನು ಕಾಣದ್ದು! ಮೂರು ಹೊತ್ತೂ ಅಂಗಡಿಯಲ್ಲೆ ಇರುವೆ, ಕೆಲಸಕ್ಕೆ ಹೋಗುವ ಹೊತ್ತಾದರೂ ಯಾವುದು ?"

ಆಗಲೂ ನಾಣಿ ಶಾಂತನಾಗಿಯೆ ಉತ್ತರಿಸಿದ,

"ಸಂಜೆಯ ಹೊತ್ತನ್ನು ಅದಕ್ಕುಪಯೋಗಿಸಿಕೊಳ್ಳುತ್ತಿದ್ದೆ. ನಿನಗೆ ಸಂಶಯವಿದ್ದರೆ ಬಂದು ಚೆನ್ನಪ್ಪನವರಲ್ಲಿ ವಿಚಾರಿಸಬಹುದು."

ಚೆನ್ನಪ್ಪ ಊರಿಗೆಲ್ಲ ಗಣ್ಯವಾದ ವ್ಯಕ್ತಿ; ದೊಡ್ಡ ವರ್ತಕರೂ ಹೌದು. ಅವರ ಹೆಸರನ್ನು ಕೇಳಿದ ಮೇಲೆ ಗೋಪಿ ತಗ್ಗಿ ಹೋದ. ಉಂಟಾಗಿದ್ದ ಸಂಶಯವೂ ಕರಗಿ ಹೋಯಿತು. ತಾನು ಕೆಟ್ಟವನಾಗುಳಿಯಬಾರದೆಂದು ಮುಖದಲ್ಲಿ ಕೃತಕ ಸಿಟ್ಟು ತಂದು, ತಮ್ಮ ಮಾಡಿದ್ದು ತಪ್ಪೆನ್ನುವ ಅರ್ಥದಲ್ಲಿ ಮಾತಾಡಿ ಹಿರಿತನವನ್ನುಳಿಸಿಕೊಂಡ,

"ನಾನೇನೀಗ ದುಡಿದು ತೀರಿಸೆಂದು ಹೇಳಿದ್ದೆನೆ? ಅಲ್ಲೆಲ್ಲಾ ಹೋಗಿ ಯಾಕೆ ಕೆಲಸ ಮಾಡಬೇಕಿತ್ತು? ಒಟ್ಟಿನಲ್ಲಿ ನನ್ನನ್ನು ಬೀದಿಗೆಳೆಯುವುದೊಂದೆ ನಿನ್ನ ಗುರಿ!"

"ಹಾಗಲ್ಲಣ್ಣ........!"

ಅವನ ಮಾತನ್ನು ಅರ್ಧದಲ್ಲಿ ತಡೆದು ಹೇಳಿದ,

"ಇರಲಿರಲಿ ಹೋಗು, ನನಗೆಲ್ಲ ಗೊತ್ತಿದೆ; ನೀನೇನೂ ಕಾರಣ ಕೊಡಬೇಕಿಲ್ಲ."

ನಾಣಿ ಯಾವ ಮಾತೂ ಆಡದೆ ತಲೆ ತಗ್ಗಿಸಿ ಹೋಗಿದ್ದ. ಗೋಪಿ ಹಣವನ್ನು ಜೇಬಿಗೆ ತುಂಬಿದ.

ಆಸ್ತಿ ವಿಭಾಗವಾಗುವ ಸಮಯದಲ್ಲಿ ನಾಣಿಯ ಮನಸ್ಸು ತೀರ ಕಲಕಿ ಹೋಗಿತ್ತು. ಹಂಚಿಕೆಯಲ್ಲಿ ಸ್ವಲ್ಪವೂ ವ್ಯತ್ಯಾಸವಾಗಕೂಡದೆಂದು ಕಟ್ಟುನಿಟ್ಟಾಗಿ ಹೇಳಿದ.

ಲಚ್ಚಪ್ಪ ಹೆಂಡತಿ–ಮಕ್ಕಳಿಗನ್ಯಾಯ ಮಾಡಿ ಹೋಗಿರಲಿಲ್ಲ. ಹದಿನೈದು ಸಾವಿರ ಬಾಳುವ ಒಂದು ಮನೆ, ಐವತ್ತು ಸಾವಿರ ಬಾಳುವ ಒಂದು ಜವಳಿಯಂಗಡಿ, ಎರಡೆಕರೆ ಭತ್ತದ ಗದ್ದೆ—ಇವಿಷ್ಟನ್ನು ಕುಟುಂಬದ ಜೀವನಾಧಾರಕ್ಕಾಗಿ ಬಿಟ್ಟು ಹೋಗಿದ್ದರು. ಅದರಲ್ಲಿ ಜವಳಿಯಂಗಡಿಯಲ್ಲಿರುವ ಸರಕನ್ನೂ ಗದ್ದೆಯನ್ನೂ ಇಬ್ಬರೂ ಸಮನಾಗಿ ಹಂಚಿಕೊಂಡರು. ಮನೆ ಹಂಚಿಕೊಳ್ಳಲು ಗೋಪಿಗೆ ಮನಸ್ಸಾಗಲಿಲ್ಲ. ನಾಣಿಯನ್ನೊಪ್ಪಿಸಿ ಅವನ ಭಾಗದ ಮನೆಯನ್ನೂ ತಾನೇ ಕ್ರಯಕ್ಕೆ ತೆಗೆದುಕೊಂಡ.

ಉಳಿದದು ತಂದೆ ಹೋದಂದಿನಿಂದ ಅಂದಿನ ವರೆಗೆ ತಮ್ಮಿಬ್ಬರ ಒಟ್ಟಿನ

ದುಡಿಮೆಯಾಗಿ, ಖರ್ಚು ಕಳೆದು ಕೂಡಿರಿಸಿದ್ದ ಹಣದ ಲೆಖ್ಖ. ಆ ಹಣವನ್ನು ಗೋಪಿ ಎಂದೋ ಸಟ್ಟಾ ಆಡಿ ಕಳೆದಿದ್ದ. ಕೊಡಲು ಕೈಲಿ ಹಣವಿರಲಿಲ್ಲ; ಸಾಲ ಮಾಡುವಂತೆಯೂ ಇರಲಿಲ್ಲ. ಸಾಲ ಮಾಡಿಯೆ ನಾಣಿಯ ಭಾಗದ ಮನೆಯನ್ನು ಕೊಂಡುಕೊಂಡಿದ್ದ. ಏನು ಮಾಡಲೂ ತೋಚದೆ ಆ ಹಣಕ್ಕೆ ತನ್ನ ಪಾಲಿನ ಗದ್ದೆಯನ್ನು ಬರೆದುಕೊಟ್ಟ.

ಆ ಪತ್ರವನ್ನು ತೆಗೆದುಕೊಳ್ಳಲು ನಾಣಿಯ ಕೈ ನಡುಗಿತು; ಕಣ್ಣು ಕರಗಿತು. ತಕ್ಷಣ ತನ್ನ ದೌರ್ಬಲ್ಯವನ್ನದುಮಿ ಹಿಡಿದು ಕಲ್ಲು ಮನಸ್ಸು ಮಾಡಿ ಪತ್ರವನ್ನು ಕಿಸೆಗೆ ತುಂಬಿದ. ಆ ವಿಷಯದ ಬಗ್ಗೆ ಮನಸ್ಸಿನಲ್ಲಿ ನಾಲ್ಕಾರು ದಿನ ಹೋರಾಟ ನಡೆಯಿತು; ಗೆದ್ದವನು ಗೋಪಿಯೆ !

ಆ ಗದ್ದೆಯನ್ನು ತೆಗೆದುಕೊಳ್ಳಲು ನಾಣಿಯ ಮನಸ್ಸು ಸ್ವಲ್ಪವೂ ಒಪ್ಪಲಿಲ್ಲ. ಹಾಗೆ ಮಾಡುವುದರಿಂದ ಅಣ್ಣನನ್ನು ತಾನೆ ಕೈಯಾರೆ ಹಾಳು ಮಾಡಿದಂತಾಗುವುದೆಂದು ತಿಳಿದು, ಒಂದು ದಿನ ಹಗಲಿನಲ್ಲಿ ಹೋಗಿ ಪತ್ರವಿತ್ತು, " ಗದ್ದೆ ತೆಗೆದುಕೊಳ್ಳಲು ನನಗಿಷ್ಟವಿಲ್ಲಣ್ಣ, ಪತ್ರ ತೆಗೆದುಕೊ. ನಿನಗಿಚ್ಛೆಯಿದ್ದರೆ ಮುಂದೆ ದೇವರು ಅನುಕೂಲ ಮಾಡಿದಾಗ ಕೊಡು, ಇಲ್ಲದಿದ್ದರೆ ಅದೂ ಬೇಡ" ಎಂದು ಉತ್ತರಕ್ಕೆ ಕಾಯದೆ ಅಲ್ಲಿಂದ ಹೊರಬಿದ್ದ.

ಅವನ ಸಭ್ಯ ನಡವಳಿಕೆಯನ್ನು ಗೋಪಿ, ತನ್ನ ನಂಜಿನ ದೃಷ್ಟಿಯಿಂದಲೆ ಅಳೆದು ನೋಡಿದ. ಅಲ್ಲಿ ಅವನಿಗೆ ಒಡಹುಟ್ಟಿನ ಮಮತೆ ಕಾಣಲಿಲ್ಲ. ಬದಲು ನಾಣಿಯ ರಹಸ್ಯ ಪ್ರೀತಿಗೆ ತೋರಿದ ಕನಿಕರವಾಗಿ ಕಂಡು ಬಂದು ಕಟಕಟನೆ ಹಲ್ಲು ಕಡಿದ. ಆದರೆ ಆ ಪತ್ರವನ್ನು ಹಿಂದಿರುಗಿಸುವ ಮನಸ್ಸಾಗಲಿಲ್ಲ; ಹರಿದೆಸೆದ.

ಸೂರಪ್ಪ ಶಾಂತಳನ್ನು ಒತ್ತಾಯದಿಂದ ಕರೆದುಕೊಂಡು ಹೋದ ಮೇಲೆ ಗೋಪಿ ಇದ್ದದ್ದೂ ಕ್ರೂರಿಯಾದ. ಅವನ ಮೈ-ಮನಸ್ಸೆಲ್ಲ ತಮ್ಮನ ರಕ್ತಕ್ಕಾಗಿ ಚೀರಿಡುತಿತ್ತು. ಒಂದು ದಿನ ಗಟ್ಟಿ ಮನಸ್ಸು ಮಾಡಿ, ಕೋಟಿನೊಳ ಜೇಬಿನಲ್ಲಿ ಒಂದು ಚೂರಿಯಿರಿಸಿ ತಮ್ಮನ ಮನೆಗೆ ಹಾರಿದ.

ಆಗ ರಾತ್ರೆ ಒಂಬತ್ತು ಘಂಟೆಯಾಗಿ ಹೋಗಿತ್ತು. ರಂಗಮ್ಮ ಆಸ್ಪತ್ರೆಗೆ ಹೊರಟು ಹೋಗಿದ್ದರು. ಶಕುಂತಳೆ, ನಾಣಿ ಹೊಸ್ತಿಲೊಳಗೆ ಕಾಲಿರಿಸಿದ್ದ ಅಣ್ಣನನ್ನು ಕಂಡದ್ದೆ ತಡ, ಅವನ ಬಳಿ '.ಅಣ್ಣ ಬಂದೆಯಾ '

ಎಂದು ಕಾಲುಗಳನ್ನು ತಬ್ಬಿಕೊಂಡು "ನಾನೆ ಬರಬೇಕೆಂದಿದ್ದೆ, ನೀನು ಬಂದದ್ದು ಒಳ್ಳೆಯದಾಯಿತು. ನಿನ್ನ ಬದುಕನ್ನು ಹಾಳು ಮಾಡಿರುವ ಆ ತಪ್ಪು ಕಲ್ಪನೆಯನ್ನು ಕಿತ್ತೊಗೆದು ಹಾಕಣ್ಣ. ಈಶ್ವರನ ಸಾಕ್ಷಿಯಾಗಿ ಅತ್ತಿಗೆ ಶುದ್ಧಳಾಗಿದ್ದಾಳೆ. ಅವಳಲ್ಲಿ ತಾಯ್ತನದ ಪ್ರೇಮವನ್ನೇ ಕಂಡಿದೆ ನನ್ನ ಕಣ್ಣು. ನಾನೆಂದೂ ಕೆಟ್ಟ ಕಣ್ಣಿಂದ ನೋಡಿಲ್ಲವೆಂದು ಪ್ರಮಾಣ ಮಾಡಿ ಹೇಳುವೆನು. ನನ್ನ ಮಾತನ್ನು ನಂಬಣ್ಣ--ನನ್ನ ಮಾತನ್ನು ನಂಬು! ನಿನಗೆ ಸಂಶಯ ಬಂದ ದಿನವೆ ನನ್ನನ್ನು ಕರೆಸಿ ಕೇಳಿದ್ದರೆ ಬಾಳು ಹಾಳಾಗುತ್ತಲೆ ಇರಲಿಲ್ಲ. ಬೇಕೆಂದು ಬದುಕನ್ನು ಹಾಳು ಮಾಡಿಕೊಂಡೆ, ಸಾವು-ನೋವುಗಳಿಗೂ ಕಾರಣನಾದೆ. ಇಷ್ಟು ನೋವುಂಡಿದ್ದೆ ಸಾಕು, ಇಷ್ಟು ಸಾವಾದದ್ದೆ ಸಾಕು; ಇನ್ನಾದರೂ ಶಾಂತಿ ತಂದುಕೊ ಅಣ್ಣ. ನಿನ್ನಿಂದಲೆ ಈ ಮನೆತನ ಬೆಳಗಬೇಕಾಗಿದೆ. ನಿನ್ನ ಮನಸ್ಸಿಗೆ ನೆಮ್ಮದಿ ಬಂದ ಹೊರತು ಯಾರಿಗೂ ಸುಖವಿಲ್ಲ. ನಿನ್ನ ಜೀವನ ಕಲಕಿ ಹೋದಂದಿನಿಂದ ನನ್ನ ಅನ್ನ-ನಿದ್ರೆಯೆಲ್ಲ ಕಟ್ಟಿ ಹೋಗಿದೆ; ನಿನ್ನ ಸಂಸಾರ ಹಾಳಾಗುತ್ತಿರುವುದನ್ನು ಕಂಡು ಕೊರಗಿನಿಂದ ಅಮ್ಮ ಕರಗಿ ಹೋಗುತ್ತಿದ್ದಾಳೆ; ಅತ್ತಿಗೆ ಸಾವಿನ ರುದ್ರ ಹಿಡಿಯಲ್ಲಿ ಸಿಕ್ಕಿ ಸೊರಗಿ ಹೋಗುತ್ತಿದ್ದಾಳೆ; ಮಕ್ಕಳು ಅನಾಥರಾಗುತ್ತಿದ್ದಾರೆ. ಹೀಗೆಲ್ಲ ಒರಟುತನ ಮಾಡಬೇಡಣ್ಣ.........ಸರ್ವನಾಶವಾಗಿ ಹೋಗುವುದು. ನಾನು ಅಪರಾಧಿಯಾಗಿದ್ದರೆ ಎಂದೊ ಬಂದು ನಾನೆ ನಿನ್ನ ಪಾದಕ್ಕೆ ಪ್ರಾಣವನ್ನರ್ಪಿಸುತಿದ್ದೆ ದೇವರ ಸಾಕ್ಷಿಯಾಗಿ ನಿರಪರಾಧಿ ಅಣ್ಣ! ಯಾವ ಪಾಪವನ್ನೂ ಮಾಡಿಲ್ಲ; ಅಷ್ಟೇಕೆ ಮನದಲ್ಲಿಯೂ ನೆನೆದಿಲ್ಲ. ನನ್ನ ಮಾತಿನಲ್ಲಿ ನಂಬಿಕೆಯಿರಿಸಿ ಮನಸ್ಸನ್ನು ಶುದ್ಧ ಮಾಡಿಕೊ ಅಣ್ಣ!" ಎಂದು ಬಿಕ್ಕಿಬಿಕ್ಕಿ ಗೋಳಾಡಿದ.

ಅವನ ನಿಷ್ಕಲ್ಮಷ ನಡವಳಿಕೆಯಿಂದ ಗೋಪಿಯ ಕಟುಕತನ ಆ ಕ್ಷಣಕ್ಕೆ ಕರಗಿ ಹೋಯಿತು. ಸ್ವಲ್ಪ ಹೊತ್ತು ಮೌನವಾಗಿ ತಾನೂ ಕಣ್ಣೀರು ಸುರಿಸಿ, ನಾಣಿ ಹಾಲು ಕುಡಿದು ಹೋಗಬೇಕೆಂದು ಆಗ್ರಹ ಮಾಡುತ್ತಿದ್ದರೂ ಕೇಳದೆ ಮತ್ತೊಮ್ಮೆ ಬರುವೆನೆಂದು ಹೇಳಿ ಯಾವ ಮಾತೂ ಆಡದೆ ವಾಯುವೇಗದಲ್ಲಿ ಹೊರಬಿದ್ದ.

ಘಟನೆಗಳು ಹಾದು ಹೋದಂತೆ ಗೋಪಿಯ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತು. ನೋವಿನ ಮಾತು ಮರ್ಮವನ್ನೊಡೆದು

ತಡೆಬಡೆಯಿಲ್ಲದೆ ಹೊರಬಿತ್ತು.

‘ ಅವನ ಮುಂದೆ ನಾನು ಕಸಕ್ಕಿಂತಲೂ ಕೀಳಾದೆ, ಸಂದೇಹವಿಲ್ಲ. ಅಮೃತತ್ವದಿಂದ ಕೂಡಿದ ಆ ಮಾನವೀಯತೆಯೆಲ್ಲಿ? ಪೈಶಾಚಿಕತನದಿಂದ ತುಂಬಿದ ಈ ದಾನವೀಯತೆಯೆಲ್ಲಿ! ಆ ತುಂಬು ಗುಣವನ್ನು ಕಣ್ಣಾರೆ ಕಂಡು ಸಹಿಸುವ ತಾಳ್ಮೆಯಿಲ್ಲದೆಯೆ ನಿರಪರಾಧಿಯ ಮೇಲೆ ಅತ್ಯಾಚಾರದ ಪಾಪ ಹೇರಿ ನನ್ನ ರಾಕ್ಷಸತನವನ್ನು ತಣಿಸಿಕೊಂಡೆ. ನನ್ನಲ್ಲಿರುವ ಈರ್ಷ್ಯಾಗುಣವೆ ನನಗೆ ಮೃತ್ಯುವಾಯಿತು; ಸರ್ವನಾಶ ತಂದಿತು.

‘ ಸಾಲದಿದ್ದಕ್ಕೆ ಆ ಪಾಪಿ ಸೀತಾರಾಮು ನಾಣಿಯ ಮೇಲಿಲ್ಲದ ದೋಷಾರೋಪಣೆ ಮಾಡಿ ಮನಸ್ಸನ್ನು ಇದ್ದದ್ದೂ ಹಾಳು ಮಾಡಿದ. ಅವನು ಹೇಳಿದ್ದನ್ನೆಲ್ಲ ನಂಬಿ ಒಡಹುಟ್ಟಿಗೆ ನಂಜು ಬೆರೆಸಿದೆ. ನನ್ನ ಒಡಹುಟ್ಟನ್ನು ಆಚೆಗೆ ತಳ್ಳಿ ಅವನಿಗಾ ಸ್ಥಾನ ಧಾರೆಯೆರೆದೆ; ನಂಬಿ ಹಣಕಾಸಿನ ಸ್ವಾತಂತ್ರ್ಯ ವಿತ್ತೆ. ಕಡೆಗೂ ಆ ಪಾಪಿ ಸರ್ವನಾಶ ತಂದಿಟ್ಟೆ ಹೋದ.

‘ ಅವನ ಬದುಕು ಸುಳ್ಳು–ಕಪಟದಿಂದ ತುಂಬಿದೆಯೆಂದೂ, ಮಹಾ ನೀಚನೆಂದೂ, ಸಹವಾಸ ವರ್ಜ್ಯ ಮಾಡಬೇಕೆಂದೂ ಭಟ್ಟರು, ಮಾವ ಆಗಾಗ್ಗೆ ಎಚ್ಚರಿಕೆ ಕೊಡುತ್ತಲೆ ಬಂದಿದ್ದರು. ಅವಿವೇಕಿಯಾದ ನಾನು ಅವರ ಮಾತನ್ನು ಕಸಕ್ಕಿಂತಲೂ ಕೀಳಾಗಿ ಕಂಡೆ. ಅದರ ಪ್ರತಿಫಲವನ್ನಿಂದು ಎರಡು ಕೈಯಲ್ಲೂ ಊಟ ಮಾಡುತ್ತಿರುವೆನು.

‘ ಅಯ್ಯೋ! ನನ್ನಂಥ ಪಾಪಿ ಇನ್ನಿಲ್ಲ. ನನ್ನ ಬಾಳಿನಲ್ಲಿ ಶಾಂತಿ ತರಲು ಪ್ರಯತ್ನಿಸಿದ ಆ ಹಿರಿಯರನ್ನು ಎಷ್ಟು ಅಪಮಾನಗೊಳಿಸಿದೆ, ಎಷ್ಟು ನೋಯಿಸಿದೆ! ಅವರನ್ನು ನೋಯಿಸಿದ ನೋವು ನರನರವನ್ನು ಕಿತ್ತು ತಿನ್ನುತ್ತಿದೆಯಲ್ಲಾ! ನಿರಪರಾಧಿಗಳಾದ ನಾಣಿ, ಶಾಂತ, ಮಗುಗಳನ್ನು ನೋವಿನ ಬೆಂಕಿಯಲ್ಲಿ ಬೇಯಿಸಿದ ಪಾಪ, ಪ್ರಳಯ ಕಾಲದ ಪ್ರಚಂಡ ಸೂರ್ಯನ ಕಾವಿನಂತೆ ನನ್ನ ರಕ್ತವನ್ನೆಲ್ಲಾ ಬತ್ತಿಸುತ್ತಿದೆಯಲ್ಲಾ! ಈ ನೋವನ್ನು, ಪಾಪದ ಕ ವನ್ನು ಹೇಗೆ ಸಹಿಸಲಿ? ಹೇಗೆ ಸಹಿಸಲಿ?

‘ ನನ್ನ ಅವಿವೇಕದಿಂದ, ದುಡುಕಿನಿಂದ ಮಾವನ ವಂಶ ಹೇಳಹೆಸರಿಲ್ಲದಂತಾಯಿತು.’ ಹಾಗೆಂದುಕೊಂಡಾಗ ಅವನ ಕಣ್ಣ ಮುಂದೆ ತಾಯಿಯ ಕೋಪ–ತಾಪದಿಂದಾಗಿ ಕೊಲೆಗೀಡಾದ ಶಾರದೆ, ಮಗಳ ಬಾಳಿನ ನೋವನ್ನು

ನೋಡಲಾರದೆ ಆತ್ಮಹತ್ಯ ಮಾಡಿಕೊಂಡ ಸುಶೀಲಮ್ಮ, ಬಾಯಿಗೆ ನೀರು ಬಿಡುವವರು ಸಹ ಇಲ್ಲದೆ ತನ್ನವರೆನಿಸಿಕೊಂಡವರೆಲ್ಲರೂ ಮಸಣದ ಹಾದಿ ಹಿಡಿದದ್ದನ್ನು ಕಂಡು ಎದೆಯೊಡೆದು, ತಲೆ ಕೆಟ್ಟು ಕಣ್ಮರೆಯಾಗಿ ಹೋದ ಸೂರಪ್ಪ ಬಾಳಿನ ಯಮಯಾತನೆಯನ್ನು ಸಹಿಸಲಾರದೆ ಸಾವಿನ ಹಾಸಿಗೆ ಹಿಡಿದು ಮಲಗಿರುವ ಶಾಂತ ಎಲ್ಲರೂ ನೋವು ದುಃಖೆಯನ್ನು ತುಂಬಿ ಹಾದುಹೋದರು. ಎದೆ ಝಲ್ಲೆಂದಿತು ! ತಲೆ ಕೊಡವಿಕೊಂಡು ಸ್ವಲ್ಪ ಹೊತ್ತು ಬೆನ್ನ ಹಿಂದೆ ಕೈ ಕಟ್ಟಿ ಹುಚ್ಚನಂತೆ ಅತ್ತಿತ್ತ ಸುತ್ತಾಡಿದ. ಆ ಸರ್ವನಾಶದ ಕರಾಳ ನೋಟ ಮತ್ತೊಮ್ಮೆ ಕಣ್ಣಿಗೆ ಕಟ್ಟಿ ಅವನೆದೆ ನಡುಗಿಸಿತು.

‘ ಅಬ್ಬಾ, ಕೈಯಾರೆ ಜೀವ ತೆಗೆದುಕೊಳ್ಳಬೇಕಾದರೆ ಅವರಾತ್ಮ ಎಷ್ಟು ನೊಂದಿರಬಹುದು ! ಆ ನೋವು–ಸಾವಿಗೆ ಕಾರಣನಾದ ನನ್ನನ್ನು ಆ ಹೊತ್ತಿನಲ್ಲಿ ಎಷ್ಟು ಶಪಿಸಿರಬಹುದು ! ನನ್ನಿಂದಾಗಿ ಕುಲ ಪೂರ್ತಿ ನಾಶವಾಗುತ್ತಿರುವುದನ್ನು ಕಂಡು ಮಾವ ಎಷ್ಟು ಮರುಗಿರಬಹುದು ! ಆಗ ನಾನವರ ಕಣ್ಣಿಗೆ ಎಷ್ಟು ನೀಚನಾಗಿ ಕಂಡಿರಬಹುದು ! ಹುಚ್ಚು ಹಿಡಿಯಬೇಕಾದರೆ ಸಾಮಾನ್ಯಕ್ಕೆ ಅವರು ತಲೆ ಕಾಯಿಸಿಲ್ಲ.

‘ ಅಯ್ಯೋ, ನಾನೆಂಥ ಪಾಪಿ ! ಉತ್ತಮರ ಹೊಟ್ಟೆಯಲ್ಲಿ ಹುಟ್ಟಿ ನನಗೀ ಕಟುಕತನವೆಲ್ಲಿಂದ ಬಂತು ! ನಾನ್ಯಾಕೆ ಹೀಗಾದೆ ! ಸ್ತ್ರೀಹತ್ಯ–ಶಿಶುಹತ್ಯವೆಲ್ಲ ಆಗಿಹೋಯಿತು ನನ್ನಿಂದ ! ಮಾವನ ತಲೆ ಕೆಡಿಸಿ ದೇಶಾಂತರಕ್ಕಟ್ಟಿದೆ; ತಂದೆಗೆ ಬದಲಾಗಿ ನಿಂತು ರಕ್ಷಣೆ ಮಾಡುತ್ತಿದ್ದ ಭಟ್ಟರ ಕಾಲು ಮುರಿದೆ; ಮನೆ-ಮನಸ್ಸನ್ನು ತುಂಬಿ ಬೆಳಗಲು ಬಂದ ಶಾಂತಳನ್ನು ಬೇಕೆಂದು ಮೃತ್ಯುಮುಖಕ್ಕೊಯ್ದೆ ! ಆ ಮಹಾಪಾಪ ಬ್ರಹ್ಮರಾಕ್ಷಸನಂತೆ ಬೆಳೆದು ನನ್ನನ್ನು ಸುಡಲು ಬೆನ್ನಟ್ಟಿ ಬರುತ್ತಿದೆ. ಆ ತಾಪವನ್ನು ಹೇಗೆ ಸಹಿಸಲಿ ? ‘ಅಯ್ಯೋ ಹೇಗೆ ಸಹಿಸಲಿ ?’ ಎಂದು ಬಾಗಿಲ ಕಡೆಗೊಮ್ಮೆ ನೋಡಿ ಚಿಟ್ಟನೆ ಚೀರಿ ಹಿಂದಕ್ಕೆ ಹಾರಿ ಹೇಳಿದ,

‘ ಅದೊ, ತಲೆ ಕೆಟ್ಟ ಮಾವ ವಿಕಾರವಾಗಿ ನಗುತ್ತಾ ತಮ್ಮ ಮೃತ್ಯುಹಸ್ತಗಳಿಂದ ಪ್ರಾಣ ಹೀರಲು ಬರುತ್ತಿರುವರು ! ಅವರ ಬೆನ್ನಹಿಂದೆಯೆ ಬಂದ ಅತ್ತೆ ಕೋಪ-ತಾಪಗಳಿಂದ ಕಣ್ಣೀರ್ಗಡಲಾಗಿ ಹರಿದು ರೋಷದಿಂದ ನನ್ನನ್ನು ಕೊಚ್ಚಿಕೊಂಡು ಹೋಗುತ್ತಿದ್ದಾರೆ.

‘ ಅಯ್ಯೋ, ಆ ರುದ್ರನೋಟ ರಣಹದ್ದಿನಂತೆ ಕಣ್ಣನ್ನು ಕುಕ್ಕುತ್ತಿದೆ; ಗಾಣದಂತೆ ಎದೆಯನ್ನು ಹಿಂಡುತ್ತಿದೆ. ಈ ನೋವನ್ನು, ತಾಪವನ್ನು ಜನ್ಮಪೂರ್ತಿ ಹೇಗೆ ಅನುಭವಿಸಲಿ ? ಹೇಗೆ ಸಹಿಸಲಿ ದೇವಾ, ಹೇಗೆ ಸಹಿಸಲಿ?

ಇದ್ದಕ್ಕಿದ್ದಂತೆ ಮುಖ ರುದ್ರವಾಯಿತು, ಕಣ್ಣು ರಕ್ತ ಕಾರಿತು. ಹಾಕಿದ್ದಂಗಿಯನ್ನು ಪರಪರನೆ ಹರಿದೆಸೆದ. ಎರಡು ಕೈಗಳೂ ಗಬಕ್ಕನೆ ಹೋಗಿ ತಲೆಗೂದಲನ್ನು ಹಿಡಿದುವು. ಅದನ್ನು ಗಿಂಜಿಕೊಳ್ಳುತ್ತಾ ತನ್ನನ್ನು ತಾನೆ ಅಬ್ಬರಿಸಿಕೊಂಡ.

‘ ಪಾಪಿ, ಹಿಂಸೆ ಕೊಡುವಾಗ ಎಷ್ಟು ನಗುತ್ತ ಕೊಟ್ಟೆ, ಈಗ ಸಹಿಸಲಾರೆನೆಂದು ಕಣ್ಣೀರಿಡುವೆಯಾ ? ಕಣ್ಣೀರಿಟ್ಟರೆ ತಪ್ಪುವುದಿಲ್ಲ. ನಿನ್ನ ಪಾಪದ ಫಲವನ್ನನುಭವಿಸಲೆ ಬೇಕು. ಅನುಭವಿಸು ನಾಯಿ, ಅನುಭವಿಸು ! ನೀನು ಸೃಷ್ಟಿ ಮಾಡಿಕೊಂಡ ನರಕದ ಸುಖವನ್ನು ನೀನೆ ಅನುಭವಿಸು ನಾಯಿ !

‘ ಹ್ಹ ಹ್ಹ ಹ್ಹ ಹ್ಹ ಹ್ಹ !’ ಎಂದು ಸೂರು ಹಾರಿ ಬೀಳುವಂತೆ ವಿಕಾರವಾಗಿ ನಕ್ಕ.

‘ ಪಿಶಾಚಿಗಳಿಗೆಲ್ಲ ಪಿಶಾಚಿ, ಕಟುಕರಿಗೆಲ್ಲ ಕಟುಕ ನೀನು ! ನಿನಗೆದೆಯಿಲ್ಲ–ಕಣ್ಣಿಲ್ಲ; ನೋವಿಲ್ಲ-ಸಾವಿಲ್ಲ ! ಆ ಪಾಪ–ತಾಪ ನಿನ್ನನ್ನೇನೂ ಮಾಡುವುದಿಲ್ಲ, ಹಾಗೆಂದು ತಿಳಿದೆ ಅಲ್ಲವೆ ನೀನಿಷ್ಟೆಲ್ಲ ಸಾವು-ನೋವು ಮಾಡಿಕೊಂಡು ಬಂದದ್ದು ! ಮತ್ತ್ಯಾಕಂಜುವೆ ? ನಿನ್ನ ಪಾಪಭೀತಿಯನ್ನು ಮೆಟ್ಟಿ ಬದುಕು ! ಆ ಹೆಮ್ಮೆ–ಚೈತನ್ಯ ನಿನಗೆ ಹೇಗೂ ಇದೆಯಲ್ಲ!’ ಎಂದು ಅವನೆದೆಯಲ್ಲಿ ಆವರೆಗೆ ಮನೆ ಮಾಡಿಕೊಂಡಿದ್ದ ಸೈತಾನನೆದ್ದು ಹುರಿದುಂಬಿಸಿದ.

‘ ಇಲ್ಲ, ನನ್ನಲ್ಲೀಗ ಆ ಕೆಚ್ಚು, ಹೆಮ್ಮೆ ಯಾವುದೂ ಇಲ್ಲ. ಅಂದು ಅವರಿಬ್ಬರೂ ಅತ್ಯಾಚಾರಿಗಳೆಂದು ತಿಳಿದಂದು ಕೆಚ್ಚಿತ್ತು, ರೊಚ್ಚಿತ್ತು; ಅದಕ್ಕೆ ಅವರಲ್ಲಿ ಸೈತಾನನಂತೆ, ಕಟುಕನಂತೆ ನಡೆದುಕೊಂಡೆ. ದೈವಿಕವಾದ ಆಧಾರ ಬಲದಿಂದ ನಿರಪರಾಧಿಗಳೆಂದು ಗೊತ್ತಾದ ಇಂದು, ನನ್ನ ಆ ಸೈತಾನ ನಡವಳಿಕೆ, ಕಟುಕತನವೆಲ್ಲ ಪಾಪದ ಬೆಂಕೆಯುಂಡೆಯಾಗಿ ಸುಟ್ಟು ಬೂದಿ ಮಾಡಲು ಧಾವಿಸಿ ಬರುತ್ತಿದೆ. ಆ ತಾಪ, ನೋವನ್ನು ಸಹಿಸುವ ತಾಳ್ಮೆ, ಚೈತನ್ಯ ನನ್ನಲ್ಲಿಲ್ಲ. ಸುಳ್ಳುಸುಳ್ಳೆ ತುಂಬಿ ನನ್ನ ತಲೆ ಕೆಡಿಸಬೇಡ; ನಿನ್ನಿಂದಲೆ

ಬಾಳು ಬರಿದಾಯಿತು. ನೀನು ಸೈತಾನ! ನಿನ್ನಲ್ಲಿ ಪಾಪ–ಪುಣ್ಯ ಭೀತಿಯಿಲ್ಲ, ನೋವು–ನಲಿವಿನ ಮಿಡಿತವಿಲ್ಲ, ಕ್ಷಮೆ-ದಮೆಯ ನೋಟವಿಲ್ಲ! ಮನುಷ್ಯತ್ವದ ಮಹಾ ವೈರಿ ನೀನು, ಪಾಪದ ಮೊಟ್ಟೆ, ನೀಚ ಗುಣಗಳ ಭಯಂಕರ ಔಪಾಸಿಕ! ನಿನಗಿನ್ನಿಲ್ಲಿ ಸ್ಥಾನವಿಲ್ಲ. ಮೊದಲು ನನ್ನೆದೆ ಬಿಟ್ಟು ಹೊರಡು; ಇಲ್ಲವಾದರೆ ಈ ದೇಹ ಸಮೇತ ನಿನ್ನನ್ನು ಸುಟ್ಟು ಬೂದಿ ಮಾಡುವೆನು. ಹುಂ! ಹೊರಡು–ಹೊರಡು! ಎಂದು ಮೂಳೆ ಮುರಿದು ಬೀಳುವಂತೆ ಗೋಡೆಗೆ ಹಣೆಯನ್ನು ಪಟಪಟನೆ ಚಚ್ಚಿಕೊಂಡ. ರಕ್ತ ಧಾರಾಕಾರವಾಗಿ ಹರಿದು ಮೈತೊಳೆಯಿತು. ಅದನ್ನು ನೋಡುತ್ತಿದ್ದಂತೆ ಶಾಂತಳ ನೆನಪಾಯಿತು.

'ಅಯ್ಯೋ, ಇಂಥ ರಕ್ತವನ್ನು ನಾನೆಷ್ಟು ಬಾರಿ ಅವಳ ದೇಹದಿಂದ ಬಸಿಯುವಂತೆ ಮಾಡಿರುವೆನು! ನಾನೆಷ್ಟು ಯಮಯಾತನೆಯಿತ್ತರೂ ಉಸಿರೆತ್ತದೆ ಅನುಭವಿಸಿದಳಲ್ಲಾ! ಒಂದು ದಿನವಾದರೂ ಮುಖ ತಿರುಗಿಸಲಿಲ್ಲ, ಕರ್ತವ್ಯ ಲೋಪ ಮಾಡಲಿಲ್ಲ. ಎಷ್ಟು ಮಮತೆಯಿಂದ ಸೇವೆ ಮಾಡುತ್ತಿದ್ದಳು! ಅವಳ ಪ್ರತಿಯೊಂದು ನಡೆನುಡಿಯಲ್ಲೂ ಪ್ರೇಮದ ಮಧು ಹನಿಯುತ್ತಿತ್ತಲ್ಲಾ! ಅವಿಶ್ರಾಂತವಾಗಿ ಹರಿಯುತ್ತಿದ್ದ ಆ ಪ್ರೇಮವಾಹಿನಿಗೆ ಬೇಕೆಂದು ನಾನೆ ಅಡ್ಡಗಟ್ಟೆ ಹಾಕಿ ನನ್ನ ಹೃದಯವನ್ನು ಹಾಲಾಹಲಕ್ಕೆ ಬಲಿ ಮಾಡಿದೆ. ಆ ಕಾವು ತಾಳಲಾರದೆ ಕಡೆಕಡೆಗೆ ತಿರುಗಿ ಬಿದ್ದಳು. ಅದು ಯಾರು ತಾನೆ ಮಾಡುವುದಿಲ್ಲ? ತಾಳ್ಮೆಗೂ ಮಿತಿಯಿಲ್ಲವೆ? ಅದೂ ಯಾವ ಅಪರಾಧವೂ ಇಲ್ಲದೆ ಹಿಂಸೆ ತಿನ್ನುವುದೆಂದರೆ, ಅದರಷ್ಟು ಯಾತನೆ ಮತ್ತಾವುದೂ ಇಲ್ಲ. ಅಬ್ಬಾ! ನಾನು ಕೊಡುತ್ತಿದ್ದ ಹಿಂಸೆಯನ್ನು, ಆಡುತ್ತಿದ್ದ ಮಾತನ್ನು ನೆನೆಸಿಕೊಂಡರೆ ನನ್ನೆದೆಯೆ ಝಲ್ಲೆನಿಸುವುದು. ಅವಳು ಹೇಗೆ ತಾನೆ ಸಹಿಸಿರಬಹುದು! ಆ ಮಗುವನ್ನಂತೂ ಜಜ್ಜಿ ಜಜ್ಜಿ ಅರೆಜೀವ ಮಾಡಿಬಿಟ್ಟಿರುವೆನು. ನನ್ನಂಥ ಕಟುಕರಿನ್ನಾರ್ಯರೂ ಇರಲಾರರು. ನಾನು ಮಾಡಿದ ಪಾಪಕ್ಕೆ ಕ್ಷಮೆಯಿಲ್ಲ. ಸಾವೆ ಅದಕ್ಕೆ ತಕ್ಕ ಶಿಕ್ಷೆ; ಅದೇ ಸರಿ' ಎಂದು ಆವೇಶ ಬಂದವನಂತೆ ಓಡಿ ಹೋಗಿ, ಹಾಸಿಗೆ ಕಟ್ಟುವ ಹಗ್ಗ ತಂದು, ಕೋಣೆಯ ಮೇಲ್ಭಾವಣಿಯ ತೊಲೆಗೆ ಇಳಬಿಟ್ಟು ಉರುಲು ಗುಣಿಕೆ ಹಾಕಿ, ದೇವರ ಬಳಿ ಹಾರಿ ಮೊಣಕಾಲೂರಿ ಕುಳಿತು ಪ್ರಾರ್ಥಿಸತೊಡಗಿದ.

"ದೇವಾ, ನಾನು ತಿಳಿದೊ, ತಿಳಿಯದೆಯೊ ಮಹಾಪರಾಧ ಮಾಡಿಬಿಟ್ಟೆ

ರುವೆನು. ನನ್ನಿಂದ ಅಪರಾಧವಾಗಲು ಹಿಂದಿನ ಜನ್ಮದ ಪಾಪದೋಷವೆ ಕಾರಣವೊ, ಇಂದಿನ ಅವಿವೇಕವೆ ಕಾರಣವೊ ನಾನರಿಯೆ; ಅಂತೂ ನನ್ನಿಂದ ಮಹಾಪಾತಕ ನಡೆದು ಹೋಗಿದೆ. ನಿನ್ನ ಹೊರತು ಮತ್ತಾರೂ ಆ ಪಾಪ ವನ್ನು ಕ್ಷಮಿಸಲು ಶಕ್ತರಲ್ಲ. ನೀನು ಕೃಪಾಕರನೆಂದು ಬಿರುದು ಪಡೆದಿರುವೆ. ನಿನ್ನ ಅಪಾರ ಕರುಣೆಯನ್ನು ನನ್ನ ಹೃದಯದೆಡೆ ಹರಿಸು. ನಾನಿಂದು ನಿನ್ನ ಪದತಲದಲ್ಲಿ ಆಶ್ರಯ ಬಯಸಿ ಬಂದಿರುವೆನು. ನನ್ನ ಪಾಪವನ್ನು ಕ್ಷಮಿಸಿ ಶಾಂತಿ ಕೊಡು ತಂದೆ, ಶಾಂತಿ ಕೊಡು' ಎಂದು ಪೀಠದ ಮೇಲೆ ತಲೆ ಕುಟ್ಟಿ ಕುಟ್ಟಿ ರೋದಿಸಿ, ದಿಗ್ಗನೆದ್ದು ನೇಣು ಕುಣಿಕೆಯ ಬಳಿ ಬಂದು ನಿಂತನು.

ಅದರ ಬಳಿ ದೃಷ್ಟಿ ಹಾದೊಡನೆ ಮೈ ಥರಥರ ನಡುಗಿತು, ತುಟಿ ಒಣ ಗಿತು, ನಾಲಗೆ ದ್ರವಹೀನವಾಯಿತು, ಮೈ ರೋಮಗಳು ನಿಮಿರಿ ನಿಂತವು. ನೋಡಲಾರದೆ ತಲೆ ಕೊಡವಿದ; ಕಣ್ಣನ್ನು ಗಟ್ಟಿಯಾಗಿ ಒತ್ತಿ ಹಿಡಿದುಕೊಂಡ. ಬಾಯಲ್ಲಿ ಏನೇನೊ ಗೊಣಗಿದ. ಎರಡು ಹೆಜ್ಜೆ ಹಿಂದೆ ಸರಿದ.

ಮತ್ತೆ ಅವನ ಪಾಪ ಪ್ರೇತರೂಪ ತಾಳಿ ಕೇಕೆ ಹಾಕಿ ವಿಕಾರವಾಗಿ ನಗುತ್ತಾ, ಸುತ್ತಲೂ ಬೆಂಕಿಯೆಬ್ಬಿಸುತ್ತಾ, ಕೆನ್ನಾಲಗೆಯಾಡಿಸುತ್ತಾ ಅಬ್ಬರಿಸಿ ಬಂತು. ಗೋಪಿ ಕಿವಿಯನ್ನು ಮುಚ್ಚಿ ಕಿಟಾರನೆ ಕಿರುಚಿ, 'ಇಲ್ಲಾ, ಹೆದರುವು ದಿಲ್ಲ; ಸಾಯುವೆನು. ಈ ನರಕದ ನೋವಿಗಿಂತ ಸಾವೆ ಮೇಲು, ಸಾವೆ ಮೇಲು!' ಎಂದು ಅರಚಿ—ಛಂಗನೆ ಹಗ್ಗದ ಬಳಿ ಹಾರಿ ನೇಣು ಗುಣಿಕೆಗೆ ಕೈ ಹಾಕಿ, 'ಶಾಂತ, ನನ್ನನ್ನು ಕ್ಷಮಿಸು, ನನ್ನ ಪರವಾಗಿ ನಿನ್ನ ತಂದೆ ತಾಯಿ ಯಲ್ಲಿ ಕ್ಷಮೆ ಕೇಳು, ನಾಣಿಯೂ ಕ್ಷಮಿಸಲಿ, ಭಟ್ಟರೂ ಕ್ಷಮಿಸಲಿ—ಎಲ್ಲರೂ ಕ್ಷಮಿಸಿ. ನನ್ನ ಪಾಪಕ್ಕೆ ತಕ್ಕ ಶಿಕ್ಷೆಯನ್ನು ನಾನೆ ಮಾಡಿಕೊಳ್ಳುತ್ತಿರುವೆನು. ಈ ಜನ್ಮದಲ್ಲಿ ನಿಮಗೆ ಮುಖ ತೋರಿಸಲಾರೆ. ಮುಂದಿನ ಜನ್ಮದಲ್ಲಿ ಶುದ್ಧನಾಗಿ ಬಂದು ನಿನ್ನನ್ನು ಕಾಣುವೆನು ಶಾಂತ—ಶುದ್ಧನಾಗಿ ಬಂದು ಕಾಣುವೆನು' ಎಂದು ಎದೆ ಬಿರಿಯುವಂತೆ ಗೋಳಾಡಿ, ಗಟ್ಟಿ ಮನಸ್ಸು ಮಾಡಿ ಕುಣಿಕೆಗೆ ಕತ್ತನ್ನು ದೂರಿದ. ಇನ್ನೇನು ಬಿಗಿಕೊಳ್ಳಬೇಕೆನ್ನುವಷ್ಟರಲ್ಲಿ ಥಟ್ಟನೆ ವಿವೇಕ ತಲೆಯೆತ್ತಿ ಆ ಪ್ರಯತ್ನವನ್ನು ತಡೆದು ಹೇಳಿತು,

'ನಿಲ್ಲು, ಸಾಯುವುದರಿಂದ ಏನೂ ಸಾಧಿಸಿದಂತಾಗುವುದಿಲ್ಲ. ನಿನಗೆ ನಿನ್ನ ಪಾಪಕರ್ಮದಿಂದ ನಿಜವಾಗಿಯೂ ಪಶ್ಚಾತ್ತಾಪವಾಗಿದ್ದರೆ ಬದುಕಿ, ನಿನ್ನ

ಆ ಎರಡು ಮಕ್ಕಳಲ್ಲೂ ಮನುಷ್ಯತ್ವ ತುಂಬಿ, ಅವರ ಬದುಕನ್ನು ಪ್ರೀತಿಯಿಂದ ಬೆಳೆಸು, ಬೆಳಗಿಸು. ನಿನ್ನ ಪಾಪಕ್ಕೆ ತಕ್ಕ ಶಿಕ್ಷೆ ಅದು—ಸಾವಲ್ಲ!'

'ಸಾಧ್ಯವಿಲ್ಲ—ನಾನು ಮಾಡಿದ ಪಾಪಕರ್ಮ ಪ್ರೇತರೂಪ ತಾಳಿ ತನ್ನ ಬೆಂಕಿ ಮೈಯಿಂದ ನನ್ನನ್ನು ಸುಡುತ್ತಿದೆ. ಆ ತಾಪ ಸಹಿಸಿ ನಾನು ಖಂಡಿತ ಬದುಕಲಾರೆ. ಸಾವಿನಿಂದ ಏನು ಸಾಧಿಸದಂತಾಗದಿದ್ದರೂ ಈ ನೋವಿನಿಂದಾದರೂ ಬಿಡುಗಡೆ ಹೊಂದಬಹುದು.'

'ಹುಚ್ಚಪ್ಪ, ಸತ್ತರೆ ಆ ಪಾಪದ ಭೀತಿ ಹೋಗುವುದೆಂದು ನಿನ್ನ ನಂಬಿಕೆಯೆ? ಎಂದಿಗೂ ಇಲ್ಲ. ಬೃಹದಾಕಾರವಾಗಿ ಬೆಳೆದ ಆ ಮಹಾಪ್ರೇತದ ಕೈಗೆ ಸಿಕ್ಕಿ ನಿನ್ನ ಪಾಪಾತ್ಮ ಇದಕ್ಕಿಂತ ನೂರರಷ್ಟು ತಾಪ ಪಡಬೇಕಾದೀತು! ಆ ಯಾತನೆ ಅನುಭವಿಸುವುದು ಇದಕ್ಕೂ ಕಷ್ಟ. ಆದ ಬದಲು ಬದುಕಿ,ಉಳಿದ ಜನ್ಮವನ್ನು ಶುದ್ಧ ಮಾಡಿಕೊಂಡು ಈಶ್ವರಪ್ರೇಮ ಬೆಳೆಸಿ ಸತ್ಕಾರ್ಯದಲ್ಲಿ ತನುವನ್ನು ತೇಲಿಬಿಡು. ಆಗ ಪಾಪದ ಯಾತನೆಯೂ ಕಡಿಮೆಯಾಗುವುದು, ನಿನ್ನ ಜನ್ಮವೂ ಸಾರ್ಥಕವಾಗುವುದು.'

'ಆ! ಜನ್ಮಸಾರ್ಥಕವಾಗುವುದೆ?'

'ನಿಸ್ಸಂದೇಹವಾಗಿ! ಯಾರೆ ಆಗಲಿ, ಕೊನೆ ವರೆಗೂ ಪಾಪಕೃತ್ಯಗಳನ್ನಾಚರಿಸದೆ ಸಕಾಲದಲ್ಲಿ ಎಚ್ಚೆತ್ತು, ಪಶ್ಚಾತ್ತಾಪ ಜಲದಿಂದ ಹೃದಯವನ್ನು ತೊಳೆದು ಶುದ್ಧಮಾಡಿ, ಉಳಿದಾಯುಷ್ಯವನ್ನು ಪುಣ್ಯ ಮಾರ್ಗದಲ್ಲಿ ಹರಿಸಿದರೆ ನಿಜವಾಗಿಯೂ ಜನ್ಮಸಾರ್ಥಕವಾಗುವುದು. ನನ್ನ ಮಾತನ್ನು ನಂಬು!'

'ಹಾಗಿದ್ದರೆ ಖಂಡಿತ ಬದುಕುವೆ; ಬರುವ ಬೆಟ್ಟದಂಥ ತೊಡಕುಗಳನ್ನು ಗಟ್ಟಿ ಎದೆ ಮಾಡಿ ಎದುರಿಸುವೆ; ಉಳಿದಾಯುಷ್ಯವನ್ನು ಪುಣ್ಯ ಮಾರ್ಗದಲ್ಲಿ ಹರಿಸುವೆ. ಕರ್ತವ್ಯವನ್ನು ಪ್ರೀತಿಯಿಂದ ಪಾಲನೆ ಮಾಡುವೆ.'

ವಿವೇಕ ನೀಡಿದ ಸಲಹೆಗೆ ತಲೆಬಾಗಿ, ನೇಣುಗುಣಿಕೆಯಿಂದ ಕತ್ತನ್ನು ಸರ್ರನೆ ಹೊರಗೆಳೆದು ಗಡಿಯಾರದ ಕಡೆ ಹೊರಳಿದ. ಎರಡು ಗಂಟೆಯಾಗಿ ಇಪ್ಪತ್ತು ನಿಮಿಷಗಳಾಗಿದ್ದುವು. ಬೆಳಗಾಗಲು ಇನ್ನೂ ತುಂಬಾ ವೇಳೆಯಿತ್ತು. ತನ್ನ ಆತುರಕ್ಕೆ ತಡೆ ಹಾಕಿ ಹಾಸಿಗೆಯಲ್ಲಿ ಉರುಳಿದ. ಕಣ್ಣಿಗೆ ನಿದ್ದೆ ಹತ್ತಲಿಲ್ಲ. ಮುಂದಿನ ಜೀವನವನ್ನು ರೂಪಿಸಿಕೊಳ್ಳತೊಡಗಿದ.

ಬೆಳಕು ಹರಿಯುವುದೆ ತಡ; ಭಟ್ಟರ ಮನೆಗೆ ಹಾರಿದ. ಅವನ ಬಳಿಗೆಂದೆ ಹೊರಟಿದ್ದ ಭಟ್ಟರು ನಡುದಾರಿಯಲ್ಲಿ ಅವನನ್ನು ಸಂಗಿಸಿ, ದಳದಳನೆ ಕಣ್ಣೀರು ಹರಿಸುತ್ತಾ ಗದ್ಗರಿಸಿದರು,

"ಬಂದೆಯಾ ಗೋಪಿ, ನನಗೆ ಗೊತ್ತು ನೀನು ಬಂದೆ ಬರುವೆಯೆಂದು! ಅವಳು ನಿರಪರಾಧಿನಿಯೆಂದು ಗೊತ್ತಾಗಮೇಲೂ ದ್ವೇಷ ಸಾಧಿಸಲಾರೆಯೆಂದು ನನ್ನಾತ್ಮ ನಂಬಿಕೆ ಕೊಟ್ಟಿತ್ತು; ಅದು ಸತ್ಯವಾಯಿತು. ಆದರೆ ಕಾಲ ಮಿಂಚಿ ಹೋಯಿತು. ಪಶ್ಚಾತ್ತಾಪದಿಂದ ಶುದ್ಧವಾದ ನಿನ್ನ ಮಂಗಳ ಮೂರ್ತಿಯನ್ನು ನೋಡುವ ಪುಣ್ಯ ಶಾಂತ ಪಡೆದಿರುವಳೊ ಇಲ್ಲವೊ! ನೆನ್ನೆ ರಾತ್ರೆಯಿಂದಲೂ ಹೊಟ್ಟೆಗೊಂದು ಗುಟುಕು ನೀರು ದಕ್ಕುತಿಲ್ಲ. ಹೆಜ್ಜೆ ಹೆಜ್ಜೆಗೂ ಉಸಿರು ಮೆತ್ತಗಾಗುತ್ತಿದೆ. ವೈದ್ಯರು ಅವಳಾಶೆ ಬಿಟ್ಟುಬಿಟ್ಟಿದ್ದಾರೆ. ಇಷ್ಟು ಹೊತ್ತಿಗೆ ನಾಗಿರುವಳೊ! ಬಾ, ಗಾಡಿ ಮಾಡಿಕೊಂಡು ಮೊದಲು ಆಸ್ಪತ್ರೆಗೆ ಹೋಗೋಣ; ಉಳಿದದ್ದೆಲ್ಲ ಆಮೇಲೆ!" ಎಂದು ಸುದ್ದಿ ಹೇಳಿ ಮೌನವಾಗಿ ರೋದಿಸುತ್ತ ನಿಂತಿದ್ದ ಗೋಪಿಯ ಕೈಹಿಡಿದು, ನಂಜರಾಬಾದ್ ಛತ್ರದ ಬಳಿ ಬಂದು ಗಾಡಿ ಗೊತ್ತುಮಾಡಿಕೊಂಡು, ವೇಗವಾಗಿ ಬಿಡುವಂತೆ ಹೇಳಿ ಹತ್ತಿದರು.

"ನಾನು ಮಹಾಪಾಪಿ ಭಟ್ಟರೆ, ಕಡೆಗೂ ಶಾಂತಳನ್ನು ಬಲಿ ತೆಗೆದುಕೊಂಡೆ ಬಿಟ್ಟೆ!"

"ಏನು ಮಾಡುವುದಪ್ಪ, ಎಲ್ಲ ಪ್ರಾರಬ್ಧ ಕರ್ಮ. ಹಣೆಯಲ್ಲಿ ಬರೆದದ್ದನ್ನು ಅನುಭವಿಸಲೆ ಬೇಕು. ಇಷ್ಟಕ್ಕೂ ಶಾಂತಳ ಬಲಿಯಾಗದಿದ್ದರೆ ನೀನು ದಾರಿಗೆ ಬರುತ್ತಿದ್ದೆಯೊ ಇಲ್ಲವೊ ಯಾರಿಗೆ ಗೊತ್ತು! ಹೋಗಲಿ–ಇನ್ನಾದರೂ ಆ ಮಕ್ಕಳನ್ನು ಪ್ರೀತಿಯಿಂದ ಲಾಲನೆ–ಪಾಲನೆ ಮಾಡು; ಅದರಿಂದ ಶಾಂತ ಸತ್ತರೂ ಅವಳಾತ್ಮಕ್ಕೆ ಶಾಂತಿಯುಂಟಾಗುವುದು."

"ಖಂಡಿತ ಮಾಡುವೆನು, ಆ ನಿರ್ಧಾರ ಹೊತ್ತೆ ಬಂದಿದ್ದೇನೆ" ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಕಣ್ಣೀರಿಟ್ಟು ಹೇಳಿದ, "ನನ್ನನ್ನು ಮೇಲೆತ್ತಲು ನೀವು ಮಾಡಿದ ಉಪಕಾರವನ್ನು ಎಂದೆಂದೂ ಮರೆಯಲಾರೆ. ನಾನು ಅವಿವೇಕಿ, ಪಾಪಿ. ನಿಮ್ಮ ಸದುಕ್ತಿಗೆ, ಸತ್ಕರ್ಮಕ್ಕೆ ಬೆಲೆ ಕೊಡದೆ ಅಪಮಾನ ಮಾಡಿ ನೋಯಿಸಿದೆ; ಸಂಗಡ ಕಾಲನ್ನೂ ಕಿತ್ತುಕೊಂಡೆ. ನನ್ನ ಮ[illegible]

ರಾಧವನ್ನು ಕ್ಷಮಿಸಿ—ಎಂದು ಹೇಳಲು ಬಾಯಿಯೂ ಬರುವುದಿಲ್ಲ."

"ದುಃಖಿಸಬೇಡ, ನಿನ್ನ ಪಶ್ಚಾತ್ತಾಪದ ಮುಂದೆ ನನ್ನ ಕ್ಷಮೆ ಏನೂ ಕೆಲಸ ಮಾಡುವುದಿಲ್ಲ. ಪಾಪಕ್ಕೆ ತಕ್ಕ ಶಿಕ್ಷೆಯೆಂದರೆ ಪಶ್ಚಾತ್ತಾಪವೆ! ಅದನ್ನು ನೀನು ಮಾಡಿಕೊಂಡಿರುವೆ. ನ್ಯಾಯವಾಗಿ ನಾನೂ ನಿನ್ನಲ್ಲಿ ಕ್ಷಮೆ ಕೇಳಬೇಕು—ನಿನ್ನಿಚ್ಛೆಗೆ ವಿರುದ್ಧವಾಗಿ ನಡೆದು ಮನಸ್ಸನ್ನು ಕೆರಳಿಸಿ, ನಿನ್ನಿಂದ ಇಂಥಾ ಪಾಪಕೃತ್ಯವಾಗುವಂತೆ ನಾನೆ ಮಾಡಿದೆ."

ಭಟ್ಟರ ದೈವಿಕ ಗುಣ ಕಂಡು ಬೆಕ್ಕಸ ಬೆರಗಾದ. ಅವನ ಬಾಯಿ ಕಟ್ಟಿಬಿಟ್ಟಿತು. ಮೌನವಾಗಿ ಕಣ್ಣರಳಿಸಿ ಆ ತುಂಬು ಗುಣವನ್ನೀದು ನೋಡಿದ. ಅಷ್ಟರಲ್ಲಿ ಆಸ್ಪತ್ರೆಯೂ ಬಂದಿತು ಗಾಡಿಯಿಂದಿಳಿದಾಗ ಇಬ್ಬರ ೆದೆಯೂ ಡವಡವ ಹೊಡೆದುಕೊಳ್ಳತೊಡಗಿತು. ಹೆಜ್ಜೆಗೆ ವೇಗ ತುಂಬಿ ಶಾಂತಳಿಟ್ಟ ಕೊಠಡಿಯ ಕಡೆ ಹಾರಿದರು.

ಶಾಂತ ೞಗಲೆ, ಗೋಪಿಯನ್ನು ನೋಡಲಾರದೆಯೊ ಏನೋ, ಕಣ್ಣು ಮುಚ್ಚಿದ್ದಳು. ರಂಗಪ್ಮ ತೊಡೆಯ ಮೇಲೊಂದು ಕೂಸನ್ನಿರಿಸಿ, ಪಕ್ಕದಲ್ಲೊಂದು ಮಗುವನ್ನು ಕೂರಿಸಿಕೊಂಡು ಮೌನವಾಗಿ ಕಣ್ಣೀರು ಬಸಿಯುತ್ತ ಕುಳಿತಿದ್ದರು. ವಾತಾವರಣ ಮೂಕ ಶೋಕದಿಂದ ರುದ್ರಗಂಭೀರವಾಗಿತ್ತು.

ಭಟ್ಟರು ಒಳಗೆ ಕಾಲಿಟ್ಟೊಡನೆ ಶಾಂತಳ ಮುಚ್ಚಿದ ಶರೀರವನ್ನೂ ರಂಗಮ್ಮನ ಕಣ್ಣೀರನ್ನೂ ಕಂಡು ದಂಗುಬಡಿದಂತಾದರು. 'ಪ್ರಾಣ ಹೋ ಎಷ್ಟು ಹೊತ್ತಾಯಿತೆಂ'ದು ಕೇಳಬೇಕಾದರೆ ಸಂಕಟದಿಂದ ಒದ್ದಾಡಿಹೋದರು.

"ಈಗ ಹತ್ತು ನಿಮಿಷವಾಯಿತಷ್ಟೆ!" ಎಂದು ೞಗಮ್ಮನೂ ಬಹಳ ಕಷ್ಟದಿಂದ ಬಿಕ್ಕಿ ಉತ್ತರವಿತ್ತರು.

ಆ ಸುದ್ದಿಯಿಂದ ಗೋಪಿಯ ಎದೆ ಒಡೆದು ಹೋಯಿತು. ಬಿಕ್ಕಿ ಬಿ ಅಳುತ್ತಾ ತಾಯ ಬಳಿ ಹಾರಿ "ಅಮ್ಮಾ! ನನ್ನನ್ನು ಕ್ಷಮಿಸಮ್ಮ—ನಾನ ಮಹಾಪಾಪಿ! ನಿಮ್ಮೆಲ್ಲರನ್ನೂ ಗೋಳಾಡಿಸಿದೆ" ಎಂದು ಅವರ ಪಾದಕ್ಕೆ ಹ ಯನ್ನು ತಿಕ್ಕಿ ತಿಕ್ಕಿ ರೋದಿಸಿದ.

ಗೋಪಿಯನ್ನು ಕಂಡಾಗ—ಒರಟುತನದಿಂದ ಇಷ್ಟೆಲ್ಲಾ ಸಾವು ನೋವುಂಟು ಮಾಡಿದನಲ್ಲಾ—ಎಂದು ಕೋಪ ಉಕ್ಕೇರಿ, ತಿರಸ್ಕಾರದಿಂ ಮುಖದಿರುವಿದ್ದರು. ಅವನ ಪಶ್ಚಾತ್ತಾಪದ ನೋವು ಅವರ ಕೋಪವನ